ಅಂತರ ಭಾರತೀಯ ಪುಸ್ತಕಮಾಲೆ

# ಹೊಟ್ಟೆಬಟ್ಟೆಗಾಗಿ

**ಗೋಪೀನಾಥ ಮಹಾಂತಿ**

ಅನುವಾದ:
**ಲಕ್ಷ್ಮೀನಾರಾಯಣ ಅರೋರಾ**



**ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ**

# ಮುನ್ನುಡಿ

ಕಾದಂಬರಿಯ ಮೂಲ ನಮ್ಮ ಪ್ರಾಚೀನ ಸಾಹಿತ್ಯದ ಜನಪದ ಕಥೆ, ರೂಪಕ ಕಥೆ ಮೊದಲಾದವುಗಳಲ್ಲಿ ಬೀಜರೂಪವಾಗಿ ಕಂಡುಬರುವುದಾದರೂ ವಿಶ್ವಸಾಹಿತ್ಯದಲ್ಲಿ ಮೊದಲಬಾರಿಗೆ ಹದಿನೆಂಟನೆಯ ಶತಮಾನದ ವೇಳೆಗೆ ಇದಕ್ಕೆ ಸ್ವತಂತ್ರವಾದ ಅಸ್ತಿತ್ವ ಸಿಕ್ಕಿರುವುದಕ್ಕೆ ಪುರಾವೆ ದೊರೆಯುತ್ತದೆ. ವಾಸ್ತವವಾಗಿ ಹತ್ತೊಂಬತ್ತನೆಯ ಶತಮಾನವು ವಿಶ್ವಸಾಹಿತ್ಯದಲ್ಲಿ ಕಾದಂಬರಿ ಕಲೆ ವಿಕಾಸಗೊಂಡು ಮನ್ನಣೆ ಗಳಿಸಿದ ಸ್ವರ್ಣಯುಗ. ಬದುಕಿನ ಯಾತ್ರೆಯ ಮುನ್ನಡೆಯಲ್ಲಿ ನಮ್ಮ ದೃಷ್ಟಿಕೋನದ ದಿಗಂತ ವಿಸ್ತಾರಗೊಂಡಿದ್ದು ಈ ಹತ್ತೊಂಬತ್ತನೆಯ ಶತಮಾನದಲ್ಲಿಯೇ. ನಿಲುವು ನಡೆವಳಿಕೆಗಳಲ್ಲಿ ಬೇಕಾದಷ್ಟು ಬದಲಾವಣೆ ಕಂಡುಬಂದಿತು, ಅದರ ಸಾರವನ್ನೆಲ್ಲ ಮೈಗೂಡಿಸಿಕೊಂಡ ಇಂದಿನ ಕಾದಂಬರಿ ಭಾವ ಹಾಗೂ ರಸ ವೈಚಿತ್ರ್ಯಗಳ ದೃಷ್ಟಿಯಿಂದ ಶ್ರೀಮಂತವಾಗಿದೆ. ಅಷ್ಟೇ ಅಲ್ಲ, ಪ್ರಾಚೀನ ಮಹಾಕಾವ್ಯಗಳ ಹಾಗೂ ಕಾವ್ಯಗಳ ಗುಣವಿಶೇಷಗಳನ್ನು ಅಳವಡಿಸಿಕೊಂಡು ಬೆಳೆದುಬಂದ ಕಾದಂಬರಿ ಪ್ರಕಾರ ಸಾರಸ್ವತ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನಮಾನಗಳನ್ನು ಗಳಿಸಿಕೊಂಡಿದೆ. ಯುಗಧರ್ಮ ಹಾಗೂ ಬದುಕಿನ ಎಲ್ಲ ನೋವು ನಲಿವುಗಳನ್ನು, ಕಷ್ಟಕಾರ್ಪಣ್ಯಗಳನ್ನೂ ಸಮಸ್ಯೆಗಳನ್ನೂ, ಒಳತೋಟಿಗಳನ್ನು ವಿಮರ್ಶಿಸುತ್ತಾ ಬದುಕಿನ ಒಂದು ಸರ್ವಾಂಗೀಣವಾದ ಹಾಗೂ ಉಜ್ವಲವಾದ ಚಿತ್ರಣವನ್ನು ನಮ್ಮ ಮುಂದಿಡುತ್ತದೆ.

ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಹಾಗೂ ವೈದಿಕ ಕಥೆಗಳಲ್ಲಿ, ಬೌದ್ಧಜಾತಕಗಳಲ್ಲಿ, ಸಂಸ್ಕೃತ ಗದ್ಯಕಾವ್ಯಗಳಲ್ಲಿ, ಕಥಾಸಾಹಿತ್ಯದಲ್ಲಿ ಹಾಗೂ ಲೌಕಿಕ ಕಥಾರೂಪಕಗಳಲ್ಲಿ ಕಾದಂಬರಿಯ ಮೂಲರೂಪ ಎದ್ದುಕಾಣುತ್ತದೆ. ಆದರೆ ಈಚಿನ ಅರ್ಥವ್ಯಾಪ್ತಿಯಲ್ಲಿ ಕಾದಂಬರಿ ಎಂದು ಕರೆಸಿಕೊಳ್ಳುವ ಪ್ರಕಾರ ಹುಟ್ಟಿದ್ದು ಹತ್ತೊಂಬತ್ತನೆಯ ಶತಮಾನದಲ್ಲಿ. ಆ ಕಾಲದಲ್ಲಿ ಪಾಶ್ಚಾತ್ಯ ಸಾಹಿತ್ಯ ಹಾಗೂ ಸಂಸ್ಕೃತಿಗಳ ಚಿಂತನೆ ವಿಚಾರಧಾರೆಗಳು ಭಾರತೀಯ ಭಾವಧಾರೆ ಹಾಗೂ ರಸಮಾನಸಗಳೊಡನೆ ಸಂಪರ್ಕ ಪಡೆದುಕೊಂಡುದರ ಫಲವಾಗಿ ಭಾರತೀಯ ವಿಚಾರಧಾರೆಯಲ್ಲಿ ಒಂದು ರೀತಿಯ ರೆನೈಸಾನ್ಸ್ ಅಥವಾ ಪುನರುತ್ಥಾನಕ್ಕೆ ಬೀಜಾರೋಪಣವಾಯಿತು. ಪಾಶ್ಚಾತ್ಯ ನಾಗರಿಕತೆ ಹಾಗೂ ಸಂಸ್ಕೃತಿಯ ಬಗ್ಗೆ ಒಲವು ಮೂಡಿದ ಕಾರಣ ಭಾರತೀಯ ಸಾಹಿತ್ಯದ ವೈಮನಸ್ಸುಗಳಲ್ಲಿ ಹೊಸತನ ಗರಿಗೆದರಿತು, ಅದರಿಂದಾಗಿ ಗದ್ಯಪದ್ಯ ಎರಡು ಕ್ಷೇತ್ರಗಳಲ್ಲೂ ಅಭಿರುಚಿ ಮತ್ತು ಸಂಸ್ಕಾರಗಳ ದೃಷ್ಟಿಯಿಂದ ಬದಲಾವಣೆ ಕಂಡುಬಂತು. ಬದಲಾದ ಈ ಹಿನ್ನೆಲೆಯಲ್ಲೇ ಕಾದಂಬರಿ ಪ್ರಕಾರ ಚಿಗುರೊಡೆದದ್ದು. ಹತ್ತೊಂಬತ್ತನೆಯ ಶತಮಾನದ ಕಡೆಯ

ಅರ್ಧ ಭಾಗವನ್ನು ನಮ್ಮ ಪ್ರಾದೇಶಿಕ ಭಾಷೆಗಳ ಕಾದಂಬರಿಯ ಮುಂಬೆಳಗಿನ ಕಾಲ ಎಂದು ಕರೆದರೆ ಉತ್ಪ್ರೇಕ್ಷೆಯೇನೂ ಆಗಲಾರದು. ಹಿಂದೀಯಲ್ಲಿ ಇನ್‌ಶಾ ಅಲ್ಲಾಖಾನರ (1798-1803ರ ನಡುವೆ) 'ರಾನೀ ಕೇತಕೀ ಕೀ ಕಹಾನೀ' ಮತ್ತು 1823ರಲ್ಲಿ ಹೊರಬಂದ ಪ್ರಮಥನಾಥ ಶರ್ಮಾ ಉರುಫ್ ಭವಾನೀ ಶಂಕರ ಮುಖೋಪಾಧ್ಯಾಯರ 'ನವಬಾಬೂ ವಿಲಾಸ' ಕೃತಿಗಳನ್ನು ಭಾರತೀಯ ಪ್ರಾದೇಶಿಕ ಭಾಷಾ ಸಾಹಿತ್ಯಗಳ ಎರಡು ಮೊದಲ ಕಾದಂಬರಿಗಳೆಂದು ಪರಿಗಣಿಸಿರುವುದಾದರೂ ಹತ್ತೊಂಬತ್ತನೆಯ ಶತಮಾನದ ಕಡೆಯ ಅರ್ಧ ಭಾಗದಲ್ಲೇ ಬಂಗಾಳಿ, ಮರಾಠೀ, ಹಿಂದೀ, ಮಲಯಾಳಂ, ಒರಿಯಾ, ತಮಿಳು, ತೆಲುಗು, ಸಿಂಧೀ ಮೊದಲಾದ ಪ್ರಾದೇಶಿಕ ಭಾಷೆಗಳಲ್ಲೂ ಕಾದಂಬರಿ ಪ್ರಕಾರ ಸರ್ವಾಂಗೀಣವಾಗಿ ಬೆಳಕು ಕಂಡಿತು.

ಒರಿಯಾ ನಾಟಕಕ್ಕೆ ಹುಟ್ಟು ಹಾಕಿದ ರಾಮಶಂಕರ ರಾಯ್‌ರವರ 'ಸೌದಾಮಿನಿ' ಎಂಬ ಕಾದಂಬರಿ 1877-78ರಲ್ಲಿ 'ಉತ್ಕಲಮಧುಪ್' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿತ್ತು. ಆದರೆ ಅದು ಪೂರ್ಣಗೊಂಡಿರಲಿಲ್ಲ. ಹಾಗಾಗಿ ಉಮೇಶ ಚಂದ್ರ ಸರ್ಕಾರರ 'ಪದ್ಮಮಾಲಿ' (1888) ಮೊದಲ ಪೂರ್ಣ ಕಾದಂಬರಿಯೆಂಬ ಕೀರ್ತಿಗೆ ಪಾತ್ರವಾಯಿತು. ಮೊದಲಿಗೆ ಒರಿಯಾಕ್ಕೆ ಸೇರಿದ್ದ ನೀಲಗಿರಿ ಎಂಬ ಪ್ರದೇಶದಲ್ಲಿ 1835ರಲ್ಲಿ ನಡೆದಿದ್ದ ವಾಸ್ತವ ಘಟನೆಯೊಂದನ್ನು ಆಧರಿಸಿದ್ದ ಸಾಹಸ ರಮ್ಯ ಐತಿಹಾಸಿಕ ಕಾದಂಬರಿ ಅದು. ಆದರೆ ಪ್ರಣಯ ಪ್ರಧಾನವಾದ ಕಾವ್ಯಾತ್ಮಕ ಕಲ್ಪನೆ, ವಿಷಯ ವಸ್ತುವಿನ ಪ್ರತ್ಯಕ್ಷಚಿತ್ರಣ, ನೀತಿನಿಷ್ಠೆಗಳಿಗೆ ನೀಡಲಾದ ಪ್ರಾಧಾನ್ಯತೆ ಇವುಗಳಿಂದಾಗಿ ಈ ಕಾದಂಬರಿಯಲ್ಲಿ ಸಾಮಾಜಿಕ ಬದುಕು ಹಾಗೂ ಪಾತ್ರ ಚಿತ್ರಣಗಳಿಗೆ ಗೌಣಸ್ಥಾನ ದೊರೆತಿದೆ. ಮುಖ್ಯವಾಗಿ ಇದೊಂದು ಘಟನಾ ಪ್ರಧಾನವಾದ ಕಾದಂಬರಿ. ಭಾಷೆಯ ದೃಷ್ಟಿಯಿಂದ ಹೇಳುವುದಾದರೆ ಮಧ್ಯಕಾಲದ ಆಲಂಕಾರಿಕ ಶೈಲಿಯ ಪ್ರಭಾವ ಎದ್ದು ಕಾಣುತ್ತದೆ. ಇದಾದಮೇಲೆ 1891ರಲ್ಲಿ ರಾಮಶಂಕರ ರಾಯ್‌ರವರ 'ವಿವಾಸಿನಿ' ಹೊರಬಂತು. ಇದರಲ್ಲಿ ಹದಿನೆಂಟನೆಯ ಶತಮಾನದ ಕಡೆಯ ಅರ್ಧಭಾಗದ ಸಾಮಾಜಿಕ ಸಮಸ್ಯೆಗಳ ಹಾಗೂ ಸಂಘರ್ಷಗಳ ಹಿನ್ನೆಲೆಯಲ್ಲಿ ಲೇಖಕರು ಕಥಾವಸ್ತು ಮತ್ತು ಪಾತ್ರಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಒರಿಸ್ಸಾದಲ್ಲಿ ಮರಾಠರ ದಬ್ಬಾಳಿಕೆ ಹಾಗೂ ಅತ್ಯಾಚಾರಗಳ ಹಿನ್ನೆಲೆ ಕಾದಂಬರಿಯ ಅಡಿಪಾಯವಾಗಿದೆ. ಯಥಾರ್ಥದ ಹಿನ್ನೆಲೆಯಲ್ಲಿ ಆದರ್ಶವನ್ನು ಎತ್ತಿ ತೋರಿಸುವುದೇ ಲೇಖಕರ ಮುಖ್ಯ ಉದ್ದೇಶವಾಗಿತ್ತು. ರಚನಾತಂತ್ರದ ದೃಷ್ಟಿಯಿಂದ ಇದರಲ್ಲಿ ಅನೇಕ ದೋಷಗಳಿದ್ದರೂ ಒರಿಯಾ ಕಾದಂಬರಿ ಸಾಹಿತ್ಯದ ಮೊದಲ ಕಾಲದಲ್ಲಿ 'ಪದ್ಮಮಾಲಿ'ಯ ಅನಂತರ ರಾಮಶಂಕರರು ಇಟ್ಟ ಈ ಹೆಜ್ಜೆ ಮುಂಬರುವ ಆಶೋತ್ತರಗಳಿಗೆ ಸಾಧ್ಯತೆಗಳಿಗೆ ದಾರಿ ತೆರೆಯಿತು. ವ್ಯಾಸಕವಿ ಫಕೀರಮೋಹನ ಸೇನಾಪತಿ ಹಾಗೂ ಗೋಪಾಲವಲ್ಲಭರ ಕಾದಂಬರಿಗಳು ಇದಕ್ಕೆ ಜ್ವಲಂತ ಸಾಕ್ಷಿ. ಕಥಾವಸ್ತು, ಪಾತ್ರ ಚಿತ್ರಣ, ವರ್ಣನೆ, ರಚನಾಶೈಲಿ ಮೊದಲಾದ ದೃಷ್ಟಿಗಳಿಂದ 'ವಿವಾಸಿನಿ' ತನಗಿಂತ ಮೊದಲು ಬಂದ 'ಪದ್ಮಮಾಲಿ'ಗಿಂತ ಮೇಲ್ಮಟ್ಟದಲ್ಲಿದ್ದರೂ ರಚನೆಯ ಒಟ್ಟಂದದ ದೃಷ್ಟಿಯಿಂದ ತುಂಬ ಕಲಾತ್ಮಕವೆಂದು ಹೇಳಿಸಿಕೊಳ್ಳುವ ಮಟ್ಟದ್ದಾಗಿರಲಿಲ್ಲ.

ಒರಿಯಾ ಕಥಾಸಾಹಿತ್ಯ ಹಾಗೂ ಗದ್ಯಶೈಲಿ ಹೊಸ ಹುರುಪನ್ನು ಪಡೆಯಲು, ಹೊಸದಾಗಿ ಮೈಯೆತ್ತಲು ಕಾರಣಕರ್ತನಾಗುವ ಒಬ್ಬ ಮಹಾಸೃಜನಾತ್ಮಕ ಬರಹಗಾರನ ನಿರೀಕ್ಷೆಯಲ್ಲಿತ್ತು. ಅಂಥ ದೀರ್ಘ ನಿರೀಕ್ಷೆ ಹಾಗೂ ತಪಸ್ಸಿನ ಫಲವಾಗಿಯೊ ಎಂಬಂತೆ ಒರಿಯಾ ಕಥಾಸಾಹಿತ್ಯದ ವರಪುತ್ರ, ಒರಿಯಾ ಭಾಷೆಗೆ ಜೀವತುಂಬಿದ, ಒರಿಯಾ ಸಾಹಿತ್ಯಕ್ಕೆ ಇಂಬುಕೊಟ್ಟ ವ್ಯಾಸಕವಿ ಫಕೀರ ಮೋಹನ ಸೇನಾಪತಿಯ (1843-1918) ಆಗಮನವಾಯಿತು. ಗದ್ಯಪದ್ಯಗಳೆರಡರಲ್ಲೂ ಅವರ ಪ್ರತಿಭೆ ಅನ್ಯಾದೃಶವಾಗಿತ್ತು. ಕಥೆ ಕಾದಂಬರಿಗಳಲ್ಲೂ ಅವರದು ಎತ್ತಿದ ಕೈ. ಫಕೀರ ಮೋಹನರ ನಾಲ್ಕೂ ಕಾದಂಬರಿಗಳೂ (ಛಮಾಣ ಆಠಗುಂಠ, ಲಛಮಾ, ಮಾಮುಂ, ಪ್ರಾಯಶ್ಚಿತ್ತ) ಹೊರಬಂದದ್ದು 1898-1915ರ ಅವಧಿಯಲ್ಲಿ, ಅಂದರೆ ಅವೆಲ್ಲವನ್ನು ಅವರು 53 ರಿಂದ 73ರ ನಡುವಯಸ್ಸಿನಲ್ಲಿ ಬರೆದರು. 'ಲಛಮಾ' ಎಂಬ ಐತಿಹಾಸಿಕ ಕಾದಂಬರಿಯನ್ನು ('ಅಪೂರ್ವ ಮಿಲನ್' ಎಂಬ ಹೆಸರಿನಲ್ಲಿ 1901ರಲ್ಲೇ ಬರೆದಿದ್ದರು ಹಾಗೂ 1914ರಲ್ಲಿ ಇದು ಪ್ರಕಾಶಗೊಂಡಿತು) ಬಿಟ್ಟರೆ ಉಳಿದ ಮೂರೂ ಕಾದಂಬರಿಗಳು ಒರಿಸ್ಸಾದ ಜನಜೀವನ ಮತ್ತು ಸಾಮಾಜಿಕ ವಿಚಾರಗಳನ್ನು ಆಧರಿಸಿವೆ. ನಾಲ್ಕೂ ಕಾದಂಬರಿಗಳನ್ನು ಒಳಹೊಕ್ಕು ನೋಡಿದಾಗ ಫಕೀರ ಮೋಹನರ ಸೂಕ್ಷ್ಮ ಕಲೆಗಾರಿಕೆಯಲ್ಲಿ ಮೊಗಲರ, ಮರಾಠರ ಹಾಗೂ ಬ್ರಿಟಿಷರ ಆಳ್ವಿಕೆಗೆ ಸಿಕ್ಕ ಅನೇಕ ಒಳ್ಳೆಯ-ಕೆಟ್ಟ ಪ್ರಭಾವಗಳಿಗೆ ಈಡಾದ ಒರಿಸ್ಸಾದ ಎರಡು ಶತಮಾನಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಶಕ್ತವಾದ ಚಿತ್ರಣ ಅನೇಕ ಪಾತ್ರಗಳ ಮೂಲಕ ಅಭಿವ್ಯಕ್ತಗೊಳ್ಳುತ್ತದೆ. ಅಂದಿನ ಬದುಕಿನ ಶಾಲೆಯಲ್ಲಿ ಚಿಗುರೊಡೆದ ಫಕೀರಮೋಹನರ ಕಲಾಪ್ರತಿಭೆ ಮತ್ತು ಅನುಭವ ಶುದ್ಧ ಒರಿಸ್ಸಾ ವಾತಾವರಣವನ್ನು ಮತ್ತು ಆಡುನುಡಿಯ ಸೊಗಡನ್ನು ಮೈಗೂಡಿಸಿಕೊಂಡು ಮಾನವನ ಇಬ್ಬಗೆಯ ಚಿತ್ರಣವನ್ನು - ದೇವತೆಯ ಶುಭಮೂರ್ತ ರೂಪ ಹಾಗೂ ರಾಕ್ಷಸನ ಕುತ್ಸಿತರೂಪ, ಚೊಕ್ಕವಾಗಿ ಪಡಿಮೂಡಿಸಿದೆ. ಅಲ್ಲದೆ ಮಾನವನ ಮೂಲಭೂತ ಸ್ಪಂದನಗಳನ್ನು ಚಿತ್ರಿಸುವುದರ ಜೊತೆಗೆ ಬೇರೆ ಬೇರೆ ಪಾತ್ರಗಳ ಬಗ್ಗೆ ಹೊಮ್ಮುವ ಕರುಣೆ ಮತ್ತು ಸಹಾನುಭೂತಿ ಭಾವನೆಗಳು ಅವರನ್ನು ಒಬ್ಬ ಉದಾರಿ ಮಾನವತಾವಾದಿ ಬರಹಗಾರನ ಪಟ್ಟಕ್ಕೇರಿಸಿದೆ. ಬದುಕಿನ ಆಳವಾದ ಯಥಾರ್ಥದ ಜೊತೆಯಲ್ಲಿ, ಓರಿದಾದ ಆದರ್ಶಚೇತನ ಹಾಗೂ ಬದುಕಿನ ನಿಷ್ಠೆಯ ಜೊತೆಯಲ್ಲಿ ಉದಾರವಾದ ಮಾನವಪ್ರೇಮ ಅವರ ಸೃಷ್ಟಿಯಲ್ಲಿ ಕಂಡುಬರುತ್ತದೆ. ಅಂತೆಯೇ ಸಾಮಾಜಿಕ ಪ್ರಜ್ಞೆಯಿಂದ ಕೂಡಿದ ಹಾಗೂ ಹೋರಾಟಕ್ಕೆ ಸನ್ನದ್ಧವಾದ ವ್ಯಕ್ತಿತ್ವದ ಪಾಂಚಜನ್ಯ ಅವರ ಬರವಣಿಗೆಯುದ್ದಕ್ಕೂ ಒಳದನಿಯಾಗಿ ಮೊಳಗುತ್ತದೆ. ಆಧುನಿಕ ಕತೆಗಾರರ ಮೊದಲಗುರುವಾದ ಫಕೀರಮೋಹನರು ವಾಸ್ತವವಾಗಿ ಆಧುನಿಕ ಬರವಣಿಗೆ ಶೈಲಿಯ ನೇತಾರರೂ ಆಗಿದ್ದರು. ಅವರ ಕಡೆಯ ಕಾದಂಬರಿ 'ಪ್ರಾಯಶ್ಚಿತ್ತ'ದ ಮೂಲಭೂತ ಪ್ರಶ್ನೆಯೂ ಇದೇ ಆಗಿತ್ತು - 'ದುಡ್ಡು ಬಿಸಾಡಿದರೆ ಏನು ತಾನೆ ಸಿಗಲ್ಲ?' ಹಾಗೆಯೆ ಫಕೀರಮೋಹನರು ಎಚ್ಚರಿಕೆಯ ಮಾತನ್ನು ಆಡಿದ್ದರು - 'ಯಾವ ಪಾಪದ ಮರೆಯಲ್ಲಿ ನಾಗರಿಕತೆ ಎಡೆಬಿಡದೆ ಬೆಳೆದು ಬರುತ್ತಿದೆಯೋ, ಅದೇ ಪಾಪಕ್ಕೆ ಬೇರೆ ಯಾವುದೇ ಎಡೆಯಲ್ಲಿ ಪ್ರಾಯಶ್ಚಿತ್ತದ

ಅಗತ್ಯವುಂಟೆ ?' ಈ ಮಾತು ಕೇವಲ ಅಂದಿಗೇ ಅಲ್ಲ, ಇಂದಿನ ಯುಗಧರ್ಮ ಮತ್ತು ಬದುಕಿಗೂ ಅನ್ವಯಿಸುತ್ತದೆ. ಇಲ್ಲಿ ಬದುಕಿನ ಉದ್ದೇಶ ಮತ್ತು ಸಾಧನೆಗಳ ಬಗೆಗೆ ಪ್ರಶ್ನೆಯೆತ್ತಲಾಗಿದೆ. ಅವರ ಅಮರಕೃತಿ 'ಛಮಾಣ ಆಠಗುಂಠ' (1898)ಪಾತ್ರ ಚಿತ್ರಣ ಮತ್ತು ರಚನಾಶೈಲಿಯ ದೃಷ್ಟಿಯಿಂದ ಒರಿಸ್ಸಾ ಕಾದಂಬರಿ ಸಾಹಿತ್ಯದಲ್ಲೇ ಅನನುಕರಣೀಯವಾದ ಹಾಗೂ ಅಮರವಾದ 'ಕ್ಲಾಸಿಕ್' ಎಂಬ ಕೀರ್ತಿ ಪಡೆದಿದೆ.

ಫಕೀರಮೋಹನರ ಈ ಅನ್ಯಾದೃಶ ಪ್ರತಿಭೆ ಹಾಗೂ ಕಲೆಗಾರಿಕೆಯ ಹೊಂಬೆಳಕಿನ ಕಾಲದಲ್ಲೇ ಮೂಡಿಬಂದ ಮತ್ತೊಬ್ಬ ಸಶಕ್ತ ಲೇಖಕರೆಂದರೆ 'ಭೀಮಾಭೂಯಾಂ' ಕೃತಿಯನ್ನು ಬರೆದ ಗೋಪಾಲವಲ್ಲಭದಾಸ್. 'ಭೀಮಾಭೂಯಾಂ' ಒರಿಸ್ಸಾ ಆದಿವಾಸಿಗಳ ಬದುಕಿನ ಚಿತ್ರಣವನ್ನೊಳಗೊಂಡಿದೆ. 'ಪದ್ಮಮಾಲೆ'ಯಲ್ಲಿರುವಂತೆಯೆ ಇಲ್ಲಿಯೂ ಪ್ರಣಯವೆ ಕೇಂದ್ರ ಬಿಂದು. ಆದರೆ ಲೇಖಕರು ಇಲ್ಲಿ ಪ್ರಕೃತಿಯ ಮಡಿಲಲ್ಲಿ ಬೆಳೆದ ಭೂಯಾಂಜಾತಿಯ ಒಬ್ಬ ಆದಿವಾಸಿ ಯುವಕ ಹಾಗೂ ಅರಮನೆಯ ಅಂತಃಪುರದಲ್ಲಿ ಬೆಳೆದ ಮೇಲುಜಾತಿಯ ರಾಜಕುಮಾರಿಯ ನಡುವೆ ಕುಡಿಯೊಡೆದು ಬೆಳೆದ ದಟ್ಟವಾದ ಪ್ರಣಯಚಿತ್ರಣವನ್ನು ತೋರಿಸಿರುವುದು ಪರಂಪರಾಗತ ಪ್ರಣಯ ಚಿತ್ರಣದ ಹಿನ್ನೆಲೆಯಲ್ಲಿ ನಿಜವಾಗಿಯೂ ಒಂದು ಸಾಹಸವೆ ಸರಿ. ಇದು ನಿಜಕ್ಕೂ ಲೇಖಕರ ಮೌಲಿಕವಾದ ಹಾಗೂ ರೊಮ್ಯಾಂಟಿಕ್ ದೃಷ್ಟಿಯನ್ನು ಎತ್ತಿ ತೋರಿಸುತ್ತದೆ. ಆದರೆ ಈ ಕೃತಿಯಲ್ಲಿ ಪಾತ್ರಗಳಿಗೆ ಹೋಲಿಸಿದರೆ ಕಥೆಯ ಚೌಕಟ್ಟು, ಪರಿಸರ, ಯಥಾರ್ಥ ಚಿತ್ರಣಗಳು ಅಷ್ಟು ಶಕ್ತವಾಗಿ ಮತ್ತು ಆಕರ್ಷಕವಾಗಿ ಮೂಡಿಬರಲಿಲ್ಲ. ಮಧ್ಯಕಾಲದ ಕಾವ್ಯಶೈಲಿಯಲ್ಲಿರುವ ವರ್ಣನೆಗಳು ಮತ್ತು ಅಲಂಕಾರಿಕವಾದ ಪದಪ್ರಯೋಗಗಳು ಕಾದಂಬರಿಯ ಓಟಕ್ಕೆ ಧಕ್ಕೆ ತಂದಿವೆ, ಪ್ರಭಾವ ಕುಂಠಿತವಾಗಿದೆ. ಆದರೂ ಸಾಹಿತ್ಯಾಭಿರುಚಿಯ ನಿಟ್ಟಿನಲ್ಲಿ ಲೇಖಕರ ಈ ಸಾಹಸದ ಹೆಜ್ಜೆ ಅವಿಸ್ಮರಣೀಯವಾಗಿದೆ. ಮನ್ನಣೆಗೆ ಯೋಗ್ಯವಾಗಿದೆ. ಈ ಲೇಖಕರಿಂದ ಮೊದಲು ಚಾಲನೆ ಪಡೆದ ಒರಿಸ್ಸಾ ಆದಿವಾಸಿ ಸಮಾಜದ ಮತ್ತು ಬದುಕಿನ ಚಿತ್ರಣ ಇಂದಿನ ಹೆಸರಾಂತ ಕಾದಂಬರಿಕಾರರಾದ ಗೋಪೀನಾಥ ಮಹಾಂತಿಯವರ ಕುಸುರಿಗೆಲಸದಲ್ಲಿ ಹೆಚ್ಚಿನ ಆಯಾಮವನ್ನು ಪಡೆದುಕೊಂಡಿದೆ.

ಫಕೀರಮೋಹನರ ಅನಂತರ ಒರಿಯಾ ಕಾದಂಬರಿ ಬಗೆಬಗೆಯ ಬದುಕಿನ ವೈಚಿತ್ರ್ಯಗಳನ್ನು ಒಳಗೊಂಡು ವೈಮನಸ್ಸುಗಳ ದೃಷ್ಟಿಯಿಂದ ಲೆಕ್ಕವಿಲ್ಲದಷ್ಟು ಭಾವ ವಿಭಾವಗಳನ್ನು ಮೈಗೂಡಿಸಿಕೊಂಡು ಮುನ್ನಡೆಯಿತು. ಇಪ್ಪತ್ತನೆಯ ಶತಮಾನದ ಭಾವಾದರ್ಶ ಹಾಗೂ ಅಂತರರಾಷ್ಟ್ರೀಯ ರಚನಾಶೈಲಿಗಳ ಸಂಪರ್ಕ ಮತ್ತು ಪ್ರಭಾವ ಗಳಿಗೆ ಒಳಗಾದ ಒರಿಸ್ಸಾ ಲೇಖಕರು ಅನೇಕ ಬಗೆಯ ಸಮಸ್ಯೆಗಳನ್ನು ಮುಂದಿಟ್ಟು ಕೊಂಡು ಮಾನವನ ಇಬ್ಬಗೆಯ ವ್ಯಕ್ತಿತ್ವದೊಂದಿಗೆ ಜಟಿಲವಾದ ಮನದಾಳದಲ್ಲಿ ಏಳುವ ಬಗೆಬಗೆಯ ವಿರೋಧಿ ಪ್ರವೃತ್ತಿಗಳ ವೈಜ್ಞಾನಿಕ ವಿಶ್ಲೇಷಣೆ ನಡೆಸಿದರು. ಹಳ್ಳಿಯ ಬದುಕಿನ ಜೊತೆಯಲ್ಲೇ ಯಂತ್ರಯುಗದ ನಾಗರಿಕತೆಯ ಸಂಘರ್ಷ ವುಂಟಾಗಿ ಮಾನವೀಯ ಮೌಲ್ಯಗಳಲ್ಲಿ ಜರಿತ, ಇಳಿತ ಹಾಗೂ ಬದಲಾವಣೆಗಳು ಉಂಟಾದವು. ಇದರಿಂದಾಗಿ ಇವೆಲ್ಲದರ ಹಿನ್ನೆಲೆಯಲ್ಲಿ ಒಂದು ರೀತಿಯ ಸ್ಥಿರವಾದ, ಜಗ್ಗದ ಮಾನವೀಯ ನಂಬಿಕೆಯ ನಿಲುವನ್ನು ಪ್ರಶ್ನಿಸುವ ಪರಿಸ್ಥಿತಿ ಎದುರಾಯಿತು.

ಫಕೀರ ಮೋಹನರ ಕಾಲದಿಂದ ಹಿಡಿದು ಇಂದಿನವರೆಗೆ ಒರಿಯಾದಲ್ಲಿ ಅನೇಕ ಕವಿಗಳು (ಉದಾ. ಚಿಂತಾಮಣಿ ಮಹಾಂತಿ, ನಂದಕಿಶೋರ ಬಲ್, ಕುಂತಲಾಕುಮಾರಿ ಸಾಬತ್, ಕಾಂತಕವಿ ಲಕ್ಷ್ಮೀಕಾಂತ್, ಗೋದಾವರೀಶ್ ಮಿಶ್ರ, ಗೋದಾವರೀಶ್ ಮಹಾಪಾತ್ರ, ಪ್ರಾಣಕೃಷ್ಣ ಸಾಮಲ್, ಡಾ. ಮಾಯಾಧರ್ ಮಾನಸಿಂಹ, ಜ್ಞಾನೀಂದ್ರ ವರ್ಮಾ, ಸಚ್ಚಿದಾನಂದ ರಾವುತರಾಯ್ ಮೊದಲಾದವರು) ಕಾದಂಬರಿ ರಚನೆಗೂ ಕೈಹಾಕಿದರು. ಆದರೆ ನಂದಕಿಶೋರ ಬಲ್‌ರವರ ಪ್ರಣಯ ಸಂಸ್ಕಾರ ಚೇತನದಿಂದ ಕೂಡಿದ 'ಕನಕಲತಾ' (1925) ಸಚ್ಚಿದಾನಂದ ರಾವುತರಾಯ್ ಅವರು ಯಥಾರ್ಥವಾದ ನಾಯಕನ ಭಾವಾದರ್ಶ ಹಾಗೂ ಏಳಿಗೆಯ ಹಿರಿಯಾಸೆ ಹೊತ್ತ ಕನಸನ್ನು ವ್ಯಂಗ್ಯವಾಗಿ ತೋರಿಸುವ 'ಚಿತ್ರಗ್ರೀವ್' (1936)ಹಾಗೂ ಕಾಂತಕವಿ ಲಕ್ಷ್ಮೀಕಾಂತರ ವಿಪ್ಲವಮಾನವನನ್ನು ಕುರಿತ 'ಕಣಾಮಾಗುಂ' (1937-1951)ಇಂಥ ಕೆಲವು ಕಾದಂಬರಿಗಳನ್ನು ಬಿಟ್ಟರೆ ಉಳಿದವು ಆಯಾ ಕಾಲದಲ್ಲಿ ಜನಪ್ರಿಯವಾಗಿದ್ದುವೆ ವಿನಾ ಕಾಲವನ್ನು ಮೆಟ್ಟಿ ನಿಲ್ಲಲಿಲ್ಲ. ಇನ್ನೊಂದೆಡೆಯಲ್ಲಿ ಕಾವ್ಯಕವಿತೆಯ ಕ್ಷೇತ್ರದಲ್ಲಿ ಪ್ರತಿಭೆ ತೋರಿದರೂ ಕಾದಂಬರಿಕಾರರೆಂದೇ ಮುಖ್ಯವಾಗಿ ಹೆಸರಾದವರಲ್ಲಿ ಡಾ. ಕಾಲಿಂದಿಚರಣ ಪಾಣಿಗ್ರಾಹಿ ('ಮಾಟಿರ್ ಮಣಿಷ್' 'ಲುಹಾರ್ ಮಣಿಷ್', 'ಮುಕ್ತಾಗರ್ಡ ಕ್ಷುಧಾ', 'ಅಮರ್‌ಚಿತಾ') ಮತ್ತು ನಿತ್ಯಾನಂದ ಮಹಾಪಾತ್ರ ('ಜೀ ಅಂತಾಮಣಿಷ್' 'ಹಿಡ್‌ಮಾಟಿ' 'ಭಂಗಾಹಾಡ್', 'ಜೀವನರ್ ಲಕ್ಷ್ಯ') ಅವರುಗಳನ್ನು ಉಲ್ಲೇಖಿಸಬಹುದು. ಮೌಲ್ಯಗಳ ಬಗೆಗೆ ಮಾನವೀಯ ದೃಷ್ಟಿ ಹಾಗೂ ಆತ್ಮದ ಆದರ್ಶಗಳನ್ನು ಆಧರಿಸಿದ ಕಾಲಿಂದೀಚರಣರ 'ಮಾಟಿರ್ ಮಣಿಷ್' ಹಾಗೂ ತ್ಯಾಗಮೂಲವಾದ ಪ್ರಣಯದ ಸಂವೇದನೀಯವಾದ ಮತ್ತು ಮನೋವೈಜ್ಞಾನಿಕ ವಾದ ವಿಶ್ಲೇಷಣೆಯುಳ್ಳ ನಿತ್ಯಾನಂದರ 'ಜೀಅಂತಾಮಣಿಷ್' ಒರಿಯಾ ಕಾದಂಬರಿ ಕ್ಷೇತ್ರದ ಎರಡು ನೆನಪಿನಲ್ಲಿಡಬೇಕಾದ ಕೃತಿಗಳು. ಇವೇ ಅಲ್ಲದೆ ಕೆಲವಾರು ಮಂದಿ ಲೇಖಕರು ಕೂಡಿ ನಗರ ಜೀವನವನ್ನು ಆಧರಿಸಿ ಬರೆದ 'ಮನೋವೈಜ್ಞಾನಿಕ ಕಾದಂಬರಿ' 'ವಾಸಂತಿ' ಸಹ ಉಲ್ಲೇಖ ಯೋಗ್ಯವಾದುದು. ಇವುಗಳ ಜೊತೆಗೆ ಒರಿಯಾ ಕಾದಂಬರಿ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಕೆಲವು ಮಂದಿ ಹೆಸರಾಂತ ಲೇಖಕರೆಂದರೆ ವೈಲಾನಚರಣದಾಸ್ (ಮನೇಮನೇ), ಉಪೇಂದ್ರ ಕಿಶೋರದಾಸ್ (ಮಲಾಜಹ್ನ) ದಿವ್ಯಸಿಂಹ ಪಾಣಿಗ್ರಾಹಿ (ತೂಮೋಮಾ), ರಾಜಕಿಶೋರಿ ಪಟ ನಾಯಕ (ಚಲಾಬಟ್), ಕಮಲಾಕಾಂತದಾಸ್ (ಬೋಲು), ಹರೇಕೃಷ್ಣ ಮಹತಾಬ್ (ಪ್ರತಿಭಾ), ಲಕ್ಷ್ಮೀಧರ ನಾಯಕ್ (ಹೇ ಮೋರ್ ದುರ್ಭಾಗಾದೇಶ್) ಅನಂತ ಪ್ರಸಾದ ಪಂಡಾ (ಕುಲಿ), ರಾಮಚಂದ್ರ ಮಿಶ್ರ (ನಾಕಕಟಾ ಚಿತ್ರಕಾರ್), ವಸಂತಕುಮಾರಿ ಪಟ್ಟನಾಯಕ್ (ಅನುಡಾಬಾಟ), ಬಾಮಾಚರಣಮಿತ್ರ (ಚಂದ್ರ ಓ ಚಂಪಾ), ಸುರೇಂದ್ರ ಮಹಾಂತಿ (ಅಂಧದಿಗಂತ ಮತ್ತು ನೀಲಶೈಲ್), ಚಂದ್ರಶೇಖರ ರಥ್ (ಯಭ್ರಾರೂಢ್, ಅಸೂರ್ಯ ಉಪನಿವೇಶ್), ಶಾಂತನುಕುಮಾರ ಆಚಾರ್ಯ (ನರಕಿನ್ನರ್, ಶತಾಬ್ದೀರ್ ನಚಿಕೇತಾ), ಮಹಾಪಾತ್ರ ನೀಲಮಣಿ ಸಾಹೂ (ತಾಮಸೀರಾಧಾ), ಬ್ಯಾರಿಸ್ಟರ್ ಗೋವಿಂದದಾಸ್ (ಅಮಾನಪ್ಯಾರ್ ಚಂದ್ರ), ಹರಿಹರ

ವಾಹಿನಿಪತಿ (ಕಾರಾರ್ ಮಯಿಷ್), ವಿಭೂತಿ ಪಟ್ನಾಯಕ್ (ಚಪಲಛಂದಾ). ಈ ಎಲ್ಲ ಲೇಖಕರು ಅನೇಕ ಕಾದಂಬರಿಗಳನ್ನು ಬರೆದಿದ್ದರೂ ಕಲಾತ್ಮಕತೆ ಹಾಗೂ ಇತರ ವೈಶಿಷ್ಟ್ಯಗಳಿಗಾಗಿ ಅವರ ಹೆಸರಿಸಬಹುದಾದ ಕಾದಂಬರಿಗಳನ್ನು ಮಾತ್ರ ಆವರಣದಲ್ಲಿ ಕೊಟ್ಟಿದೆ.

ಒರಿಯಾ ಕಾದಂಬರಿ ಸಾಹಿತ್ಯದಲ್ಲಿ ಮನ್ನಣೆಗೆ ಪಾತ್ರರಾದ ಇಬ್ಬರು ಸಹೋದರ ಕಾದಂಬರಿಕಾರರು ಕಳೆದ ನಾಲ್ಕು ದಶಕಗಳಿಂದ ಈ ಕ್ಷೇತ್ರದಲ್ಲಿ ಕೆಲಸ ಮಾಡಿ ಈ ಪ್ರಕಾರದ ಗುಣ ಮತ್ತು ಪರಿಮಾಣ ಎರಡನ್ನೂ ಹೆಚ್ಚಿಸಿದ್ದಾರೆ. ಇವರೆಂದರೆ ಅಣ್ಣ ಕಾನ್ಹುಚರಣ ಮಹಾಂತಿ ಹಾಗೂ ತಮ್ಮ ಗೋಪೀನಾಥ ಮಹಾಂತಿ. ಸಮಾಜದ ಒಳಗನ್ನು ನಿಚ್ಚಳವಾಗಿ ಹೊರಗೆಡಹುವುದು, ಮನೋವೈಜ್ಞಾನಿಕ ದ್ವಂದ್ವದ ಸೂಕ್ಷ್ಮಾತಿಸೂಕ್ಷ್ಮ ವಿಶ್ಲೇಷಣೆ, ಮಾನವೀಯ ಮೌಲ್ಯಗಳ ಏರುಪೇರಿನಿಂದಾಗಿ ಹುಟ್ಟುವ ಕರುಣೆ ಮತ್ತು ಒಳಗುದಿ, ಸನ್ನಿವೇಶದ ಯಶಸ್ವಿ ಚಿತ್ರಣ, ಮೇಲ್ಮಟ್ಟದಲ್ಲಿ ನಿಲ್ಲಬಲ್ಲಂಥ ಪಾತ್ರಗಳ ನಿರೂಪಣೆ, ಆಳವಾದ ಬದುಕಿನ ಅನುಭವ ಇವುಗಳ ಜೊತೆಗೆ ಬದುಕಿನ ಬಗೆಗಿನ ನಂಬಿಕೆಯ ಸಾಂಕೇತಿಕ ಅನ್ವೇಷಣೆ ಈ ಇಬ್ಬರು ಲೇಖಕರ ಕೃತಿಗಳಲ್ಲಿ ಎದ್ದುಕಾಣುತ್ತದೆ. ಕಾನ್ಹುಚರಣರ ರಚನೆಗಳ ಪೈಕಿ 'ಹಾ ಅನ್ನ', 'ಸಾಸ್ತಿ', 'ಅದೇ ಬಾ ಹಾತ್', 'ಝಂಝಾ' 'ತುಂಡ ಬಾಯಿದ್' 'ಕಾ', 'ಪರಿ', 'ಶರ್ಬರೀ', 'ತಮಸಾತೀರ್ ಮುಂತಾದುವು ಬದುಕಿನ ವಿಭಿನ್ನತೆಗಳ ನಿರೂಪಣೆಗಾಗಿ ಹಾಗೂ ಉತ್ತಮ ಕಲಾಭಿವ್ಯಕ್ತಿಗಾಗಿ ಉಲ್ಲೇಖ ಯೋಗ್ಯವಾಗಿದೆ. ಗೋಪೀನಾಥರ ಕೃತಿಗಳ ಪೈಕಿ 'ಪರಜಾ', 'ಅಮೃತರ್ ಸಂತಾನ್', 'ದಾದಿ ಬೂಢಾ', 'ಶಿವಭಾಯಿ', 'ಅಪಹಂಚ್', 'ಹರಿಜನ್', 'ದಾನಾಪಾಣಿ', 'ಲಯುವಿಲಯ್', 'ರಾಹುರ್ ಛಾಯಾ', 'ಮಾಟಿಮಟಾಲ್ ಮುಂತಾದುವು ತಮ್ಮದೇ ಆದ ವೈಶಿಷ್ಟ್ಯಗಳನ್ನು ಪಡೆದುಕೊಂಡಿದೆ. ವಾಸ್ತವವಾಗಿ ಬದುಕಿನ ವ್ಯಾಪಕತೆ, ಅದರ ವೈಚಿತ್ರ್ಯ ಮತ್ತು ಆಳಗಳ ಕಲಾತ್ಮಕ ನಿರೂಪಣೆ, ಜೀವತುಂಬಿದ ಹಾಗೂ ಎತ್ತರದ ಪಾತ್ರಚಿತ್ರಣಗಳ ದೃಷ್ಟಿಯಿಂದ ಗೋಪೀನಾಥರು ಆಧುನಿಕ ಒರಿಯಾ ಸಾಹಿತ್ಯದಲ್ಲಿ ಅತ್ಯುತ್ತಮ ಬರಹಗಾರರೆಂಬ ಹೆಸರು ಗಳಿಸಿಕೊಂಡಿದ್ದಾರೆ.

ಆದಿವಾಸಿಗಳ ಬದುಕನ್ನು ಅದರ ಎಲ್ಲ ಆಸೆಆಕಾಂಕ್ಷೆಗಳ ಹಾಗೂ ಸಾಂಸ್ಕೃತಿಕ ರೂಢಿನಂಬಿಕೆಗಳ ನಿರೂಪಣೆಗೆ ಮುಡಿಪಾಗಿಟ್ಟಿರುವ ಗೋಪೀನಾಥರ 'ಪರಜಾ', 'ಅಮೃತರ್ ಸಂತಾನ್', 'ದಾದಿ ಬೂಢಾ', 'ಶಿವಭಾಯಿ' ಮತ್ತು 'ಅಪಹಂಚ'ಗಳಂಥ ಸರಸವಾದ, ಸ್ವಚ್ಛಂದವಾದ ಕೃತಿಗಳು ಎಣೆಯಿಲ್ಲದವು. ಈ ನಿಟ್ಟಿನಲ್ಲಿ ಗೋಪೀನಾಥರ ಪ್ರತಿಭೆ ಏಕಮೇವಾದ್ವಿತೀಯವಾದದ್ದು, ಅನನ್ಯವಾದದ್ದು. ಹಾಗೆಯೇ ಹರಿಜನರ ಬದುಕನ್ನು ಕುರಿತ ಲೇಖಕರ 'ಹರಿಜನ' ಕಾದಂಬರಿ ಪಾತ್ರ ಚಿತ್ರಣ, ಸಹಜ ನಿರೂಪಣೆ ಹಾಗೂ ಕಲೆಗಾರಿಕೆಯ ದೃಷ್ಟಿಯಿಂದ ಭಾರತೀಯ ಸಾಹಿತ್ಯದಲ್ಲೇ ವಿಶೇಷವಾಗಿ ಉಲ್ಲೇಖ ಯೋಗ್ಯವಾದುದು. ಇವರ 'ದಾನಾಪಾಣಿ', 'ಲಯವಿಲಯ್', 'ರಾಹುರ್ ಛಾಯಾ', 'ಮನಗಹೀರರ್ ಚಾಷ್' ಹಾಗೂ 'ಮಾಟಿಮಟಾಲ್'ಗಳಲ್ಲಿ ಓದುಗ ಆಧುನಿಕ ಬದುಕಿನ ಹೋರಾಟದ ಯಾತನೆ, ಕಾತುರಗಳ ಬಿಸಿಯನ್ನು ಮನಗಾಣುವುದೇ ಅಲ್ಲದೆ ಇಂದಿನ ಮನುಷ್ಯನ ಮನಸ್ಸಿನ

ಒಳತೋಟಿ, ಮಾನವೀಯ ಮೌಲ್ಯಗಳ ಜರಿತ ಹಾಗೂ ಹೋರಾಟದ ಮೂಲಕ ಒಂದು ಸ್ಥಿರವಾದ ನಂಬಿಕೆಯನ್ನು ತಳೆದು ಶಾಂತನೆಲೆಯನ್ನು ಅರಸುವ ಪ್ರಯತ್ನ ವನ್ನು ಕಂಡುಕೊಳ್ಳುತ್ತಾನೆ. 'ಪರಜಾ' (1946), 'ಅಮೃತರ್ ಸಂತಾನ್' (1949) ಮತ್ತು 'ಮಾಟಿಮಟಾಲ್' (1964) ಈ ಮೂರು ಕಾದಂಬರಿಗಳು ಮಾನವನ ಬದುಕನ್ನು ವ್ಯಾಪಕವಾಗಿ ಚಿತ್ರಿಸುವುದರ ಮೂಲಕ ಮಹಾಕಾವ್ಯ ಸದೃಶವಾದ ಕಾದಂಬರಿಗಳ ಮಟ್ಟಕ್ಕೇರಿವೆ. ವಾಸ್ತವವಾಗಿ ಗೋಪೀನಾಥರೇ ಒರಿಯಾದಲ್ಲಿ ಮಹಾಕಾವ್ಯ ಸದೃಶವಾದ ಕಾದಂಬರಿಗಳ ಮೊದಲ ಹಾಗೂ ಯಶಸ್ವಿ ಲೇಖಕರು. ರಚನಾಶಿಲ್ಪದ ದೃಷ್ಟಿಯಿಂದ ಮಹಾಂತಿಯವರು ಯಾವಾಗಲೂ ಪ್ರಜ್ಞಾಪೂರ್ವ ಪ್ರಯೋಗಶೀಲರು. ಹಾಗಾಗಿ ಅವರ ಪ್ರತಿಯೊಂದು ಕಾದಂಬರಿಯಲ್ಲೂ ವಿಭಿನ್ನತೆಯಿದೆ. ಬೇರೆ ಬೇರೆ ಅಭಿರುಚಿ ವೈಶಿಷ್ಟ್ಯಗಳಿವೆ, ಆಕರ್ಷಣೆಯಿದೆ. ಸ್ವತಂತ್ರತೆಯಿದೆ. 'ಪರಜಾ' ಹಾಗೂ 'ಮಾಟಿಮಟಾಲ್' ಲೇಖಕರ ಸೃಜನಾತ್ಮಕ ಪ್ರತಿಭೆಯ ಕೀರ್ತಿಸ್ತಂಭಗಳು ಎನ್ನಬಹುದು. 'ದಾನಾಪಾಣಿ' (1955) 'ಹರಿಜನ್' (1948), 'ಲಯವಿಲಯ್' (1961) ಹಾಗೂ 'ರಾಹುರ್ ಛಾಯಾ' ಮುಂತಾದ ಕಾದಂಬರಿಗಳಲ್ಲಿ ಪರಿಸರದ ಒಡೆದ ಭಿತ್ತಿಯ ಮೇಲೆ ಬದುಕಿನ ಪೂರ್ಣತೆಯ ಚಿತ್ರವನ್ನು ಬಿಡಿಸಲು ಹೊರಟಿರುವುದು ಅವರ ಸೃಜನಾತ್ಮಕ ಪ್ರತಿಭೆಯ ಪ್ರಖರತೆಗೆ ಸಾಕ್ಷಿಯಾಗಿವೆ. 'ದಾದಿಬೂಢಾ' (1938) ದಿಂದ 'ಮಾಟಿಮಟಾಲ್' (1964) ವರೆಗೆ ಅವರ ಸೃಜನಶೀಲ ಮನಸ್ಸಿನ ಮುನ್ನಡೆಯ ದೀರ್ಘ ಇತಿಹಾಸ ಕಾದಂಬರಿ ಗಳುದ್ದಕ್ಕೂ ದಾಖಲೆಗೊಂಡಿದೆ. ನಮ್ಮ ನಾಡಿನ ಸಾಂಸ್ಕೃತಿಕ ಇತಿವೃತ್ತಗಳ ಬಗೆಗೆ ಅವರ ಪ್ರತಿಭೆ ಜಾಗರೂಕವಾಗಿರುವುದಾದರೂ ದೇಶ ಕಾಲಗಳನ್ನು ಮೆಟ್ಟಿನಿಂತ ಮಾನವನ ಚಿತ್ರಣದಲ್ಲಿ ತಮ್ಮ ಬದುಕಿನ ನಿಷ್ಠೆ ಹಾಗೂ ಮಾನವಪ್ರೇಮ ಸಾಗಿರುವುದರ ಬಗ್ಗೆ ಅಚ್ಚಳಿಯದ ಪರಿಚಯವನ್ನು ಅವರು ಮಾಡಿಕೊಟ್ಟಿದ್ದಾರೆ. ಲೇಖಕರ ಮಾತಿನಲ್ಲೇ ಹೇಳುವುದಾದರೆ - "ಈ ಮನುಷ್ಯ, ಯಾವುದೇ ವರ್ಣ ದವನಾಗಿರಲಿ, ಎಷ್ಟೇ ದೂರದವನಾಗಿರಲಿ, ನನ್ನಲ್ಲಿ ಮತ್ತು ಅವನಲ್ಲಿ ಹರಿಯುತ್ತಿರು ವುದು ಒಂದೇ ರಕ್ತ." ಹಾಗಾಗಿ ಅವರ ಸೃಷ್ಟಿಲೋಕದಲ್ಲಿ ವಿಮರ್ಶಕರಿಗೆ ಆಧುನಿಕ ಕಾದಂಬರಿ ರಚನೆಯ ವಿಭಿನ್ನ ಪ್ರಯೋಗ ಪದ್ಧತಿಗಳು ದೊರೆಯುತ್ತಿರುವುದರ ಜೊತೆಗೆ ಯಥಾರ್ಥವಾದಿ, ಪ್ರಕೃತಿವಾದಿ, ಸ್ಥಿತಿವಾದಿ, ಚೇತನ-ಪ್ರವಾಹವಾದಿ ದಾರ್ಶನಿಕ ಸ್ಥಿತಿಗಳು ಬೇರೆಬೇರೆಡೆಗಳಲ್ಲಿ ಕಂಡುಬರಬಹು ದಾದರೂ, ಇವೆಲ್ಲಕ್ಕೂ ಮಿಗಿಲಾಗಿ ರಸದ ಎಲ್ಲೆಕಟ್ಟನ್ನು ಮೀರಿನಿಂತ ಅವರ ಬದುಕಿನ ಬಗೆಗಿನ ನಿಲುವು ಹಾಗೂ ಮಾನವ ಪ್ರೇಮ ಕಾದಂಬರಿ ಪ್ರಪಂಚದಲ್ಲಿ ಅವರಿಗೆ ಒಬ್ಬ 'ಕ್ಲಾಸಿಕ್' ಬರಹಗಾರರೆಂಬ ಮನ್ನಣೆಯನ್ನೂ ಕೀರ್ತಿಯನ್ನೂ ಸಂಪಾದಿಸಿಕೊಟ್ಟಿದೆ.

ಶಬ್ದಶಿಲ್ಪದಲ್ಲಿ ಮಹಾಂತಿಯವರು ಜಾದೂಗಾರರು. ಇವರ ಪ್ರಕೃತಿ ಮತ್ತು ಸನ್ನಿವೇಶಗಳ ವರ್ಣನೆ, ಸಿರ್ದಿಷ್ಟವಾಗಿ, ಕುಡಿಯೊಡೆದು ಹೊಮ್ಮುವ ಭಾವನೆಗಳ ನಿರೂಪಣೆ ಹಾಗೂ ಮಾನವ ಮನಸ್ಸಿನ ಆದಿಮವಾದ ಮತ್ತು ಮೂಲೆಗುಂಪಾದ ಅನುಭವಗಳ ಚಿತ್ರಣ ಓದುಗರ ಮನಸ್ಸಿನಲ್ಲಿ ಒಂದು ರೀತಿಯ ಕೇಳರಿಯದ ಸಂಗೀತ ಲಹರಿಯನ್ನು ಹೊಮ್ಮಿಸಿ ತಲ್ಲೀನರನ್ನಾಗಿ ಮಾಡಿಬಿಡುತ್ತದೆ. ಮಹಾಂತಿಯವರ

ಕಾದಂಬರಿಗಳಲ್ಲಿ ಉನ್ನತ ಕಾವ್ಯಪ್ರತಿಭೆಯುಂಟು. ಮನಮುಟ್ಟುವ ನಿರೂಪಣೆ ಮತ್ತು ಒಳದನಿಗೆ ಓಗೊಡುವತ್ತ ಒಲವು ಅವರ ರಚನೆಯ ಮೂಲಭೂತ ಲಕ್ಷಣಗಳು. ಅವರ ಪಾತ್ರಗಳ ಚಿತ್ರಶಾಲೆಯಲ್ಲಿ ಕಂಡುಬರುವ ಅನೇಕ ಗಂಡುಹೆಣ್ಣು ಪಾತ್ರಗಳು ನಮ್ಮ ಸುತ್ತಮುತ್ತಲ ಬದುಕಿನಿಂದ ಆಯ್ದುಕೊಂಡವಾದರೂ ಲೇಖಕರ ಪ್ರತಿಭೆಯ ಜಾದೂದಂಡದಿಂದಾಗಿ ಅಚ್ಚಳಿಯದಂತೆ ಕಳೆತುಂಬಿಕೊಂಡು ತಮ್ಮದೇ ಆದ ರೀತಿಯಲ್ಲಿ ವಿಜೃಂಭಿಸುತ್ತವೆ. ಫಕೀರ ಮೋಹನರನ್ನು ಬಿಟ್ಟರೆ ಕತೆ ಮತ್ತು ಕಾದಂಬರಿಎರಡು ಕ್ಷೇತ್ರಗಳಲ್ಲೂ ಸಿದ್ಧಿಯನ್ನು ಪಡೆದು ಸವ್ಯಸಾಚಿಗಳು ಯಾರೂ ಕಂಡುಬರುವುದಿಲ್ಲ. ಇಂಥ ಹಿರಿದಾದ ಪ್ರತಿಭೆಯುಳ್ಳವರು ಇಂದಿಗೂ ತಮ್ಮ ಸೃಜನಕಾರ್ಯದಲ್ಲಿ ತೊಡಗಿರುವುದು ನಿಜಕ್ಕೂ ಸಂತಸದ ವಿಷಯ.*

ಗೋಪೀನಾಥ ಮಹಾಂತಿಯವರ ಕೃತಿಗಳನ್ನು ಗಮನಿಸಿದರೆ 'ದಾನಾಪಾಣಿ' ಬೆಳಕಿಗೆ ಬಂದದ್ದು 1955ರಲ್ಲಿ. ಈ ವಾಸ್ತವವಾದಿ ಕಾದಂಬರಿಯ ವಸ್ತು ಇಂದಿನ ಬದುಕಿನ ಹೋರಾಟದಲ್ಲಿ ಹೊಟ್ಟೆಪಾಡಿಗಾಗಿ ಎದ್ದುಕಾಣುವ ತೀವ್ರ ಪೈಪೋಟಿ ಹಾಗೂ ನೌಕರಿಯಲ್ಲಿ ಬಡ್ತಿಯನ್ನು ಕುರಿತಾಗಿದೆ. ಕಾದಂಬರಿಯ ಪಾತ್ರಗಳಲ್ಲಿ ಒಬ್ಬನಾದ 'ಬನು' ಹೀಗೆ ಹೇಳುತ್ತಾನೆ. "ಅಯ್ಯೋ! ಕೇವಲ ಹೊಟ್ಟೆಪಾಡಿನ ಹೋರಾಟದಲ್ಲೇ ಎಲ್ಲರೂ ಮುಳುಗಿರುತ್ತಾರೆ, - ಅನ್ನ ತಿನ್ನುವಾಗಲೂ ಅದೇ ಯೋಚನೆ." ಕಾದಂಬರಿಯ ಪ್ರಧಾನಪಾತ್ರವಾದ 'ಸಫಲತಾವಾದಿ' ಹಾಗೂ 'ಯೋಜನಾವಾದಿ' ಬಲದತ್ತ ತನ್ನ ಕಂಪೆನಿಯ ನೌಕರಿಯಲ್ಲಿ ಬಡ್ತಿ ಪಡೆಯುವ ಸಲುವಾಗಿ ಯಾವುದೇ ಎಗ್ಗಿಲ್ಲದೆ ತನ್ನ ವಿವೇಕ ಮತ್ತು ಮಾನವೀಯತೆಗಳನ್ನು ಬದಿಗಿಟ್ಟು ಬಿಡುತ್ತಾನೆ. ನೈತಿಕತೆಯ ಮೆಟ್ಟಿಲುಗಳನ್ನು ಒಂದೊಂದಾಗಿ ಇಳಿಯುತ್ತಾ ತನ್ನ ಏಳಿಗೆ ಹಾಗೂ ನಿಷ್ಠೆಗಾಗಿ ಜೀವನ ಯಜ್ಞದಲ್ಲಿ ಮಡದಿ ಸರೋಜಿನಿಯ ಶೀಲವನ್ನೇ ಹಿಂದುಮುಂದು ನೋಡದೆ ಬಲಿಗೊಡುತ್ತಾನೆ. ಇಂಥ ಅಸಹಾಯಕವಾದ ಕರುಣಾಕತೆಯನ್ನು ಹೊತ್ತು ಸಾಗುತ್ತದೆ. 'ದಾನಾಪಾಣಿ' ಲೇಖಕರ ಮಾತಿನಲ್ಲೇ ಬಲಿದತ್ತ - "ಯಾವುದೋ ಮೂಲೆಗುಂಪಾದ ಹಳ್ಳಿಯಿಂದ ಬಂದ ಸಾಧಾರಣ ಆಸಾಮಿ, ಇವನು. ಆದರೆ ಇವನಿಗೆ ಒಳ್ಳೆಯ ಸ್ಥಿತಿಗತಿಗಳು ಬೇಕು" ಮನುಷ್ಯನ ಈ ಹೊಟ್ಟೆಪಾಡಿನ ಯೋಚನೆಯೇ ಕಾದಂಬರಿಯ ಮೂಲಭೂತ ಸಮಸ್ಯೆ, ಈ ಹಿನ್ನೆಲೆಯಲ್ಲಿಯೆ ಮಹಾಂತಿಯವರು ಆಧುನಿಕ ಸುಶಿಕ್ಷಿತ ಬದುಕಿನಲ್ಲಿ ಹೊಟ್ಟೆಪಾಡಿಗಾಗಿ ನಡೆಯುವ ಹೋರಾಟದ ಕರಾಳ ಸ್ವರೂಪವನ್ನು ಹೊರತೋರಿದ್ದಾರೆ. ಈ ಹೋರಾಟದಲ್ಲಿ ಮನುಷ್ಯ ತನ್ನ ಶಿಕ್ಷಣ, ಸಂಸ್ಕಾರ, ರುಚಿ, ನೀತಿನಿಲುವುಗಳು ಎಲ್ಲಕ್ಕೂ ತಿಲಾಂಜಲಿಯಿತ್ತು ತನ್ನ 'ಅಹಂ' ಅನ್ನು ಮುಂದೆ ತರುವ ಸಲುವಾಗಿ ಎಷ್ಟು ಕಾತುರನಾಗುತ್ತಾನೆ, ಮುಂದುವರೆಯುತ್ತಾನೆ, ಬೇರೆಯವರ ಬಗ್ಗೆ ಅಸೂಯೆಯಿಂದ ಕುದಿಯುತ್ತಾನೆ ಇವೆಲ್ಲ ವಿಚಾರಗಳನ್ನು ಕುರಿತು ಚೊಕ್ಕವಾಗಿ, ಸತ್ವಕ್ಕೆ ದೂರವಾಗದೆ, ಯಶಸ್ವಿಯಾಗಿ ನಿರೂಪಿಸಿರುವುದು ಈ ಕಾದಂಬರಿಯ

---

* ಶ್ರೀ ಗೋಪೀನಾಥ ಮಹಾಂತಿಯವರ 'ಮಾಟಿಮಟಾಲ್' ಕೃತಿಗೆ 1973ರಲ್ಲಿ ಭಾರತೀಯ ಜ್ಞಾನಪೀಠ ಪ್ರಶಸ್ತಿ ದೊರೆತಿದೆ.

ಹೆಚ್ಚುಗಾರಿಕೆ. ಇಲ್ಲಿ ಸಾಧಾರಣವೆನಿಸಿದ ಒಬ್ಬ ಜವಾನದಿಂದ ಹಿಡಿದು ಕಂಪೆನಿಯ ಅಧಿಕಾರಿಗಳು, ದೊಡ್ಡ ಸಾಹೇಬರವರೆಗೆ ಎಲ್ಲರ ವ್ಯಕ್ತಿತ್ವದ ಒಳನೋಟ, ಅನೀತಿ, ಮಾನಸಿಕ ಶೋಷಣೆಯ ಪ್ರವೃತ್ತಿ ಇವೆಲ್ಲವನ್ನೂ ಲೇಖಕರ ಸೂಕ್ಷ್ಮದೃಷ್ಟಿ ಯಶಸ್ವಿಯಾಗಿ ಬಿಡಿಸಿದೆ.

'ದಾನಾಪಾಣಿ' ಲೆಕ್ಕವಿಲ್ಲದಷ್ಟು ಪಾತ್ರಗಳ ಒಂದು ಮನೋಜ್ಞ ಚಿತ್ರಶಾಲೆ. ಇಲ್ಲಿ ನೀರು, ಕಾಳುಗಳನ್ನು ಸೇವಿಸಲು ನಿಜವಾಗಿಯೂ ಜನರ ಒಂದು ದೊಡ್ಡ ಗುಂಪೇ ಸ್ಪರ್ಧೆಗೆ ಇಳಿದಿದೆ. ಆದರೆ ಅವರೆಲ್ಲರ ನಡೆವಳಿಕೆ ಮತ್ತು ಆಲೋಚನೆಗಳಿಗೆ ಸಂಬಂಧಿಸಿದಂತೆ ನಿರಪೇಕ್ಷವಾದ, ತಲ್ಲೀನವಾದ ಭಾವದಿಂದ ಮುಂದುವರೆಯುವ ಕತೆಯಲ್ಲಿ ಹೊರ ಮತ್ತು ಒಳ ದ್ವಂದ್ವಗಳ ಚಿತ್ರಣ ಯಶಸ್ವಿಯಾಗಿ ಮೂಡಿಬಂದಿದೆ. 'ದಾನಾಪಾಣಿ'ಯ ಪಾತ್ರಗಳು ಒಂದು ರೀತಿಯಲ್ಲಿ ಪ್ರಾತಿನಿಧಿಕವಾದುವು (Type characters). ಆದರೂ ತಮ್ಮ ವ್ಯಕ್ತಿ ಸ್ವಾತಂತ್ರ್ಯದಿಂದ ಮೊದಲುಗೊಂಡು ಅವು ತಮ್ಮದೇ ಆದ ರಸದೀಪ್ತಿಯಿಂದ ಉಜ್ವಲಗೊಂಡು ಪ್ರತ್ಯೇಕವಾದ ಘಟಕವನ್ನೇ ಸೃಷ್ಟಿಸಿವೆ. ಆಧುನಿಕ ಸಮಾಜದಲ್ಲಿ ಒಂದು ನಿರ್ದಿಷ್ಟವಾದ ದಿಕ್ಕನ್ನು ತೋರಿಸುವ ಸಲುವಾಗಿ ಪಾತ್ರ ಪರಿಕಲ್ಪನೆಯಿರುವುದಾದರೂ ಮೂಲಮಾನವೀಯ ಪ್ರವೃತ್ತಿಗಳ ಅಭಿವ್ಯಕ್ತಿಯ ದೃಷ್ಟಿಯಿಂದ ಅವು ವಸ್ತುವಾದಿ ಜೀವನ ದರ್ಶನ ಹಾಗೂ ಮಾನವೀಯ ದೌರ್ಬಲ್ಯಗಳ ಪ್ರತೀಕವಾಗಿ ಮೂಡಿಬಂದಿವೆ. ಹಾಗಾಗಿ ಬಲಿದತ್ತನಿಂದ ಮೊದಲುಗೊಂಡು ಮಿಸ್ಟರ್ 'ಶ', ಶರ್ಮಾ, ರಣಜಿತಬಾಬು, ಸಕಲತವಾಲಾ, ಹೆಡ್‌ಗುಮಾಸ್ತರು, ಬನು, ಸಂಟೂದಾ, ವೆಂಕಟರಾವ್, ಉಮೇಶ ಬಾಬು, ಗೋಪಾಲಬಾಬು, ಕಾನ್‌ಸ್ಟೇಬಲ್ ರಾಜ್, ಆಳು ನಿತಾ, ಹರ್ಷ, ನಂದ ಮುಂತಾದ ಹಲವಾರು ಪುರುಷ ಪಾತ್ರಗಳ ಹಾಗೂ ಸರೋಜಿನಿಯಿಂದ ಮೊದಲುಗೊಂಡು ರಾಮುಬಾಬುವಿನ ಹೆಂಡತಿ, ಮಿಲಿ, ನೀಲಿವರೆಗಿನ ಹಲವಾರು ಸ್ತ್ರೀಪಾತ್ರಗಳ ಬಗ್ಗೆ ಓದುಗರಲ್ಲಿ ಸಹಾನುಭೂತಿ, ಸ್ನೇಹ ಮತ್ತು ಕರುಣೆಯನ್ನು ಮೂಡಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

ಫಕೀರ ಮೋಹನರ 'ಪ್ರಾಯಶ್ಚಿತ್ತ' ಕಾದಂಬರಿಯಂತೆಯೆ ಇಲ್ಲೂ 'ಉದ್ದೇಶ ಮತ್ತು ಸಾಧನ' ಹಾಗೂ ಗುರಿ ಮತ್ತು ಸಾಧನಗಳ ಬಗೆಗೆ ಪ್ರಶ್ನೆಯತ್ತಲಾಗಿದೆ. ಆದರೆ ಈ ಕಾದಂಬರಿಯ ಭಿತ್ತಿ ಹೆಚ್ಚು ವಿಸ್ತಾರವೂ ಸಂದರ್ಭೋಚಿತವೂ ಆಗಿರುವುದರ ಜೊತೆಗೆ ಶಿಲ್ಪದ ದೃಷ್ಟಿಯಿಂದ ಹೆಚ್ಚು ಜೀವನನಿಷ್ಠವಾಗಿದೆ, ರಸೋತ್ತೀರ್ಣವಾಗಿದೆ. 'ಉದ್ದೇಶಕ್ಕೆ ಅನುಗುಣವಾದ ಸಾಧನ' ಎಂಬುದನ್ನು ಬದುಕಿನ ಏಕಮಾತ್ರ ಗುರಿ ಯಾಗಿಟ್ಟುಕೊಂಡಿದ್ದ ಬಲಿದತ್ತನ ಬಾಳಿನಲ್ಲಿ 'ಸಾಧನ ತನ್ನಷ್ಟಕ್ಕೆ ತಾನ ಗುರಿ'ಯಾಗಿ ಹೋಯಿತು. ಅದೇ ಬಲಿದತ್ತ ತನ್ನ ವಿಳಿಗೆಯ ಹಮ್ಮಿನಲ್ಲಿ ತಾನು ತಂದೆಯಾಗಲಿ ರುವ ಬಗ್ಗೆ ಬೀಗುತ್ತಾನೆ. ಅದನ್ನು ದೃಷ್ಟಿಯಿಟ್ಟುಕೊಂಡೇ ಲೇಖಕರು ಹೇಳುತ್ತಾರೆ-

"ವಂಶದ ಕುಡಿ ಇಲ್ಲದಿರುವಾಗ ಹಣದಿಂದೇನು ಪ್ರಯೋಜನ ?
ಹೆಸರಿನ ಜೊತೆಯಲ್ಲಿ ಅದನ್ನು ದೂರ ಕೊಂಡೊಯ್ಯುವ
ದಾರದಳ ಇರಲಿಲ್ಲ."

ಒಟ್ಟಿನಲ್ಲಿ ಅವನು ಈಗ ವಿಕೃತವಾದ ಇಂಥ ಅರ್ಥ ಅನುಭವ ಪಡೆಯುವ ಅಧಿಕಾರ ಹೊಂದಿರುವುದೇನೋ ಸರಿಯೆ, ಆದರೆ ಹೊಟ್ಟೆಪಾಡಿನ ವಿಚಾರವನ್ನು ಅಳೆದೂ ಸುರಿದೂ ತೂಗುವುದರಲ್ಲಿ, ಯಶಸ್ಸಿನ ಕನಸು ಕಾಣುವುದರಲ್ಲಿ ಅದೆಷ್ಟು ಹಗಲು ರಾತ್ರಿಗಳು ಕಳೆದುಹೋಗಿವೆಯೋ, ಆದರೆ ಈಗ ನೋಡುತ್ತಾನೆ - ತನ್ನ ಮೈಯಲ್ಲೇ ಬೆಂಕಿಹತ್ತಿ ಉರಿಯುತ್ತದೆ! - ಬಲಿದತ್ತನ ಪಾತ್ರ ಇಲ್ಲಿ ಕರುಣೆಯ ಪರಿಣತಿಯನ್ನು ಪಡೆದುಕೊಳ್ಳುತ್ತದೆ. ಇನ್ನೊಂದೆಡೆ ನಮ್ಮೆದುರಿಗೆ ಕಥಾನಾಯಕಿ - ಸರೋಜಿನಿಯ ಪಾತ್ರವಿದೆ. "ಅವಳು ಹೆಣ್ಣು, ಅವಳಿಗೆ ಊಟ ಸಿಕ್ಕಿದೆ, ಬಟ್ಟೆ ಸಿಕ್ಕಿದೆ, ಆಭರಣಗಳು ಸಿಕ್ಕಿದೆ - ಅಷ್ಟೇ ಸಾಕೆ?" ಹೆಣ್ಣುತನದ ಮೂಲಭೂತವಾದ ಬೇಡಿಕೆ, ಈ ಚಿರಂತನ ಪ್ರಶ್ನೆಗೆ ಉತ್ತರ ಅರಸುತ್ತಾ ಸರೋಜಿನಿ ಬದುಕಿನಲ್ಲಿ ಮುಂದ ಹೆಜ್ಜೆ ಇಟ್ಟಿದ್ದಾಳೆ. ಕಡೆಯಲ್ಲಿ ಬೇರೆಯವರ ದೃಷ್ಟಿಯಲ್ಲಿ ಶೀಲಗೆಟ್ಟವಳು, ಜಾರಿದವಳು ಅಂತೆನಿಸಿ ಕೊಂಡರೂ ತನ್ನ ಮಟ್ಟಿಗೆ ತಾನು ಪರಿಪೂರ್ಣಳಾಗಿದ್ದಾಳೆ, ಫಲವತಿಯಾಗಿದ್ದಾಳೆ. ಬಯಕೆಯ ಬೆನ್ನು ಹಿಡಿದು ಹೋಗುತ್ತಿರುವಂತೆಯೆ ಅವಳು ಅನೇಕ ಎಡರುಗಳನ್ನು ಎದುರಿಸುತ್ತಾಳೆ, ಅವಳ ವ್ಯಕ್ತಿತ್ವ ಮಾನಸಿಕವಾಗಿ ಬದಲಾಗುತ್ತಿದ್ದಂತೆಯೆ ಒಂದು 'ಅನಾಗತ ಪುನರ್ಜನ್ಮ' ಅವಳ ವ್ಯಕ್ತಿತ್ವಕ್ಕೆ ಇಂಬುಕೊಡುತ್ತದೆ. ಹಾಗಾಗಿ ಲೇಖಕರ ಮಾತಿನಲ್ಲಿ "ಈಗ ಚಿಪ್ಪಿನಲ್ಲಿ ಆ ಮಳೆಯ ಹನಿಬಿದ್ದಿತ್ತು. ಚಿಪ್ಪು ಮುಚ್ಚಿಕೊಂಡಿತ್ತು!".... ಹೊಲಕ್ಕೆ ಬೀಜ ಸಿಕ್ಕಿದೆ, ನೆಲಕ್ಕೆ ಕುಡಿಯ ಬಿಸಿ ಸಿಕ್ಕಿದೆ, ಸೃಷ್ಟಿಗಾಗಿ ಎಲ್ಲ ಕಾದಿದೆ. ಗರ್ಭಾದಾನದ ಆನಂದದಲ್ಲಿ ಗರ್ಭಿಣಿ ಮಣ್ಣು ಯಾವ ಪರಿಚಯವನ್ನೂ ಹುಡುಕಬಯಸುವುದಿಲ್ಲ, ಅದು ಪರಿಪೂರ್ಣ ಅಷ್ಟೇ ಸಾಕು." ಇಂಥ ಸರೋಜಿನಿ ಸಹೃದಯ ಓದುಗರ ಎದುರಿನಲ್ಲಿ ಇನ್ನು ತಿರಸ್ಕಾರ ಯೋಗ್ಯಳಲ್ಲ, ಪತಿತೆಯಲ್ಲ, ಬದಲಾಗಿ ಅವಳ ಹೆಣ್ತನದ ಹಾಗೂ ತಾಯ್ತನದ ಬಯಕೆ, ಅವಳ ನಿರಾಶೆ ಈಗ ಸಾಫಲ್ಯವನ್ನು ಕಂಡುಕೊಂಡಿದ್ದು ಪರಿಪೂರ್ಣತೆಯ ವಿಜಯ ದರ್ಪದಿಂದಾಗಿ ಅವಳು ಮರ್ಯಾದೆಗೆ ಹಾಗೂ ಅಂತಃಕರಣಕ್ಕೆ ಪಾತ್ರಳಾಗುತ್ತಾಳೆ. ಅಲ್ಲಿ ಅನಂತ ಮಾತೃಸ್ವರೂಪೆಯಾದ ಹೆಣ್ಣಿನ ಬಯಕೆಯ ಬಗ್ಗೆ ಓದುಗ ಕರುಣೆಯಲ್ಲಿ ತೊಯ್ದು ಸಂವೇದನಾಶೀಲನಾಗುತ್ತಾನೆ.

ಬಗೆಬಗೆಯ ಪಾತ್ರಗಳನ್ನು ನಿರ್ಮಿಸುವುದರ ಜೊತೆಗೆ ಬದುಕಿನ ಸಾಧಾರಣ ನೋಟಕ್ಕೆ ಜೀವ ತುಂಬಲು, ಅದರಲ್ಲಿ ದನಿಗೂಡಿಸಲು ಲೇಖಕರು ಅನೇಕೆಡೆಗಳಲ್ಲಿ ತಮ್ಮ ಸೂಕ್ಷ್ಮದೃಷ್ಟಿಯ ಹಾಗೂ ನಿರ್ದಿಷ್ಟ ನಿಲುವು ನಂಬಿಕೆಗಳ ಪರಿಚಯವನ್ನು ಮಾಡಿಕೊಡುತ್ತಾರೆ. ಅವರ ಮಾತುಗಳಲ್ಲೇ– "ಈ ಪ್ರಪಂಚವೇನೂ ಸರಿ, ನೀವೆಲ್ಲ ಓದಿ ಬರೆದು ಗುಮಾಸ್ತರಾಗಿ ಹೋದಿರಿ, ಇವುಗಳ ಬಗ್ಗೆ ನಂಬಿಕೆ ಕಡಮೆ, ಆನಂದದ ಹೆಸರೇ ಇಲ್ಲ, ಅದನ್ನು ಪಡೆದುಕೊಳ್ಳುವ ಶಕ್ತಿಯೂ ಇಲ್ಲ." ಅಥವಾ "ಪೇಟೆಂಟ್ ಔಷಧಿಯ ಜಾಹಿರಾತಿನ ತರಹ ಪ್ರಪಂಚದಲ್ಲಿ ಪೇಟೆಂಟ್ ಐಡಿಯಾಗಳೇ ಜಾಸ್ತಿಯಾಗಿದ್ದು ಏನು ಪ್ರಯತ್ನಮಾಡಿದರೂ ಭೂಮಿಯಲ್ಲಿ ಯುದ್ಧ-ಅಶಾಂತಿ ನಶಿಸುವ ಹಾಗೆಯೇ ಇಲ್ಲ." ಅಥವಾ "ಸಾಧನ ಅಂತ ಅಂದುಕೊಂಡು ಮನುಷ್ಯ ಯಾವುದನ್ನು ಅವಲಂಬಿಸುತ್ತಾನೋ ಅದೇ ಅವನ ಗುರಿಯಾಗಿಬಿಡುತ್ತದೆ. ಅದರ ಕಲ್ಲಿನ ಚಕ್ರಗಳ ಕೆಳಗೆ ಎದೆಯೊಡ್ಡಿ ಮಲಗುವುದಷ್ಟೆ ಅವನ ಕೆಲಸ... ಇಲ್ಲ ಅಂದರೆ

ಇದೊಂದು ತಣ್ಣನೆಯ ಕಲ್ಲು, ಅವನೊಂದು ಯಂತ್ರ - ರಕ್ತಮಾಂಸ ತುಂಬಿದ ಮೈಯಿನ ಬಗ್ಗೆ ಕಾಳಜಿ ವಹಿಸುವುದು ಎಲ್ಲೋ ಸ್ವಲ್ಪವೆ ? ಅವನ ಮೆದುವಾದ ಮನಸ್ಸಿನ ಮರ್ಮಕಥೆಯ ಸಲುವಾಗಿಯೆ ? ಚಕ್ರ ನುಚ್ಚುನೂರು ಮಾಡಿ ಮುಂದೆ ಹೋಗುತ್ತದೆ. ಆಯುಸ್ಸನ್ನು ಕಬಳಿಸುತ್ತಾ ಹೋಗುತ್ತದೆ. " ರೋಗಗ್ರಸ್ತವಾದ ಆಧುನಿಕ ಯಾಂತ್ರಿಕ ಬದುಕಿನ, ಆತ್ಮವನ್ನೇ ಘಾಸಿಗೊಳಿಸುವ ದಾರುಣಕತೆಯನ್ನು ಹೇಳುವುದರೊಟ್ಟಿಗೆ ಮಾನವನ ಆತ್ಮಕ್ಕೆ ಹೊಸ ಜನ್ಮ ಕೊಡುವ ಸಲುವಾಗಿ ಲೇಖಕರು ಈ ಮೂಲಕವೆ ಇಂದಿನ ಈ ರೋಗಗ್ರಸ್ತಯುಗ ಹಾಗೂ ಬದುಕಿಗಾಗಿ ಸೃಷ್ಟಿಯ ಮಧುರ ಧ್ವನಿಯನ್ನು ಹೊಮ್ಮಿಸುತ್ತಾರೆ, ಎಚ್ಚರಿಕೆಯನ್ನು ನೀಡುತ್ತಾರೆ. ವಾಸ್ತವವಾಗಿ ಸಾರ್ವಕಾಲಿಕವಾದ ಮಾನವ ಚೇತನದ ಗಹನತೆಯ ದೃಷ್ಟಿಯಿಂದ ಹೇಳುವುದಾದರೆ, 'ದಾನಾಪಾಣಿ'ಯಲ್ಲಿ ಒಂದು ಆಂಶಿಕವಾದ ಚಿತ್ರಣ ನಮಗೆ ದೊರೆಯುವುದಾದರೂ ಈ ಕಾದಂಬರಿ ಇಂದಿನ ಯಾಂತ್ರಿಕವಾದ ಹಾಗೂ ಕಷ್ಟಕಾರ್ಪಣ್ಯಗಳಿಂದ ಕೂಡಿದ ವಾಸ್ತವ ಬದುಕಿನ ಒಂದು ಸಫಲವಾದ ಸರ್ವಾಂಗೀಣವಾದ ರಸಭಾಗ್ಯವಾಗಿದೆ. ಹಾಗಾಗಿ ಇದರ ಕಲಾತ್ಮಕತೆ ಹಾಗೂ ಇತರ ವೈಶಿಷ್ಟ್ಯತೆಗಳಿಂದ ಒರಿಯಾ ಕಾದಂಬರಿ ಪ್ರಪಂಚದಲ್ಲಿ ಇದಕ್ಕೆ ಒಂದು ವಿಶಿಷ್ಟವಾದ ಸ್ಥಾನವನ್ನು ಕಲ್ಪಿಸಿಕೊಟ್ಟಿರುವುದರಲ್ಲಿ ಸಂದೇಹವಿಲ್ಲ.

**-ಚಿಂತಾಮಣಿ ಬೆಹೆರಾ**

ಬಲಿದತ್ತ ಹಂದಿಗಳ ದೊಡ್ಡಿಯ ಕಡೆ ಹೊರಟಿದ್ದಾನೆ. ಹೆಗಲಿನ ಮೇಲೊಂದು ಅಡ್ಡೆ. ಅವನಿಗೆ ಹಂದಿ ಹಿಕ್ಕೆ ಬೇಕು, ತನಗಾಗಿ ಅಲ್ಲ, ಸಾಹೇಬರ ಬಂಗಲೆಗಾಗಿ.

"ಈ ಗುಲಾಬಿ ಬುಡಕ್ಕೆ ಹಿಡಿ ಎರಡುಹಿಡಿ ಹಂದಿ ಹಿಕ್ಕೆ ಹಾಕೋದರಿಂದ ದೊಡ್ಡ ದೊಡ್ಡ ಹೂವು ಬಿಡುತ್ತೆ, ಮಾಲಿ," ಅಮ್ಮಾವ್ರು ಹೇಳುತ್ತಿದ್ದರು. "ಗುಲಾಬಿಗೆ ಹಂದಿಯ ಹಿಕ್ಕೆ, ಕ್ಯಾನಾ ಗಿಡಕ್ಕೆ ಕುದುರೆ ಲದ್ದಿ, ಅಷ್ಟೇ ಅಲ್ಲ ತುಂಬ ನೀರು ಹಾಕಬೇಕು."

ಬಲಿದತ್ತ ಮಾಲಿಯಲ್ಲ. ಬಿಸಿನೆಸ್ ಕಂಪೆನಿಯೊಂದರ ತರುಣ ಕೆಲಸಗಾರ.

ಬೆಳಿಗ್ಗೆ ಆಫೀಸಿಗೆ ಹೋಗಿ ಹನ್ನೆರಡು ಗಂಟೆ ಹೊತ್ತಿಗೆ ಶಾಮನ 'ನಂದನಕಾನನ'ವನ್ನು ಹೊಕ್ಕು ಹಿಂದಿರುಗುತ್ತಿದ್ದಾಗ ಮಾಲಿಯೊಡನೆ ಅಮ್ಮಾವ್ರು ತಮ್ಮ ಬಯಕೆಯನ್ನು ವ್ಯಕ್ತಪಡಿಸುತ್ತಿದ್ದುದು ಅವನ ಕಿವಿಗೆ ಬಿದ್ದಿತ್ತು. ಅವನು ಯಾರೊಂದಿಗೂ ಹೇಳದೆ ಕೇಳದೆ ತನಗೆ ತಾನೆ "ಹಂದಿ ಲದ್ದಿ ಬೇಕೆ ? ಎಷ್ಟು ಬೇಕಾದರೂ ತರುತ್ತೇನೆ. ಇಗೋ ಹೊರಟೆ" ಅಂತ ಭೀಷ್ಮ ಪ್ರತಿಜ್ಞೆ ಮಾಡಿ ಹೊರಟಿದ್ದ.

ಅಮ್ಮಾವ್ರು ಸುಮ್ಮನೆ ಮುಗುಳ್ನಗೆ ನಕ್ಕಿದ್ದರಷ್ಟೆ.

ಆ ಮುಗುಳ್ನಗೆಯ ಭರವಸೆಯಿಂದಲೇ ಅಡ್ಡೆಯನ್ನು ಹೆಗಲಮೇಲೆ ಹೊತ್ತು ಬಿಸಿಲಲ್ಲೇ ಹೊರಟಿದ್ದ. ಸೂಟು ಹಾಕಿದ್ದಾನೆ, ಟೈ ಎಳೆದಿದೆ, ಸುಡುಬಿಸಿಲು ಬೇರೆ. ಬೆಳಗ್ಗೆ ಯಾವಾಗಲೋ ತಿಂದ ತಿಂಡಿ ಹೊಟ್ಟೆಯಲ್ಲಿ ಎಂದೋ ಕರಗಿಹೋಗಿತ್ತು. ಕೊಳಕಲು ಕರ್ಚೀಫು ತೆಗೆದುಕೊಂಡು ಮುಖ ಒರೆಸಿಕೊಂಡರೂ ಬೆವರು ಸುರಿಯುತ್ತಲೆ ಇತ್ತು. ಆದರೂ ಅವನು ಕೊಳಕಲು ಕೇರಿಗಳನ್ನೆಲ್ಲ ಸುತ್ತುಹಾಕಿ ಕಸಕಡ್ಡಿಗಳ ನಡುವೆ ಬಿದ್ದಿರುವ ಹಂದಿ ಹಿಕ್ಕೆಯನ್ನು ಆರಿಸುತ್ತಾ ಹೊರಟ. ಮೈಕೈ ನೋವಾಗಿ ಅಲ್ಲಿಯ ಪರಿಸರ ಅಸಹ್ಯ ಹುಟ್ಟಿಸುತ್ತಿದ್ದರೂ ಆಗೊಮ್ಮೆ ಈಗೊಮ್ಮೆ ಮೂಡುವ ಗೆಲುವಿನ ಆಸೆ ಅವನನ್ನು ಹುರುಪುಗೊಳಿಸುತ್ತದೆ. ಬಲಿದತ್ತ ಎಚ್ಚರವಾಗಿರುವಂತೆಯೆ ಕನಸು ಕಾಣಲಾರಂಭಿಸಿದ್ದಾನೆ.

"ನೋಡಿ ಸ್ವಾಮಿ, ಆಯಿತು. ಬುಟ್ಟೀನೇ ತುಂಬಿ ಹೋಯ್ತಲ್ಲಾ. ಇನ್ನೇನು ?" ಅಡ್ಡೆ ಹೊರಲು ಗೊತ್ತುಮಾಡಿದ ಆಳು ಮೂಗೆಳೆದ. "ಸರಿ, ಸರಿ, ಇನ್ನೂ ಎಲ್ಲಿ ತುಂಬಿದೆ ? ಅದನ್ನು ಇನ್ನೂ ಮೇಲಿನವರೆಗೂ ತುಂಬಬೇಕು. ಎಷ್ಟೊಂದು ಗುಲಾಬಿ ಗಿಡಗಳಿವೆ ಅಂತ ನೀನೇ ನೋಡಿಲ್ವಾ ?"

ಅಡ್ಡೆ ಹೊತ್ತವನು ನಿಟ್ಟುಸಿರುಬಿಟ್ಟ. ಬಿಸಿಲಲ್ಲಿ ದಣಿವಾದಂತಿತ್ತು. ಬೆವರಿನಿಂದ ಒದ್ದೆಯಾಗಿದ್ದ ಅವನ ಬೆನ್ನುತಟ್ಟುತ್ತಾ ಪುಸಲಾಯಿಸುವ ಧ್ವನಿಯಲ್ಲಿ ಬಲಿದತ್ತ ಮೆದುವಾಗಿ ಹೇಳಿದ.

"ಕೂಲಿಯಂತೂ ತೊಗೋತೀಯಲ್ಲ, ಗುಸುಗುಸು ಇನ್ಯಾತಕ್ಕೆ ? ನಡಿ, ನಡಿ,

ಹೋಗೋಣ.”

ಭಾರ ಹೊರೆಸಿಕೊಂಡು ಓಂದಿರುಗಬೇಕಾದರೆ ಸೈಕಲ್ ಮೇಲೆ ಬರುತ್ತಿದ್ದ ಮಹಾಪಾತ್ರ ಬಾಬುಗಳು ಎದುರಾದರು. ಮಹಾಪಾತ್ರರು ಸೂಟ್ ಧರಿಸಿದ್ದರು. ಎಷ್ಟಾದರೂ ಕಂಪೆನಿಯ ಹೆಡ್ ಗುಮಾಸ್ತರಲ್ಲವೆ ಅವರು.

“ಏನು ಬಲಿದತ್ತ ಬಾಬು, ಬಿಸಿಲಲ್ಲಿ ಯಾವ ಕಡೆ ಹೊರಟಿರಿ ?” ಮಹಾಪಾತ್ರರು ಸೈಕಲ್ಲಿನಿಂದ ಇಳಿದರು. ಬಲಿದತ್ತ ಇದೊಳ್ಳೇ ತಾಪತ್ರಯವಾಯಿತಲ್ಲ ಅಂತ ಅಂದುಕೊಂಡ.

ಬೇರೆ ಬೇರೆ ವಿಷಯಗಳ ಬಗ್ಗೆ ತಿಳಿದುಕೊಳ್ಳಲು ಮಹಾಪಾತ್ರರು ಅನೇಕ ಬಾರಿ ಅವನ ಹಿಂದೆ ಬಿದ್ದಿದ್ದರು.

“ಏನು, ಏನ್ಸಮಾಚಾರ ? ಚೆನ್ನಾಗಿದ್ದೀರಾ ತಾನೆ ?”

“ಓಹೋ, ಎಲ್ಲಾ ಚೆನ್ನಾಗಿದೆ ಸ್ವಾಮಿ.”

“ಅದು ಸರಿ, ನಾನು ಬರೆದು ಕಳಿಸಿದ್ದೆನಲ್ಲ, ಸಾಹೇಬರು ಅದರ ಮೇಲೆ ಏನು ಬರೆದರು ?”

“ಇನ್ನೂ ಸಾಹೇಬರಿಂದ ಫೈಲೇ ವಾಪಸ್ಸು ಬಂದಿಲ್ಲ. ನನಗೆ ಹೇಗೆ ತಾನೇ ಗೊತ್ತಾಗುತ್ತೆ ?”

“ಇವತ್ತು ಬೆಳಗ್ಗೆ ಸಾಹೇಬರ ಹತ್ತಿರ ಹೋಗಿದ್ದೆ, ಬಲಿದತ್ತ ಬಾಬು. ಅವರೇನು ಮಾಡಿದರು ಗೊತ್ತಾ ? ‘ಕೂತ್ಕೊಳ್ಳಿ’ ಅಂದರು. ಕೂತುಕೊಳ್ಳೋದಕ್ಕೆ ಹೇಳಿ ತಮ್ಮ ಸಿಗರೇಟ್ ಕೇಸಿನಿಂದ ಸಿಗರೇಟೆಳೆದು ನನಗೆ ಕೊಟ್ಟರು. ಇನ್ನೇನೂ ಮಾಡೋದಕ್ಕೆ ತೋರದೆ ಸೇದಬೇಕಾಯಿತು. ನನಗಂತೂ ತುಂಬಾ ಆಶ್ಚರ್ಯವಾಯಿತು.”

“ಈಗ ತಾವು ನಮ್ಮ ತರಹ ಅಲ್ಲವಲ್ಲ ಸ್ವಾಮಿ. ಈ ಸಾಹೇಬರು ಯಾವ ವಿಷಯದಲ್ಲಿ ತಾನೆ ತಮಗಿಂತ ದೊಡ್ಡವರು ? ಓದಿನಲ್ಲೆ ಅಥವಾ ಇನ್ನು ಯಾವ ವಿಷಯದಲ್ಲಿ ತಾವೇ ಹೇಳಿ ? ಬಿಳಿಯರ ಕಂಪೆನೀಲಿ ಬಿಳಿಜನ ಅಂತ ಇದ್ದಾರಷ್ಟೆ, ಅದರಿಂದ ತಾನೇ ! ಇದೇ ಕಣ್ಣಿಂದ ನೋಡ್ತೀನಿ, ತಾವೇ ನಮ್ಮ ಆ ಸಾಹೇಬರಾಗಿ ಬರ್ತೀರಿ. ಕಂಪೆನಿ ಏಳು ಸಮುದ್ರಗಳಾಚೆ ಬೇರು ಬಿಟ್ಟಿದ್ದರೆ ಏನಂತೆ, ತಾವೇ ನಮ್ಮ ಸಾಹೇಬರಾಗಿ ಆಡಳಿತ ನಡೆಸ್ತೀರಿ, ನೋಡಿ.”

“ತೂಗೊಳ್ಳಿ, ವೀಳೆದೆಲೆ ಹಾಕ್ಕೊಳ್ಳಿ, ಸೆಂಟ್ ಹಾಕಿದ ಎಲೆ ನೋಡಿ.”

“ಸ್ವಾಮಿ, ತಾವು ಕೊಡೋ ವೀಳೆದೆಲೆ ಅಂದರೇನು ? ಬಡವರ ಮೈಗೆ ತುಪ್ಪ ದಕ್ಕುತ್ತಾ ಹೇಳಿ ?”

“ಅಯ್ಯೋ, ತೊಗೊಳ್ಳಿ ಸ್ವಾಮಿ, ಇನ್ನೂ ಹುಡುಗರು ನೀವು. ಈಗಾಗಲೆ ನಲವತ್ತು ವರ್ಷ ವಯಸ್ಸಾಯಿತು ನನಗೆ. ನಿಮ್ಮ ಹಾಗೆ ಇಪ್ಪತ್ತೈದು ವರ್ಷದಲ್ಲಿ ಏನೇನು ತಿಂತಾ ಇದ್ದೆ ಅಂದ್ರೆ, ಕೇಳಿದರೆ ಆಶ್ಚರ್ಯ ಅನ್ನಿಸುತ್ತೆ ನಿಮಗೆ.”

ಹೇಳಿದ ಹೊರತು ಇವರು ಸುಮ್ಮನೆ ಬಿಡೋರಲ್ಲ. ಆ ಕಡೆ ಅಮ್ಮಾವ್ರು ಎಲ್ಲಾದರೂ ಹೊರಟುಹೋದರೆಂದರೆ ಬಲಿದತ್ತ ಇಷ್ಟೆಲ್ಲ ತೂಗೊಂಡು ಬಂದಿದ್ದಾನೆ ಅಂತ ಅವರಿಗೆ ನೋಡೋದಕ್ಕೆ ಆಗೋದಿಲ್ಲ. ತಲೆಮೇಲೆ ಭಾರಹೊತ್ತವನು ರಸ್ತೆಯಲ್ಲೇ ಅಡ್ಡ ನಿಂತುಬಿಟ್ಟ. ಏನು ಹೇಳೋದಕ್ಕೂ ಆಗುತ್ತಿಲ್ಲ.

"ನಡಿ, ನಡಿ. ರಸ್ತೇಲೆ ಏನು ನಿಂತುಬಿಟ್ರೆ ?"

"ಅಯ್ಯೋ, ಇದೆಲ್ಲ ಏನು ಬಲಿದತ್ತ ಬಾಬು ?"

"ಅದೇ ಒಂದು ಸ್ವಲ್ಪ ತರಕಾರಿ ಹಾಕಿದ್ದೆನಲ್ಲ ಸ್ವಾಮಿ, ಅದಕ್ಕೆ ಒಂದು ಸ್ವಲ್ಪ ಗೊಬ್ಬರ ತೆಗೆಸಿಕೊಂಡು ಹೋಗ್ತಿದ್ದೀನಿ ಅಷ್ಟೆ."

"ಎಷ್ಟಕ್ಕೆ ತೊಗೊಂಡ್ರಿ ? - ನಾನೂ ಒಂದು ಸ್ವಲ್ಪ ಬದನೆಕಾಯಿ ಬೀಜ ಹಾಕಿದ್ದೇನೆ. ಗೊಬ್ಬರ ಕಾಣದ ಎಲೆಗಳೆಲ್ಲ ಹಳದಿ ಬಣ್ಣಕ್ಕೆ ತಿರುಗುತ್ತಿವೆ. ಗೊಬ್ಬರ ನಿಮಗೆಲ್ಲಿ ಸಿಗುತ್ತೆ ? ನೋಡಪ್ಪಾ, ನಮ್ಮನೆಗೂ ಒಂದು ಹೊರೆ ಗೊಬ್ಬರ ತಂದು ಹಾಕ್ತಿಡು, ಗೊತ್ತಾಯ್ತಾ ?"

ದೊಡ್ಡವರ ಮಾತಿಗೆ ಎದುರುತ್ತರವಿಲ್ಲ, ಸ್ವರ್ಗಕ್ಕೆ ಯಾರ ಮೆಟ್ಟಿಲೂ ಇಲ್ಲ.

ಬಲಿದತ್ತನಿಗೆ ಮುಖದಲ್ಲಿ ಚವರು ಮೂಡಿತು. ಉಗುಳು ನುಂಗುತ್ತಾ ಹೇಳಿದ - "ಇದೆಂಥ ಮಾತು ಸಾರ್ ನಾನೇ ಕೈಯಾರೆ ಕೊಟ್ಟುಬರ್ತೀನಿ. ಅದು ಸರಿ ಸಾಹೇಬರು ತಮ್ಮ ಮೇಲೆ ತುಂಬಾ ಖುಣಿಯಾಗಿದ್ದಾರೆ ಸಾರ್.-"

"ನಿಮಗೆ ಹೇಗೊ ಗೊತ್ತಾಯ್ತು ? ಯಾರು ಹೇಳ್ತಾ ಇದ್ದರು ? ಅವರೇನು ಬರೆದಿದ್ದರು ? ಅಂದಮೇಲೆ ನಿಮಗೆ ಗೊತ್ತಿದೆ ಅಂದಾಯಿತು - ಅದೇನು ಹೇಳಿಬಿಡಿ ಅಯ್ಯೋ, ಬಿಸಿಲು ಜಾಸ್ತಿಯಾಗ್ತಿದೆ. ನಡೀರಿ ನಮ್ಮನೆಗೆ. ನೀವೂ ಒಳ್ಳೇ ಆಸಾಮೀನೆ, ಬನ್ನಿ ಸ್ವಾಮಿ."

"ಇದು ನಿಮಗೇನೆ ಗೊತ್ತಾಗುತ್ತೆ ಸಾರ್. ನಮ್ಮಂಥ ಬಡವರಿಗೆ ಸ್ಕೀಟ್ಸ್ ರೆಡಿ ಮಾಡಿಡಿ, ಅಷ್ಟೆ. ಸಾಹೇಬರು ಇನ್ನೂ ಯಾತಕ್ಕೆ ಕರೆದಿದ್ದಾರೋ ಗೊತ್ತಿಲ್ಲ. ನಾನು ಸ್ವಲ್ಪ ಅರ್ಜೆಂಟಿನಲ್ಲಿದ್ದೇನೆ ಸಾರ್."

"ಸರಿ, ಹಾಗಾದರೆ ಹೋಗಿ ಬನ್ನಿ. ನೀವು ತುಂಬ ಒಳ್ಳೆಯ ಕೆಲಸಗಾರರು ಬಲಿದತ್ತ ಬಾಬು. ಇಷ್ಟು ಎಳೇ ವಯಸ್ಸಿನಲ್ಲಿ ಇಷ್ಟೊಂದು ಜವಾಬ್ದಾರಿ ತಿಳಿದುಕೊಂಡಿರು ವವರನ್ನು ನಾನು ನೋಡಿರೋದೆ ತುಂಬ ಕಡಮೆ. ಏನಾದರೂ ಆಗಲಿ, ಎಲ್ಲಾ ಚೆನ್ನಾಗಿದ್ದೀರಿ ತಾನೆ. ಏನಂತೀರಿ ? ಅದೇ ಏನೋ ಹೇಳ್ತಾ ಇದ್ದೆನಲ್ಲ - ಆಗಲೇ ಸಿಗರೇಟು ಕೊಟ್ಟರು. ನನಗೆ ತುಂಬಾ ಆಶ್ಚರ್ಯವುಂಟಾಯಿತು. ಅವರು ಯಾರಿಗೂ ಹೀಗೆ ಹೇಳಿದ್ದೇ ಇಲ್ಲ ನೋಡಿ. ಅಂತಹವರ ವಿಶ್ವಾಸ ಗಳಿಸಿಕೊಳ್ಳೋದು ತುಂಬ ಕಷ್ಟ ಸ್ವಾಮಿ."

ಬಲಿದತ್ತ ಸ್ವಲ್ಪ ಮುಗುಳುನಗುತ್ತಾನೆ.

ಈ ನಗೆ ಬೇರೆಯವರಿಗೆ ಅಂಜನ ಹಚ್ಚುವಂತೆ ತನಗೆ ತಾನೇ ಬರುತ್ತದೆ. ಮಹಾಪಾತ್ರರು ತಾವು ಸಿಗರೇಟು ಪಡೆದ ವಿಜಯವನ್ನು ಸಾರಿ ಹೇಳಲು ಸರ್ ಅಂತ ಸೈಕಲ್ ಮೇಲೆ ಹಾರಿಹೋಗಿಬಿಟ್ಟರು. ಬಲಿದತ್ತ ಮನಸ್ಸಿನಲ್ಲೇ ಅವರನ್ನು ಬಯ್ಯುತ್ತಾ ಹೊರಟ.

ಎಡಗಡೆ ಒಂದು ಸ್ಕೂಲು. ತಳಿರುತೋರಣಗಳಿಂದ ಮುಂಬಾಗಿಲು ಸಜ್ಜಾಗಿದೆ. ಇವತ್ತು ಸಾಯಂಕಾಲ ಇಲ್ಲಿ ಸಮಾರಂಭ. ಸಾಹೇಬರು ಬರುತ್ತಾರೆ. ಸಾಹೇಬರು ಬರುತ್ತಾರೆಂದು ತರುಣ ಅಧ್ಯಾಪಕ ಅರುಣಬಾಬು ಮಕ್ಕಳಿಗೆ ರಾಷ್ಟ್ರಗೀತೆಯ ಅಭ್ಯಾಸ ಮಾಡಿಸುತ್ತಿದ್ದಾರೆ-

"ಜನಗಣಮನ ಅಧಿನಾಯಕ ಜಯಹೇ"

ಬಲಿದತ್ತನಿಗೆ ಸಿಟ್ಟು ಬಂತು. ನೋಡುತ್ತಾ ಹಾಗೇ ಹೊರಟ. ಇದೆಂಥ ಕೋತಿಯಾಟ. ಮನಸ್ಸಿನ ಆಳದಲ್ಲಿ ಹೊಟ್ಟೆಕಿಚ್ಚಿನಿಂದ ಹುಟ್ಟಿದ ಕೋಪ ಉಂಟಾದಾಗ ಹೀಗೆಯೇ. ಇಂಥ ಪರಿಸ್ಥಿತಿ ಅವನ ಪಾಲಿಗಿಲ್ಲ. ಪ್ರಜ್ಞಾಪೂರ್ವಕವಾದ ಒಳಮನಸ್ಸಿನಿಂದ ಅವನು ಪಕ್ಕಾ ಸ್ವದೇಶಿಯು - ಇದೆಂಥ ಅವಮಾನ. ಅರುಣಬಾಬುವಿಗೆ ಇಷ್ಟು ಬುದ್ಧಿಯಿಲ್ಲವೇನು ?

"ಓ ಬಲಿದತ್ತ ಬಾಬು, ನೀವು..."

"ಅದು ಸರಿ ಅರುಣಬಾಬು, ಸಾಹೇಬರು ಏನಂದು ಹೇಳ್ತಾರೆ, ನೀವೇ ಹೇಳಿ ನೋಡೋಣ. ನೀವು ನಿಜವಾಗಿಯೂ...."

"ನಿಮಗೆ ಅರ್ಥವಾಗುತ್ತಿಲ್ಲ. ಒಂದೇ ಕಲ್ಲಿನಿಂದ ಎರಡು ಪಕ್ಷಿಗಳನ್ನು ಹೊಡೆಯೋದು ಅಂದ್ರೆ ಇದೇನೆ. ಸಾಹೇಬರು ಸರಿಯಾಗೇ ತಿಳಿದುಕೊಳ್ತಾರೆ. ಅವರೆಷ್ಟು ದೊಡ್ಡವರು - "ಭಾರತ ಭಾಗ್ಯವಿಧಾತಾ' ಹೊರಗಿನ ಜನ ತಮ್ಮ ಪ್ರೀತಿಯ ಹಾಡು ಕೇಳಿ ಸಂತೋಷಪಡ್ತಾರೆ. ಹಾಡು ಹಾಡಕ್ಕೆ ತಾನೆ. ಅದರಲ್ಲೇನು ಅಡೆತಡೆ. ನಿಮಗೇನು ಗೊತ್ತಿಲ್ವೆ ? ಇದು ಮುಖಸ್ತುತಿ ಮಾಡೋ ಕಾಲ. ನಮಗಾದರೂ ಇನ್ಯಾರಿದ್ದಾರೆ ?"

ಬಲಿದತ್ತ ಹಂ.... ಹಂ... ಹಂ... ಅಂತ ನಕ್ಕು ಬಿಟ್ಟ.

ಅವನ ಗಂಟೇನು ಹೋಗಬೇಕು ?

ಅರುಣಬಾಬುವಾದರೂ ಸ್ವಲ್ಪ ಹೆಚ್ಚು ಬುದ್ಧಿವಂತನಾದ ಮನುಷ್ಯ. ಅವನೇಕೆ ಇನ್ನೊಬ್ಬರ ಮಾತು ಕೇಳ್ತಾನೆ ? ಬುದ್ಧಿ ಇದ್ದ ಮನುಷ್ಯ ತನ್ನ ಮನಸ್ಸನ್ನು ಮೊದಲೇ ಯಾರ ಮುಂದೂ ಬಿಚ್ಚೋದಿಲ್ಲ.

ಹೊರಹೊತ್ತವನ ಜೊತೆಯಲ್ಲೇ ನಡೆದುಹೊರಟಿದ್ದ.

ಒಂದು ಗಂಟೆಯಾಗುತ್ತದೆ. ಸುಡುಬಿಸಿಲು. ಅಮ್ಮಾವ್ರಿಲ್ಲ. ಮಾಲಿಯೂ ಸಿದ್ಧ ಮಾಡಿದ್ದ. ಗೊಬ್ಬರ ಅಲ್ಲೇ ಸುರಿಸಿ ಹೊರಟುಹೋದರೆ, ತಾನು ತಂದದ್ದು, ಮಾಲಿ ಶಹಬಾಸ್‌ಗಿರಿ ಪಡೆಯುತ್ತಾನೆ. ಆದ್ದರಿಂದ ಕಾಯುವುದೇ ಸರಿಯೆಂದು ಬಲಿದತ್ತ ಯೋಚಿಸಿದ.

ನಾಲ್ಕೂ ಕಡೆ ಹೂವಿನ ತೋಟ, ಮಧ್ಯಾಹ್ನದ ಸುಡುಬಿಸಿಲಲ್ಲೂ ತಂಪು ಹರಡಿತ್ತು. ಸುವಾಸನೆಯಿಂದ ಕೂಡಿದ ಗಾಳಿ ಮೈಯನ್ನು ಮುಟ್ಟುತ್ತಾ ಮೆಲ್ಲಮೆಲ್ಲನೆ ಬೀಸುತ್ತಿತ್ತು. ಪ್ರಕೃತಿ ದಣಿವಾರಿಸಿಕೊಳ್ಳುತ್ತಿರುವ ಸೊಗಸು. ಆ ಸಣ್ಣ ಕೋಣೆಯ ಮುಂದೆ ಕೋಳಿ ತನ್ನ ಮರಿಗಳಿಗಾಗಿ ಕಾಳುಗಳನ್ನು ಹೆಕ್ಕುತ್ತಿದೆ. ಕುದುರೆ ಲಾಯದಲ್ಲಿ ಕುದುರೆ ವಿರಹಕ್ಕೆ ತುತ್ತಾದ ಯಕ್ಷನಂತೆ ಆರ್ತನಾದ ಶುರು ಮಾಡಿದೆ. ಅಷ್ಟುದ್ದದ ನಾಲಗೆಯನ್ನು ಹೊರಚಾಚಿರುವ ದೊಡ್ಡ ನಾಯಿ ವರಾಂಡದಲ್ಲಿ ಏದುಸಿರುಬಿಡುತ್ತಿದೆ. ಆ ಕಡೆ ಹರಯದ ಕೆಲಸದವಳು ಬಟ್ಟೆಬರೆ ಒಣಗಿಸುತ್ತಿದ್ದಾಳೆ. ಅವಳ ಬಿಚ್ಚಿದ ಹೆರಳು, ಬಿಗಿದಿರುವ ಸಣ್ಣ ಕುಪ್ಪಸ, ದೀನನೋಟ ಇವುಗಳಿಂದ ಅವಳೂ ಒಂದು ಜೀವಿ ಅಂತ ಅನಿಸುತ್ತಿದೆ. ನೋಡುವುದಕ್ಕೆ ಬೇಕಾದಷ್ಟಿದೆ, ಯೋಚಿಸುವುದಕ್ಕೂ ಬೇಕಾದಷ್ಟಿದೆ.

ಆದರೆ ಬಲಿದತ್ತ ಬಹುಮಟ್ಟಿಗೆ ಹೊರಗಿನ ಪ್ರಕೃತಿಯ ಕಡೆ ನೋಡುತ್ತಿರಲಿಲ್ಲ. ನೆರಳಲ್ಲಿ ಬೆವರು ಒರೆಸಿಕೊಳ್ಳುತ್ತಾ ತನ್ನ ವಿಚಾರವನ್ನೇ ಯೋಚಿಸುತ್ತಿದ್ದ.

ಸಣ್ಣ ಮೈ, ಎಷ್ಟು ಬಟ್ಟೆಬರೆ ಹಾಕಿಕೊಂಡರೂ ದೊಡ್ಡದಾಗಿ ಕಾಣುವುದಿಲ್ಲ. ಓದಿರುವುದು ಹೆಚ್ಚೇನಿಲ್ಲ, ಹೆಸರಿನ ಮುಂದೆ ವಿದ್ಯೆಯನ್ನು ಜಾಹೀರುಪಡಿಸುವಷ್ಟು ಅದೃಷ್ಟವಿಲ್ಲ. ದೂರದ ಯಾವುದೋ ಊರಿನ ಗೊತ್ತಿಲ್ಲದ ಕೊಂಪೆ, ಅದರಲ್ಲಿ ಸಾಲದ ಹೊರೆಗೆ ಸಿಲುಕಿದ, ಹುಲ್ಲಿನ ಛಾವಣಿಯ ಜಗಲಿಯ ಮೇಲೆ ಕೆಮ್ಮುತ್ತಾ ವಾತರೋಗದಿಂದ ನರಳುತ್ತಿರುವ ಮುದಿ ಅಪ್ಪ. ಅಂಥ ಮೂಲೆಗುಂಪಾದ ಕೊಂಪೆಯ ಮಣ್ಣಲ್ಲಿ ಹುಟ್ಟಿಬಂದವನು ಈ ಆಸಾಮಿ.

ಆದರೆ ಅವನು ಅನುಕೂಲವಾಗಿ ಬಾಳಬೇಕು.

ಬುದ್ಧಿ ಬಂದಾಗಿನಿಂದ ತನ್ನ ಪೂರ್ವಿಕರು ಹಾಕಿಕೊಟ್ಟ ಜಾಡನ್ನು ಅವನು ಎಂದೂ ಒಪ್ಪಿರಲಿಲ್ಲ.

ಅವನು ಹೋರಾಡುವುದನ್ನು ಕಲಿತಿದ್ದಾನೆ. ಬಾಡದ ಬಳ್ಳಿಯಂತೆ ಹುಟ್ಟಿ, ಅದರಂತೆಯೆ ಸುತ್ತಿಕೊಂಡು ಬೆಳೆಯುವುದನ್ನು ಕಲಿತಿದ್ದಾನೆ. ಸುತ್ತಿಕೊಳ್ಳುವುದು ಅವನಿಗೆ ಗೊತ್ತು. ಎದುರಿಗೆ ಬಂದದ್ದನ್ನು ತನ್ನದಾಗಿಸಿಕೊಂಡು ಒಟ್ಟು ಗೂಡಿಸುವುದನ್ನು ಅವನು ಕಲಿತಿದ್ದಾನೆ. ಆದರ ಮೇಲೆಲ್ಲ ಕಾಲಿಟ್ಟು ತಲೆಯೆತ್ತಿ ನಿಂತಿದ್ದಾನೆ. ಬಲಿದತ್ತ ತನ್ನ ನಿಯಮಗಳಿಗಿಂತಲೂ ತಾನು ದೊಡ್ಡವನು.

ಅವನೂ ಇನ್ನೂ ಏಳಿಗೆ ಹೊಂದಬಯಸುತ್ತಾನೆ.

ಹೊರೆ ಹೊತ್ತವನು ಗೊಣಗಿದ - "ಸ್ವಾಮಿ, ಬರಲಾ ?"

"ಸರಿ, ಹಾಗಾದರೆ ನೀನು ನಡಿ, ಇಲ್ಲೇ ಸುರಿದುಬಿಡು."

ಬಲಿದತ್ತ ನೀಳವಾಗಿ ಉಸಿರಾಡಿದ. ಅಸಮಾಧಾನದಿಂದ ಹಿಂದಿರುಗಬೇಕಾದರೆ ಅವನಿಗೆ ಅರಿವಾಯಿತು, ಬಿಸಿಲೂ ಜೋರಾಗಿದೆ ಹಸಿವೂ ಹೆಚ್ಚಾಗಿದೆ.

ಸರೋಜಿನಿ ಅವನ ಮಡದಿ, ಹೊಸದಾಗಿ ಮದುವೆಯಾಗಿದ್ದಾನೆ.

ಹೆಗಲಿನ ಮೇಲೆ 'ಪತಿಯೆ ಪರಮಗುರು' ಎಂಬ ಬ್ರೋಚು, ಹಣೆಯ ಮೇಲೆ ಮದುವೆಯ ಮೊಹರು-ಕುಂಕುಮದ ಗೆರೆ, ಬೆರಳಲ್ಲೊಂದು ಉಂಗುರ, ಅದರ ಮೇಲೆ ಬಲಿದತ್ತನ ಹೆಸರು ಕೆತ್ತಿದೆ. ಮಲಗುವ ಕೋಣೆಯ ಗೋಡೆಯ ಮೇಲೆ ಒಂದು ಫೋಟೋ - ಕಪ್ಪುಪರದೆಯ ಮುಂದೆ ಅವಳು ಮತ್ತು ಬಲಿದತ್ತ ಕುಳಿತಿದ್ದಾರೆ.

ಒಂದೇ ಅಚ್ಚಿನಂತಿದೆ, ಒಂದೇ ರೀತಿಯ ಮನೆಗಳ ಸಾಲು, ಅವುಗಳಲ್ಲಿ ಒಂದರಲ್ಲಿ ಅವರ ಸಂಸಾರ. ಮನೆಯ ಮುಂದೆ ರಸ್ತೆ ಹೋಗುತ್ತದೆ. ರಸ್ತೆಯ ಆ ಕಡೆ ಇನ್ನೂ ದೊಡ್ಡಮನೆಗಳ ಒಂದು ಸಾಲಿದೆ.

ಚಿಕ್ಕ ಕೋಣೆಯಲ್ಲಿ ಸರೋಜಿನಿ ಮತ್ತು ಬಲಿದತ್ತರ ಸಂಸಾರ ಸಾಗಿದೆ. ಸುತ್ತಲ ಸಣ್ಣ ಬೇಲಿ ಆವರಣದಲ್ಲಿ ಒಂದು ಚಿಕ್ಕ ತೋಟ. ಸೊಪ್ಪು ತರಕಾರಿ ಬದನೆಕಾಯಿ, ಬೆಂಡೆಕಾಯಿ, ಹೊರಗಡೆ ಕಕ್ಕಸಿನ ಬಳಿಯಲ್ಲಿ ಮಾವಿನ ಮರಗಳು ಹಾಗೂ ಅವುಗಳ ನೆರಳಿನಲ್ಲಿ ನಾಲ್ಕೈದು ಬಾಳೆಗಿಡಗಳು, ಕೆಳಗಡೆ ಸ್ವಲ್ಪ ಉದ್ದವಾಗಿ ಹಬ್ಬುತ್ತಿರುವ ಬಳ್ಳಿ, ಅಂಗಳದಲ್ಲಿ ಹೂವಿನಿಂದ ತುಂಬಿರುವ ಒಂದು ನಿಂಬೆ ಗಿಡ, ಮಲಗುವ

ಕೋಣೆಯಲ್ಲಿರುವ ಎರಡು ಪೆಟ್ಟಿಗೆಗಳಲ್ಲಿ ಅವರ ಸಂಪತ್ತೆಲ್ಲವೂ ಅಡಕವಾಗಿದೆ. ಎರಡು ಹಗ್ಗಗಳಿಂದ ಚಾವಣಿಗೆ ಬಿಗಿದುಕಟ್ಟಿರುವ ಗಳುವಿನ ಮೇಲೆ ಸರೋಜಿನಿಯ ಸೀರೆ ಮತ್ತು ಬಲಿದತ್ತನ ಬಟ್ಟೆ ಬರೆಗಳು ತೂಗಾಡುತ್ತಿವೆ. ಉಗ್ರಾಣದಲ್ಲಿ ಕೆಲವಾರು ಪಾತ್ರೆ ಪಡಗಗಳು, ಮಡಕೆಗಳು ಮತ್ತು ಕೊಂಡ ಅಡುಗೆ ಸಾಮಾನುಗಳನ್ನು ಜೋಡಿಸಿಟ್ಟಿದೆ. ಅದಾದ ಮೇಲೆ ಅಡುಗೆಮನೆ, ಹೊರಗಡೆ ಸೌದೆ ಬಿದ್ದಿದೆ.

ಎಲ್ಲಾ ಕಡೆಯಲ್ಲೂ ಸುತ್ತಾಡಿ ನೋಡುವುದಕ್ಕೆ ಸರೋಜಿನಿಗೆ ಸಾಕಷ್ಟು ಪುರುಸೊತ್ತಿದೆ, - ಅವಳು ಸುತ್ತಾಡುತ್ತಾ ತನ್ನ ಸಂಪತ್ತೆಲ್ಲವನ್ನು ನೋಡುವಳು. ಎಲ್ಲವೂ ತನ್ನದೇ. ಇದನ್ನು ಯೋಚಿಸುತ್ತಲೇ ಅವಳಿಗೆ ಮತ್ತೆ ಮತ್ತೆ ಖುಷಿ ಯಾಗುತ್ತದೆ. ಪೊರಕೆ ಹಿಡಿದು ಬೀಗದ ಕೈ ಗೊಂಚಲನ್ನು ಕುಣಿಸುತ್ತಾ ಮನೆ ಗುಡಿಸುವ ಸಮಯದಲ್ಲೂ ಯಜಮಾನಿಕೆಯ ಭಾವನೆಯಿಂದ ಮನಸ್ಸು ಮುದಗೊಳ್ಳುತ್ತದೆ. ಪೊರಕೆಯನ್ನು ಇನ್ನೂ ಬಿಗಿಯಾಗಿ ಹಿಡಿಯುತ್ತಾಳೆ.

ಆದರೆ ಸರೋಜಿನಿ ಖಂಡಿತ ಬಲಿದತ್ತನಂತಿಲ್ಲ. ಶರೀರದಿಂದಲೂ ಇಲ್ಲ, ಮನಸ್ಸಿನಿಂದಲೂ ಇಲ್ಲ. ಎತ್ತರದಲ್ಲಿ ಅವಳು ಗಂಡನಿಗಿಂತ ನಾಲ್ಕು ಅಂಗುಲ ಮೇಲಿದ್ದಾಳೆ. ಮೈಕಟ್ಟಿನಲ್ಲಿ ಅವನಿಗಿಂತ ಒಂದೂ ಕಾಲರಷ್ಟು. ಗಂಡನದು ಚಿಕ್ಕ ಚೂಪು ಮುಖವಾದರೆ ಅವಳದು ದೊಡ್ಡದಾದ ಗುಂಡಾದ ಮುಖ, ದೊಡ್ಡ ಹಲ್ಲಿನ ಸಾಲು. ತನ್ನದು ಎಲ್ಲವೂ ದೊಡ್ಡದಾಗಿದೆಯೆಂದು ಅವಳು ತನ್ನ ಬಗ್ಗೆ ಅಂದುಕೊಂಡಿದ್ದಾಳೆ. ಅವಳ ಮನಸ್ಸು ಕೇವಲ ಸಂಸಾರದ ವಿಷಯಗಳಲ್ಲಿ ಮಾತ್ರ ಸಿಲುಕಿರುವುದಿಲ್ಲ. ಮನೆಯಲ್ಲಿ ಕೆಲಸಗಿಲಸ ಹೆಚ್ಚೇನಿಲ್ಲ. ತೊಂದರೆ ತಾಪತ್ರಯವಿಲ್ಲ. ಇದರಿಂದಾಗಿ ಯಾರೋ ಅಪರಿಚಿತರಿಗಾಗಿ ಕಾಯುವಂತೆ ಅವಳು ಕಿಟಕಿಯ ಬಳಿ ಕುಳಿತು ದೂರದಲ್ಲಿ ದೃಷ್ಟಿ ನೆಟ್ಟಿರುತ್ತಾಳೆ - ಯೋಚಿಸುತ್ತಾ ಕುಳಿತಿರುತ್ತಾಳೆ. ಪ್ರತಿದಿನ ಎರಡು ಬಾರಿ ಕೆಲಸದಿಂದ ಹಿಂದಿರುಗುವಾಗಲೂ ಬಲಿದತ್ತ ಅವಳನ್ನು ಅದೇ ಭಂಗಿಯಲ್ಲಿ ನೋಡುತ್ತಾನೆ. ನೋಡುತ್ತಿರುವಂತೆಯೇ ಒಂದು ರೀತಿಯ ಪುಲಕ ಅವನ ಸರಿಯಳತೆಯ ಅಂಗಿಯನ್ನು ತೂರಿಕೊಂಡು ಹೊರಬಂದು ಮೈಯನ್ನೆಲ್ಲ ರೋಮಾಂಚನಗೊಳಿಸುತ್ತದೆ. ನೀಳವಾದ ಉಸಿರನ್ನೆಳೆದು ಬಲಿದತ್ತ ಯೋಚಿಸು ತ್ತಾನೆ, ಸರೋಜಿನಿ ತನಗಾಗಿಯೇ ಕಾದು ಕುಳಿತಿದ್ದಾಳೆ. ಕಣ್ಣಿಗೆ ಕಣ್ಣು ಸೇರುತ್ತದೆ. ಸ್ವಲ್ಪವಾಗಿ ಮುಗುಳುನಗುತ್ತಾ ಸರೋಜಿನಿ ಓಡಿಬಂದು ಬಾಗಿಲು ತೆರೆಯುತ್ತಾಳೆ.

ಮಧ್ಯಾಹ್ನ ಎರಡು ಗಂಟೆ. ಬಲಿದತ್ತ ಮನೆಗೆ ಹಿಂದಿರುಗುತ್ತಿದ್ದಾನೆ. ಈವರೆಗೆ ಅವನು ತನ್ನ ಹೊಟ್ಟೆಪಾಡಿನ ಚಿಂತೆಯಲ್ಲಿ ಮುಳುಗಿದ್ದಾನೆ. ಈ ಬದುಕು ಕಠಿಣವಾದ ಕರ್ಕಶವಾದ ಹಾದಿ. ಆದರೂ ಬೆಟ್ಟವನ್ನು ಹತ್ತಲೇಬೇಕು. ಆಮೇಲೆ ? ಆಮೇಲೆ ?

ರಸ್ತೆಯ ಆ ಕಡೆ ಎದುರು ಮನೆಯಲ್ಲಿರುವ ನೀರೋದ ಬಾಬುಗಳ ಸೋದರಳಿಯ ರಜೆಯಲ್ಲಿ ಬಂದಿದ್ದಾನೆ. ಕಾಲೇಜಿನಲ್ಲಿ ಓದುತ್ತಿರುವ ಹುಡುಗ. ಒಂದು ರಾಶಿ ಪುಸ್ತಕಗಳನ್ನು ಮುಂದಿಟ್ಟುಕೊಂಡು ಕುಳಿತು ಹಾಳೆ ತಿರುಗಿಸುತ್ತಾ ತಿರುಗಿಸುತ್ತಾ ಇದ್ದಕ್ಕಿದ್ದ ಹಾಗೆಯೇ ಈ ಕಡೆಯ ಕಿಟಕಿಯಲ್ಲಿ ಅವನು ದೃಷ್ಟಿ ಬೀರುತ್ತಾನೆ. ಅನಂತರ ಮಧ್ಯಾಹ್ನ ಎರಡು ಗಂಟೆಗೆ ಅವನಿಗೆ ತನ್ನ ವ್ಯಾಯಾಮದ ನೆನಪು ಬರುತ್ತದೆ. ತೋಳುಗಳನ್ನು ಚಾಚಿ, ಎದೆಯಗಲಿಸಿ, ಹೊಳೆಯುತ್ತಿರುವ

ಡಂಬಲುಗಳನ್ನು ಹಿಡಿದುಕೊಂಡು ಭೀಮಪರಾಕ್ರಮದಿಂದ ಕಸರತ್ತು ಶುರು ಮಾಡುತ್ತಾನೆ. ಎಷ್ಟು ಜೋರಾಗಿ ಕಾಣಿಸುತ್ತಿದೆ, ಕರಡಿಯಂಥ ಎದೆ, ಮೈಚಾಚಿದ ಅಂದರೆ ಉಬ್ಬು ತಗ್ಗುಗಳು, ಕಲ್ಲೆಂದರೆ ಕಲ್ಲು. ಸರೋಜಿನಿ ಮೊದಲಿಗೆ ಅಭ್ಯಾಸ ಬಲದಿಂದ ಬಾಯಲ್ಲಿ ಬಟ್ಟೆ ತುರುಕಿಕೊಂಡು ನಕ್ಕಿದ್ದಳು. ಇದಾದ ಮೇಲೆ ತುಟಿಯ ಮೇಲಿನ ಮುಗುಳ್ನಗೆ ತುಟಿಯಲ್ಲೇ ಅಡಗಿಹೋಯಿತು. ಮುಗ್ಧಳಾಗಿ ನೋಡುತ್ತಲೆ ಇದ್ದಳು. ಕ್ರಮೇಣ ಮೈಯಲ್ಲೆಲ್ಲ ನಡುಕ ಉಂಟಾಗತೊಡಗಿ ಅನೇಕ ಬಾರಿ ನಿಟ್ಟುಸಿರು ಬಿಡುವಂತಾಯಿತು. ಮೈಯಲ್ಲೆಲ್ಲ ಏನೋ ರೋಮಾಂಚನದ ಅನುಭವ, ಅವಳು ಸ್ವತಃ ಕರಗತೊಡಗಿದ್ದಾಳೆ, ಕರಗಿದ್ದಾಳೆ. ಮೈಯನ್ನು ಅಳ್ಳಕವಾಗಿ ಬಿಟ್ಟು ಸರೋಜಿನಿ ಬಾಗಿಲಿಗೆ ಒರಗಿಕೊಂಡು ಕುಳಿತಿದ್ದಾಳೆ. ಬಾಯಿ ಸ್ವಲ್ಪ ತೆರೆದಿದೆ. ಹಣೆಯ ಮೇಲೆ ಬೆವರಿನ ಹನಿಗಳು, ದೃಷ್ಟಿ ಎಲ್ಲೋ ನೆಟ್ಟಂತಿದೆ. ಹೊಳೆಯುವ ಕಣ್ಣುಗಳಲ್ಲಿ ಉದಾಸೀನತೆಯ ಕರಿನೆರಳು ಮೂಡಿದೆ.

ವ್ಯಾಯಾಮ ನಡೆಯುತ್ತಿದೆ.

ಕಾಲೇಜು ಹುಡುಗ ತಿರುಗಿ ನೋಡಿದ. ಕಿಟಕಿಯ ಬಳಿ ಬೊಂಬೆಯಂತಹ ಆಕೃತಿ. ಆದರೆ ಅವಳು ನೋಡುತ್ತಲೆ ಇಲ್ಲ. ದಿನವೂ ಈ ಜನ ಹೀಗೆಯೇ ಇರುತ್ತಾರೆ. ಕೇವಲ ಮೃದಂಗದ ಮಣ್ಣಷ್ಟೇ ಬಿಸಿ, ಒಳಗೆ ಕವಿತೆಯಿಲ್ಲ. ಅವನು ಮದುವೆ ಯಾಗುವುದಿಲ್ಲವೆಂದು ಪ್ರತಿಜ್ಞೆ ಮಾಡಿದ. ಅದರ ಬದಲು ವ್ಯಾಯಾಮ - ಅದೇ ಎಷ್ಟೋ ಮೇಲು. ಮಧ್ಯಾಹ್ನದ ಬಿಸಿಲಲ್ಲಿ ತಾನಾಗಿಯೆ ಪಟ್ಟ ಈ ಪರಿಶ್ರಮದ ಬೆವರನ್ನೊರಸಿಕೊಳ್ಳಲು ಅವನು ಅವಸರದಲ್ಲಿ ಕೋಣೆಯೊಳಗೆ ಹೊರಟುಹೋದ.

ಆದರೆ ಸರೋಜಿನಿ ಹಾಗೆ ಕುಳಿತಿದ್ದಳು. ಬಾಯಿ ಸ್ವಲ್ಪ ತೆರೆದಿದೆ, ನಗುವಂತಿದೆ. ದೂರದಲ್ಲಿ ನಿರರ್ಥಕವಾದ ದೃಷ್ಟಿ ನೆಟ್ಟಿದ್ದಾಳೆ. ಒಳಗೆ ಬಯಸ್ಕೋಪ್ ಇರಬೇಕು. ರಸ್ತೆಯಿಂದಲೇ ಬಲಿದತ್ತ ಈ ದೃಶ್ಯ ನೋಡಿದ. ಒಂದು ಕ್ಷಣ ಗಲಿಬಿಲಿಗೊಂಡೆ, ಮೇಲೇರುವ ಆಸೆ ನೆನಪಿನಲ್ಲಿ ಉಳಿಯಲಿಲ್ಲ. ಮನಸ್ಸಿನ ಸಮತೋಲನ ತಪ್ಪಿದಂತಾಯಿತು. ಕೆಲಸದ ನೆನಪು, ಸಾಹೇಬರ ನೆನಪು ಯಾವುದೂ ಬರಲಿಲ್ಲ. ಅವನು ಕೇವಲ ಹಸಿದ ನಾಯಿಯಂತೆ ಕಿವಿ ಮೂಗು ಮುಚ್ಚಿಕೊಂಡು ಕುಡಿಯುತ್ತಿದ್ದಾನೆ, ಕುಡಿಯುತ್ತಲೆ ಇದ್ದಾನೆ. ಅದಾದ ಮೇಲೆ ನಾಯಿಯ ಕೃತಜ್ಞತೆ ಮತ್ತು ಆತ್ಮಗ್ಲಾನಿ-

ಸರೋಜಿನಿ ಹಾಗೆಯೇ ಕುಳಿತು ಅವನ ಕಡೆ ನೋಡುತ್ತಿದ್ದಾಳೆ

"ಏನು, ಜಪ ಮಾಡ್ತಾ ಇದ್ದೀಯ ?" ಬಲಿದತ್ತ ಹಂ.... ಹಂ... ಅಂತ ನಕ್ಕುಬಿಟ್ಟ. ಸರೋಜಿನಿ ಬೆಚ್ಚಿದಂತಾಗಿ ಎದ್ದಳು. ಪ್ರಪಂಚದ ಎಲ್ಲ ಕರ್ತವ್ಯದ ಅರಿವು, ಏನೋ ಒಂದು ರೀತಿಯ ಪ್ರಾಯಶ್ಚಿತ್ತದ ಭಾವನೆ ತಲೆಯಿಂದ ಮಡಕೆಯಲ್ಲಿರುವ ನೀರಿನಂತೆ ಇಳಿಯಿತು. 'ಪತಿಯೆ ಪರಮಗುರು' ನಗೆ ಮತ್ತು ನೋಟದ ಪರಿಣಾಮ ಇದಾಗಿತ್ತು. ಅವಸರದಲ್ಲಿ ಬಾಗಿಲು ತೆಗೆಯಲು ಹೋದಾಗ ಮರದ ಅಗುಳಿ ಉಂಗುರಕ್ಕೆ ತಾಕಿತು. ಮನಸ್ಸನ್ನು ಚುಚ್ಚುತ್ತಿದ್ದ ತಪ್ಪರಿವಿನ ಭಾವನೆ ತುದಿಮುಟ್ಟಿತು. ಸಾಕಿದ ಬೆಕ್ಕಿನಂತೆ ಅದುಗ ಮನೆಯತ್ತ ಓಡುತ್ತಾ ಸರೋಜಿನಿ ಬಿಂಕದ ಸ್ವರದಲ್ಲಿ "ಇಷ್ಟು ಹೊತ್ತು ? ಬೆಳಗ್ಗೆ ಸ್ವಲ್ಪವೇ ತಿಂದಿದ್ದೀರಿ. ಮತ್ತೆ ಹಸಿವಾಗಲಿಲ್ಲವೆ ? ಮೈಯೆಲ್ಲ ಸುಟ್ಟ

ಬದನೆಕಾಯಂತೆ ಕಪ್ಪಾಗಿದೆ. ಅಬ್ಬಾ, ಕೆಲಸ ಮಾಡ್ತಾ ಇದ್ರೆ ಏನು ಸ್ವರ್ಗ ಸಿಕ್ಕಿಬಿಡುತ್ತಾ ?" ಅಂತ ಅಂದಳು.

"ಸರಿ ಸರಿ, ತಗೊಂಡು ಬಾ, ಏನು ಹಾಕ್ತೀಯ ? ಬೇಗ ಹಾಕು, ಬೇಗ ನಾನೀಗಲೇ ಹೋಗಬೇಕು"

ಸರೋಜಿನಿ ತಕ್ಷಣ ಮಣೆ ಹಾಕಿದಳು - ಅನ್ನ, ಬೇಳೆ ಸಾರು, ಬಲಿದತ್ತ ಊಟಕ್ಕೆ ಕುಳಿತ. ನೊಣ ಓಡಿಸುತ್ತಾ ಸರೋಜಿನಿ ಹೇಳಿದಳು

"ರಾಮುಬಾಬುಗಳ ಮನೆಗೆ ಮತ್ತೆ ಬುಟ್ಟಿ ಬಂದಿದೆ."

"ನಿಜವಾಗಿ ?" ರಾಮುಬಾಬು ಪಕ್ಕದ ಮನೆಯಾತ.

"ಎರಡು ಮೂರು ಜನ ಹಳ್ಳಿಯೋರು ಬಂದಿದ್ದರು. ಜೊತೆಯಲ್ಲೊಂದು ಅಕ್ಕಿ. ಅಕ್ಕಿ, ತುಪ್ಪ, ತುಂಬಿದ ಬಾಳೆಗೊನೆ, ಬಲೆಯಲ್ಲಿ ಸುತ್ತಿದ ಒಂದು ದೊಡ್ಡ ಮೀನು. ಕಣ್ಣು ಹೊಡೆದ ತಕ್ಷಣವೇ ರಾಮುಬಾಬುಗಳ ಹೆಂಡತಿ ಸಾಮಾನೆಲ್ಲ ಒಳಗಿಟ್ಟು ಬೀಗ ಹಾಕಿದಳು. ಚೊಂಯ್ ಚೊಂಯ್ ಬರುತ್ತಿದೆ ಅಷ್ಟೆ, ನೋಡಿ"

ಬಾಯಲ್ಲಿ ಅನ್ನ ತುರುಕಿಕೊಂಡೇ ಬಲಿದತ್ತ "ಅಯ್ಯೋ ಬಿಡು, ನಮ್ಮದೇನು ಗಂಟು ಹೋಗುತ್ತೆ ? ಎಲ್ಲರೂ ರಾಮುಬಾಬುಗಳಾಗಿ ಆಗೋದಕ್ಕೆ ಸಾಧ್ಯವಾ ?"

"ಇಲ್ಲಾರೀ, ನಾನು ಹಾಗೆ ಹೇಳಲಿಲ್ಲ. ನಾನು ಏನು ಹೇಳ್ತಿದ್ದೆ ಅಂದರೆ, ಹಾಡು ಹಗಲಲ್ಲೇ ಈ ಪಾಪದ ಸಂಪಾದನೇನ ಜನ ಹೇಗೆ ಅರಗಿಸಿಕೊಳ್ತಾರೆ ಅಂತ. ಅವರಿಗೇನೂ ಆಗೋದಿಲ್ಲವಾ ?"

"ಆಗುತ್ತೆ, ಆಗುತ್ತೆ, ಯಾಕಾಗೋದಿಲ್ಲ, ಸಮಯಕ್ಕೆ ಸರಿಯಾಗಿ ಎಲ್ಲಾ ಆಗುತ್ತೆ" ಜೋರಾಗಿ ಹೇಳಿ ಬಲಿದತ್ತ ಒಂದು ಲೋಟ ನೀರು ಕುಡಿದ. ಸರೋಜಿನಿ ನೋಡಿದಳು, ಯಜಮಾನರ ಗಂಟಲಲ್ಲಿ ಉಬ್ಬಿದ ಭಾಗ ಮೇಲೆ ಕೆಳಗೆ ಓಡಾಡುತ್ತಿದೆ, ನಕ್ಕು ಬಿಟ್ಟಳು. ಬಲಿದತ್ತ ಬೆಚ್ಚಿಬಿದ್ದ - "ಏನೇ, ಯಾಕೆ ನಗ್ತಾ ಇದ್ದಿ ?"

"ಅದೇ ಈಗತಾನೆ ನೀವೇ ಹೇಳಿದರಲ್ಲ, ಸಮಯಕ್ಕೆ ಸರಿಯಾಗಿ ಎಲ್ಲಾ ಆಗುತ್ತೆ ಅಂತ. ನಿಮ್ಮ ಸಾಹೇಬರ ಕಿವಿಗೆ ಈ ಮಾತು ಬಿದ್ದರೆ ಸಾಕು, ರಾಮುಬಾಬು ಹೆಂಡತಿ ದೌಲತ್ತೆಲ್ಲ ಅಡಗಿ ಹೋಗುತ್ತೆ. ಆ ದುಡುಮೀನ ನೋಡಿ, ಒಡವೆ ಮೇಲೆ ಒಡವೆ ಮಾಡಿಸ್ಕೊತಿದ್ದಾಳೆ, ಅದೂ ಜೋಡಿ ಜೋಡಿ ಅಯ್ಯೋ, ಈ ಕಾಲ ನೋಡಿದ್ರೆ ರಾಮುಬಾಬೂದೇ ಅನ್ನಿಸುತ್ತೆ. ನೀವೇ ಹೇಳ್ತಿದ್ರಿ ಅವರೇನೂ ಅಷ್ಟು ಓದಿಲ್ಲ ಅಂತ. ನೀವು ಇಂಟರ್ ಪಾಸ್ ಮಾಡಿದ್ದೀರಿ. ಅವರಾದ್ರೆ ಮಿಡಲ್ ಸ್ಕೂಲ್ ಹತ್ತಿದ್ದಾರೆ ಅಷ್ಟೆ ಅಂತ. ಅಂದಹಾಗೆ ನಿಮ್ಮ ಸಾಹೇಬರಿಗೆ..."

ಸರೋಜಿನಿ ಆಸೆಯ ಕಣ್ಣುಗಳಿಂದ ಗಂಡನ ಮುಖದ ಕಡೆಗೆ, ಆ ಮುಖದ ಹಿಂದೆ ದೂರದಲ್ಲಿ ಕಾಣುತ್ತಿದ್ದ ಭವಿಷ್ಯದ ಕಡೆಗೆ ನೋಡುತ್ತಾ ಕುಳಿತುಬಿಟ್ಟಳು - ಬುಟ್ಟಿ ಬರುತ್ತೆ, ಆಭರಣಗಳನ್ನು ಮಾಡಿಸಿಕೊಳ್ಳುತ್ತಿದ್ದಾಳೆ. ಪ್ರತಿನಿತ್ಯ ಮೀನು ಕರಿಯುವ ಚೊಂಯ್ ಚೊಂಯ್ ಶಬ್ದ ಕೇಳಿಬರುತ್ತದೆ - ಎಂಥ ಭವಿಷ್ಯ - ಸರೋಜಿನಿ ಹೆಮ್ಮೆಯಿಂದ ಬೀಗುತ್ತಾಳೆ.

ಬಲಿದತ್ತ ನಕ್ಕುಬಿಟ್ಟ - "ಸ್ವಲ್ಪ ತಡಕೊ, ಕನಸು ನನಸಾಗುತ್ತೆ."

ಸರೋಜಿನಿ ವೀಳೆಯದೆಲೆ ಮಡಿಸತೊಡಗಿದಳು. ಬಲಿದತ್ತ ಹೊರಗಿನ ಕೋಣೆಗೆ

ಹೋದ. ಇವತ್ತಿನ ಸಮಾಚಾರ ಹೇಳುವುದೂ ಬೇಡವೋ ಅಂತ ಯೋಚಿಸಿದ. ಬಹಳ ದಿನಗಳಿಂದ ಒಳಕ್ಕೆ ನುಗ್ಗಲು ಅವನು ಸ್ವಲ್ಪವಾದರೂ ಜಾಗ ಸಿಕ್ಕಲೆಂದು ಹುಡುಕಾಡುತ್ತಾನೆ. ಸುಮ್ಮನೆ ತಲೆಚಚ್ಚಿಕೊಳ್ಳುತ್ತಾನೆ, ಆದರೂ ದಾರಿ ಕಾಣುವುದಿಲ್ಲ. ಇವತ್ತು ಅವನು ಸ್ವಲ್ಪ ಅನುಕೂಲವನ್ನೇನೋ ಮಾಡಿಕೊಂಡು ಬಂದಿದ್ದಾನೆ. ಯೋಚನೆ ಮಾಡಿದ, ಸರೋಜಿನಿ ಮಾತನ್ನೇನೋ ಕೇಳುತ್ತಾಳೆ, ವಟಾರಕ್ಕೆಲ್ಲ ಹೇಳಿಕೊಂಡು ಬರಬಹುದು. ಆಗ ? ನಂಬಿಕೆಗೆ ಅರ್ಹವಾದ ಕೆಲಸಗಳನ್ನು ಮಾಡಿ ಹೊಟ್ಟೆಯಲ್ಲೇ ಅಡಗಿಸಿಕೊಳ್ಳುವುದು ಅವನಿಗೆ ಗೊತ್ತು, ಅಭ್ಯಾಸವಾಗಿಬಿಟ್ಟಿದೆ, ಹಾಗಾಗಿಯೆ ಎಲ್ಲ ವಿಚಾರಗಳನ್ನು ಹೆಂಡತಿಗೆ ಹೇಳಿಬಿಡುವುದಿಲ್ಲ. ಆದರೂ ಅವನು ಹಾಗೂ ಹೀಗೂ ಲೆಕ್ಕಾಚಾರದಲ್ಲಿ ತೊಡಗುತ್ತಾನೆ. ಬದುಕನ್ನು ಸಾಗಿಸುವ ಅದೇ ಎಡೆಬಿಡದ ಯೋಚನೆ. ಸರೋಜಿನಿ ವೀಳೆಯದೆಲೆ ಮಡಚಿ ಕೈಲಿಟ್ಟು ಪಾತ್ರೆಗಳನ್ನು ಎತ್ತಿಡಲು ಹೋಗಿದ್ದಾಳೆ. ದೂರದಲ್ಲಿ ಕುದುರೆಯ ಗೊರಸಿನ ಸದ್ದು ಕೇಳಿಸಿತು. ಮನಸ್ಸಿನಾಳದಲ್ಲಿ ಒಂದು ಪದ ಮೂಡಿಬಂತು. "ಸಾಹೇಬರು!" ಅಭ್ಯಾಸಬಲದಿಂದಲೇ ಅರ್ಧ ಅಗಿದಿದ್ದ ಎಲೆಯಡಿಕೆಯನ್ನು ಬಾಯಿಂದ ಹೊರಗೆ ಉಗುಳಿದ. ಮುಖದ ಮೇಲಿದ್ದ ಭಾವ, ಮೈಯಿನ ಭಂಗಿ ಎಲ್ಲ ಬದಲಾದವು. ಹಲ್ಲುಗಳನ್ನು ಬಿಗಿಹಿಡಿದು ಇಂಜನ್ನು ಆವಿ ಬಿಡುವಂತೆ ಏದುತ್ತಾ ನುಡಿದ - "ಲೇ ಸರೋಜ - ಸಾಹೇಬರು - ಸಾಹೇಬರು."

"ಅಯ್ಯೋ ಬಿಡಿ, ಏನು ನೋಡೋದು, ಆ ಬೋಳುತಲೆ ಕೆಂಪು ಕೋತೀನ-"

"ಥತ್, ಲೇ ಸರೋಜ - ಬರ್ತೀಯೋ ಇಲ್ಲವೊ - ಸಾಹೇಬರು ಕಣೆ, ಸಾಹೇಬರು-"

ಸರೋಜಿನಿ ನಗುನಗುತ್ತಾ ಹತ್ತಿರ ಬಂದಳು, ಖಟಾ-ಖಟ್ ಖಟಾ-ಖಟ್ ಕುದುರೆಯ ಗೊರಸಿನ ಸದ್ದು ಹತ್ತಿರ ಬರುತ್ತಲೆ ಇತ್ತು. ಕಿಟಕಿಯ ಕಂಬಿಯ ಮೇಲೆ ಕೈಯೂರಿಕೊಂಡು ಮೈಯನ್ನು ಬಗ್ಗಿಸಿ ಸರೋಜಿನಿ ನೋಡುತ್ತಿದ್ದಾಳೆ. ಕಟ್ಟುಹಾಕಿದ ಹರಯದಂತೆ, ಇನ್ನೊಂದೆಡೆಯಲ್ಲಿ ಕಾಲೇಜು ವಿದ್ಯಾರ್ಥಿ ಪುಸ್ತಕವನ್ನು ಹಿಡಿದು ಏನನ್ನೋ ಬಾಯಿಪಾಠ ಮಾಡುತ್ತಿರುವಂತೆ ತುಟಿಯಲ್ಲಾಡಿಸುತ್ತಾ ಈ ಕಡೆಗೇ ನೋಡುತ್ತಿದ್ದಾನೆ. ಸರೋಜಿನಿಯ ಬೆನ್ನಿನತ್ತ ಬಲಿದತ್ತ ಬಗ್ಗಿದ್ದಾನೆ, ಕಾತುರದಿಂದ ಕಾಯುತ್ತಾ ಹೊರಕ್ಕೆ ನೋಡುತ್ತಿದ್ದಾನೆ.

ಸಾಹೇಬರು ಬರುತ್ತಿದ್ದಾರೆ.

ಪ್ರತಿನಿತ್ಯವೂ ಅವರು ಇದೇ ದಾರಿಯಲ್ಲಿ ಎಲ್ಲರಿಗೂ ದರ್ಶನ ಕೊಡುತ್ತಾ ಕುದುರೆಯ ಮೇಲೆ ಸವಾರಿ ಮಾಡಿಕೊಂಡು ಎರಡು ಬಾರಿ ಬರುವರು. ಇದು ಇವತ್ತಿನ ಸರದಿ.

ಆದರೆ ಇದೇನು ? ಖಾಲಿ ಕುದುರೆ ಬಾಣದಂತೆ ಹೋಗುತ್ತಿದೆ, ಜೀನು ಕಳಚಿದೆ, ಸವಾರನ ಪತ್ತೆಯೆ ಇಲ್ಲ! ಬಲಿದತ್ತ ಕೂಗಿಕೊಂಡ - "ಸರೋಜ, ಸರೋಜ, ಸ್ವಲ್ಪ ಬೇಗ ನನ್ನ ಅಂಗಿ ಕೊಡಿಲ್ಲಿ" ಅದೆಷ್ಟು ಉತ್ಸಾಹದಿಂದ ಅವನು ಕಣ್ಣುಕಿವಿ ಮುಚ್ಚಿಕೊಂಡು ಅಂಗಿಯನ್ನು ಮೈಮೇಲೆ ಹಾಕಿಕೊಂಡನೂ ಅವನಿಗೇ ನೆನಪಿಲ್ಲ. ಬಾಗಿಲು ತೆಗೆದು ಕುದುರೆ ಯಾವ ದಿಕ್ಕಿನಿಂದ ಬಂದಿತ್ತೋ ಆ ದಿಕ್ಕಿನಲ್ಲಿ ಹುಚ್ಚನಂತೆ

ಓಡಿದ. ಜನ ಕುತೂಹಲದಿಂದ ನೋಡುತ್ತಿದ್ದರು. ಏನೆಂದು ಯಾರೋ ಕೇಳುವಷ್ಟರಲ್ಲಿ ಬಲಿದತ್ತ ಅಲ್ಲಿದ್ದರೆ ತಾನೆ. ರಸ್ತೆಯ ಕೆಲವು ಕಂತ್ರಿನಾಯಿಗಳು ಉತ್ತೇಜನಗೊಂಡು ಅವನ ಹಿಂದೆ ಓಡಿದವು. ಬಲಿದತ್ತ ಮನಸ್ಸಿನಲ್ಲೇ 'ಅದೃಷ್ಟ, ಅದೃಷ್ಟ' ಅಂತ ಅಂದುಕೊಳ್ಳುತ್ತಿದ್ದಾನೆ. ಪ್ಯಾಂಟನ್ನು ಕೆಳಗಿನಿಂದಲೇ ಎಡಕೈಯಲ್ಲಿ ಹಿಡಿದುಕೊಂಡು ಓಡುತ್ತಿದ್ದಾನೆ, ಗುಂಡಿ ಹಾಕಿಕೊಳ್ಳುವುದಕ್ಕೆ ಪುರುಸೊತ್ತಿಲ್ಲ, ಚಪ್ಪಲಿಗಳೆರಡೂ ಅಳ್ಳಕವಾಗಿವೆ. ಬೆಲ್ಟು ಕಟ್ಟಿಕೊಳ್ಳಲೂ ಆಗುತ್ತಿಲ್ಲ. ಆದರೆ ಇವೆಲ್ಲ ಅದೃಷ್ಟದೊಡನೆ ಓಡುತ್ತವೆಯೇನೋ ಅನಿಸುತ್ತಿದೆ. ಅದೃಷ್ಟ-ಅದೃಷ್ಟ - ಬಲಿದತ್ತ ಹೊರಟುಬಿಟ್ಟಿದ್ದಾನೆ.

ಹೆಚ್ಚು ದೂರವೇನೂ ಹೋಗಬೇಕಾಗಲಿಲ್ಲ. ರಸ್ತೆಯಲ್ಲಿ ಒಂದು ಕಡೆ - ಧೂಳಿನಿಂದ ಮೇಲೆದ್ದು ಬರುತ್ತಿದ್ದಾರೆ ಸಾಹೇಬರು. ಮೈಯೆಲ್ಲಾ ಧೂಳೂ, ಗಾಯದ ಗುರುತೂ. ಇದೇನು ಅವತಾರ! ಉತ್ತೇಜನಗೊಂಡ ಬಲಿದತ್ತ ಸಾಹೇಬರ ಜೊತೆ ಗಡಿಬಿಡಿಯಲ್ಲಿ ಅನೇಕ ಮಾತುಗಳನ್ನಾಡಿದ, ಅವರ ಸುತ್ತಲೂ ಸುತ್ತು ಹೊಡೆಯ ತೊಡಗಿದ. ಇದಕ್ಕೆ ಉತ್ತರವಾಗಿ ಸಾಹೇಬರು ಹೀನಾಮಾನ ಬೈಯತೊಡಗಿದರು, ಸಾಹೇಬರಿಗೆ ಸಹಾನುಭೂತಿಯೆಂದರೆ ಕಂಡರಾಗದು ಅಂತ ಅವನ ತಲೆಗೆ ಹತ್ತಿತು. ಕುದುರೆ ಹೋದೆಡೆಗೆ ಕುಂಟುತ್ತಾ ಕುಂಟುತ್ತಾ ಸಾಹೇಬರು ನಡೆಯುತ್ತಿದ್ದಾರೆ. ಕುದುರೆಯನ್ನು ಹುಡುಕಲು ಬಲಿದತ್ತ ಜನರನ್ನು ಕಳಿಸಿದ. ಕುದುರೆ ಚಾಕರನಿಗೆ ವಿಚಾರ ತಿಳಿಸಲು ಆಳನ್ನು ಅಟ್ಟಿದ. ಸಾಹೇಬರ ಹಿಂದೆ ಹಿಂದೆ ಹೋಗುವುದನ್ನು ಬಿಟ್ಟರೆ ಇನ್ನೇನೂ ಮಾಡುವಂತಿರಲಿಲ್ಲ. ಗಂಭೀರವಾಗಿ ಹೆಜ್ಜೆಯನ್ನು ಎಣಿಸಿಕೊಂಡು ಸಾಹೇಬರ ಹಿಂದೆ ಹೊರಟ.

ಈಗ ಒಂದು ಚಿಕ್ಕ ಮೆರವಣಿಗೆ, ಮುಂದೆ ಸಾಹೇಬರು, ಸ್ವಲ್ಪ ಹಿಂದೆ ಅವರಿಂದ ದೂರ ಸರಿದು ಹೆಜ್ಜೆಯಿಡುತ್ತಿರುವ ಸಣ್ಣ ಆಕಾರದ ಬಲಿದತ್ತ ವೀರದರ್ಪದಿಂದ ನಡೆದುಹೋಗುತ್ತಿದ್ದಾನೆ. ಜನರನ್ನು ನೋಡಿ ಹೆಮ್ಮೆಯಿಂದ ನಗುತ್ತಾನೆ. ಅದೃಷ್ಟ ತನಗೆ ಖುಲಾಯಿಸಿದೆಯೆಂದೂ ಸಾಹೇಬರು ಬಿದ್ದದ್ದು ತನ್ನ ಏಳಿಗೆಗೆ ದಾರಿಯೆಂದೂ ಯೋಚನೆ ಮಾಡುತ್ತಿದ್ದಾನೆ. ಸಹೋದ್ಯೋಗಿಗಳೆಲ್ಲ ಒಬ್ಬರ ಮೇಲೊಬ್ಬರು ನುಸುಳಿ ಬಂದು ನೋಡುತ್ತಿದ್ದಾರೆ. ಅವರ ದೃಷ್ಟಿಯಲ್ಲಿ ಭಯವಿದೆ - ಅವರು ಬಹಳ ತಡವಾಗಿ ಬಂದಿದ್ದಾರೆ. ಬಲಿದತ್ತ ಮನಸ್ಸಿಗೆ ಬಂದಂತೆ ಅಪ್ಪಣೆ ಕೊಡುತ್ತಿದ್ದಾನೆ. ಸಾಹೇಬರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳಲು ಓರೆಗಣ್ಣಿನಿಂದ ನೋಡುತ್ತಾನೆ. ಆದರೆ ಸಾಹೇಬರು-

ಕುದುರೆ ಚಾಕರ ಕುದುರೆ ಹಿಡಿದುಕೊಂಡು ಬರುತ್ತಿದ್ದಾನೆ. ಕುದುರೆ ಕೆನೆಯುತ್ತದೆ. ಅದರ ಬೆನ್ನನ್ನು ಸವರಿ, ಕಾಲನ್ನು ನೀವಿ ಸಾಹೇಬರು ಬಗ್ಗಿ ಕುದುರೆಯ ಕಾಲು ಹಿಡಿದುನೋಡಿದರು.

ಎಂಥ ಆಶ್ಚರ್ಯ! ಕುದುರೆಯ ಬಗ್ಗೆ ಇಷ್ಟೊಂದು ಸ್ನೇಹ, ಜನರಲ್ಲಿ ಗುಸುಗುಸು ಪ್ರಾರಂಭವಾಯಿತು. ಬಲಿದತ್ತನೂ ಬಗ್ಗಿ ಕುದುರೆಯ ಕಾಲನ್ನು ನೋಡುತ್ತಿದ್ದಾನೆ. ಕುದುರೆಯ ಕಾಲಿನ ಬಗ್ಗೆ ಅವನಲ್ಲಿ ಇಂದೇ ಕುತೂಹಲ ಮೂಡಿರುವುದು. ಇದು ಕುದುರೆಯದೇ ಕಾಲು. ಅವರಲ್ಲಿ ಸಂದೇಹ ಏನೂ ಇಲ್ಲ. ಆದರ ಸಾಹೇಬರು

ಏನೋ ನೋಡುತ್ತಿದ್ದಾರೆ, ಅದರಿಂದಾಗಿ ನೋಡಲೇ ಬೇಕು. ಸಾಹೇಬರು ಅರಚಿದರು-

"ವೆಟರನರಿ ಡಾಕ್ಟರ್" ಬಂಗಲೆಯ ಕಡೆಗೆ ಕೈಮಾಡಿ ತೋರಿಸಿದರು. ಬಲಿದತ್ತ ಹತ್ತಿರದಲ್ಲೇ ಇದ್ದ ಒಬ್ಬ ಮನುಷ್ಯನ ಕೈಯಿಂದ ಸೈಕಲ್ ಕಿತ್ತುಕೊಂಡು ಸೊಂಯ್ ಅಂತ ಹತ್ತಿ ಹೊರಟ. ಮನುಷ್ಯ ಅವಾಕ್ಕಾಗಿ ನೋಡುತ್ತಾ ನಿಂತ.

ಸೈಕಲ್ ಮೇಲೆ ಹತ್ತಿ ವಾಯುವೇಗದಲ್ಲಿ ಹೋಗುತ್ತಿರುವ ಹಾಗೆಯೆ ಮನಸ್ಸು ನಗುತ್ತಿದೆ - ಇದೇ ಸಮಯ, ಇದೇ ಸಮಯ. ಅವಸರದಲ್ಲಿ ಓಡುವಾಗ ಕಾಲುಗಳು ಕಟಕಟ ಅಂತ ಸದ್ದು ಮಾಡುತ್ತವೆ, ಮೇಲುಸಿರು ಬರುತ್ತಿರುತ್ತದೆ. ತಲೆಯ ಒಳಗೆ ಕಳಿಂಗಪಕ್ಷಿ ಅರಚುತ್ತಿದೆ - ಇದೇ ಬೆಳಗಿನ ಜಾವ, ಇದೇ ಬೆಳಗಿನ ಜಾವ. ಈ ವಿಚಾರದಲ್ಲೇ ಲೀನವಾಗಿ ಪಶುಗಳ ಡಾಕ್ಟರನ್ನು ಕರೆದುಕೊಂಡು ಸಾಹೇಬರ ಬಳಿಗೆ ಬರುವಷ್ಟರಲ್ಲಿ ನೋಡುತ್ತಾನೆ, ಕುದುರೆ ನಿಂತಿದೆ. ಸಾಹೇಬರು ಹುಲ್ಲಿನ ಮೇಲೆ ಮಂಡಿಯೂರಿ ಅದರ ಕಾಲನ್ನೇ ನೀವುತ್ತಿದ್ದಾರೆ.

ಅವನು ಏಕೆ ಹೀಗೆ ಮಾಡಿದನೊ ಗೊತ್ತಿಲ್ಲ. ಆದರೆ ಆನಂದದ ಉಲ್ಲಾಸದಲ್ಲಿ ಬಲಿದತ್ತನ ಮನಸ್ಸು ಕುದುರೆಯ ಹಿಂದಿನ ಕಾಲನ್ನು ನೋಡುವ ಪ್ರೇರಣೆಗೆ ಒಳಗಾಯಿತು. ಅಲ್ಲಿ ನಿಜವಾಗಿಯೂ ಏನಾದರೂ ಹುಡುಕೇಹುಡುಕುತ್ತೇನೆ ಅಂತ ಬಗ್ಗಿ ನೋಡಿದ. ಹತ್ತಿರ ಹೋಗುತ್ತಿದ್ದಂತೆ ರೆಪ್ಪೆ ಮಿಟಕಿಸುವಷ್ಟರಲ್ಲಿ ಕುದುರೆ ಒಂದು ಒದೆತ ಕೊಟ್ಟಿತು. ಅದೃಷ್ಟವಶಾತ್, ಮೈಗೆ ಏಟುಬೀಳದಿದ್ದರೂ ಹಿಂದಕ್ಕೆ ಸರಿದ ಬಲಿದತ್ತ ಮುಗ್ಗರಿಸಿಬಿದ್ದ. ಸಾಹೇಬರು ಗರ್ಜಿಸಿದರು. ಅವರ ಕಣ್ಣೆಲ್ಲಾ ಕೆಂಪಾಯಿತು.

ತಲೆತಗ್ಗಿಸಿ ನಿಂತಿದ್ದಾನೆ. ಅವನ ಅದೃಷ್ಟದ ಎತ್ತಿನಗಾಡಿ ಡಿಕ್ಕಿಹೊಡೆದು ತಲೆಕೆಳಗಾದಂತಿದೆ.

ಸಹೋದ್ಯೋಗಿಗಳು ಸಂತಾಪಗೊಂಡು ತುಟಿಯಲ್ಲೇ ನಗುತ್ತಿದ್ದಾರೆ. - "ಬಲಿದತ್ತ, ಈ ಕಡೆಗೆ ಬಾರಪ್ಪ!" ಇದೇ ರೀತಿ ಐದು ನಿಮಿಷ ಕಳೆಯಿತು. ಅವನ ಮನಸ್ಸು ಸೋಲೊಪ್ಪಿಕೊಳ್ಳಲಿಲ್ಲ. ಕೊನೆಗೆ ಏನೋ ನೆಪ ಮಾಡಿಕೊಂಡು ತೋಟದ ಕಡೆಗೆ ಹೊರಟುಹೋದ. ಒಳ್ಳೆಯದೆ ಆಯಿತು. ಅಮ್ಮಾವ್ರು ಅಲ್ಲೇ ತಿರುಗಾಡುತ್ತಿದ್ದಾರೆ.

"ಗುಡ್ ಮಾರ್ನಿಂಗ್!"

"ಗುಡ್ ಈವಿನಿಂಗ್ ಬಾಬೂ" ಅದೇ ಕ್ಷಣದಲ್ಲಿ ಬಲಿದತ್ತ ನಾಲಗೆ ಕಚ್ಚಿಕೊಂಡ. ಹೌದು, ಸಾಯಂಕಾಲ ಆಗಿಹೋಗಿದೆ. ಅಮ್ಮಾವ್ರು ಅವನ ಪರದಾಟ ನೋಡುತ್ತಿದ್ದಾರೆ. ಆದರೇನು, ನಿಲ್ಲುವಂತಿಲ್ಲ, ನಿಂತವನು ಸತ್ತ. ಕೈ ಅಲ್ಲಾಡಿಸುತ್ತಾ ಬೆಳಗ್ಗೆ ತಾನು ಮಾಡಿದ ಕೆಲಸ ಕಾರ್ಯಗಳನ್ನು ಅವನು ಅಮ್ಮಾವ್ರಿಗೆ ತೋರಿಸಿದ. ಎಷ್ಟೊಂದು ಕುದುರೆಯ ಲದ್ದಿ, ಎಷ್ಟೊಂದು ಹಂದಿಯ ಹಿಕ್ಕೆ, ಬಾವಿಯಲ್ಲಿ ಬೀಳಲಿ, ಇಲ್ಲವೆ ಹಳ್ಳದಲ್ಲಿ ಬೀಳಲಿ, ಅವನು ಶಿಷ್ಟ ಭಾಷೆಯಲ್ಲಿ ವರ್ಣನೆ ಮಾಡುತ್ತಲೆ ಹೋದ. ಅಮ್ಮಾವ್ರು ಸುಮ್ಮನೆ ತಲೆ ಅಲ್ಲಾಡಿಸುತ್ತಿದ್ದಾರೆ. ಆಹಾ! ಅದೆಷ್ಟು ಸಂತೋಷ, ಅದೆಷ್ಟು ಸಂತೋಷವಾಗಿದೆ. ದೊಡ್ಡ ದೊಡ್ಡ ಶಬ್ದಗಳಲ್ಲಿ ಅವನು

ಬೂಗಳೆ ಹೊಡೆಯುತ್ತಲೇ ಹೋದ, ರೈಲು ಬಿಡುತ್ತಲೆ ಇದ್ದ. "ಓಹೋ, ಏಸೀ ಮಾಲಿ, ಇದನ್ನೆಲ್ಲ ಹಾಕಿಬಿಡು" ಅಮ್ಮಾವ್ರು ದೂರಸರಿದು ಹೂವಿನ ಗೊಂಚಲನ್ನು ಕೈಯಲ್ಲಿ ಹಿಡಿದು ಆಟವಾಡುತ್ತಿದ್ದಾರೆ. ದೂರದಲ್ಲಿ ನಿಂತ ಸಹೋದ್ಯೋಗಿಗಳು ನೋಡುತ್ತಿದ್ದಾರೆ. ಸಾಹೇಬರು ಇನ್ನೂ ಮಂಡಿಯೂರಿ ಕುದುರೆಯ ಹತ್ತಿರದಲ್ಲೇ ಕುಳಿತಿದ್ದಾರೆ.

ಒಂದು ರಾಶಿ ಫೈಲುಗಳನ್ನು ಹಿಡಿದು ಮೂರು ಮಂದಿ ಉದ್ಯೋಗಿಗಳು ಕಾಯುತ್ತಿದ್ದಾರೆ.

"ತುಂಬ ಅರ್ಜೆಂಟು ಸಾರ್" ವಯೋವೃದ್ಧರಾದ ಕುಲಮಣಿ ಬಾಬು ಹೇಳಿದರು.

"ಅರ್ಜೆಂಟು, ಅರ್ಜೆಂಟು,"ಸಾಹೇಬರು ಅರಚಿದರು. "ಬಾಬೂ, ಓ ಬಾಬೂ ವ್ಯಾಡ್-" ಓಡಿಬಂದು ಸಲಾಮು ಹೊಡೆದ ಬಲಿದತ್ತ.

"ಬಾಬು, ಬರೆದುಬಿಡು. ನನಗೆ ಈ ಸಾರಿ ಯಾರೂ ಲಾಯಕ್ಕೆಂದು ಕಾಣಿಸೋದಿಲ್ಲ. ಆಂ! ಕುದುರೆಯನ್ನು ಸ್ವಲ್ಪ ಚೆನ್ನಾಗಿ ನೋಡಿಕೊ ಡಾಕ್ಟರ್."

ದೂರದಲ್ಲಿ ಕಾಯುತ್ತಾ ನಿಂತಿದ್ದ ನೌಕರರ ಮುಖ ಕಪ್ಪಿಟ್ಟಿತ್ತು. ಬಲಿದತ್ತ ಕಾಗದ ತೊಗೊಂಡು ಹೋಗುತ್ತಿದ್ದಾನೆ.

ಬೇರೆ ಬೇರೆ ಕಡೆಗಳಿಂದ ಅವನನ್ನೇ ಸನ್ನೆ ಮಾಡಿ ಕರೆಯುತ್ತಿದ್ದಾರೆ. ಅವನು ಸುಮ್ಮನೆ ಹೊರಟುಹೋಗುತ್ತಿದ್ದಾನೆ.

"ನಿಮ್ಮ ಯಜಮಾನ್ರು ಏನು ಕುದುರೆ ಹಾಗೆ ಓಡಿಹೋದರಲ್ಲ" ರಾಮಬಾಬು ಹೆಂಡತಿ ಕೇಳಿದಳು "ನಾನು ಬೆಕ್ಕಸಬೆರಗಾಗಿ ಹೋದೆ. ನಿಜವಾಗಿಯೂ, ಒಳ್ಳೆ ಮೈಕಟ್ಟಿನ ಆಸಾಮಿ. ಹೇಗೆ ಸೊಂಯ್ ಅಂತ ಓಡಿಹೋದರು."

ಏನು ಉತ್ತರ ಕೊಡಬೇಕೆಂದು ಸರೋಜಿನಿಗೆ ಹೊಳೆಯಲಿಲ್ಲ. ನಕ್ಕು ಹೇಳಿದಳು-

"ಓಡಕ್ಕಾಗದಿದ್ದವರ ಹೊಟ್ಟೆ ಬಿರಿದು ಜೋತುಬೀಳುತ್ತೆ ಅಲ್ಲವೆ ?"

"ಹೌದು, ಓಡಲಿ, ಓಡಲಿ, ಓಡಿಹೋಗಿ ಗೋಡೆ ಮುಟ್ಟಿಬಂದರು ಅಂತ ಎಷ್ಟು ತಾಪೇದಾರಿ ಮಾಡಿದರೇನು, ತಿಂಗಳಿಗೆ ಅರವತ್ತು ರೂಪಾಯಿ ತಾನೇ ಬರೋದು, ಅದೇನೂ ಹೆಚ್ಚಾಗೋದಿಲ್ಲವಲ್ಲ. ಅದು ಸರಿ, ಈ ರೀತಿ ಓಡೋದರಿಂದೇನಾಗುತ್ತೆ ? ಏನು ಆಗಬೇಕೊ ಅದು ಆಗೇ ಆಗುತ್ತೆ. ಹೀಗ್ಯಾಕೆ ಮಾಡಬೇಕು ?"

"ಅದೆಲ್ಲಿಂದ ಆಗುತ್ತೆ ಬಿಡಿ ಅಕ್ಕಯ್ಯ. ಮುಂದಿನ ಬಾಗಿಲಿಂದಲೂ ಬರ್ಲಿ, ಹಿಂದಿನ ಬಾಗಿಲಿಂದಲೂ ಬರ್ಲಿ. ಇಂಥ ಅದೃಷ್ಟ ಎಲ್ಲಿ ? ಪ್ರಯತ್ನ ಮಾಡಿದರೆ ತಾನೆ ಆಗೋದು."

"ಯಾರ ವಿಚಾರ ಹೇಳ್ತಾ ಇದ್ದೀ ನೀನು ? ಮುಂದಿನ ಬಾಗಿಲಿಂದಲೂ ಬರುತ್ತೆ, ಹಿಂದಿನ ಬಾಗಿಲಿಂದಲೂ ಬರುತ್ತೆ ಅಂತಾ ?"

"ಯಾರು ಬೇಕಾದರೂ ಆಗಬಹುದು."

"ಹೌದೌದು, ಕಲಿಯುಗ ನೋಡು. ಇನ್ನೊಬ್ಬರು ಮುಂದೆ ಬರ್ತಾ ಇದ್ರೆ ಹೊಟ್ಟೆ ಉರಕೊಳ್ತಾರೆ ಹಾಳು ಜನ. ಅಯ್ಯೋ, ಅದೆಂಥ ಮಾತು ಆಡ್ತೀದ್ದೀಯ, ಅವರವರ

ಯೋಗ್ಯತೆ ತೋರಿಸೋದಕ್ಕೆ ಬೇಡ ಅಂತಾದ? ಈ ರೀತಿ ಹೊಟ್ಟೆ ಉರಕೊಂಡರೆ ಅವರೇ ಉರಕೊಳ್ತಾರೆ. ಮನೇಗೇನೂ ಬರೋದಿಲ್ವಲ್ಲ."

"ನಾವೇಕೆ ಹೊಟ್ಟೆಕಿಚ್ಚು ಪಡೋಣಾ ಅಕ್ಕಯ್ಯ?"

"ಇದೇ ನೋಡು, ನಿನ್ನ ಮೇಲೇ ಹಾಕ್ಕೊಂಡೆಯಲ್ಲ. ನಿನ್ನ ಮೇಲೆ ಯಾಕೆ ಹಾಕ್ಕೋಬೇಕು? ಏನೇನು ನಂಗೆ ಹೇಳ್ತಾ ಇದ್ಯಾ?"

ಮಧ್ಯದ ಚಿಕ್ಕ ಮಗು 'ಅಮ್ಮಾ ಅಮ್ಮಾ' ಅಂತ ಅಳುತ್ತಿತ್ತು.

"ಬಂದೆ ಮರಿ. ಬಂದೆ" ರಾಮಬಾಬುಗಳ ಹೆಂಡತಿ ಒಳಗೆ ಹೋದಳು.

ಮಾತುಗಳಲ್ಲ, ಅವಳ ಮಾತೆಂದರೆ ಸಿಹಿಯಾದ ಅಲಗಿದ್ದಂತೆ.

ಆಕೆ ಹೊರಟುಹೋದ ಮೇಲೆ ಸರೋಜಿನಿ ಸೋತು ಕುಳಿತಳು. ಅತ್ತು ಬಿಡೋಣಾ ಅಂತ ಮನಸ್ಸಿಗೆ ಬಂತು.

ಆದರೆ ಅತ್ತುಬಿಟ್ಟರೆ ಕೇಳುವವರು ಯಾರು? ಸಮಾಧಾನ ಮಾಡುವವರು ಯಾರು?

ಪ್ರಯೋಜನವಿಲ್ಲ.

ಒಂದು ವಿಚಾರ ಅವಳಿಗೂ ನೆನಪಿಗೆ ಬರುತ್ತದೆ. ಅವಳ ಗಂಡ ಸೀಸಿ ಹೊಡೆಯುತ್ತಾನೆ. ತನ್ನ ಮನಸ್ಸಿನಲ್ಲಿದ್ದ ವಿಷಯವನ್ನು, ತಲೆ ಕೊರೆಯುತ್ತಿದ್ದ ವಿಚಾರವನ್ನು ಬಾಯಿ ಬಡುಕಿ ರಾಮಬಾಬುವಿನ ಹೆಂಡತಿ ಆಡಿ ತೋರಿಸಿದ್ದಳು. ಅದು ಈಗ ಇನ್ನೂ ಕೊಳಕು, ನೋಡಲಾಗುವುದಿಲ್ಲ, ಯೋಚಿಸಲಾಗುವುದಿಲ್ಲ. ಆದರೆ ಯೋಚಿಸದೆ ಬೇರೆ ಮಾರ್ಗವಿಲ್ಲ. ದೂರದ ಬೇರೆಯೂರಿನಲ್ಲಿ ಈ ಭಾವನೆಯೆ ಅವಳ ಒಬ್ಬಂಟಿ ಸಂಗಾತಿ.

ಒಳ್ಳೆಯ ಮನೆ, ಒಳ್ಳೆಯ ವರ - ಅಪ್ಪ ಅಮ್ಮ ಪದೇ ಪದೇ ಹೇಳುತ್ತಿದ್ದರು. ಅಪ್ಪ ಹಳ್ಳಿಯಲ್ಲಿ ಜಮೀನು ಮಾಡಿಸುತ್ತಿದ್ದರು. ಒಳ್ಳೆಯ ಮನೆತನ. ನಾಲ್ಕು ಜನ ಅಕ್ಕತಂಗಿಯರಲ್ಲಿ ಅವಳೇ ಚಿಕ್ಕವಳು. ಆಗಲೇ ಗೆಳತಿಯರ ತಮಾಷೆ ಮಾತುಗಳಲ್ಲೇ ಅವಳಿಗೆ ಈ ಚಿತ್ರ ಕಣ್ಣಿಗೆ ಮೂಡುತ್ತಿತ್ತು.

ಹೆಣ್ಣು ಕೊಡೋದಾದರೆ ಹತ್ತು ಜನರಲ್ಲಿ ಒಬ್ಬನಾಗಿ, ಓದಿ ಬರೆದಿರುವ ಕೆಲಸದಲ್ಲಿರುವ ಹುಡುಗನಿಗೆ ಕೊಡಬೇಕೆಂದು ಅಪ್ಪನ ಹಟ. ಹಾಗಾಗಿ ಅಳಿಯನಿಗೆ ಚಿನ್ನದ ಗಡಿಯಾರ ಮತ್ತು ಸೈಕಲ್ ಕೊಡುವುದೆಂದು ನಿಶ್ಚಯಮಾಡಿದ್ದ. ಅಷ್ಟು ಬೇರೆ ಯಾವ ಅಳಿಯನಿಗೂ ಸಿಕ್ಕಿರಲಿಲ್ಲ.

ಚಿನ್ನದ ಗಡಿಯಾರ, ಸೈಕಲ್ಲು, ತೆಗೆದುಕೊಳ್ಳುವುದಕ್ಕೆ ಏರ್ಪಾಟುಮಾಡಿದರು. ಹಳ್ಳಿಗೆ ವರ ಬಂದ. ಹಳ್ಳಿಯಲ್ಲೆಲ್ಲ ಸಡಗರ - ವರ ಬಂದಿದ್ದಾನೆ, ಪಟಾಕಿಯಿಲ್ಲ, ವಾದ್ಯಗಳು ಎಷ್ಟೊಂದು ದೊಡ್ಡವು. ಇದಾದ ಮೇಲೆ ವರನ ರೂಪ ಆಕೃತಿಗಳ ಬಗ್ಗೆ ಟೀಕೆ ಟಿಪ್ಪಣಿಗಳು ಬಂದವು - "ಆಹಾ! ನಮ್ಮ ಹುಡುಗಿಗೆ ಈ ವರ ಹೇಳಿ ಮಾಡಿಸಿದ ಹಾಗಿದ್ದಾನೆ!" ಮದುವೆಗೆ ಮುಂಚೆ ಒಂದು ಸಣ್ಣ ಯುದ್ಧ. ಹಳ್ಳಿಯವರ ಮತ್ತು ಪಟ್ಟಣದವರ ನಡುವೆ ಹೊಡೆದಾಟವಾಗುವ ಪ್ರಸಂಗವೂ ಬಂತು. ಅನೇಕ ಮಂದಿ ಸಿಟ್ಟಿಗೆದ್ದರು. ಎಲ್ಲ ಸಮಾಚಾರಗಳೂ ಅವಳ ತನಕ ಮುಟ್ಟುತ್ತಿತ್ತು. ಗಂಡನ ಮನೆಗೆ ಹೋಗುವಾಗ ಅಪ್ಪನ ಕೈ ಹಿಡಿದು ಅತ್ತಿದ್ದಳು - "ಅಪ್ಪಾ, ನನ್ನನ್ನು

ಎಲ್ಲರಿಗಿಂತ ಒಂದು ಕೈ ಹೆಚ್ಚಾಗಿ ನೋಡಿಕೊಂಡಿರಿ. ಈಗ ನೀರಿಗೆ ಹಾಕಿಬಿಟ್ಟಿರಿ. ಇದೇನಪ್ಪಾ-"

ಇದಾದ ಮೇಲೆ ಬದುಕು ಉರುಳುತ್ತಾ ಹೋಗುತ್ತಿದೆ. ಕಲ್ಪನೆಯ ರಾಜಕುಮಾರ ಹಾಗೂ ಎಲ್ಲ ಆಶೋತ್ತರಗಳ ಮೂರ್ತಿವತ್ತಾಗಿ ಅವಳ ಪಾಲಿಗೆ ಬಂದದ್ದೆಂದರೆ ಈ ನಾಲ್ಕು ಅಡಿ ಒಂಬತ್ತು ಇಂಚಿನ - ಬಲಿದತ್ತ. ಅಭಿಮಾನ ಮೂಡಿಬರುತ್ತದೆ. ಏನಾದರೂ ಆಗಲಿ, ಇವೆಲ್ಲ ಅವಳದೇ ಅಲ್ಲವೆ, ಹೀಗಾಗುವುದಿಲ್ಲವೆ ? ಪ್ರಪಂಚದಲ್ಲಿ ಎಲ್ಲರೂ ಒಂದೇ ರೀತಿ ಇರುತ್ತಾರೆಯೇ ? ಇದೇ ಅವಳ ಐಶ್ವರ್ಯ - ಇದೇ ಹೆಚ್ಚುತ್ತದೆ, ಮನೆ ಕಟ್ಟುತ್ತದೆ, ಹೆಸರು ಸಂಪಾದಿಸುತ್ತದೆ, ಇಷ್ಟರ ಮೇಲೆ ದೇವರ ದಯೆ. ಹಗಲು ರಾತ್ರಿ ಸರೋಜಿನಿ ನಮಸ್ಕಾರ ಮಾಡುತ್ತಾಳೆ. ದಾರಿಯಲ್ಲಿ ಹೆಮ್ಮೆಯಿಂದ ನಡೆಯುತ್ತಾಳೆ. ಗಂಡನನ್ನು ಚೆನ್ನಾಗಿ ನೋಡಿಕೊಳ್ಳುವ ಭರದಲ್ಲಿ ತನ್ನ ಅಕ್ಕನಂತ ಮಮತೆಯಿಂದ ಅವನ ಕಷ್ಟಸುಖ ಅರಿತುಕೊಳ್ಳುತ್ತಾಳೆ. ಆ ಚಿಕ್ಕ ಮನುಷ್ಯನತ್ತ ತನ್ನ ಮುಖವನ್ನು ಬಗ್ಗಿಸಿ ಬಾಳಿನ ನೈವೇದ್ಯವನ್ನು ಸಮರ್ಪಿಸುವಾಗ ತಾಯ್ತನದ ಭಾವವನ್ನು ತಳೆದು ಆನಂದಪಡುತ್ತಾಳೆ.

ಆದರೆ ಎಷ್ಟು ಸುಖದ, ಎಷ್ಟು ಸಂತೋಷದ ಸಾಧನ ಸಾಮಗ್ರಿಗಳಿದ್ದರೂ ಕೆಲವು ವೇಳೆ ಅವಳು ಕೆರಳುತ್ತಾಳೆ. ಮೈಯಲ್ಲಿ ತಲೆಯಲ್ಲಿ ಬೆಂಕಿ ಉರಿಯೇಳುತ್ತದೆ. ದಿನವೆಲ್ಲ ದುಡಿದು ಸಂಜೆಯೆಲ್ಲ ಭವಿಷ್ಯದ ಬಗ್ಗೆ ಮಂಡಿಗೆ ತಿನ್ನುತ್ತಾ ರಾತ್ರಿ ಸುಖವಾಗಿ ಮಲಗಿ ನಿದ್ರಿಸುವ ಬಲಿದತ್ತ ಮಗ್ಗಲು ಹೊರಳುತ್ತಿರುವಾಗ, ಸರೋಜಿನಿ ಸರ್ಪಿಣಿಯಂತೆ ಸೊಂಯ್ ಸೊಂಯ್ ಅಂತ ನಿಟ್ಟುಸಿರುಬಿಡುವಳು, ಚಡಪಡಿಸುವಳು. ಅನೇಕ ಬಾರಿ ಮೇಲೆದ್ದು ಗಲಾಟೆ ಮಾಡುವಳು. ಗಂಡನ ಕಡೆಗೆ ನೋಡುವಾಗ ಅವಳ ಮನಸ್ಸಿನಲ್ಲಿ, ಥಳ್‌ಥಳ್ ಹೊಳೆಯುವ 'ಪತಿಯೆ ಪರಮಗುರು' ಜ್ಯೋತಿಯ ನೆರಳೂ ಇರುವುದಿಲ್ಲ. ನಿರಾಶೆಗೊಂಡು ಉಕ್ಕುತ್ತಿರುವ ಮನಸ್ಸಿನಿಂದ, ನೋವು ತುಂಬಿದ ಕಣ್ಣಿನಿಂದ ಹರಿಯುತ್ತದೆ ವಿಷತುಂಬಿದ ಹಿಂಸಾರ್ದ್ರ ನೋಟ. ಮನಸ್ಸಿನ ಮುಗಿಲುಗಳು ಹುಚ್ಚುಹುಚ್ಚಾಗಿ ಓಡಾಡುತ್ತವೆ. ನಿಧಾನವಾಗಿ ನಿದ್ದೆ ಬರುತ್ತದೆ. ಬೆಳಗ್ಗೆ ಎದ್ದು ಪುನಃ ಮನೆಯ ಕೆಲಸಗಳಲ್ಲಿ ತೊಡಗುತ್ತಾಳೆ.

ರಾಮುಬಾಬುವಿನ ಹೆಂಡತಿಯ ಎಗ್ಗಿಲ್ಲದ ಹಾಸ್ಯ ಕುಹಕ ಮತ್ತೆ ಅವಳ ಭಾವನೆಯನ್ನು ಕೆದಕಿತ್ತು. ಸರೋಜಿನಿ ಒಲೆಯ ಮುಂದೆ ಕುಳಿತಿದ್ದಾಳೆ. ಕಣ್ಣಿನಿಂದ ನಿಧಾನವಾಗಿ ನೀರು ಹರಿಯುತ್ತದೆ. ಜನ ಏಕೆ ಇಷ್ಟು ಒರಟಾಗಿದ್ದಾರೆಂದು ಯೋಚಿಸುತ್ತಾಳೆ. ಇನ್ನೊಬ್ಬರಿಗೆ ನೋವುಂಟು ಮಾಡುವುದರಿಂದ ಅವರಿಗೆ ಏನು ಸಿಗುತ್ತದೆ ? ದೇವರ ಪ್ರಪಂಚದಲ್ಲಿ ಇಷ್ಟೊಂದು ದುಃಖ ಯಾಕೆ ?

ಬದುಕಿನಲ್ಲಿ ಎಂಥ ಜಟಿಲವಾದ ಗಳಿಗೆಯಲ್ಲಿ ಮನಸ್ಸು ದೇವರನ್ನು ನೆನೆಯುತ್ತದೆ, ಅವನಲ್ಲೆ ತಲ್ಲೀನವಾಗುತ್ತದೆ. ಮನೆ ಮಠಗಳ ಕಡೆ, ತವರಿನ ಕಡೆ ನೆನಪು ಓಡುತ್ತದೆ. ಆ ಹೂವಿನ ಕತ್ತಲು ಮಂಟಪದಲ್ಲಿ ಘರದ ಆಸನದ ಮೇಲೆ ಓತ್ತಾಳೆಯ ರಾಧಾಕೃಷ್ಣಮೂರ್ತಿ. ಕೆಳಗೆ ಕೆಂಪು ಬಟ್ಟೆಯ ಮೇಲೆ ಸಾಲಿಗ್ರಾಮವಿದೆ. ಗಂಟೆ ಬಾರಿಸುತ್ತದೆ. ಧೂಪ ಆರತಿಗಳಾಗುತ್ತವೆ. ಬಾಳೆಹಣ್ಣು ಅಥವಾ ಪುರಿಯ ಪ್ರಸಾದಕ್ಕಾಗಿ ಗಂಟೆಯ ಸದ್ದು ಕೇಳುತ್ತಲೇ ಮಕ್ಕಳು ಒಟ್ಟುಗೂಡುತ್ತಾರೆ. ಸಿಂಹಾಸನ

ಕಂಡು ಇರುವೆಗಳು ಮುತ್ತುತ್ತವೆ. ಅಮ್ಮ ಭಕ್ತಿಯಿಂದ ದೀರ್ಘದಂಡ ನಮಸ್ಕಾರ ಮಾಡುತ್ತಾಳೆ. ಅಪ್ಪ ದೊಡ್ಡ ಸ್ವರದಲ್ಲಿ ಕರುಣೆ ಉಕ್ಕುವಂತೆ ಹಾಡುತ್ತಾರೆ. ಸರೋಜಿನಿ ಸುಮ್ಮನೆ ನಿಂತಿರುತ್ತಾಳೆ.

ಕಣ್ಣೀರು ತುಳುಕುತ್ತಿದೆ, ಕಣ್ಣೀರಿನ ಪದರದ ಮೂಲಕ ಒಲೆಯ ಬೆಂಕಿ ಕಾಣುತ್ತದೆ. ದೃಷ್ಟಿ ಮತ್ತೆ ಮನಸ್ಸಿನಾಳಕ್ಕೆ ಮರಳುತ್ತದೆ. ಅದೇ ಪರಿಚಯವಿರುವ ನೋಟ, ಪರಿಚಯವಿರುವ ಶಬ್ದ, ಕೊತಕೊತ ಕುದಿಯುತ್ತಿರುವ ಅನ್ನ, ಪರಿಚಯ ವಿರುವ ಸುವಾಸನೆ, ದೇವರ ಪೀಠದ ಜೊತೆಯಲ್ಲಿ ಬದುಕಿನ ಕಳೆದ ದಿನಗಳು ಕಣ್ಣ ಮುಂದೆ ಮೂಡುತ್ತವೆ - ಅವಳು ಏನಾಗಲು ಹಂಬಲಿಸಿ ಬಯಸಿ ತಯಾರಾಗಿ ಕುಳಿತಿದ್ದಳು, ಆದರೆ ಏನಾಗಲೂ ಸಾಧ್ಯವಾಗಲಿಲ್ಲ. ಮನಸ್ಸಿನಾಳದಲ್ಲಿ ಕುತ್ತಿಗೆ ಬಿಗಿದಂತಿದ್ದ ಅಭಿಮಾನ - ತೋರಿಕೆಯ ಮರೆಯಲ್ಲಿ - ಅದರ ಹಿಂದೆ ಚೂರಾದ ಆಸೆಗಳ ಕನಸು-ಕೆರೆಯ ದಡದಲ್ಲಿ ಹುಣಸೆಮರದ ಕೆಳಗೆ ಒಂದು ರಾಶಿ ಮಡಕೆ ಚೂರುಗಳು ಬಿದ್ದಿರುತ್ತವೆ.

ಯಾರೂ ಇಲ್ಲ, ಎಷ್ಟು ಏಕಾಂತ.

ಒಲೆಯಲ್ಲಿ ಒಂದರ ಮೇಲೊಂದು ಕಟ್ಟಿಗೆಗಳು ಉರಿದು ಉರಿದು ಬೂದಿಯಾಗುತ್ತಿದೆ. ಅಡುಗೆ ಮನೆಯ ಕೆಲಸ ಒಂದಾದ ಮೇಲೊಂದು ತನಗೆ ತಾನ ನಡೆದುಕೊಂಡು ಹೋಗುತ್ತಿದೆ. ಅದೇ ಹಳೆಯ ಯೋಚನೆ. ಒಂದೇ ಪರಿಸ್ಥಿತಿಯಲ್ಲಿ ಒಂದೇ ರೀತಿಯ ಕಳವಳ. ಅದೇ ಭಾವನೆಗಳ ಜಡಿಮಳೆ, ತಮಗೆ ತಾವೇ ಸಾಲುಗಟ್ಟಿ ಬರುತ್ತವೆ, ಹೊರಟುಹೋಗುತ್ತವೆ. ಮನಸ್ಸು ಸ್ತಬ್ಧವಾಗುತ್ತದೆ. ಮತ್ತೆ ವ್ಯವಸ್ಥೆಯಿಂದ ಕೂಡಿದ, ಸ್ವಸ್ಥವಾದ ಭವಿಷ್ಯರೂಪುಗೊಳ್ಳುವತ್ತ ಯೋಚನೆ, ಜೇಡನಂತೆ ತನ್ನ ಹೊಟ್ಟೆಯಿಂದಲೇ ದಾರ ತೆಗೆದು ಬಲೆ ನೇಯುತ್ತಿದ್ದಾಳೆ. ಅವಳು ಅದರಲ್ಲೇ ಮಲಗುತ್ತಾಳೆ, ಮತ್ತೆ ಸುಖದ ಕನಸನ್ನು ಕಾಣುತ್ತಾಳೆ. ಸರೋಜಿನಿ ಅದಕ್ಕೇ ಹೊಂದಿಕೊಳ್ಳುತ್ತಿದ್ದಾಳೆ. ಬದುಕಿನ ಕಟ್ಟುಪಾಡುಗಳು ಹುಟ್ಟಿನಿಂದಲೇ ಎಂಬಂತಿವೆ. ಇದೂ ಬದುಕಿನ ಒಂದು ನಿಯಮ. ಇದರ ಮೇಲೇ ಮೊದಲು ಬೇರಿನಿಂದಲೇ ತನ್ನನ್ನು ತಾನೇ ನೆಲೆಗೊಳಿಸಿಕೊಳ್ಳಬೇಕು.

ಅಡುಗೆ ಮನೆಯಲ್ಲಿ ಕುಳಿತಿದ್ದ ಹಾಗೆ ಅವಳಿಗೆ ತಲೆ ಸುತ್ತುತೊಡಗುತ್ತದೆ. ಕಣ್ಣು ಕೆಳಗಾಗುತ್ತದೆ. ಓ, ಪ್ರತಿ ದಿನ, ಎಷ್ಟು ತಡ, ಅವರು ಯಾವಾಗ ಬರ್ತಾರೋ. ಒಬ್ಬಂಟಿಗಳು! ಎಷ್ಟು ಬಿಕೋ ಅನ್ನುತ್ತಿದೆ.

ಅಡುಗೆ ಕೆಲಸ ಮುಗಿಸಿ ಸರೋಜಿನಿ ಹೊರಗಿನ ಕೋಣೆಗೆ ಬರುತ್ತಾಳೆ. ಪಕ್ಕದ ನೀರೋದ ಬಾಬುಗಳ ಮನೆಯಲ್ಲಿ ಅದೇ ಕಾಲೇಜು ಹುಡುಗ ಪುಸ್ತಕಗಳನ್ನು ಹರಡಿ ಕುಳಿತುಕೊಂಡು ಓದುತ್ತಿದ್ದಾನೆ. ಸರೋಜಿನಿ ಹೊರಗಿನ ರೂಮಿನ ದೀಪ ಹಚ್ಚಿದಳು, ದೀಪದ ಅಗತ್ಯವಿಲ್ಲ. ದೀಪ ಹಾಕಿದರೆ ಅವಳೇ ಹೊರಗಿನವರಿಗೆ ಕಾಣುತ್ತಾಳೆ. ಅದು ಅವಳಿಗೂ ಗೊತ್ತು. ಆದರೂ ತಲೆ ಬಗ್ಗಿಸಿಕೊಂಡು ಹೋಗಿ ಗೋಡೆಯ ಮೇಲಿರುವ ದೀಪದ ಬತ್ತಿಯನ್ನು ಇನ್ನೂ ದೊಡ್ಡದು ಮಾಡೋಣ ಅಂತ ಅವಳಿಗೆ ಅನಿಸಿತು. ಮನಸ್ಸಿನ ಒಳಗೆ ಸೇರಿದ ಯಾವುದೇ ಅವ್ಯಕ್ತವಾದ ಒಂದು ಸಣ್ಣ ಪಾಪ ಭಾವನೆ ಅವಳ ಮೈಯನ್ನು ಬಿಸಿಯಾಗಿಸಿತು. ಅಪರೂಪವಾದ ಭಂಗಿಯೊಂದರಲ್ಲಿ ನಿಂತು

ದೂರದಲ್ಲಿ ದೃಷ್ಟಿ ನೆಟ್ಟಳು. ಆ ಕಡೆಯ ಕೋಣೆಯಲ್ಲಿ ಹಟಾತ್ತಾಗಿ ಪುಸ್ತಕಗಳು ಮುಚ್ಚಿದವು. ಕಾಲೇಜು ಹುಡುಗ ಬತ್ತಿಯನ್ನು ಸಣ್ಣಗೆ ಮಾಡಿದ. ಕಿಟಕಿಯ ಬಳಿ ಸದ್ದಿಲ್ಲದ ಅವನು ಬಂದು ನಿಂತಿರುವುದನ್ನು ನೋಡಿದಳು. ಅವನಿಗೆ ಬೆಳಕು ಬೇಕಾಗಿರಲಿಲ್ಲ. ಆ ಕತ್ತಲೆಯಲ್ಲಿ ಅವನ ಪಾಲಿಗೆ ಬೆಳಕಿತ್ತು.

ವೆಂಕಟರಾವ್ ಬಲಿದತ್ತನ ಸಹೋದ್ಯೋಗಿ ಮತ್ತು ಸ್ನೇಹಿತ. ಬಣ್ಣ ಕಪ್ಪು, ಎತ್ತರದ ನಾಜೂಕಾದ ಮೈಕಟ್ಟು. ನೋಡುವುದಕ್ಕೆ ಆಟಗಾರರ ಮುಖದಂತಿದೆ. ವೆಂಕಟರಾವ್ ಪ್ಯಾಂಟು ಹಾಕುತ್ತಾನೆ. ಯಾವಾಗಲೂ ಹೊರಗೆ ಹೋಗಲು ರೆಡಿಯಾಗಿರುವಂತೆ ಬಟ್ಟೆಬರೆ ಹಾಕಿಕೊಂಡಿರುತ್ತಾನೆ. ಷೂಗಳು ಥಳಥಳ ಹೊಳೆಯುತ್ತಿರುತ್ತವೆ. ತಲೆಯ ನುಣುಪಾದ ಕೂದಲನ್ನು ನೀಟಾಗಿ ಬಾಚಿರುತ್ತಾನೆ. ಮುಖ ಅದೇ ತಾನೆ ತೊಳೆದಂತೆ ನುಣುಪಾಗಿರುತ್ತದೆ. ವ್ಯವಹಾರದಲ್ಲಿ ಸಜ್ಜನಿಕೆ ವಿನಯಗಳಿಂದ ನಡೆದುಕೊಳ್ಳುವುದು ಅವನ ಸಹಜ ಗುಣ. ಬೇರೊಬ್ಬರ ದೃಷ್ಟಿಯಲ್ಲಿ ತನ್ನನ್ನು ನೋಡಿಕೊಂಡು ಹಿತಮಿತವಾಗಿ, ಪ್ರಿಯವಾಗಿ ಮಾತಾಡುವುದು ಅವನ ಸ್ವಭಾವ. ವೆಂಕಟರಾವ್ ಕೆಲಸಕ್ಕೆ ಬಾರದ ಹಾಗೆ ಹರಟೆ ಹೊಡೆಯುತ್ತಿರುವುದನ್ನು ಎಂದೂ ಯಾರೂ ನೋಡಿಲ್ಲ. ಯಾರಿಗೇ ಆಗಲಿ ನೋವುಂಟು ಮಾಡುವುದು ಅವನ ನಿಲುವಿಗೆ ವಿರುದ್ಧ. ನೀಟಾಗಿ ಪ್ಯಾಂಟು ಹಾಕಿಕೊಂಡು ಸ್ವಲ್ಪವೂ ಸಪ್ಪಳ ಬಾರದಂತೆ ನಡೆದುಕೊಂಡು ಹೋಗುವುದನ್ನು ಅವನು ಮೊದಲಿನಿಂದಲೂ ಕಲಿತಿದ್ದಾನೋ ಎಂಬಂತಿದ್ದಾನೆ.

ತನ್ನ ಸಂಸಾರದ ವಿಷಯಗಳನ್ನು ಕುರಿತು ಅವನು ಹೊರಗೆ ಎಂದೂ ಮಾತಾಡುವುದಿಲ್ಲ. ತನ್ನ ವಿಚಾರವೆಂದರೆ ಸುಮ್ಮನಿದ್ದುಬಿಡುತ್ತಾನೆ. ತನ್ನ ಅಭಾವ ಅನಾನುಕೂಲಗಳನ್ನು ಕುರಿತು ಡಂಗುರ ಹೊಡೆಯುತ್ತಾ ಹೋಗುವುದಿಲ್ಲ. ಅವನು ಊಟ ಮಾಡಿಲ್ಲವೆ? ಕಳವಳದಿಂದ ಕೂಡಿದ್ದಾನೆಯೆ? ಮನೆಯಲ್ಲಿ ಏನಾದರೂ ತೊಂದರೆಯಿದೆಯೆ? - ಬೇರೊಬ್ಬರು ಇಂಥ ವಿಚಾರಗಳನ್ನು ಎತ್ತಿದರೆ ವೆಂಕಟ ರಾವ್ ಸುಮ್ಮನೆ ನಕ್ಕುಬಿಡುತ್ತಾನಷ್ಟೆ. ಅವನ ದುಡಿಮೆ ಪ್ರಯತ್ನಗಳಿಗೆ ಕೊನೆಯಿಲ್ಲ. ಮೇಲಿನ ಅಧಿಕಾರಿಗಳ ಮುಂದೆ ಅವನಲ್ಲಿ ದಾಸ್ಯಭಾವ ಯಾವಾಗಲೂ ಉಕ್ಕುತ್ತಿರುತ್ತದೆ. ಅವನ ವ್ಯಕ್ತಿತ್ವದಲ್ಲಿ ಇರುವ ಒಂದು ಕೊರತೆಯಿಂದ ಅವನು ಮುಂದೆ ಬರುವುದಕ್ಕೆ ತಡೆಯಾಗಿದೆ - ಎಷ್ಟು ತಿವಿದರೂ ಅವನು ಎದುರಾಡುವುದಿಲ್ಲ. ಆಕ್ಷೇಪಿಸುವುದಿಲ್ಲ. ಎವರೆಡಿ ಬ್ಯಾಟರಿಯಂತೆ ಅವನು ಯಾವಾಗಲೂ ಸಿದ್ಧ. ಬಾಯಲ್ಲಿ ಯಾವಾಗಲೂ ಒಂದೇ ಮಾತು - "ಯಸ್ ಸರ್!"

ಇಂಥ 'ಯಸ್ ಸರ್'ನ ಮೂರ್ತಿವತ್ತಾಗಿದ್ದು ತನ್ನ ಪಾಡಿಗೆ ತಾನು ಗಲಾಟೆಯಿಲ್ಲದ ಕೆಲಸ ಮಾಡಿಕೊಂಡು ಹೋಗುತ್ತಿರುವ ವೆಂಕಟರಾವ್ ಬಗ್ಗೆ ಬಲಿದತ್ತನ ಮನಸ್ಸಿನಲ್ಲಿ ಗಂಭೀರವಾದ ಆದರ ಭಾವನೆಯಿದೆ. ಏಕೆಂದರೆ ಬಲಿದತ್ತನಿಗೆ ತಾನು ಸಾಧನೆ ಮಾಡುತ್ತಿರುವ, ಆದರೆ ಸಾಧಿಸಲಾಗದಿರುವ ಸುಸಂಸ್ಕೃತವಾದ ಆದರ್ಶ ಅವನಲ್ಲಿ ಕಂಡುಬರುತ್ತದೆ. ವೆಂಕಟರಾವ್ ಮಿತವ್ಯಯಕ್ಕೆ ಇನ್ನೊಂದು ಹೆಸರು.

ಕೆಲಸ ಮುಗಿಸಿಕೊಂಡು ಅವನು ತನ್ನ ಸಣ್ಣದಾದ ಮನೆಯೊಳಕ್ಕೆ ಪ್ರವೇಶಿಸುತ್ತಾನೆ ಅವನ ಅಪ್ಪ-ಅಮ್ಮ, ಮಡದಿ, ತಂಗಿ ಮತ್ತು ತಂಗಿಯ ಗಂಡ ಅದೇ ಮನೆಯಲ್ಲಿದ್ದಾರೆ. ಒಳ ಹೊಕ್ಕು ಬಾಗಿಲು ಹಾಕಿಕೊಂಡುಬಿಡುತ್ತಾನೆ. ಏಕಾಂತದಲ್ಲಿ ತನ್ನ ಬಡ ಸಂಸಾರದ ವಾಸ್ತವ ರೂಪವನ್ನು ತೆರೆದ ಮನಸ್ಸಿನಿಂದ ಆಲಂಗಿಸಿಕೊಂಡು ತನ್ನ ರೂಪವನ್ನು ಬದಲಾಯಿಸಿಕೊಳ್ಳುತ್ತಾನೆ. ಮನೆಯಲ್ಲಿ ಉಡಲು ಟವಲು, ಹೊರಗೆ ಬರುವುದಕ್ಕೆ ಲುಂಗಿ ಇದೆ. ಅಡುಗೆ ತನ್ನ ಕೈಯಲ್ಲೇ ಮಾಡುತ್ತಾನೆ. ಒಂದು ಹೊತ್ತು ದಪ್ಪಕ್ಕಿಯ ಗಂಜಿ, ಇನ್ನೊಂದು ಹೊತ್ತು ಅನ್ನ ಮಜ್ಜಿಗೆ, ಬೇಯಿಸಿದ ಪಲ್ಯ, ಮಜ್ಜಿಗೆಯಿಂದ ವಿಟಾಮಿನ್ ಸಿಗುತ್ತೆ, ಅದೂ ನೀರು ಮಜ್ಜಿಗೆ, ಅರಗಕ್ಕೇನೂ ಕಷ್ಟವಾಗಬಾರದು ಅಂತ. ಹೆಚ್ಚು ಸೌದೆ ಉರಿಸುವುದಿಲ್ಲ. ಒಂದು ಗಂಟೆಯೊಳಗೆಲ್ಲ ಅಲ್ಯೂಮಿನಿಯಂ ಪಾತ್ರೆಗಳಲ್ಲಿ ಅಡುಗೆ ತಯಾರು. ಇನ್ನಾವ ಬೇಡದ ಖರ್ಚೂ ಇಲ್ಲವೇ ಇಲ್ಲ. ರಾತ್ರಿಯಲ್ಲಿ ಹೆಚ್ಚು ಸೀಮೆಎಣ್ಣೆ ಉರಿಸಬೇಕಾಗೋದಿಲ್ಲ. ಅಡುಗೆ ಊಟ ಸಾಯಂಕಾಲಕ್ಕೆ ಮುಗಿದುಹೋಗುತ್ತೆ. ಬೇಕೆಂದರೆ ಇನ್ನೊಂದು ಚಿಕ್ಕ ಡಬರಿಯಲ್ಲಿ ಮಾಡಿದರಾಯಿತು. ಸಾಯಂಕಾಲ ಒಂದೆರಡು ಗಂಟೆ ಎಲ್ಲ ಹಾಲಲ್ಲಿ ಸೇರುತ್ತಾರೆ, ಪೇಪರು ಓದುತ್ತಾರೆ. ಇಷ್ಟು ದೊಡ್ಡ ಸಂಸಾರ ಒಂದೇ ಜಾಗದಲ್ಲಿರಲು ಏನು ತೊಂದರೆಯಾಗುತ್ತಿಲ್ಲ. ಬದಿಯಲ್ಲಿ ಒಂದು ಚಿಕ್ಕ ಕೋಣೆ, ಅರ್ಧ ರಾತ್ರಿಯಾದ ಮೇಲೆ ಅಲ್ಲಿ ಕೆಂಪುಕಾಗದದಿಂದ ಮುಚ್ಚಿರುವ ದೀಪ ಉರಿಯುತ್ತಿರುವುದನ್ನು ನೋಡಿ ಯಾರೂ ಆ ಕೊಠಡಿಯತ್ತ ಹೋಗುವುದಿಲ್ಲ.

ಮನೆಯಲ್ಲಿ 'ಇಕಾನಮಿ ಸ್ಲಿಪ್' ಹೊರಗೆ 'ಯಸ್ ಸರ್' ನಗುನಗುತ್ತಲೆ ವೆಂಕಟರಾವ್ ತನ್ನ ತಾಪತ್ರಯ ಮತ್ತು ಬಡತನಗಳೊಡನೆ ಹೋರಾಡುತ್ತಾ ಜೀವನ ನಡೆಸುತ್ತಿದ್ದಾನೆ. ಬಲಿದತ್ತನ ಮನಸ್ಸು ಅವನನ್ನು ಅನುಕರಿಸಲು ಬಯಸುತ್ತದೆ. "ನೋಡು ಸರೋಜ, ನೋಡು" ಮನೆಯಲ್ಲಿ ಹೇಳುವನು.

ಸರೋಜಿನಿ ನಕ್ಕು ಬಿಡುವಳು.

"ವೆಂಕಟರಾವ್ ಹೆಂಡ್ತೀನ ನೋಡಿಲ್ಲವಾ ? ಎಷ್ಟು ಕಷ್ಟಪಟ್ಟು ಕೆಲಸ ಮಾಡ್ತಾಳೆ. ಆದರೂ ಯಾವಾಗಲೂ ಶುಚಿಯಾಗಿ ಟ್ರಿಮ್ಮಾಗ್ಗಿ ಇರ್ತಾಳೆ. ತಲೆ ಬಾಚಿ ಕೊಂಡಿರ್ತಾಳೆ, ಹೂವು ಮುಡಿದುಕೊಂಡಿರ್ತಾಳೆ."

"ಬಿಡಿ ಬಿಡಿ ವೆಂಕಟರಾವ್ ಹೆಂಡ್ತಿ ವಿಚಾರ. ಒಂದೊಂದು ಸೀರೇನ ಆರೇಳು ವರ್ಷ ಸವರಿಸಿಕೊಂಡು ಉಟ್ಕೋತಾಳೆ. ಪೇಟೆಯಿಂದ ಚೌರಿ ತಂದು ಜಡೆ ಹಾಕ್ಕೋತಾಳೆ. ಹೂವು ಮುಡಿದುಕೊಳ್ಳೊ ಮಾತು ಹೇಳಿದ್ರಲ್ಲಾ ? ಒಪ್ಪಿದೆ. ರಾತ್ರೀಲೆ ಒಣಗಿಹೋಗುತ್ತಲ್ಲ ಅಂತ ಹೆದರಿಕೊಂಡು ಹೂವು ನೀರಲ್ಲಿ ಹಾಕಿದ್ದು ಮತ್ತೆ ಬೆಳಗ್ಗೆ ಮೂಡಕೋತಾಳೆ."

"ಅವಳು ಎಷ್ಟು ಚೆನ್ನಾಗಿ ಹಾಡ್ತಾಳೆ, ನಿಂಗೇನು ಗೊತ್ತು ?-"

"ನಮಗೆ ಆ ತೋರಿಕೆ ಥಳಕು ಎಲ್ಲ ಬರಲ್ಲ. ವೆಂಕಟರಾವ್‌ಗೇ ಹೇಳಬೇಕಿತ್ತು. ನಿಮಗೂ ಅಂಥದೇ ಒಂದು ಹುಡುಗಿ ಹುಡುಕಿ ಕೊಡ್ತಿದ್ದ."

"ಥತ್, ಏನು ಹಾಸ್ಯ ಮಾಡ್ತಾ ಇದ್ದೀಯಾ ? ಬಾಯಲ್ಲಿ ಹೀಳಿದಲೆ ಜಗೀತಾ, ಅಡುಗೆ ಮನೇಲಿ ಸೊಂಟ ಬಗ್ಗಿಸಿ ಬೆಳಗ್ಗೆಯಿಂದ ರಾತ್ರಿಯವರೆಗೆ ಹೋರಾಡುತ್ತಿದ್ದರೆ

ಮುಗಿದುಹೋಯ್ತು ಕೆಲಸವೆಲ್ಲ. ಅದೇ ನೋಡು ಸಂಸಾರ ಮಾಡೋದು ಅಂದ್ರ! ಏನು ಇಂಥ ಅಡುಗೆ ಮನೇಲಿ ನಿನ್ನ ಸೊಂಟ ಬಗ್ಗಿಹೋಯ್ತಾ? ಏನು ಬೆಳ್ಳಿ ಬಂಗಾರದ ತರಕಾರಿ ಬೇಸ್ತೀಯ? ಅಬ್ಬಬ್ಬಾ, ಫಾರಿನ್ನಿಗೆ ಹೋಗಿಬಿಟ್ಟರಂತೂ ನೀನು ಒಂದು ಹಿಡಿ ಎಲೆಯಡಿಕೆ ತುರುಕಿಕೊಂಡು ಥಳಥಳ ಅಂತ ಅಲಂಕಾರ ಮಾಡಿಕೊಂಡು ಪ್ರೊಸೆಷನ್ ಹೊರಟರೆ, ಆಹಾಹಾ! ಜೂ ಗಾರ್ಡನ್ ಪ್ರಾಣಿ ಇದ್ದ ಹಾಗೆ ಕಾಣಿಸ್ತಿ! ಮನೆ ಬಾಗಿಲು ಅಂದ್ರ ಹೇಗೆ ನೋಡ್ಕೋಬೇಕು ಅಂತ-ವೆಂಕಟರಾವ್ ಮನೆಯಿಂದ ಕಲೀಬೇಕು, ಗೊತ್ತಾಯ್ತಾ ಸರೋಜ?"

ಇನ್ನೊಬ್ಬ ಹೆಣ್ಣಿನ ಹೊಗಳಿಕೆಯನ್ನು ತನ್ನ ಹೆಂಡತಿ ಯಾವಾಗಲೂ ಇಷ್ಟ ಪಡೋದಿಲ್ಲ.

ಸರೋಜಿನಿ ಬಹಳ ಕಷ್ಟದಿಂದ ಕಣ್ಣೀರನ್ನು ತಡೆದುಕೊಳ್ಳುತ್ತಾಳೆ.

ಬಲಿರತ್ತ ನಿಟ್ಟುಸಿರುಬಿಡುತ್ತಾನೆ.

ಅದೇ ವೆಂಕಟರಾವ್ ಅವನ ಸ್ನೇಹಿತ. ಕಾಫಿ ಕೊಡುತ್ತಾನೆ, ಇಡ್ಲಿ ತೆಗೆದುಕೊಡುತ್ತಾನೆ. ಕರಡಿ ಅಥವಾ ಗಡಿಯಾರದ ಗುರುತಿನ ಸಿಗರೇಟು, ಆಣೆಗೊಂದು ಪ್ಯಾಕೆಟ್, ತಗೊಳ್ಳಬೇಕಾದರೆ ತಾನೂ ದುಡ್ಡು ಸೇರಿಸಿಕೊಡುತ್ತಾನೆ. ಇಂಥ ಸದ್ದಿಲ್ಲದ ಸ್ನೇಹದಲ್ಲಿ ಸ್ನೇಹಿತರ ನಡುವೆ ಸಂಭಾಷಣೆ ಶುರುವಾಗುತ್ತದೆ. ಚರ್ಚೆ ನಡೆಯುತ್ತದೆ. ಇಬ್ಬರೂ ಒಟ್ಟಿಗೆ ಹಾದಿಯಲ್ಲಿ ನಡೆದುಹೋಗುತ್ತಾರೆ. ಒಬ್ಬ ಎತ್ತರ, ಇನ್ನೊಬ್ಬ ಕುಳ್ಳ. ಆಫೀಸಿನ ಕೆಲಸ ಕಾರ್ಯಗಳೇ ಅವರ ಪಾಲಿಗೆ ಶಾಸ್ತ್ರವಿಚಾರ. ಯಾರು ಏನು ಬರೆದರು, ಏನನ್ನು ಹೇಗೆ ಬರೆಯಬೇಕು, ಯಾವುದು ಎಲ್ಲಿಯವರೆಗೆ ಹೋಯಿತು ಇಂಥವೇ. ಒಮ್ಮೊಮ್ಮೆ ವೆಂಕಟರಾವ್‌ನ ಹಸ್ತ ಸಾಮುದ್ರಿಕದ ಬಗ್ಗೆಯೂ ಚರ್ಚೆ ನಡೆಯುತ್ತಿತ್ತು.

ವೆಂಕಟರಾವ್ ನೋಡುತ್ತಾನೆ. ನೌಕರಿಯ ನಾಲ್ಕು ಗೋಡೆಗಳ ನಡುವೆ ಅವನ ಭಾಗ್ಯ ಸಿಕ್ಕಿಕೊಂಡಿದೆ. ಅವನ ಇಂದಿನ ಮತ್ತು ನಾಳೆಯ ಬದುಕೆಲ್ಲ ಅದರಲ್ಲೇ ಸೀಮಿತಗೊಂಡಿದೆ. ಅದರ ಬಗ್ಗೆ ಅವನಿಗೆ ಯಾವ ವಿರೋಧವೂ ಇಲ್ಲ. ಯಾವ ಚಡಪಡಿಕೆಯೂ ಇಲ್ಲ. ಬದಲಾಗಿ ತನ್ನ ವಸ್ತುನಿಷ್ಠ ದೃಷ್ಟಿಯ ಬಗ್ಗೆ ಅವನು ಗೌರವ ಭಾವನೆಯನ್ನೇ ತಳೆದಿದ್ದಾನೆ. ಆ ಶುದ್ಧ ದೃಷ್ಟಿಯಿಂದಲೇ ಕೆಲಸದಿಂದ ತನಗೆ ಬರುವ ಸಂಬಳ ಮತ್ತು ತನ್ನ ಕುಟುಂಬದೊಡನೆ ಇರುವ ಸಂಬಂಧದ ಸ್ವರೂಪವನ್ನು ಕುರಿತು ಲೆಕ್ಕ ಹಾಕುತ್ತಾನೆ. ಇವತ್ತೆಲ್ಲ ಅಂದರೆ ಐದು ವರ್ಷದ ಮೇಲೆ ಐದು ರೂಪಾಯಿ ಹೆಚ್ಚುತ್ತದೆ. ಹೆಚ್ಚೆಂದರೆ ತನ್ನ ಕುಟುಂಬದ ಯಾವುದೋ ಒಂದು ಭಾಗದ ತೇಪೆ ತಿದ್ದಬಹುದು. ಆಗ ತನ್ನ ಪರಿಸ್ಥಿತಿ ಹೇಗಿರಬಹುದು. ಇಷ್ಟಾದ ಮೇಲೆ ಮತ್ತೆ ಹತ್ತು ವರ್ಷ ಸಂಬಳ ಏರುತ್ತಿದ್ದ ಹಾಗೆಯೇ ಆಗಬಹುದಾದ ಬದಲಾವಣೆಗಳು ಕಣ್ಣ ಮುಂದೆ ಬರುತ್ತವೆ. ವೆಂಕಟರಾವ್ ಲೆಕ್ಕ ಹಾಕಿಬಿಡುತ್ತಾನೆ. ತಾನು ದಾರಿಯಲ್ಲಿ ಹೋಗುತ್ತಿದ್ದಾಗ ತನಗಿಂತಲೂ ಭಾಗ್ಯವಂತರು ಯಾರಾದರೂ ಕಂಡುಬಂದರೆ ಅವನಿಗೆ ದುಃಖವಾಗುವುದಿಲ್ಲ. ಅವನ ನೋಟ ರಸ್ತೆಯನ್ನು ಬಿಟ್ಟು ಫುಟ್‌ಪಾತಿನ ಕಡೆಗೆ ಹೊರಳುತ್ತದೆ. ಅಲ್ಲಿ ನೋಡುತ್ತಾನೆ. ಕೊಳಕರು, ಚಿಂದಿ ಬಟ್ಟೆಯವರು, ಕೂಲಿಗಾರರು, ಲಂಗೋಟಿ ಹಾಕಿರುವ ಭಿಕ್ಷುಕರು, ಕುಂಟರು, ಹೆಳವರು

ಅವರೊಡನೆ ತನ್ನನ್ನು ಹೋಲಿಸಿಕೊಳ್ಳುತ್ತಾನೆ. ತನ್ನ ಅದೃಷ್ಟವನ್ನು ವಂದಿಸುತ್ತಾನೆ. ಸೀಟಿ ಹೊಡೆಯುತ್ತಾ ಮುಂದೆ ಹೆಜ್ಜೆ ಹಾಕುತ್ತಾನೆ.

ಆದರೆ ಅವನ ಒಳಗೆ ಹುದುಗಿರುವ ಸಗ್ಗದ ಆದರ್ಶವಾದ - ವಸ್ತುನಿಷ್ಠವೆನಿಸಿದ ಮನುಷ್ಯನ ಮಂಜಿನ ಭಾರದ ಕೆಳಗಡೆ ಸಿಕ್ಕಿಹಾಕಿಕೊಂಡಿರುವ ಕಾಳಿನ ಹೊಟ್ಟಿನ ಬಿಸಿಯಂತಿದೆ. ಅದಾದರೂ ಪುಸ್ತಕ ಪ್ರಪಂಚದ ಯೋಚನೆಗಳ ಮರೆಯಿಂದ ಹೊರಬರಲು ಚಡಪಡಿಸುತ್ತಿದೆ - ಹಾಸಿಗೆಯ ಒಳಗೆ ಸೇರಿರುವ ಚಿಕ್ಕ ತಿಗಣೆಮರಿಯಂತೆ.

ಅದರ ಉಪಟಳವನ್ನು ಹತ್ತಿಕ್ಕಲೆಂದೆ ವೆಂಕಟರಾವ್ ಹಸ್ತಸಾಮುದ್ರಿಕದ ಪುಸ್ತಕವನ್ನು ಹಿಡಿಯುತ್ತಾನೆ. ಭಾರತೀಯ, ಇಂಗ್ಲಿಷ್, ಫ್ರೆಂಚ್ ಮತ್ತು ಜರ್ಮನ್ ಗ್ರಂಥಗಳ ಅನುವಾದಗಳನ್ನು ಓದುತ್ತಾ, ಚೀರೋವನ್ನು ಆಧಾರವಾಗಿಟ್ಟುಕೊಂಡು ಚಿಕ್ಕ ಭೂತಕನ್ನಡಿಯನ್ನು ಹಿಡಿದು ಪೆನ್ಸಿಲಿನಿಂದ ಕಾಗದದ ಮೇಲೆ ಗೆರೆಗಳನ್ನು ಎಳೆದು ತನ್ನ ಭವಿಷ್ಯದ ದೊಡ್ಡ ಗಾತ್ರದ ಬೀಗದೊಳಗಿರುವ ಬೀಗದ ಕೈಯನ್ನು ತಿರುಗಿಸುವಲ್ಲಿ ತೊಡಗಿರುತ್ತಾನೆ.

ಅವನು ಯೋಚಿಸುತ್ತಾ ನೋಡುತ್ತಿದ್ದಾನೆ.

ಕೈಯಿನ ಗೆರೆಗಳು, ಅದರಂತೆಯೆ ಅದೃಷ್ಟ ಸಹ ಬದಲಾಯಿಸುತ್ತಿರುತ್ತದೆಂದು ಹಸ್ತಸಾಮುದ್ರಿಕ ಶಾಸ್ತ್ರ ಹೇಳುತ್ತದೆ. ಇಚ್ಛಾಶಕ್ತಿ ಮತ್ತು ಕಾರ್ಯಬಲದಿಂದ ಮನುಷ್ಯ ತನ್ನ ಕೈಯಿನ ರೇಖೆಗಳ ಓಟವನ್ನು ಬದಲಾಯಿಸಬಲ್ಲ.

ಅನೇಕ ವೇಳೆ ವೆಂಕಟರಾವ್ ಚಿಕ್ಕ ಭೂತಗನ್ನಡಿಯಲ್ಲಿ ತನ್ನ ಅಂಗೈಯನ್ನು ನೋಡಿಕೊಳ್ಳುತ್ತಾ ಮುಂದಾಗಬಹುದಾದ ಬದಲಾವಣೆಗಳನ್ನು ಕುರಿತು ಯೋಚಿಸುತ್ತಾನೆ. ಮುಖ್ಯ ರೇಖೆ ಮತ್ತು ಮುಖ್ಯ ಗ್ರಹನಕ್ಷತ್ರಗಳನ್ನು ನೋಡಿ ಪ್ರಬಲ ಇಚ್ಛಾಶಕ್ತಿಯನ್ನು ಪ್ರಯೋಗಿಸಿ ಆಳವಾಗಿ ಉಸಿರಾಡುತ್ತಾನೆ - ಭಾಗ್ಯರೇಖೆಯ ಈ ಮುಂದಿನ ತುದಿ ಆ ಮಧ್ಯದ ಬೆರಳಿನ ಬುಡದಲ್ಲಿರುವ ಶನಿಕ್ಷೇತ್ರವನ್ನು ಬಿಟ್ಟು ಎರಡನೆ ಬೆರಳಿನ ಬುಡದಲ್ಲಿರುವ ಬೃಹಸ್ಪತಿಯ ಕ್ಷೇತ್ರದತ್ತ ಇನ್ನೊಂದು ಸ್ವಲ್ಪ ತಿರುಗಿದ್ದರೆ, ಅಂಗೈ ಮಧ್ಯದಲ್ಲಿರುವ ಮಂಗಳ ಕ್ಷೇತ್ರ ಪುಷ್ಕರಿಣಿಯಂತಿದೆ. ಆಹಾ - ಅದೊಂದು ಸ್ವಲ್ಪ ಮೇಲೆ ಉಬ್ಬಿದ್ದರೆ! ಹಾಗಿದ್ದಿದ್ದರೆ ವೆಂಕಟರಾವ್ ಅದೆಲ್ಲಿ ಕುಳಿತಿರುತ್ತಿದ್ದನೋ. ಆ ಮನೆಯ ಎತ್ತರದ ಆಸನ ಅವನಿಗೆ ಅಷ್ಟು ದೂರವಾಗುತ್ತಿರಲಿಲ್ಲ. ಇಚ್ಛಾಶಕ್ತಿ, ಇಚ್ಛಾಶಕ್ತಿ. ಹಾಗೇ ಆಗಲಿ, ಹಾಗೇ ಆಗಲಿ ಹಾಗೇ ಆಗಲಿ.

ಹೊಸ ಮನುಷ್ಯನನ್ನು ನೋಡುತ್ತಲೇ ಅವನ ದೃಷ್ಟಿ ಮೊದಲು ಹೊಸಬನ ಅಂಗೈಯತ್ತ ಹೊರಳುತ್ತದೆ. ತನ್ನದಕ್ಕಿಂತ ಬೇರೆಯಾಗಿರುವ ಕೈಯನ್ನು ಪರೋಕ್ಷವಾಗಿ ನೋಡಿ ಅವರ ಸ್ವಭಾವ, ಗುಣಗಳು ಮತ್ತು ಭವಿಷ್ಯ ಇವೆಲ್ಲವನ್ನು ಒಂದು ಪುಸ್ತಕದಲ್ಲಿ ದಾಖಲು ಮಾಡಿಕೊಳ್ಳುತ್ತಾನೆ. ಅದಕ್ಕೆ ತಕ್ಕಂತೆ ತಾನು ಅವರೊಡನೆ ಸಂಬಂಧಪಟ್ಟುಕೊಳ್ಳುತ್ತಾನೆ.

ಜೊತೆಗಾರರು ಕೈತೋರಿಸಲು ಬರುತ್ತಾರೆ. ವೆಂಕಟರಾವ್ ಅಭ್ಯಾಸ ಮಾಡುತ್ತಾ ನೋಡುತ್ತಾ ತನ್ನ ದಕ್ಷತೆಯನ್ನು ಹೆಚ್ಚಿಸಿಕೊಳ್ಳುತ್ತಾನೆ.

ಆದರೆ ತನ್ನ ಭವಿಷ್ಯವನ್ನು ತೋರಿಸುವ ಕನ್ನಡಿಯ ರೀತಿಯಲ್ಲಿ ಅವನು ವಿದ್ಯೆಗೆ ಬೆಲೆಕಟ್ಟುತ್ತಾನೆ. ದಕ್ಷತೆ ಹೆಚ್ಚಾಗಿರುವ ದಿನ ಬರುತ್ತದೆ. ಹೆಚ್ಚು ಉಜ್ವಲವಾಗಿರುವಂಥ ಅದೃಷ್ಟದ ಸಣ್ಣಸಣ್ಣ ತಿರುವುಗಳು ಕಾಣದೆ ಹೋಗಬಹುದು. ಕಣ್ಣಿನ ಪಟ್ಟಿ ಸರಿದುಹೋಗುತ್ತದೆ. ಆಗ ವೆಂಕಟರಾವ್‌ಗೆ ತಾನೆಲ್ಲಿದ್ದೇನೆಂದು ಅರ್ಥವಾಗುತ್ತದೆ.

ಬಲಿದತ್ತನಿಗೂ ಅವನಿಗೂ ಇಲ್ಲಿಯೇ ಅಭಿಪ್ರಾಯ ಭೇದವಿರುವುದು. ಕುಳ್ಳ ಬಲಿದತ್ತ ವೆಂಕಟರಾವ್‌ನನ್ನು ಕುರಿತು ತುಂಬ ಅಪಹಾಸ್ಯ ಮಾಡುತ್ತಾನೆ. ತನಗೆ ಒಗ್ಗದ ಜಗ್ಗದ ಅಭಿಪ್ರಾಯವುಳ್ಳವರ ಉದ್ದೇಶವನ್ನು ಕುರಿತು ಮನಸಿನಲ್ಲೇ ಗೇಲಿ ಮಾಡುತ್ತಾನೆ. ವೆಂಕಟರಾವ್ ಕೈ ನೋಡುವ ವಿದ್ಯೆಯನ್ನು ಕುರಿತು ಬಲಿದತ್ತ ಯಾರ ದೃಷ್ಟಿಯಿಂದ ನೋಡುತ್ತಾನೆಂದರೆ - ಇಂಥ ಒಂದು ಕೆಲಸ ಎಷ್ಟು ಲಾಭಕರವಾಗಿದೆ, ಇದು ಸುಮ್ಮನೆ ಕತ್ತೆ ಕೆಲಸವೆ ? ದೊಡ್ಡ ದೊಡ್ಡ ಅಧಿಕಾರಿಗಳ, ಅವರ ಮನೆಯವರ ಕೈ ನೋಡುವ ವೆಂಕಟರಾವ್ ಯಾವ ರೀತಿ ತನ್ನ ಏಳಿಗೆಯ ಹಾದಿಯಲ್ಲಿ ಮುಂದುವರಿಯುತ್ತಿದ್ದಾನೆ, ಈ ವಿದ್ಯೆ ಎಷ್ಟು ಉಪಯುಕ್ತವಾಗಿದೆ ಎಂಬುದೇ ಮೊದಲಾಗಿ ಯೋಚಿಸಿ ಅವನು ಕಳವಳಗೊಳ್ಳುತ್ತಾನೆ. ಆದರೆ ಅವನಿಗೆ ಅದರ ಬಗ್ಗೆ ತಿಳವಳಿಕೆಯಿಲ್ಲ. ಪುಸ್ತಕದಲ್ಲಿ ಕಣ್ಣಿಟ್ಟು ಗೆರೆಗಳನ್ನಳೆಯುವುದು, ಗಣಿತದ ಲೆಕ್ಕಾಚಾರಗಳನ್ನು ಹಾಕಿ ಕಂಡುಹಿಡಿಯುವುದು ಬಹಳ ಕಷ್ಟದ ಕೆಲಸ. ತನ್ನ ಈ ವಿದ್ಯೆಯನ್ನು ಬೇರೆಯವರ ಮೂಲಕ ಪ್ರಚಾರಕ್ಕೆ ತರುವಂತೆ ವೆಂಕಟರಾವ್‌ನನ್ನು ಪದೇಪದೇ ಪುಸಲಾಯಿಸುತ್ತಾನೆ - "ಎಷ್ಟು ಹೇಳಿದರೂ ನಿಮಗೆ ತಿಳಿಯೋದಿಲ್ಲ. ಸುಮ್ಮನೆ ಮನೇಲಿ ಮೂಲೇಲಿ ಕೂತಿದ್ದರೆ ಯಾರು ಕೇಳ್ತಾರೆ ಹೇಳಿ ? ಹೊರಗೆ ಹೋಗಿ ಸ್ವಲ್ಪ ಪ್ರಚಾರ ಮಾಡಿ ಸ್ವಾಮಿ. ಎಷ್ಟಾದರೂ ಇದು ಪ್ರಚಾರದ ಯುಗ ತಾನೆ. ಮೇಲಿನವರ ಕೈನೋಡಿ ಭವಿಷ್ಯ ಫಲ ಹೇಳಿ. ಹೇಳ್ತೀರೋ ಇಲ್ಲವೋ ?"

ವೆಂಕಟರಾವ್ ನಕ್ಕುಬಿಡುತ್ತಾನೆ. ಬಲಿದತ್ತನ ಸಣ್ಣಬುದ್ಧಿಯ ಬಗ್ಗೆ ಅವನಲ್ಲಿ ದಯೆ ಮೂಡುತ್ತದೆ. ಯಾರು ಅದೃಷ್ಟದ ವಾಸ್ತವತೆಯನ್ನು ಕಂಡುಕೊಳ್ಳುವುದಿಲ್ಲವೊ, ಅವರು ಮನುಷ್ಯರಲ್ಲ ಅಂತ ಯೋಚಿಸುತ್ತಾನೆ.

ಸಾಯಂಕಾಲ ಅವನು ಪುನಃ ಹೋಗಿ ವೆಂಕಟರಾವ್‌ನನ್ನು ಹಿಡಿದ.

"ನಾಳೆ ಸ್ವಲ್ಪ ತೊಂದರೆ ತೂಗೊಳ್ತೀರಾ ವೆಂಕಟರಾವ್. ನೀವು ಹೇಳ್ತಾ ಇದ್ರಲ್ಲಾ-ಸಮಯ ಹತ್ತಿರ ಬರ್ತಿದೆ - ಪುಸ್ತಕಾನೂ ನೋಡುವಿರಂತೆ."

"ಸರಿ."

"ಈ ಬಾರಿ ನಿಮ್ಮ ಲೆಕ್ಕಾಚಾರ ಎಷ್ಟು ನಿಜ ಅಂತ ಪತ್ತೆಯಾಗುತ್ತೆ"

ಈ ಮಾತನ್ನು ವೆಂಕಟರಾವ್ ಅನೇಕ ಬಾರಿ ಕೇಳಿದ್ದಾನೆ. ಸುಮ್ಮನೆ ನಕ್ಕುಬಿಟ್ಟ.

ಒಂದು ಚಿಕ್ಕ ನಿರ್ಮಲವಾದ, ಅಚ್ಚುಕಟ್ಟಾದ ಮನೆಯ ಒಳಗೆ ಸಾಯಂಕಾಲದ ದೀಪ ಉರಿಯುತ್ತಿದೆ. ಬಾಗಿಲು ಹಾರಾಹೊಡೆದಿದೆ. ತೆರೆದ ಕಿಟಕಿ ಬಾಗಿಲುಗಳಿಂದ ಹೊರಟ ಬೆಳಕು ಹೊರಗಿನ ಕತ್ತಲೆಯ ಜೊತೆ ಸೆಣಸಾಡಲು ಹೊರಟಂತಿದೆ. ಅದರೊಡನೆಯೆ ಅನೇಕ ಕಂಠಗಳು ಎತ್ತರದ ಸ್ವರದಲ್ಲಿ ಹಾ-ಹೋ ಎಂದು ತಮಾಷೆ ಗದ್ದಲ

ಮಾಡುತ್ತಿವೆ. ಎದುರಿನ ರಸ್ತೆಯ ಜನಸಂದಣಿಯಲ್ಲಿ ಪಟ್ಟಣದ ವಾತಾವರಣದ ವಾಸನೆಯ ಜೊತೆಗೆ ಅಕ್ಕಪಕ್ಕದ ಮನೆಗಳಿಂದ ಸ್ವಲ್ಪಸ್ವಲ್ಪವಾಗಿ ಹರಡುತ್ತಿರುವ ಹೂವಿನ ಸುವಾಸನೆ, ಸಂಪಿಗೆಯ ಉದುರಿದ ಎಸಳುಗಳು, ಗೋರಂಟಿಯ ಮಾದಕ ಕಂಪು ಸೇರಿಹೋಗುತ್ತಿದೆ. ಅದೇ ಸಣ್ಣ ಕೋಣೆಯ ಗೋಡೆಯ ಬಳಿ. ಅಗಲವಾದ ರಸ್ತೆಯ ಮೇಲೆ ವಾಹನಗಳ ಮತ್ತು ಕಾಲ್ನಡಿಗೆಯವರ ಮೆರವಣಿಗೆ ಹೊರಟಿರುತ್ತದೆ. ಇನ್ನೊಂದು ಕಡೆ ದೊಡ್ಡದಾದ ಎರಡಂತಸ್ತಿನ ಕಟ್ಟಡ. ರಾಜಕಾರಣಿ ವಕೀಲ ಬಾಬುಗಳ ಮನೆ. ಮೇಲೆ ನೇತಾಡುತ್ತಿರುವ ತಡಿಕೆಯ ಹಿಂದೆ ಯಾರೋ ಒಬ್ಬ ಹುಡುಗಿ ತನ್ನ ಗಂಟಲು ಸರಿಮಾಡಿಕೊಳ್ಳುತ್ತಿದ್ದಾಳೆ. ಕೆಳಗೆ ಜಾತ್ರೆಯಂತೆ ಜನ ಸೇರಿದ್ದಾರೆ. ಯಾರೋ ಆಡ್ತಾಡುತ್ತಿದ್ದಾರೆ. ಯಾರೋ ಕುಳಿತಿದ್ದಾರೆ. ಯಾರೋ ಕಳವಳದಿಂದ ಪದೇ ಪದೇ ಬಾಗಿಲಿನ ಕಡೆ ನೋಡುತ್ತಿದ್ದಾರೆ. ಒಳಗೆ ವಿದ್ಯುದ್ದೀಪದ ಬೆಳಕಿನಲ್ಲಿ ಗಂಭೀರವಾಗಿ ಮನೆಯ ಮಾಲಿಕ ಎರಡು ಮೂರು ಜನಗಳ ಜೊತೆಯಲ್ಲಿ ಕುಳಿತಿದ್ದಾನೆ. ಕೇವಲ ತಲೆಗಳು ಅಲ್ಲಾಡುತ್ತಿರುವುದರಿಂದಲೇ ಏನೋ ಚರ್ಚೆ ನಡೆಯುತ್ತಿದೆಯೆಂದು ತೋರುತ್ತದೆ. ಬೆಳಕಿನಿಂದ ಹೊಳೆಯುತ್ತಿರುವ ಚಿಕ್ಕ ಕೊಠಡಿಗಂತೂ ಈ ಪರಿಸ್ಥಿತಿ ಬಗ್ಗೆ ಖಂಡಿತವಾಗಿ ಸ್ವಲ್ಪವೂ ಅರಿವಿಲ್ಲ. ಅದು ತನ್ನ ಅಸ್ತಿತ್ವವನ್ನು ತನ್ನದೇ ಆದ ದನಿಯಲ್ಲಿ ಸಾರಿ ಹೇಳುತ್ತಿದೆ.

ಈ ದಾರಿಯಲ್ಲಿ ಹಾದುಹೋಗುತ್ತಿರುವ ಬಲಿದತ್ತ ಸ್ವಲ್ಪ ಗಲಿಬಿಲಿಗೊಂಡ. ಪರಿಚಯವಿರುವ ಮನೆ. ಈ ಮನೆಯಲ್ಲಿ ಅವನ ಸಹೋದ್ಯೋಗಿ ಬನಬಿಹಾರಿ ಪಟ್ನನಾಯಕ ಇದ್ದಾನೆ. ಸಹೋದ್ಯೋಗಿಗಳೇನೂ ಅನೇಕ ಮಂದಿ ಇರುತ್ತಾರೆ. ಬೇರೆ ಬೇರೆ ರಸ್ತೆಗಳಲ್ಲಿ ಬೀದಿಗಳಲ್ಲಿ ಇರುತ್ತಾರೆ. ಪ್ರತಿಯೊಬ್ಬರ ಮನೆಯ ಮುಂದೂ ನಿಂತುಹೋಗುವುದೆಂದರೆ ರಾತ್ರಿ ಹೊರಟವನು ಬೆಳಗ್ಗೆಯೆ ಮನೆ ತಲುಪುವುದು. ಬಲಿದತ್ತನಾದರೂ ಲೆಕ್ಕಾಚಾರದ ಮನುಷ್ಯ. ಉದ್ದೇಶವಿಲ್ಲದೆ ಸಮಯ ಹಾಳು ಮಾಡುವುದನ್ನು ಅವನು ಇಷ್ಟಪಡುವುದಿಲ್ಲ.

ಆದರೆ ಅಲ್ಲಿಯ ಮಾತು ಬೇರೆ. ಬನಬಿಹಾರಿಯ ಮನೆಯನ್ನು ಹಾದುಹೋಗ ಬೇಕಾದಾಗ ದಾರಿಹೋಕನ ನಾಗರಿಕ ಮನಸ್ಸು ಏಟುತಿಂದಂತಾಗಿ ತಕ್ಷಣ ಅವನು ಹಳ್ಳಿಯವನಾಗುತ್ತಾನೆ. ಬದುಕಿನಲ್ಲಿ ಕಳೆದ ಸರಳ ಸ್ವಾಭಾವಿಕ ವಿಚಾರಗಳನ್ನು ಅವನು ಹೊಸ ದೃಷ್ಟಿಯಿಂದ ಹೊಸ ಮೌಲ್ಯಗಳನ್ನಿತ್ತು ನೋಡುತ್ತಾನೆ. ಎರಡು ಹೆಜ್ಜೆ ಮುಂದುವರೆಯಲು ಮರೆಯುತ್ತಾನೆ. ನಗುವಿನ ಅಲೆಗಳು ಏಳುತ್ತವೆ, ಬೀಳುತ್ತವೆ, ಆ ಏಳುಬೀಳುಗಳಲ್ಲೆ ಹರಿದುಕೊಂಡು ಹೋದಂತೆ ಬಲಿದತ್ತ ಒಳಕ್ಕೆ ನುಗ್ಗಿದ. ಸಮಯದ ಪರಿಜ್ಞಾನ ಹಾಗೂ ಸ್ವಾರ್ಥ ನಿಸ್ವಾರ್ಥಗಳ ವ್ಯತ್ಯಾಸವನ್ನು ಕುರಿತಂತೆ ತನ್ನ ಜಬರದಸ್ತಾದ ಅಭಿಪ್ರಾಯವನ್ನು ಮರೆತು ತನ್ನ ಮೋರೆಯನ್ನು ಅಸ್ವಾಭಾವಿಕವಾಗಿ ಮಾಡಿಕೊಂಡು ಒಳಕ್ಕೆ ನಡೆದ ಒಳಗೆ, ಇನ್ನೂ ಒಳಗೆ. ಪ್ರಕೃತಿ ಮತ್ತು ಪರಿಸ್ಥಿತಿ ಎರಡಕ್ಕೂ ಅವನ ಬಗ್ಗೆ ಅನುಕಂಪ ಮೂಡಿರಬಹುದೇನೂ - ಆಹಾ, ಬಡಪಾಯಿ ಯಂತ್ರ ಜೀವವೆ, ಈ ಹೊತ್ತಾದರೂ ಸಹಜವಾಗಿರು. ಬಾಗಿಲಲ್ಲಿ ಕುಳಿತಿದ್ದ ಕರಿನಾಯಿ ಮರಿಗೂ ಈ ಅನುಕಂಪದ ಸುಳಿವು ಸಿಕ್ಕಿದೆಯೇನೋ ಎಂಬಂತೆ ಅದು ಬೌಬೌ ಅನ್ನಲಿಲ್ಲ. ಬದಲಾಗಿ ಬಾಲ ಅಲ್ಲಾಡಿಸುತ್ತಿದೆ. ಒಳಗಿನಿಂದ

ಬನುವಿನ ಮಧುರವಾದ ಕಂಠ ಕೇಳಿಬರುತ್ತದೆ.

"ಹಲೋ ಮಿಸ್ಟರ್ ದಾಸ್, ಅದೆಷ್ಟು ದಿನಗಳಾದ ಮೇಲೆ -ಏ ಟುನ್ನು, ಇನ್ನೊಂದು ಲೋಟ ಚಹಾ ತೊಗೊಂಡು ಬಾ. ಬಾರಯ್ಯ ಎಳೀ ಬಿಡೀನ."

ಮೇಜಿನ ಬಳಿ ಕುಳಿತುಕೊಂಡಿದ್ದ ಸಂಟೂ ಬಾಬಾ ಗಂಭೀರವಾಗಿ ಹೇಳಿದರು - "ಏನಯ್ಯ, ಏನ್ಸಮಾಚಾರ ?" ಬನು ಮುಖ ತೀಡಿಕೊಂಡು ನಾಟಕೀಯ ಭಂಗಿಯಲ್ಲಿ ಹೇಳಿದ. "ಆಹಾ, ಮುಖ ಒಣಗಿ ಕಪ್ಪಾಗಿಹೋಗಿದೆ. ಆಫೀಸಿನಲ್ಲಿ ಸಾಹೇಬರು ಹೊಡೆದರೇನಯ್ಯಾ ? ಅಯ್ಯೋ ಪೆದ್ದುಮುಂಡೇದೆ, ಇಲ್ಲಿಗೆ ಬಂದಮೇಲೆ ಚೆನ್ನಾಗಿ ನಗಬೇಕು, ಗೊತ್ತಿಲ್ಲ ನಿನಗೆ ? ನಿನ್ನ ಗ್ರಹಚಾರ ನೆಟ್ಟಗಿದೆ ಅಂದ್ರೆ ಚೆನ್ನಾಗಿ ನಗು, ಇಲ್ಲ ಅಂದ್ರೆ ನೋಡು" ಕುತ್ತಿಗೆಯ ಪಟ್ಟಿ ಹಿಡಿದುಕೊಳ್ಳುತ್ತಾನೆ. ಬಲಿದತ್ತ ಚೀರುತ್ತಾನೆ. - "ಅಯ್ಯೋ ಬಿಡಪ್ಪ, ಹರಿದು ಹೋಗತ್ತೆ - ಅಬ್ಬಾ! ಎಷ್ಟೊಂದು ನೋವಾಗ್ತಾ ಇದೆ."

"ಇನ್ನೇನು ಮಲ್ಲಿಗೆ ಹೂವಿನಂತೆ ಮೆಲ್ಲಗೆ ಸವರ್ತೀನಿ ಅಂದುಕೊಂಡ್ಯಾ. ಏನ್ಸಮಾಚಾರ, ನಗದೆ ಇದ್ರೆ ಸುಮ್ನನೆ ಬಿಡಲ್ಲ ನೋಡು" ಬಲಿದತ್ತ ಬಲವಂತವಾಗಿ ಬೇರೆ ದಾರಿಯಿಲ್ಲದೆ ನಗುತ್ತಾನೆ. ಎಂದೂ ನಗದ ಮನುಷ್ಯ ಸಪ್ಪೆಮೋರೆಯನ್ನು ಹಿಗ್ಗಿಸಿ ತುಟಿಯಗಲಿಸಿ ನಗುವಿನ ಕಳೇಬರ ಹೇಗಿರುತ್ತೆ ಅಂತ ತೋರಿಸುತ್ತಿದ್ದಾನೆ. ಅದನ್ನು ನೋಡಿ ಎಲ್ಲರೂ ಜೋರಾಗಿ ನಗುತ್ತಾರೆ. ಆದರೂ ಬನು ಅವನನ್ನು ಸುಮ್ಮನೆ ಬಿಡುವುದಿಲ್ಲ. "ಆಹಾಹಾಹಾ - ನಗೋದು ಅಂದ್ರೆ ಇದೇನಾ ? ಆ ಬಡಪಾಯಿ ನಮ್ಮ ಅತ್ತಿಗೆ ಹೆದರಿಕೊಂಡು ಕಿಟಾರ್ ಅಂತ ಕಿರುಚಿಕೊಳ್ಳೋದಿಲ್ವಾ ?"

"ಏ ಬಿಡೋ, - ತಲೆ ಹರಟೆ-"

"ಸರಿ ಹಾಗಾದ್ರೆ ಕೂತ್ಕೊ. ಈಗ ಬಿಸಿ ಬಿಸಿ ಚಹಾ ಹೀರು. ಹಾಗೇ ಈ ಎರಡು ಗರಂಗರಂ ಕಾಳನ್ನು ಬಾಯಲ್ಲಿ ಹಾಕ್ಕೊಳ್ತಾ ಮಧ್ಯೆ ಮಧ್ಯೆ ನಗ್ತಾ ಇರು. ಮೆಲ್ಲಗೆ ಒಂದು ಏಟು ಹಾಕಿ ಬನು ಅವನನ್ನು ಕೂಡಿಸಿಕೊಂಡ. ಬಾಯಲ್ಲಿ ಗರಂಗರಂ ಕಾಳು, ಗಂಟಲಲ್ಲಿ ಬಿಸಿಬಿಸಿ ಚಹಾ, ಬಲಿದತ್ತನಿಗೆ ಮನೆ ವಾತಾವರಣ ಅನಿಸಿತು. ಸಂಕೋಚ ಕಡಮೆಯಾಗಿ ಮಾತಾಡುವ ಬಯಕೆ ಉತ್ಸಾಹ ಹೆಚ್ಚಾಯಿತು. ಹೇಳಿದ - "ನೋಡು ಬನು, ನೀನು ಹತ್ತಿರ ಬಂದ್ರೆ ನನಗೆ ನಿನ್ನ ನಾಯಿಯ ನೆನಪಾಗುತ್ತೆ ನೋಡು. ಅದೂ ಎರಡು ಕೈಗಳನ್ನು ಮೇಲೆತ್ತಿ ನಿಂತುಕೊಂಡು ಸಲಾಮು ಹೊಡೆಯುತ್ತ ನಾಲಿಗೆಯಿಂದ ನೆಕ್ಕಿ ಮುದ್ದುಮಾಡುತ್ತೆ. ನಿನ್ನ ಪ್ರೀತೀನೂ ಹಾಗೇ ನೋಡು, ಬನು - ವನು - ವಾನರ."

"ಆಹಾ, ಬಿಟ್ಟಬಾಯಿ ದೊಡ್ಡ ಮನುಷ್ಯ, ಆದರ ಕೋತಿ ಮತ್ತು ನಾಯಿ ಸಮಾಚಾರ ಒಂದೇ ಅಲ್ಲವಲ್ಲ."

"ಆಮೇಲೆ ಬಲಿದತ್ತ", ಸಂಟೂ ಬಾಬೂ ಕೇಳಿದರು, "ಎಲ್ಲ ಹೇಗೆ ನಡೀತಾ ಇದ ?"

"ಏನು ನಡೆಯೋದು ಸಂಟೂದಾ, ಸಂಸಾರ ತಾಪತ್ರಯ ಅನ್ನೋದು ಇದ್ದೇ ಇರುತ್ತಲ್ಲ."

"ಸಂಸಾರ ತಾಪತ್ರಯ ? ನಿನಗೆಂಥಾ ತಾಪತ್ರಯ! ಲೋ ಬನು ? ಅಯ್ಯೋ

ದೇವರೇ.” ಈಗ ಸಂಟೂರಾ ಕೇಳುವುದಕ್ಕೆ ಸಿದ್ಧ, ಆಗಂತುಕರ ಮಾತನ್ನೇ ತಿರುಗಿಸಿ ಒಂದು ಸರಸವಾದ ಪ್ರಶ್ನೆ ಕೇಳಿ ಅವರು ಸುಮ್ಮನೆ ಕೂತುಬಿಡುತ್ತಾರೆ. ನಗುತ್ತಿರುವ ಕಣ್ಣುಗಳು ನಗುತ್ತಲೆ ಇರುತ್ತವೆ. ತುಟಿಗಳ ಅಂಚಿನಲ್ಲಿ ಎಂದಿನ ಮೆಲುನಗೆಯು. ಇನ್ನೇನೂ ವಿಶೇಷವಿಲ್ಲ.

ವರ್ಷವನ್ನು ಹಿಂದೆ ತಳ್ಳುತ್ತಾ ಮತ್ತೊಂದು ವರ್ಷ ಕಾಲಿಡುತ್ತದೆ. ಭೂಮಿ ಬದಲಾಯಿಸುತ್ತದೆ. ಮನುಷ್ಯನ ನುಣುಪಾದ ಕೂದಲು ಜಡೆಗಟ್ಟಿ ನಿಲ್ಲುತ್ತದೆ. ಕಿವಿಗಳಲ್ಲಿ ಕೊಳೆಗಟ್ಟುತ್ತದೆ. ಆದರೆ ಸಂಟೂರಾ ಸಾಯಂಕಾಲವಾದ ಕೂಡಲೆ ಪ್ರತಿನಿತ್ಯ ಬನುವಿನ ಕೋಣೆಯಲ್ಲಿ ಮೇಜಿನ ಬಳಿ ಬಂದು ಕೂಡುತ್ತಾರೆ. ಸಂಯಮ ದಿಂದ ಕೂಡಿದ, ಗಂಭೀರ ನಿಲುವಿನ, ಶಾಂತಮುಖದ ಮನುಷ್ಯ. ಹೊಳೆಯುತ್ತಿರುವ ಅರ್ಧ ಬೋಳುತಲೆ ಹಣೆಯನ್ನು ಇನ್ನೂ ಅಗಲವಾಗಿಸಿದೆ. ಕೆಂಪು ಬಣ್ಣದ ಸುಂದರವಾದ ಮುಖ.

ಸಂಟೂರಾ ಬನುವಿನ ಕೋಣೆಗೆ ತಕ್ಕಂತೆ ಇದ್ದಾರೆ.

ಅವರನ್ನು ನೋಡುತ್ತಾ ಇದ್ದರೂ ಓಡುತ್ತಿರುವ ಪ್ರಪಂಚದ ಲೆಕ್ಕಾಚಾರಗಳ ತಕ್ಕಡಿ ಕೈಯಿಂದ ನುಣುಚಿಕೊಂಡು ಬೀಳುತ್ತದೆ.

ಎಲ್ಲರ ಪರಿಚಯವೂ ಅವರಿಗಿದೆ. ಆದರೆ ಬಹುಶಃ ಅವರ ಪರಿಚಯ ಯಾರಿಗೂ ಇಲ್ಲ. ಎಲ್ಲರ ಪಾಲಿಗೂ ಅವರು ಕೇವಲ ಬನುವಿನ ಕೋಣೆಯಲ್ಲಿರುವ ಮೇಜಿನ ಮುಂದೆ ಕೂಡುವ ಸಂಟೂರಾ ಅಷ್ಟೆ.

ಅವರ ಬಗ್ಗೆ ಸ್ಥೂಲವಾಗಿ ಕೆಲವು ವಿಚಾರಗಳನ್ನು ಎಲ್ಲರೂ ಬಲ್ಲರು. ಬನುವಿನ ಮಾತಿನಿಂದ, ಅವರ ನಡೆನುಡಿಗಳಿಂದ ಅಷ್ಟು ಪರಿಚಯ ಸಿಕ್ಕಿದೆ. ಅವರು ಕಂಟ್ರಾಕ್ಟ್ ಮಾಡುತ್ತಾರೆ, ಮನೆಯಲ್ಲಿ ಅಷ್ಟೇನೂ ಅನುಕೂಲವಿಲ್ಲದಿದ್ದರೂ ತೊಂದರೆ ತಾಪತ್ರಯವೇನೂ ಇಲ್ಲ ಅಂತ ಬನು ಹೇಳುತ್ತಾನೆ. ಡಾರ್ಜಿಲಿಂಗ್‌ನಲ್ಲೂ ಅವರಿಗೆ ಮನೆ, ಬಿಸಿನೆಸ್ ಇದೆಯಂತೆ. ಅವರು ತುಂಬ ವಿಚಿತ್ರ ವ್ಯಕ್ತಿ. ಹಾಗೇ ಮೆಲ್ಲಗೆ ಹೋಗಿ ಉತ್ತರ ಏಷ್ಯ, ಯೂರೋಪಿನ ಅನೇಕೆಡೆಗಳಲ್ಲಿ ಪ್ರವಾಸ ಮಾಡಿಕೊಂಡು ಬಂದಿದ್ದಾರೆ ಅಂತ ಅವನು ಹೇಳುತ್ತಾನೆ. ಹಿಮಾಲಯದ ಆ ಬದಿಯಲ್ಲಿರುವ ಅಪಾಯಕಾರಿ ಪ್ರದೇಶಗಳಲ್ಲಿ ಅವರು ಗೂಢಚಾರಿ ಕೆಲಸವನ್ನು ಮಾಡಿದ್ದಾರಂತೆ. ತುಂಬ ಸಾಹಸದ ಜೀವನವನ್ನು ನಡೆಸಿದ್ದಾರಂತೆ, ಬಂದೂಕು ಹಾರಿಸುವುದರಲ್ಲೂ ಕೈ ಚೆನ್ನಾಗಿ ಪಳಗಿದೆಯಂತೆ. ಅವರು ತಾವೇ ಅನೇಕ ಮಂದಿ ಸಂಚುಗಾರರನ್ನು ಮುಗಿಸಿದ್ದಾರಂತೆ. ಇಷ್ಟೇ ಅಲ್ಲದೆ ತಾಂತ್ರಿಕ, ಅಲೌಕಿಕ ಶಕ್ತಿಗಳು ಇತ್ಯಾದಿ ಇತ್ಯಾದಿ, ಇನ್ನೂ ಏನೇನು ಸಂಪಾದಿಸಿದ್ದಾರೊ ಗೊತ್ತಿಲ್ಲ.

ಅಂದಹಾಗೆ ಬನು ಹಗಲುರಾತ್ರಿ ಪತ್ತೇದಾರಿ ಕಾದಂಬರಿಗಳನ್ನು ಓದುತ್ತಾ ಇರುತ್ತಾನೆ. ಅನೇಕ ವಿಚಾರಗಳಲ್ಲಿ ಅವನಿಗೆ ಮೊದಲಿನಿಂದಲೂ ಅದ್ಭುತವಾದ ಅನುಭವವಿದೆ. ಅವನು ಹೀಗೆಲ್ಲಾ ಹೇಳುತ್ತಿರುತ್ತಾನೆ - ಆಸ್ಟ್ರೇಲಿಯದಲ್ಲಿ ಭೂಮಿಯ ಒಳಗಡೆ ಮರದಲ್ಲಿ ಬಿಡುವ ಒಂದು ಜಾತಿಯ ಹೂವಿದೆ, ಮಳೆಗಾಲದ ಮೊದಲ ಗರ್ಜನೆ ಕೇಳಿದ ಕೂಡಲೇ ಮಣ್ಣು ಒಡೆಯುತ್ತದೆ, ಮಣ್ಣಿನ ಮೇಲೆ ಆ ಒಂದೇ ಒಂದು ಹೂವು ಅರಳಿ ನಿಲ್ಲುತ್ತದಂತೆ. ಇದಕ್ಕಾಗಿ ಅವನ ಅನೇಕ ಮಂದಿ ಸ್ನೇಹಿತರು

ಅವನನ್ನು 'ಭೂಮಿ ಬೊಬ್ಬೆ' ಅಂತ ಹಾಸ್ಯ ಮಾಡುತ್ತಾರೆ. ಅಲ್ಲದೆ ಅವನ ಮಾತಿಗೆ ಶೇ. 75 ರಷ್ಟು ಮಾರ್ಜಿನ್ ಬಿಡಿ ಅಂತ ಹೇಳುತ್ತಾರೆ. ಆದರೆ ಸಂಟೂದಾ ಅವರ ನಡೆನುಡಿಗಳಿಂದ, ರೀತಿನೀತಿಗಳಿಂದ ಅವರ ಉದಾರವಾದ ಸ್ವಭಾವ, ಗಂಭೀರವಾದ ಜ್ಞಾನ, ಮನಮುಟ್ಟುವ ದಾರ್ಶನಿಕತೆ, ಮಾನವೀಯ ಸಂಬಂಧಗಳ ಬಗ್ಗೆ ಅವರಿಗಿರುವ ಕಾಳಜಿ ಎಲ್ಲವನ್ನೂ ಚೆನ್ನಾಗಿ ಅಂದಾಜು ಮಾಡಬಹುದು. ಮುಖ ನೋಡಿಯೆ ಏನೂ ತಿಳಿದುಕೊಳ್ಳುವ ಹಾಗಿಲ್ಲ. ನೋಟ ಸೂಜಿಯ ಮೊನೆಯಂತೆ ಬೇರೆಯವರ ಕಣ್ಣು ಮುಖಗಳನ್ನು ತಿವಿಯುವಂತಿರುತ್ತದೆ. ಚರ್ಚೆಗೆ ಕುಳಿತರೆ ಅವರದೇ ಕಡೆಯ ಮಾತು ಅನಿಸುತ್ತದೆ. ಯಾರೂ ಮತ್ತೆ ಸೊಲ್ಲೆತ್ತುವ ಹಾಗಿಲ್ಲ. ಪ್ರಪಂಚದಲ್ಲಿ ಸಿಗುವುದೆಲ್ಲವನ್ನೂ ಜುಜುಬಿ ಅಂತ ತಿಳಿದುಕೊಂಡು ಒಂದು ರೀತಿಯ ಮೇಲ್ಮಟ್ಟದ ಅದೃಷ್ಟವಾದದ ತೆಕ್ಕೆಗೆ ಬಿದ್ದ ಅವರು ವಿಶಿಷ್ಟವಾಗಿ ಕಾಣುತ್ತಾರೆ. ನೀಳವಾಗಿ ಉಸಿರೆಳೆದುಕೊಂಡು 'ಎಲ್ಲ ಭಗವಂತನ ಇಚ್ಛೆ' ಅನ್ನುವ ಅವರ ಮಾತಿನ ಭಂಗಿಯಲ್ಲಿ, ವ್ಯಕ್ತಿತ್ವದ ಹೊಮ್ಮಿನಲ್ಲಿ ಭೂಮಿ ಹಠಾತ್ತಾಗಿ ಉರಿದೆದ್ದಂತಾಗಿ ಒಮ್ಮೆ ಸುತ್ತಿ ಮತ್ತೆ ಕಣ್ಮರೆಯಾದ ಹಾಗೆ ಕಂಡುಬರುತ್ತದೆ. ಆ ಕೂಡಲೆ ಅವರು ಇನ್ನೂ ಹತ್ತಿರದವರಾಗಿ ಎಂದಿನಂತೆ ನಗೆ ಬೀರುತ್ತಾ ಕಾಣಿಸಿಕೊಳ್ಳುತ್ತಾರೆ.

ಅವರು ಒರಿಯಾ ಭಾಷೆ ಮಾತಾಡುತ್ತಾರೆ, ಬಂಗಾಳಿ ಮಾತಾಡುತ್ತಾರೆ. ಬಂಗಾಳಿ ಮಾತಾಡಿದರೂ ಅವರ ಮಾನವೀಯತೆ ಅವರಿಗೆ ತಡೆಯುಂಟು ಮಾಡುವುದಿಲ್ಲ. ಅಂಥ ಜನ ಸುಲಭವಾಗಿ ಸಿಕ್ಕುವುದಿಲ್ಲ. ಕೇವಲ ಮನುಷ್ಯತ್ವದಿಂದಲೆ ಅವರ ಪರಿಚಯ, ಯಾವುದೇ ಜಾತಿ ಭಾಷೆಗಳಿಂದಲ್ಲ.

ಉದ್ಯೋಗ, ತಾಪೇದಾರಿ ಈ ವಿಷಯವಾಗಿ ಬನುವಿನ ಹತ್ತಿರ ಚರ್ಚೆ ನಡೆಸಬೇಕು ಅಂತ ಇದ್ದಕ್ಕಿದ್ದಂತೆ ಬಲಿದತ್ತನಿಗೆ ನೆನಪಾಯಿತು. ಕೆಲಸ ಕಾರ್ಯ ಮುಗಿಸಿ ಮನೆಯ ಕಡೆ ಹೆಜ್ಜೆ ಹಾಕಬೇಕಾದರೆ ಇಂಥ ಚರ್ಚೆ ಮಾಡುತ್ತಾ ಹೋದರೆ ಚೆನ್ನ. ಅಯ್ಯಪ್ಪಾ ಅಂತ ಸುಸ್ತಾದ ಮನಸ್ಸು ತನಗೆ ತಾನೇ ಅದೇ ಜಾಡಿನಲ್ಲಿ ಬಿದ್ದಿದೆ. ಅದೇ ವಿಮರ್ಶೆ ನಡೆಯಬೇಕು, ಅದೇ ಮನಸ್ಸಿಗೆ ಗ್ರಾಸ. ಆಫೀಸಿನ ಕೆಲಸ ಅನ್ನುವುದು ಉದ್ಯೋಗಿಯ ಬದುಕಿನಲ್ಲಿ ಒಂದು ಶಿಲ್ಪಕಲೆಯಿದ್ದಂತೆ. ಜಾಗ್ರತವಾಗಿರುವ ಬದುಕಿನ ಬಹುವೇಳೆ ಅದರಲ್ಲೇ ಕಳೆಯುತ್ತದೆ. ಬದುಕಿಗೆ ಅದೇ ಆಸರೆ, ಭವಿಷ್ಯದ ಮೆಟ್ಟಿಲು, ಏಣಿ ಎಲ್ಲ ಅದೇ, - ಅದನ್ನು ಕುರಿತೇ ಬಿರುಸಾದ ಚರ್ಚೆ.

"ಅಂದ ಹಾಗೆ ನೋಡು ಬನು, ಇವತ್ತು ಸಾಹೇಬರು - " ಆಗ ಸಂಟೂದಾ ಅವರ ದೃಷ್ಟಿ ಒಳಗೊಳಗೇ ಕುಸಿಯುತ್ತಿದೆ. ಬೀಡಿಯ ಎರಡೂ ಕೊನೆಗಳಿಂದಾಗಿ ಬನುವಿನ ತುಟಿಗಳು ಸುರುಟಿ ಹೋಗಿವೆ. ಅಲ್ಲಿಯೆ ಕುಳಿತಿದ್ದ ಜಗ್ಗು ಮತ್ತು ರಾಧೂ ಇಬ್ಬರೂ ಮನಸ್ಸಿಟ್ಟು ಅವನ ಕಡೆ ನೋಡತೊಡಗಿದರು. ಹಾಗೆಯೇ ಅಲ್ಲಿಯವರೆಗೆ ಒಂದು ಸಚಿತ್ರ ಮಾಸಪತ್ರಿಕೆ ಹಿಡಿದು ಹೆಂಗಸರ ಚಿತ್ರಗಳನ್ನು ಹೋಲಿಸಿನೋಡುತ್ತಿದ್ದ ನಂದ ಇದ್ದಕ್ಕಿದ್ದಂತೆ ದುರುಗುಟ್ಟಿಕೊಂಡು ಬಲಿದತ್ತನ ಕಡೆ ನೋಡತೊಡಗಿದ. ಬಲಿದತ್ತನ ಉತ್ಸಾಹವೆಲ್ಲ ಝುರ್ರನೆ ಇಳಿದುಹೋಯಿತು. ನಿಟ್ಟುಸಿರುಬಿಟ್ಟು ಅವನು ಚಹಾ ಹೀರುವುದರಲ್ಲಿ ಮಗ್ನನಾದ. ಮನಸ್ಸು ಉರಿದೇಳುತ್ತದೆ. ಏನು ಹಾಗಾದರೆ, ಈ ಜನ ನಿಜವಾಗಿಯೂ... ? ಬದುಕಿನ ಸಮಸ್ಯೆಗಳನ್ನು ಇಷ್ಟು ಹಗುರವಾಗಿ ಕಂಡು

ಬೀಡಿಯ ಹೊಗೆಯಲ್ಲಿ ಉಫ್ ಅಂತ ಹಾರಿಸಲು ಬಯಸುತ್ತಾರಲ್ಲ. ಮುಂದೆ ಬರುವ ಯಾವ ಸಮಸ್ಯೆಗಳನ್ನೂ ಕುರಿತು ಯೋಚನೆ ಮಾಡುವುದಿಲ್ಲವಲ್ಲ.

ಇದೇ ಬನು

ಯೋಚಿಸಿದರೆ ಕರುಣೆ ಮೂಡುತ್ತದೆ. ಹುಡುಗ ಎಷ್ಟು ಚೆನ್ನಾಗಿ ಬರೀತಾನೆ, ಎಷ್ಟು ಚೆನ್ನಾಗಿ ಇಂಗ್ಲೀಷ್ ತಿಳಿದುಕೊಂಡಿದ್ದಾನೆ. ಎಷ್ಟು ಬೇಗ ಎಲ್ಲ ಕೆಲಸ ಅರ್ಥ ಮಾಡಿಕೊಳ್ಳುತ್ತಾನೆ, ಅದೆಷ್ಟು ಬೇಗ ಮಾಡಿಮುಗಿಸುತ್ತಾನೆ. ಒಮ್ಮೊಮ್ಮೆ ಮರ್ಯಾದ ಕೊಟ್ಟವರ ಮೇಲೆಯೆ ಎಗರಿಬೀಳುತ್ತಾನೆ. ಯಾರಾದರೂ ಏನಾದರೂ ಅಂದರೆ ಸಾಕು, ಹತ್ತುಪಟ್ಟು ಬೈದು ಗ್ರಹಚಾರ ಬಿಡಿಸಿಬಿಡುತ್ತಾನೆ. ತನ್ನ ಮರ್ಯಾದೆಗೆ ಧಕ್ಕೆ ಬರುತ್ತೆ ಅಂತಾನೆ. ಮೇಲಿನವರಿಗೆ ಮರ್ಯಾದೆ ಕೊಡುವುದಕ್ಕೆ ಗೊತ್ತೆ ಇಲ್ಲ ಅಂತ ಅವನ ಭಾವನೆ. ನೋಡಪ್ಪ, ತಾಪೇದಾರಿಗೆ ಸೇರಿಕೊಂಡ ಮೇಲೆ.... ಅಂತ ಹೇಳಿದರೂ ಪ್ರಯೋಜನವಿಲ್ಲ. ಅವನು ಅದಕ್ಕೆಲ್ಲ ಕಿವಿಗೊಡುವುದಿಲ್ಲ. ಹೇಳಿದವರು ಮೂರ್ಖರು ಅಷ್ಟೆ. ಯಾವಾಗಲೂ ನೀಟಾಗಿರುವ ತಿದ್ದಿದ ಮುಖ, ಭುಜ ಎತ್ತಿ ಎದೆ ಅಗಲಿಸಿ ನಡೆಯುವ ಧಾಟಿ, ನೋಡುವವರ ಕಣ್ಣಿಗೆ ಕೆಲಸ ಮಾಡುವುದಕ್ಕಲ್ಲ, ಯುದ್ಧಕ್ಕೆ ಹೊರಟ ಹಾಗೆ ಇರುತ್ತಾನೆ.

ಆಹಾ, ಅವನಿಗೆ ತನ್ನಷ್ಟು ಸಾಮರ್ಥ್ಯ ಇದ್ದಿದ್ದರೆ, ಭೇದೋಪಾಯ ಗೊತ್ತಿದ್ದರೆ! - ಬಲಿದತ್ತ ಯೋಚಿಸುತ್ತಾನೆ. ಆಮೇಲೆ ಮನೆಗೆ ಬಂದಮೇಲೂ ಅಷ್ಟೆ - ಮಧ್ಯೆ ಮಧ್ಯೆ ಆಫೀಸರುಗಳ ಮನೆಗೆ ಹೋಗಿ, ಅವರ ಸನ್ನಿಧಿಯಲ್ಲಿದ್ದುಕೊಂಡು ಸೇವೆ ಮಾಡುವ ಸೋಗು ಹಾಕಿಕೊಂಡು ಅವರ ಬೆಂಬಲ ಪಡೆದು, ಸಂಪರ್ಕ ಬೆಳೆಸಿಕೊಳ್ಳುವುದು ಎಲ್ಲಿ, ಅದಕ್ಕೆ ಬದಲಾಗಿ, ಕೆಲಸಕ್ಕೆ ಬಾರದವರನ್ನೆಲ್ಲ ಗುಂಪು ಕಟ್ಟಿಕೊಂಡು ಅವರಿಗೆಲ್ಲ ಚಹಾ ಕುಡಿಸಿ ತಿಂಡಿ ತಿನ್ನಿಸಿ ದುಂದೆಬ್ಬಿಸುವುದು, ಇಲ್ಲ ಅಂದರೆ ಪುಸ್ತಕಗಳನ್ನು ಓದುವುದು, ಅದೂ ರಾಶಿ ರಾಶಿ ಪುಸ್ತಕಗಳ! ಬೆವರು ಸುರಿಸಿ ದುಡಿದ ಹಣದಿಂದ ಪುಸ್ತಕಗಳನ್ನು ಕೊಳ್ಳುವುದು, ಪತ್ರಿಕೆಗಳನ್ನು ಕೊಳ್ಳುವುದು ಇವೆಲ್ಲ ಎಲ್ಲಿ, ತುಂಬ ವಿಚಿತ್ರ! ಅಲ್ಲ, ಒಂದು ಸಾರಿ ಕೆಲಸಕ್ಕೆ ಸೇರಿದ ಮೇಲೆ ಪುಸ್ತಕ ಓದುವ ಅಗತ್ಯವಾದರೂ ಏನಿದೆ, ಕೆಲಸ ನೆಟ್ಟಗೆ ಹೇಗೆ ಮಾಡೋದು ಅಂತ ಕಲಿತರೆ ಸಾಕು. ಇಲ್ಲ, ಇವರಿಗೆಲ್ಲ ಗೊತ್ತಾಗಲ್ಲ.

ಇಷ್ಟೇ ಅಲ್ಲದೆ, ಮೇಲಿನವರ ಅಭಿಪ್ರಾಯಕ್ಕೆ ವಿರೋಧವಾಗಿ ಸೆಟೆದುನಿಂತು ಅವರ ಹುಳುಕುಗಳನ್ನು ಮೇಲೆತ್ತಿ ತೋರಿಸುವುದು... ಇದೆಂಥ ಹುಚ್ಚು. ಎಲ್ಲಿ ಮಳೆ ಬೀಳುತ್ತದೊ, ಅಲ್ಲಿ ಛತ್ರಿ ಹಿಡಿಯಬೇಕು.... ಇದೇ ಅಲ್ಲವೆ ಗುಟ್ಟು. ಆಶ್ಚರ್ಯ, ಅವನಿಗೆ ಏನೂ ಅರ್ಥವಾಗುವುದೇ ಇಲ್ಲವಲ್ಲ!

ಇವೆಲ್ಲ ಗೊತ್ತಿದ್ದಿದ್ದರೆ ಅವನು ತಾನೇ ಆಫೀಸರಾಗಿ ಕುಳಿತುಕೊಳ್ಳಬಹುದಿತ್ತು. ಅದೆಷ್ಟು ಜನ ಆಫೀಸರುಗಳಾಗಿ ಹೋದರು. ಅದೆಷ್ಟು ಜನ ಮುಂದೆ ಆಗುವವರಿದ್ದಾರೆ. ಈ ಹಾಳಾದವನಾದರೋ ಎಲ್ಲಿದ್ದನೊ ಅಲ್ಲಿಯೆ ಇದ್ದಾನೆ ಇನ್ನೂ.

ತನ್ನ ಹಿರಿಯರು ಜಮೀನುದಾರರೆಂದು ಹೆಸರುವಾಸಿಯಾಗಿದ್ದರು ಅಂತ ಬನು ಹೇಳುತ್ತಾನೆ. ಈಗಲೂ ಹಳ್ಳಿಯಲ್ಲಿ ಆಸ್ತಿಪಾಸ್ತಿಯಿದೆಯಂತೆ. ಆದರೆ ಇದು ಸಾಮಂತವಾದಿ ಮನೋಭಾವನೆಯಂತೆ. ಬಹುಶಃ ಅವನ ಪತನಕ್ಕೆ ಇದೇ ಒಂದು

ದೊಡ್ಡ ಕಾರಣ. ನಾಡಿನ ಎಷ್ಟೋ ದೊಡ್ಡ ದೊಡ್ಡ ಮನೆತನಗಳು, ಮಂತ್ರಿಗಳು, ಉದ್ಯಮಗಳಲ್ಲಿ ಕೆಲಸ ಮಾಡುತ್ತಿರುವ ದೊಡ್ಡ ದೊಡ್ಡ ಅಧಿಕಾರಿಗಳು - ಅವರಲ್ಲಿ ಅನೇಕರು ತನ್ನ ತೀರ ಹತ್ತಿರದ ಸಂಬಂಧಿಗಳು ಅಂತ ಬನು ಹೇಳಿಕೊಳ್ಳುತ್ತಾನೆ. ಯಾರಾದರೂ ತರ್ಕ ಮಾಡಲು ಶುರು ಮಾಡಿದರೆ ಸರಿ ತನ್ನ ವಂಶ ಗೌರವ ಹಾಡಲು ಮೊದಲು ಮಾಡುತ್ತಾನೆ.

ಇದೂ ತೀರ ಸಾಮಂತ ಮನೋಭಾವನೆ, - ರೆಕ್ಕೆ ಇಟ್ಟುಕೊಂಡು ಹಾರುತ್ತಿರುವ ಹಕ್ಕಿ ತನ್ನದೆಂದು ಹೇಳಿಕೊಂಡು ಅದರೊಡನೆ ಗೆಳೆತನ ಬೆಳೆಸುವ ಬಯಕೆಯಿದ್ದರೆ, ತನ್ನ ಮೈಗೆ ರೆಕ್ಕೆ ಕಟ್ಟಿಕೊಂಡು ಅಟ್ಟಣಿಗೆಯಿಂದ ನೆಗೆದರೆ ಮನುಷ್ಯನಿಗೆ ಏನು ಪ್ರಯೋಜನ ಹಾರುವುದಕ್ಕಂತೂ ಆಗುವುದಿಲ್ಲವಲ್ಲ.

ಇದಕ್ಕೆ ಬದಲಾಗಿ ಸರಿಯಾಗಿ ಬುದ್ಧಿ ಉಪಯೋಗಿಸಿದ್ದರೆ, ಆ ದೊಡ್ಡ ದೊಡ್ಡ ಮನುಷ್ಯರನ್ನು ಹಿಡಿದು ಬನು ಮೇಲೆ ಬರಲು ಸಾಧ್ಯವಾಗುತ್ತಿರಲಿಲ್ಲವೆ ? ಸ್ವಲ್ಪ ಸೀಸಿ ಹೊಡೆದು, ಸ್ವಲ್ಪ ತಲೆಬಾಗಿ, ಸ್ವಲ್ಪ ತಲೆಬಗ್ಗಿ - ಉಹೂಂ ಇಲ್ಲ, ಅವನಿಗೆ ಇದೆಲ್ಲ ಸುತರಾಂ ಆಗೋದಿಲ್ಲ-

ಒಣಜಂಭ, ಅಹಂಕಾರ, ಶುದ್ಧ ತಿಳಿಗೇಡಿ.

ಆದರೂ ಬನುವಿನ ಮೇಲೆ ಸಿಟ್ಟು ಮಾಡಿಕೊಳ್ಳೋಣ ಅಂದರೆ ಸಾಧ್ಯವಾಗುವುದಿಲ್ಲ. ಏಕೆ ? ಅವನಲ್ಲಿ ಅದೆಂಥ ಅಗೋಚರವಾದ ಮೋಹಕ ಶಕ್ತಿಯಿದೆ. ಆ ಬಿಳಿಯ ತೆಳ್ಳನೆಯ ಬಳುಕುತ್ತಿರುವ ಎತ್ತರದ ಮೈಯಲ್ಲಿ ಬಲಿದತ್ತನಿಗೆ ಅವನ ಪೂರ್ವಿಕರ ಯಾವ ಅಗೋಚರ ಆಕರ್ಷಣ ಶಕ್ತಿ ಎದುರಾಗುತ್ತದೊ ಗೊತ್ತಿಲ್ಲ. ಒಟ್ಟಿನಲ್ಲಿ ಸಹಾನುಭೂತಿ ಹುಟ್ಟುತ್ತದೆ. ಈ ಸಣ್ಣ ಕೋಣೆಯಲ್ಲಿ ಬನು ಮೇಲುಗೈ ಸಂಪಾದಿಸುತ್ತಾನೆ.

ಇದೇ ಅಲ್ಲದೆ ನೆನಪಿಗೆ ಬರುತ್ತದೆ, - ಸುತ್ತಮುತ್ತ ನಡೆಯುವಂಥ ಧರ್ಮಕರ್ಮ ವೆಲ್ಲ ಅವನ ತಲೆಗೆ ಕಟ್ಟಿದ್ದೇ. ಯಾರ ಮನೆಯಲ್ಲಾದರೂ ಯಾರಿಗಾದರೂ ಹುಷಾರಿಲ್ಲದಿದ್ದರೆ ರಾತ್ರಿಯೆಲ್ಲ ಎದ್ದಿರೋದಕ್ಕೆ, ಡಾಕ್ಟರನ್ನು ಕರೆದುಕೊಂಡು ಬರೋದಕ್ಕೆ ಯಾರು ? ಪೇಟೆಯಿಂದ ಯಾರಿಗಾದರೂ ಏನಾದರೂ ತಂದುಕೊಡುವುದಕ್ಕೆ ಯಾರಿದ್ದಾರೆ ? ಯಾರ ಕೆಲಸ ಏನಾಗಬೇಕು ? ಜನ ಬೇಕೆ, ಕಷ್ಟ ತಾಪತ್ರಯಗಳೆ ?

ಬನು ಎಲ್ಲದಕ್ಕೂ ಹಾಜರು.

ದಾರಿಯಲ್ಲಿ ಎದುರಿಗೆ ಸಿಕ್ಕಾಗ ಅವನ ಬಲಗೈ ತನಗೆ ತಾನೇ ಬಲ ಜೇಬಿನೊಳಕ್ಕೆ ಹೋಗುತ್ತದೆ. ಒಂದು ಬೀಡಿ ಹೊರಬರುತ್ತದೆ. ಸಣ್ಣಸಣ್ಣ ತೆಳ್ಳನೆಯ ಬೀಡಿಗಳು. ಅವುಗಳ ಕೊನೆ ಉರಿದಿರುತ್ತದೆ. ಮೊದಲು ಅಲ್ಲಿಂದ ಸಿಗರೇಟು ಹೊರಬರುತ್ತಿತ್ತು. ಈಗ ಕಾಲ ಬದಲಾಯಿಸಿದೆ. ಆಮೇಲೆ ಎಡಗೈ ಕೂಡಲೇ ಎಡಜೇಬಿನೊಳಕ್ಕೆ ಹೋಗುತ್ತದೆ. ಈ ಪ್ರಾಣಿಯ ಜಾಯಮಾನವೇ ಹೀಗೆ ಅನಿಸುತ್ತೆ. ಒಂದು ಚಿಕ್ಕ ಮ್ಯಾಂಟೆಲ್ ಲೈಟರ್, ಒಳಗೆ ಸ್ವಲ್ಪ ಪೆಟ್ರೋಲು. ಖಚ್ ಅಂತ ಬೆರಳಿಂದ ಅದುಮಿ ಬನು ತನ್ನ ಚಕಮುಕಿ ಉಜ್ಜುತ್ತಾನೆ. ಗೆಳೆಯನ ಬಾಯಲ್ಲಿ ಬೀಡಿ ತುರುಕಿ ಕುತ್ತಿಗೆ ಪಟ್ಟಿಯನ್ನೊ, ಷರ್ಟನ್ನೊ ಹಿಡಿದು ಕೇಳುತ್ತಾನೆ. "ಏನಯ್ಯಾ, ಯಾವ ಕಡೆ ಸವಾರಿ ?"

ಬಲಿದತ್ತ ಮರುಮಾತಾಡದೆ ಚಹಾ ಕುಡಿದು ಮುಗಿಸಿದ. ಆ ಮನೆಯಲ್ಲಿ ಎಲ್ಲರೂ ಚಹಾ ಕುಡಿದು ಬಟ್ಟಲುಗಳನ್ನು ಕೆಳಗಿಟ್ಟಿದ್ದಾರೆ, ಎಲ್ಲರ ಬಾಯಲ್ಲೂ ಉರಿಯುತ್ತಿರುವ ಬೀಡಿಗಳು. ಬಾಯಿಗೆ ಬಂದಂತೆ ಹರಟೆ ಕೊಚ್ಚುತ್ತಿದ್ದಾರೆ.

ಪೇಪರಿನ ಸಮಾಚಾರಗಳು, ರಾಜಕೀಯ, ಸಾಹಿತ್ಯ, ಸಂಟೂದಾ ಅವರ ಫಿಲಾಸಫಿ....

ಬಲಿದತ್ತನಿಗೆ ಇದೆಲ್ಲ ಅರ್ಥವಾಗುವುದಿಲ್ಲ. ಮತ್ತೆ ಮತ್ತೆ ಆಕಳಿಸುತ್ತಿದ್ದಾನೆ. ಬನು ರಾಶಿರಾಶಿಯಾಗಿ ಯಾಕೆ ಇಷ್ಟೊಂದು ಪುಸ್ತಕಗಳನ್ನು ಇಟ್ಟುಕೊಂಡಿದ್ದಾನೆ ? ಸುಮ್ಮನೆ ಕೆಲಸಕ್ಕೆ ಬಾರದ ಪುಸ್ತಕಗಳನ್ನು ಓದುತ್ತಾನೆ. ಇಷ್ಟವಿಲ್ಲದಿದ್ದರೂ ಕಣ್ಣಾಡಿಸುತ್ತಿದ್ದ ಹಾಗೆಯೆ ಅವನ ದೃಷ್ಟಿ ಕೆಳಗಿನ ಸಾಲಿನಲ್ಲಿದ್ದ ಒಂದು ಕಟ್ಟು ಹಾಕಿದ ಸಣ್ಣ ಪುಸ್ತಕ ಮೇಲೆ ಬಿತ್ತು. "ವ್ಯಾಪಾರ ವಾಣಿಜ್ಯ ಕಾಗದಗಳನ್ನು ಬರೆಯುವುದು ಹೇಗೆ ?" ಬಹಳ ದೊಡ್ಡ ವಸ್ತುವನ್ನು ಹುಡುಕಿ ಕಂಡುಹಿಡಿದವನಂತೆ ಅವನ ಕಣ್ಣುಗಳು ಮಿನುಗಿದವು. ಕೂಡಲೆ ಅವಸರವಸರವಾಗಿ ಆ ಪುಸ್ತಕ ಕೈಗೆತ್ತಿಕೊಂಡ. ಬನುವಿನ ದೃಷ್ಟಿ ಆಕಡೆ ಬಿತ್ತು. ಏನೋ ನೆನಪಿಗೆ ಬಂದ ಹಾಗಾಗಿ ಅವನ ಮುಖಭಾವ ಬದಲಾಯಿತು. ಅರ್ಧ ಉರಿದ ಬೀಡಿಯನ್ನು ಜೋರಾಗಿ ಎಸೆದು ಉತ್ಸಾಹದಿಂದ ಹೇಳಿದ.

"ಇವತ್ತೇನಾಯ್ತು ಗೊತ್ತಾ ಸಂಟೂದಾ ? ಕೆಲಸ ಮುಗಿಸಿ ಒಂದು ಪುಸ್ತಕ ಕೈಯಲ್ಲಿ ಹಿಡಿದು ಕೂತಿದ್ದೆ. ಅಷ್ಟರಲ್ಲಿ ಆ ಹಾಳಾದ ಹನು ಬಂದು ಹೇಳಿದ. ಮತ್ತೆ ಏನೋ ಅರ್ಜೆಂಟ್ ಕೆಲಸ ಬಂದುಬಿಟ್ಟಿದೆ, ಅಷ್ಟು ಮಾಡಿ ಮುಗಿಸಲೇಬೇಕು ಅಂತ. ನೋಡಿದರೆ ಒಂದು ಗಾಡಿ ಕೆಲಸ. ರಾತ್ರಿಯೆಲ್ಲ ಮಾಡಿದರೂ ಮುಗಿಯುವ ಹಾಗಿರಲಿಲ್ಲ. ಇವನ್ನೆಲ್ಲ ಇಲ್ಲೇಕೆ ತಂದೆ ? ಇವೆಲ್ಲ ನಿಮ್ಮ ಸಾಹೇಬರ ಹೊಸ ಚೇಲಾ ಇದ್ದಾನಲ್ಲ, ಅವನದು. ನನ್ನ ಕೆಲಸ ನಾನು ಮಾಡಿ ಮುಗಿಸಿದ್ದೇನೆ. ಅವನ ಹತ್ತಿರವೆ ಹೋಗು. ಅವನು ಮಾಡಲಿಲ್ಲ ಅಂತ ನನ್ನ ತಲೆಗೆ ತಂದು ಕಟ್ತೀಯ ? ಅಂತ ಕೇಳಿದೆ. ಅದಕ್ಕೆ ಅವನು ಹೇಳಿದ - ಸಾಹೇಬರು ಮಾಡಿ ಮುಗಿಸಲೇಬೇಕು ಅಂತ ಹಟಹಿಡಿದಿದ್ದಾರೆ.

"ಏನು ಹೇಳಿದೆ ಗೊತ್ತಾ ? ಹೇಳಿದೆ - ಸಾಹೇಬರು ತಮಗೆ ಬೇಕಾದ ಹಾಗೆ ಈ ಹೊಸಬರ ಇಷ್ಟೊಂದು ಕೆಲಸ ನನ್ನ ಮೇಲೆ ಹೊರಿಸುತ್ತಾರೂ ಅಥವಾ ಇನ್ನೂ ಉಳಿದಿದೆಯೋ ? ಆ ಪಕ್ಷದಲ್ಲಿ ನನ್ನನ್ನೇ ಅಪ್ಪನನ್ನಾಗಿ ಮಾಡಿಕೊಂಡು ಬಿಡಲಿ! ಹ.... ಹ.... ಹ.... ಹ....

ಒಬ್ಬ ಏನೋ ಉತ್ತರ ಹೇಳಿದ. ಎಲ್ಲ ಯೋಚಿಸುತ್ತಿದ್ದಂತೆ ಒಬ್ಬ ಏನೋ ಹೇಳುತ್ತಿದ್ದ. ಅದುಮಿಟ್ಟ ಭಯಂಕರ ಚಿಂತೆ, ಅಯ್ಯೋ ಪ್ರಾಣ - ಚೀತ್ಕಾರದಿಂದಲೆ ಹೊರಬೀಳುತ್ತದೆ. ಮನೆಯಲ್ಲೆಲ್ಲ ಹೋ ಹೋ ಹೋ ಹೋ ಅಂತ ಗುಲ್ಲು.

ಈ ಕಡೆ ಬಲಿದತ್ತನ ಕಣ್ಣುಗಳು ಗೊತ್ತಿಲ್ಲದಂತೆಯೆ ಮಿನುಗುತ್ತಿವೆ. ಆ ನಗೆಯಲ್ಲಿ ಅವನೂ ತೇಲಿಹೋಗುತ್ತಾನೆ. ತಾನೊಬ್ಬ ಏಳಿಗೆಗೆ ದುಂಬಾಲು ಬಿದ್ದವನು ಅನ್ನುವುದನ್ನು ಒಂದು ಕ್ಷಣ ಮರೆಯುತ್ತಾನೆ. ಮುಂದೇನಾಯಿತು ಅಂತ ಎಲ್ಲರೂ ಬನುವಿನ ಮಾತು ಕೇಳಲು ಕಾತುರರಾಗಿ ಹುಬ್ಬೇರಿಸಿದ್ದಾರೆ.

"ಆಗ ? ಆಮೇಲೆ ?" ಬಲಿದತ್ತ ಕುತೂಹಲ ವ್ಯಕ್ತಪಡಿಸುತ್ತಾನೆ. ಜಗ್ಗು, ಅವನು

ಟಕಟಕ ಅಂತ ಟೈಪ್ ಮಾಡುತ್ತಾನೆ. ರಾಧೂ, ಅವನು ಹಗಲುರಾತ್ರಿ ಲೆಕ್ಕಾಚಾರ ಹಾಕುತ್ತಿರುತ್ತಾನೆ.

"ಆಮೇಲೆ ?"

"ಆಮೇಲೆ ಏನು ? ಲಂಕೆಯನ್ನು ಸುಟ್ಟಂತಹವನು ಇದ್ದಕ್ಕಿದ್ದ ಹಾಗೆಯೆ ಮೆಣಸಿನಕಾಯಂತೆ ಕೆಂಪಾದ ಕೆಲಸದ ವೇಳೆಯಲ್ಲಿ ಪುಸ್ತಕ ಓದೋಣ ಅಂದರೇನು ? ಕೆಲಸ ಮಾಡಲು ಹೇಳಿದರೆ ಎದುರುತ್ತರ ಕೊಡೋಣ ಅಂದರೇನು ? ಕಂಪನಿ ಏನು ಬಿಟ್ಟಿ ಸಂಬಳ ಕೊಡುತ್ತಾ ಅಂತೆಲ್ಲ ಹಾರಾಡಿದ."

"ನೋಡಪ್ಪಾ ನನ್ನ ಕೈ ನೋಯುತ್ತದೆ.... ನನಗೆ ಧೈರ್ಯವೇ ಇಲ್ಲ.... ಆಮೇಲೆ ಹೇಳಿದ - ಗೆಟ್‌ಔಟ್..."

ಗೆಟ್ ಔಟ್ ಅನ್ನುತ್ತಾ ಒಂದು ಹಾರು ಹಾರಿದ ಬನು, ಸಣ್ಣ ಮೇಜು ಅಲ್ಲಾಡಿ ಹೋಯಿತು. ಖಾಲಿ ಕಪ್ಪು ಪ್ಲೇಟುಗಳು ಟಣ್ ಟಣಾರ್ ಅಂತ ಕೆಳಗೆ ಬಿದ್ದು ಚೂರಾದವು. ಅದನ್ನು ಮನಸ್ಸು ಮೆಲ್ಲಗೆ ಮೆಲುಕು ಹಾಕತೊಡಗಿತು. ಯಾವಾಗಲೂ ಹೀಗೇ ಈ ಹಾಳಾದವನು ? ಯಾವಾಗಲೂ ಕಚ್‌ಕಚ್ ಅಂತ ಕತ್ತರಿಸಿದ ಹಾಗೆ ಮಾತಾಡುತ್ತಾನೆ. ಇಷ್ಟೊಂದು ಗೂಳಿಯ ಹಾಗೆ ಯಾಕೆ ಕೊಬ್ಬಿಹೋಗಿದ್ದಾನೆ ? ಅವನು ಏಕೆ ಹೀಗೆಲ್ಲ ಹಾರಾಡುತ್ತಾನೆ ?

ಸಂಟೂದಾ ಗಂಭೀರವಾಗಿದ್ದಾರೆ. ಬೇಕೆನಿಸಿದ್ದರೆ ಅವರು ಖಂಡಿತ ಹೀಗೆ ಹೇಳುತ್ತಿದ್ದರು - "ಬೇಗ ಸಿಟ್ಟಿಗೇಳುವುದು ಮನುಷ್ಯನಿಗೆ ಒಳ್ಳೆಯದಲ್ಲ. ಆಯಸ್ಸು ಕಡಮೆಯಾಗುತ್ತೆ ಅಂತ ಶಾಸ್ತ್ರಗಳಲ್ಲಿ ಹೇಳಿದೆ." ಆದರೆ ,ದೇನು ಬೇರೆ ಜನರೆಲ್ಲ ಬನ್ನು ತಟ್ಟುತ್ತಿದ್ದಾರೆ. ಈ ತರಾತುರಿಯಲ್ಲೇ ಬಲಿದತ್ತ ಮೆಲ್ಲಗೆ ತನ್ನ ಚಿಪ್ಪಿನಲ್ಲಿ ತಾನೇ ನುಸುಳಿದ್ದಾನೆ. ಆದರೂ ಅವನ ಮೇಲೆ ಒತ್ತಾಯ ಕಡಮೆ ಮಾಡಿಲ್ಲ. ನಂದ ಎದೆಯುಬ್ಬಿಸಿ ನೇರವಾಗಿ ಕುಳಿತಿದ್ದಾನೆ, ಕೂದಲು ಹಣೆಯ ಮೇಲೆ ಇಳಿಬಿದ್ದಿದೆ, ಮುಖ ಭಯಂಕರವಾಗಿದೆ, ತನ್ನ ಯಾವುದೋ ಅನುಭವ ಅವನಿಗೆ ನೆನಪಾಗುತ್ತಿರಬೇಕು. ನಂದ ಕುತೂಹಲದಿಂದ ಕೇಳುತ್ತಾನೆ, - "ಆಮೇಲೆ ಬನು ?"

"ತಡಿ, ಹೇಳ್ತೀನಿ ಕೇಳು. ಆಮೇಲೆ ಒಂದು ಸಲ ತೋಟದ ಆಳು ಬಂದು 'ಈ ಮನೇಲಿ ಯಾಕಿಷ್ಟು ಗದ್ದಲ, ಏನು ನಡೀತಾ ಇದೆ ಅಂತ ಚಿಕ್ಕ ಸಾಹೇಬರು ಕೇಳಿದರು' ಅಂತ ಹೇಳಿದ. ಅದಕ್ಕೆ 'ಹೋಗಿ ಹೇಳು, ಈ ಮನೇಲಿ ಹೋಮ ಮಾಡ್ತಾ ಇದ್ದಾರೆ, ಚಿಕ್ಕ ಸಾಹೇಬರ ಅಪ್ಪ ಅದರ ಪೌರೋಹಿತ್ಯ ವಹಿಸಿದ್ದಾರೆ ಗೊತ್ತಾಯ್ತಾ-' ಅಂತ ಹೇಳಿಕಳಿಸಿದೆ."

ನಾಲ್ಕು ಕಡೆಯಿಂದ ವಾಹ್-ವಾಹ್-ವಾಹ್-ವಾಹ್

"ಆಹಾಹಾ ! ಈಗ ವಾಹ್ ವಾಹ್ ಅನ್ನದೆ ಏನು ಮಾಡ್ತೀರಿ ?" - ಸಂಟೂದಾ ಹೇಳಿದರು.

"ನಿಮ್ಮದೇನು ಗಂಟು ಹೋಗಬೇಕು ಹೇಳಿ. ಈ ವಾಹ್ ವಾಹ್ ಶಬಾಸಗಿರಿ ಪಡೆಯೋದಕ್ಕಾಗಿ ಎಲ್ಲ ಕಳೆದುಕೊಂಡು ನಿಂತಿದ್ದಾನೆ ಈ ಹುಚ್ಚ. ಏನು ಸಿಗತ್ತೆ ಅವನಿಗೆ ಮಣ್ಣು; ಎಲ್ಲ ಭೇಷ್ ಭೇಷ್ ಅಂತ ಅಟ್ಟಕ್ಕೇರಿಸ್ತಾರೆ, ಇದೆಲ್ಲ ಹುಚ್ಚಲ್ಲದೆ ಇನ್ನೇನು ? ಚಾಕರಿ ಮಾಡೋದಕ್ಕೆ ಕೈಯಲ್ಲಿ ಹರೀದಿದ್ದರೆ ಬಿಟ್ಟುಬಿಡಿ, ಚಾಕರಿ

ಮಾಡ್ತೀವಿ ಅಂತ ಒಪ್ಕೊಂಡಮೇಲೆ - ಮಾಡಿ."

"ಈ ಮಾತು ನೀವು ಹೇಳ್ತಾ ಇಲ್ಲ ಸಂಟೂದಾ, ಇದೆಲ್ಲ ಹೇಳ್ತಾ ಇರೋದು ನಿಮ್ಮ ಪರಂಪರೆ." ಸೊಟ್ಟಗೆ ಹುಳಿಮೋರೆ ಮಾಡಿಕೊಂಡು ನಂದ ಹೇಳಿದ್ದ "ಬಂಗಾಳಿಗಳಿಗೆ ನೌಕರಿ ಮಾಡೋದು ಚೆನ್ನಾಗಿ ಬರುತ್ತೆ ಅಂತ ಎಲ್ಲರಿಗೂ ಗೊತ್ತು. ಇಂಗ್ಲಿಷರು ಮುಂಚೆ ಹೋಗಿದ್ದು ಅಲ್ಲಿಗೇ, ಅವರೇ ಮುಂಚೆ ಇಂಗ್ಲಿಷ್ ಓದಿದ್ದು. ನಮಗೆ ಅದೆಲ್ಲ ಮಾಡೋದಕ್ಕೆ ಬರಲ್ಲ, ಹಾಗೆ ನಡೆದುಕೊಳ್ಳಲೂ ಆಗಲ್ಲ."

ಆಗದಿದ್ದರೆ ಹಾಳಾಗಿ ಹೋಗಿ, ಈ ಕೆಲಸಕ್ಕೆ ಬಾರದ ಮಾತುಗಳೇಕೆ ?

"ಏಯ್ ನಂದ, ಕೇಳಿಲ್ಲಿ - " ಸಂಟೂದಾ ಅವರ ಸ್ವರ ಗಂಭೀರವಾಗುತ್ತದೆ. ಅವರೇನೂ ಮಾಡಿಲ್ಲ. ಸುಮ್ಮನೆ ಕೋಟಿನ ಜೇಬಿನಲ್ಲಿ ಕೈಇಳಿಬಿಟ್ಟಿದ್ದಾರೆ. ಅಷ್ಟರಲ್ಲೇ ಜಾದೂಗಾರನ ದೃಷ್ಟಿ, ಸ್ವಲ್ಪ ಭಯಾನಕ ನಾಟಕದಲ್ಲಿ ಆಪತ್ತಿನ ಮೋಡ ಕವಿದ ಹಾಗೆ. ಕಂಕುಳಲ್ಲಿ ಬಾಂಬ್ ಹಿಡಿದಿದ್ದಂತೆ. ಎಲ್ಲ ಗಪ್‌ಚಿಪ್–

"ನಂದ ಕೇಳಿಲ್ಲಿ, ಬರಿ ಮಾತಿನಿಂದಲೇ ಯಾರೂ ವೀರರಾಗೊಲ್ಲ. ಖಂಡಿತ ಇಲ್ಲ, ಪುಕ್ಕಲ.... ಏನು, ಎಲ್ಲರೂ ಸುಮ್ಮನಾಗಿ ಹೋದಿರಿ ?" ಆಮೇಲೆ ಅವರ ತೆಳುವಾದ ಧೀರ ನಗೆ. ಬನು ನೆನಪಿಸಿಕೊಂಡು ಹೇಳುತ್ತಾನೆ, "ಅವರು ತಾಂತ್ರಿಕರು" ಮತ್ತೆ ಸಹಜ ವಾತಾವರಣ ಮೂಡುತ್ತಿದೆ. ಅವರು ತಮ್ಮ ಎಂದಿನ ದನಿಯಲ್ಲಿ ಹೇಳತೊಡಗುತ್ತಾರೆ.

"ಗೊತ್ತಾಯ್ತಾ ನಂದ, ಅಪ್ರಿಯವಾಗಿ ಮಾತಾಡೋದಕ್ಕೆ ಏನೂ ಕಷ್ಟವಾಗೊಲ್ಲ. ಅವಮಾನ ಮಾಡೋದು ಇನ್ನೂ ಸುಲಭ. ಒರಿಸ್ಸಾದವನು ಅನ್ನೊ ಹೆಮ್ಮೆ ನಿನಗಿದ್ದರೆ ಬಂಗಾಳಿ ಅನ್ನೊ ಹೆಮ್ಮೆ ನನಗೂ ಅಷ್ಟೇ ಇರುತ್ತೆ ಅಂತ ಮರೀಬೇಡ. ನಿಜ ಹೇಳಬೇಕೆಂದರೆ ನಾವೆಲ್ಲ ಒಂದೇ ಮಣ್ಣು. ಒಂದೇ ಬೂದಿ. ಹೆಮ್ಮೆ ಪಡೋದಕ್ಕೆ ಮನಸ್ಸಿನಲ್ಲಿ ಒಂದು ಗುಣ ಇದ್ದರೆ ಸಾಕು. ಕಣ್ಣಿದ್ದೂ ಕುರುಡ ಎಂಬ ವಿಚಾರದಲ್ಲಿ ನಿನಗೆ ಹೆಮ್ಮೆ ಇರಬೇಕು. ನಾನು ನನಗೆ ಕಣ್ಣಿದೆ ಅಂತ ಬೆನ್ನು ತಟ್ಟಿಕೊಳ್ಳಬಹುದು. ಆದರೆ ನಮ್ಮ ಈ ಭಾವನೆಗಳಿಂದ ಬಾವಿ ತೋಡಲು ಸಾಧ್ಯವೆ ? ಬಂಗಾಳಿಗಳು ಚಾಕರಿ ಮಾಡೋದನ್ನ ಕಲಿತರು, ಅದು ಸರಿ, ನೀನು ಆ ಪರಿಸ್ಥಿತಿಯಲ್ಲಿದ್ದಿದ್ದರೆ, ಆ ನೂರೈವತ್ತು ವರ್ಷಗಳ ಹಿಂದೆ ಶುರು ಮಾಡಿದ್ದರೆ ಇನ್ನೂ ಚೆನ್ನಾಗಿ ಕಲಿಯುತ್ತಿದ್ದಿಯೋ ಏನೋ. ದ್ರಾಕ್ಷಿ ಹುಳಿ ಅಂತ ಹೇಳೋ ಪರಿಸ್ಥಿತಿ ಇವತ್ತು ನಿನಗೆ ಬರುತ್ತಿರಲಿಲ್ಲ. ಇದು ಆರ್ಥಿಕ ಸಮಸ್ಯೆ, ಈ ವಿಷಯದಲ್ಲಿ ಮನಸ್ಸು ಚಿಕ್ಕದು ಮಾಡಿಕೊಂಡು ಪ್ರಾಂತಗಳ ನಡುವೆ ಜಗಳ ತಂದುಹಾಕಿದರೆ ನೀನೇನೂ ಗೋಪ ಬಂಧುದಾಸ್ ಆಗೋದಿಲ್ಲ, ನಾನೇನೂ ಚಿತ್ತರಂಜನ ದಾಸ್ ಆಗೋದಿಲ್ಲ. ಸುಮ್ಮನೆ ಅದೆಲ್ಲ ಏಕೆ ? ನಮ್ಮ ನಮ್ಮ ವಿಚಾರ ನಮಗಿರಲಿ, ಗೊತ್ತಾಯ್ತಾ ಬನು, ನಿನಗೇನೂ ಮಾಡೋದಕ್ಕೆ ಆಗೋದಿಲ್ಲ. ಗುಡ್‌ನೈಟ್."

"ನೀಟ್" ಬನು ಹೇಳಿದ. ಅವನು ಪತ್ತೇದಾರಿ ಕಾದಂಬರಿಗಳನ್ನು ಓದುತ್ತಾನೆ. ನಗುತ್ತಲೆ ಗಲ್ಲದ ಮೇಲೆ ಮೂರು ಬೆರಳುಗಳನ್ನು ಇಟ್ಟುಕೊಂಡು ಹೇಳಿದ. "ನೀಟ್" ನೆನಪಿನಲ್ಲಿ ಖಂಡಿತ ಲಂಡನ್ನಿನ ಒಂದು ಸಣ್ಣ ಅಂಕುಡೊಂಕಾದ ರಸ್ತೆಯಲ್ಲಿ ಕಾಕ್ನಿ ಡ್ರೈವರ್ ಸೆಕ್ಸ್‌ಟನ್ ಬ್ಲೇಕ್ ಡಿಟೆಕ್ಟಿವ್‌ನಿಂದ ಬಾಡಿಗೆ ಪಡೆದು ವಿದಾಯ

ಹೇಳುತ್ತಿರುವ ದೃಶ್ಯ ಮೂಡಿರಬೇಕು.

ಮನೆಯಲ್ಲಿ ಗದ್ದಲವೊ ಗದ್ದಲ.

ಬಲಿದತ್ತ ಸುಮ್ಮನೆ ಕುಳಿತಿದ್ದಾನೆ. ದಬಾವಣೆ ಮಾತುಗಳು, ವಾದವಿವಾದಗಳು ಅಂದರೆ ಅವನು ತುಂಬ ನುಣುಚಿಕೊಳ್ಳುತ್ತಾನೆ. ಅವನ ಮುಖ ಇನ್ನೂ ಮಾತಿನ ಚಡಿಯಿಂದ ಬಿಡುಗಡೆ ಹೊಂದಿಲ್ಲ.

"ಸಂಟೂದಾ ಈ ರೀತಿ ಸಿಟ್ಟುಗೊಂಡಿದ್ದನ್ನು ನಾನು ಎಂದೂ ನೋಡೇ ಇರಲಿಲ್ಲ" ರಾಘು ಹೇಳಿದ. "ಥೂ ನಂದ, ಮನಸ್ಸಿನಲ್ಲಿ ಬಂದಿದ್ದೆಲ್ಲವನ್ನೂ ಬೊಗಳಿಬಿಟ್ಟೆಯಲ್ಲ" ಬನು ಶಪಿಸಿದ.

"ಛೆ ಛೆ ನಾನು ಹೇಳಿದ್ದೇ ಸರಿ ಹೋಯಿತು. ಸಂಟೂದಾ ಜೊತೆಯಲ್ಲಿ ನಾನೇನೂ ಜಗಳ ಆಡಿಲ್ಲವಲ್ಲಾ. ಅವರ ವಿಚಾರ ಯಾರಿಗೆ ಗೊತ್ತಿಲ್ಲ? ಅವರ ಜನರ ವಿಚಾರ ಏನು ಅಂತ ನಾನು ಹೇಳಿದ್ದು. ನಮಗೇ ತಮಾಷೆ ಮಾಡ್ತಾರೆ, ಗೇಲಿಯುಬ್ಬಿಸ್ತಾರೆ, ಇಂಗ್ಲಿಷರ ಜೊತೆಯಲ್ಲಿ ಸೇರಿಕೊಂಡು ದೇಶವನ್ನೆಲ್ಲ ಧ್ವಂಸ ಮಾಡಿದೋರು. ಎಲ್ಲ ಜಮೀನುದಾರಿ, ಎಲ್ಲ ನೌಕರಿ ಅವರ ಪಾಲೇ. ನಮ್ಮ ಆಫೀಸಿಗೆ ಒಬ್ಬರು ಚಿಕ್ಕ ಸಾಹೇಬರು ಬಂದಿದ್ದಾರಲ್ಲ, ಅವರ ವಿಚಾರ ಗೊತ್ತಿಲ್ವಾ- ?"

"ಆಹಾ! ಸುಮ್ಮನೆ ಹೊಟ್ಟೆಪಾಡಿಗಾಗಿ ಏನು ಬವಣೆ, ಹೊಟ್ಟೆಪಾಡಿಗಾಗಿ ಈ ಎಲ್ಲ ಜಗಳ ಒಂದು ಹಿಡಿ ಕೂಳಿಗಾಗಿ ಅಷ್ಟೆ - " ಬನು ತನಗೆ ಸಹಜವಲ್ಲದ ಕರುಣಾಸ್ವರದಲ್ಲಿ ಹೇಳಿದ. ಒಂದು ನಿಮಿಷದ ಮೊದಲು ಒಂದು ಹಾರುಹಾರಿ ಗೆಟ್ ಔಟ್ ಅಂತ ಹೇಳಿದ. ಹುಂಬ ಬನು ಈಗ ಅಲ್ಲ ಅವನು. ಅವನ ಒಳಗಿಂದ ಜಗನ್ನಾಥ ದೇವರು ಮಾತಾಡುತ್ತಿದ್ದಾನೆ - ನಾಡಿನ ಮಹಾತ್ಯಾಗಿ ಉದಾರಿ, ನವೀನ, ಸದಾನಂದ - ದೂರದಲ್ಲಿ ದೃಷ್ಟಿ ನೆಟ್ಟು ಆಳವಾಗಿ ಉಸಿರೆಳೆದು ಮನಸ್ಸಿನಲ್ಲೇ ಎಂಬಂತೆ ಹೇಳತೊಡಗಿದ, "ಆಹಾ, ಎಂಥ ಸುಂದರವಾದ ದೇಶ ಮಣ್ಣಲ್ಲಿ ಸೇರಿಹೋಗಿದೆ, ಛೆ ಛೆ!....."

ಇದ್ದಕ್ಕಿದ್ದಂತೆ ಅವನ ಎಂದಿನ ಮಾತಿನ ಧಾಟಿ ಕೇಳಿಬರುತ್ತದೆ - "ತೊಗೋ, ಬೀಡಿ ಎಳಿ, ತಲೆ ತಣ್ಣಗೆ ಮಾಡಿಕೊ. ಇವತ್ತಿನ ಪೇಪರ್ ಓದಿದ್ದೀಯಾ, ತಗೋ, ಅಲ್ಲೇ ಮಂಚದ ಮೇಲಿದೆ."

"ನೀವು ಹಾಳಾದೋರು ನಿಮ್ಮ ನಿಮ್ಮ ಕಾಲಕೆಳಗಿನ ಗೊಬ್ಬರದ ಗುಂಡಿಯಲ್ಲಿ ಹೂತುಕೊಂಡು ಇದು ನನ್ನ ಜಾಗ, ನನ್ನ ಜಾಗ ಅಂತ ಅರಚಾಡ್ತೀರಲ್ಲ, ಹಾಗಾದರೆ ಭಾರತ ಯಾರದು ಅಂತ ಹೇಳಿ? ಹೇಳಿ ಮತ್ತೆ ನೋಡೋಣ - ಭಾರತ ಯಾರದು ?"

ಸಭೆ ಮುಗಿಯಿತು. ಎಲ್ಲರಿಗೂ ಇದ್ದಕ್ಕಿದ್ದಂತೆ ಸಮಯದ ಅರಿವಾಯಿತು. ನಾಡಿನ ಬಗೆಗಿನ ಚಿಂತೆ, ರಾಜಕಾರಣದ ಛಾಯೆ, ಸಮಾಜಿಕ ಚೇತನದ ಅರಿವಿನಲ್ಲಿ ಅದೊಂದು ರೀತಿಯ ಆತಂಕದಿಂದ ಕೂಡಿದ ಅನುಮಾನದ ರೂಪವಷ್ಟೆ. ತೆರೆದ ಮಾತನ್ನು ಕಿವಿಯಿಂದ ಕೇಳಿದಾಗ ಚೇತನ ಮನಸ್ಸಿಗೆ ಚಾಟಿಯೇಟು ಬಿದ್ದಂತಾಗುತ್ತದೆ.

ಕಚೇರಿಯ ಗಡಿಯಾರ ಕಾಣುತ್ತದೆ, ಗಡಿಯಾರದ ಮುಳ್ಳುಗಳು ಹತ್ತೂವರೆಗಿಂತ ಹೆಚ್ಚಾಗಿದೆಯೆಂದು ತೋರಿಸುತ್ತಿವೆ. ಅದು ಮೂಲಭೂತವಾಗಿ ಹೊಟ್ಟೆಪಾಡಿನ ಚಿಂತೆ ನಡೆಸುವ ಆಕ್ರಮಣದ ಕಾಣದ ಕೈಗಳಷ್ಟೆ. ಹಾಗಾಗಿ ಅದು ಆಶ್ರಯ ಪಡೆಯುವ ಗೂಡು ಆ ಕೋಣೆಯೆ. ಮನಸ್ಸಿನಾಳದಲ್ಲಿ ಅದು ಭಾವ ತುಂಬಿದ, ಸ್ಫೂರ್ತಿಯಿಂದ ಕೂಡಿದ ಸಂಗೀತ.

ಮುಚ್ಚಿದ ಬಾಗಿಲ ಗುಡಿಯ ಮುಂದೆ ಅನೇಕ ಮಂದಿ ಪರಿಜನರು.

ಓಡಿಹೋಗುತ್ತಿದ್ದಾರೆ.

ಬೆಳಗಾಗುತ್ತಿದ್ದಂತೆಯೆ ಎಲ್ಲರೂ ತಮ್ಮ ತಮ್ಮ ಕೆಲಸಕಾರ್ಯಗಳಿಗೆಂದು ಹೊರಡುತ್ತಾರೆ.

ಆದರೂ ಕತ್ತಲೆಯಲ್ಲೆ ಹೊರಬೀಳುವ ಆ ಗುಂಯ್ ಸಂಗೀತ ಒಟ್ಟು ಸೇರಿದಾಗ ಪೇಟೆಯ ಗದ್ದಲವಾಗುತ್ತದೆ. ಆದ್ದರಿಂದಲೆ ಕಾವಲುಗಾರ ಎಚ್ಚೆತ್ತಿದ್ದಾನೆ.

ಬನು ಕಿಟಕಿ ಬಾಗಿಲುಗಳನ್ನು ಮುಚ್ಚಿದ. ಹುಮ್ಮಸ್ಸಿನಿಂದ ಕೂಡಿದ ಒಂದು ದಿನ ಕಳೆದುಹೋಯಿತು. ಒಳಗೆ ಹೋಗಿ ನೋಡಿದ. ಕುರ್ಚಿಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಮಂಚದ ಮೇಲೆ ಚಹಾ ಮಾಡಿದ ಎಂಜಲು ಪಾತ್ರೆಗಳು, ತಿರುವಿಹಾಕಿದ ಪತ್ರಿಕೆಗಳು, ಮೇಜಿನ ಮೇಲೆ ಎಳೆದೆಳೆದು ಹಾಗೆಯ ಬಿಟ್ಟ ಪುಸ್ತಕಗಳು ಬಿದ್ದಿವೆ. ನೆಲದ ಮೇಲೆ ಬೀಡಿಯ ತುಂಡುಗಳು, ಬೀಡಿಯಿಂದ ಬಿದ್ದ ಬೂದಿಯ ರಾಶಿ. ಹೂಂ, ಎಲ್ಲವನ್ನೂ ಗುಡಿಸಿ ಹಾಕಬೇಕು.

ಅಭ್ಯಾಸದ ಮೇಲೆ ತಲೆಬಾಚಲು ಡ್ರಾಯರ್ ಬಳಿ ಹೊರಟ. ಏಕಾಂತದಲ್ಲಿ ಮುಖ ನೋಡಿಕೊಳ್ಳುತ್ತಾನೆ. ತಲೆಬಾಚಿಕೊಳ್ಳುತ್ತಾನೆ. ಪೌರುಷ ತುಂಬಿದ ಬೆಸ್ಟ್ ಆಫ್ ಡ್ರಾಯರ್ಸ್, ಅದೂ ಲಿಕ್ವಿಡೇಟೆಡ್. ಅಪ್ಪನ ಆಸ್ತಿಯಾಗಿ ಬಂದದ್ದು ಎಲ್ಲೋ ಅಲ್ಪಸ್ವಲ್ಪ, ಆ ಮರದ ಪೆಟ್ಟಿಗೆ, ಅದರ ಮೇಲೆ ತಳ್ಳಗೆ ಸಾಗವಾನಿ ಮರದ ಕಪಾಟು, ಮೇಲೊಂದು ಕೆಳಗೊಂದು ಎರಡು ಗೂಡುಗಳು, ಮೇಲೆ ಎನ್‌ಸೈಕ್ಲೋಪೀಡಿಯಗಳ ರಾಶಿ, ಕೆಳಗಡೆ ಬುಕ್ ಆಫ್ ನಾಲೆಜ್‌ಗಳ ರಾಶಿ.

ಕನ್ನಡಿಯ ಮುಂದೊಂದು ಫೋಟೋ - ಅವನು ಮತ್ತು ಅವನ ಏನಿ. ಅವನ ಅಪ್ಸರೆಯಂಥ ಮಡದಿ - ಶೇಫಾಲಿ, ಬನು ತಮಾಷೆಗಾಗಿ ಹೇಳುತ್ತಿದ್ದ - ಹೀರೆ ಬಳ್ಳಿಯ ಹೂವು. ಬನು ನೀಳವಾಗಿ ಉಸಿರಾಡಿದ. ತಲೆ ಬಾಚುತ್ತಿದ್ದಂತೆ ಎಲ್ಲ ನೆನಪಿಗೆ ಬಂತು. ಪೇಪರಿಗಾಗಿ ನಾಲ್ಕು ತಿಂಗಳ ಬಾಕಿ ಹಣ ನೀಡಬೇಕಾಗಿದೆ, ಸ್ಟಾಲಿನಿಂದ ಚಹಾ ಲೆಕ್ಕ ಬರೆಸಿ ತರಿಸುತ್ತಿದ್ದಾನೆ. ಸಾಲದ ಮೇಲೆ ಸಾಲ ಅವನನ್ನು ಮುತ್ತಿಕೊಂಡಿದೆ. ಸಾಲದಲ್ಲೇ ತಲೆಯಿಂದ ಕಾಲಿನವರೆಗೂ ಮುಳುಗಿದ್ದಾನೆ. ಶೇಫಾಲಿ ದೊಡ್ಡ ಮನೆತನದವಳಾದರೂ ಕೈಯಿಂದಲೆ ಅಡುಗೆ ಮಾಡುತ್ತಾಳೆ, ಅಂಗಳ ಗುಡಿಸುತ್ತಾಳೆ, ಪಾತ್ರೆ ಉಜ್ಜುತ್ತಾಳೆ, ಆಮೇಲೆ ಮಕ್ಕಳಿಗೆ ಬೇಕಾದುದನ್ನು ನೋಡಿಕೊಳ್ಳುತ್ತಾಳೆ.

ಹತ್ತು ವರ್ಷಗಳು ಕಳೆದಿವೆ. ಅವನು ಶೇಫಾಲಿಗೆ ಏನು ಕೊಟ್ಟ ? ಒಂದಾದರೂ ಒಡವೆಯ ? ಯಾವತ್ತಾದರೂ ಒಂದು ಬೆಲೆ ಬಾಳುವ ಸೀರೆ ತಂದು ಕೊಟ್ಟಿದ್ದಾನೆಯೆ ? ಮೇಕಪ್ಪಿನ ಬಲದಿಂದ ಕೋತಿಯೂ ಊರ್ವಶಿಯಾಗಿ ಕಾರು

ನಡೆಸಬಹುದು, ಮೋಕಪ್ಪಿಲ್ಲದಿದ್ದರ ಮೋನಕೆಯೂ ದಾಸಿಯಾಗಿ ತಲೆತಗ್ಗಿಸಿ ನೂರು ಕಡೆ ಹರಿದು ತೇಪೆ ಹಾಕಿದ ಸೀರೆಯುಟ್ಟು ಕಸ ಗುಡಿಸಬಹುದು. ಬೆನ್ನು ಬಗ್ಗಿಸಿ ಉಜ್ಜಿ ತಿಕ್ಕಿ ಎಂಜಲು ಪಾತ್ರೆಗಳಿಂದ ಎಣ್ಣೆ ಗಸಿಮುಸಿ ತೊಳೆಯುತ್ತಾಳೆ. ಅಬ್ಬಾ, ನಿಟ್ಟುಸಿರು. ಅವನ ಒಲವಿನ ಓರೆ ಬಳ್ಳಿ ಹೂವು ಬಾಡಿಹೋಗುತ್ತಿದೆ.

ಬನುವಿನ ಎರಡೂ ಕಣ್ಣುಗಳು ಬೆಳಕಿನಿಂದ ಚುಚ್ಚಿದಂತಾಗುತ್ತಿವೆ. ಎದುರಿಗೆ ಕನ್ನಡಿ ನೋಡುತ್ತಾನೆ. ಅಗಲವಾದ ಕೆನ್ನೆಗಳು, ಹುಬ್ಬಿನ ಮೇಲೆ ಅಲ್ಲಲ್ಲಿ ಕರಿಮೋಡಗಳ ನೆರಳು. ಸಣ್ಣಸಣ್ಣ ಸಮಾಂತರ ರೇಖೆಗಳು. ಮೇಲೆ ನೋಡುತ್ತಾನೆ, ಚಿನ್ನದ ಅಕ್ಷರಗಳಲ್ಲಿ ಬರೆದಿದೆ ಬುಕ್ ಆಫ್ ನಾಲೆಜ್, ಬುಕ್ ಆಫ್ ನಾಲೆಜ್! ಡ್ಯಾಮ್ ಇಟ್! ಬನು ಹಾಗೇ ಕೂಗಾಡುತ್ತಾ ಅಡಿಗೆ ಮನೆ ಕಡೆಗೆ ಧಾವಿಸಿ ಹೇಳಿದ "ಊಟಕ್ಕೆ ಹಾಕು."

ಕತ್ತಲೆಯಲ್ಲಿ ಒಬ್ಬನೇ ಹೆಜ್ಜೆ ಹಾಕುತ್ತಿದ್ದಾನೆ ಬಲಿದತ್ತ. ತನ್ನ ಮೇಲೆಯೆ ಅವನಿಗೆ ಸಿಟ್ಟು ಉಕ್ಕೇರುತ್ತಿದೆ, ತಾನೇಕೆ ಇಷ್ಟೊಂದು ಸಮಯ ಹಾಳು ಮಾಡಿದೆ. ಬನುವಿನ ಮೇಲೂ ಕೋಪ ಬರುತ್ತದೆ. ಸ್ವಲ್ಪ ಸ್ವಲ್ಪವಾಗಿ ಆಲೋಚನೆ ಮಾಡಿದಂತೆ ಮನಸ್ಸಿಗೆ ಹಿಂಸೆ. ಜಾಸ್ತಿಯಾಗುತ್ತಾ ಹೋಗುತ್ತದೆ ತನ್ನ ಸಮಸ್ಯೆಗಳು, ತನ್ನ ಗೊತ್ತುಗುರಿಗಳು ನೆನಪಿಗೆ ಬರುತ್ತಿವೆ. ಹತ್ತಿರದಲ್ಲೇ ವೆಂಕಟರಾವ್ ಹತ್ತಿರದಲ್ಲೆ ಬನು. ಮುಂದೆ ಉಂಟಾಗುವ ಏಳುಬೀಳುಗಳ ತಾರತಮ್ಯ ಕಣ್ಣಿಗೆ ಮುಂದೆ ಮಿಂಚುತ್ತದೆ. ಹೇಗೆ ಕೆಲಸ ಮಾಡಿದರೆ ಹಾಗೆ ಫಲ ಸಿಕ್ಕುವುದು ನಿಜ. ಮಧ್ಯದಲ್ಲಿ ತರ್ಕವಿತರ್ಕ ಮಾಡುತ್ತಾ ಲೆಕ್ಕಾಚಾರವನ್ನೆಲ್ಲ ತಿರುಗಿಮುರುಗು ಮಾಡಿ ನೋಡುತ್ತಾನೆ. ಒಮ್ಮೊಮ್ಮೆ ಅದೃಷ್ಟದ ಕೈವಾಡ. ಆದರ ಅದೆಷ್ಟು ಬಾರಿ ಸಾಧ್ಯ? ಪ್ರಗತಿಶೀಲನಾದ ಮನುಷ್ಯ ಅದೃಷ್ಟದ ಕೈವಾಡಕ್ಕೆ ಹೆಚ್ಚು ಬೆಲೆ ಕೊಡುವುದಿಲ್ಲ, ಮಾಡಿದ ಕೆಲಸದ ಮೇಲೆ ಲೆಕ್ಕ ಹಾಕುತ್ತಾನೆ, ಲೆಕ್ಕಹಾಕಿ ಅದಕ್ಕೆ ಬಡ್ಡಿ ಸೇರಿಸಿ ತನ್ನ ದುಡಿಮೆಯ ಬೆಲೆಯನ್ನು ಅಂದಾಜು ಮಾಡುತ್ತಾನೆ. ಬನು ತನ್ನ ಕಾಲ ಮೇಲೆ ತಾನೇ ಕೊಡಲಿಯೇಟು ಹಾಕಿಕೊಳ್ಳುತ್ತಿದ್ದಾನೆ. ಹಾಗಿರಬೇಕಾದರೆ ಅದೃಷ್ಟ ತಾನೆ ಏನು ಮಾಡುತ್ತದೆ?

ಸಣ್ಣ ಸಣ್ಣ ಹೆಜ್ಜೆಗಳನ್ನಿಡುತ್ತಾ ಅವನು ತನ್ನ ಭವಿಷ್ಯದಲ್ಲಿ ನಡೆಯಲಾರಂಭಿಸುತ್ತಾನೆ. ಇದ್ದಕ್ಕಿದ್ದಂತೆ ಅವನು ಉಬ್ಬಿಹೋಗಿದ್ದಾನೆ. ತಲೆ ಮೇಲೆ ಮೇಲೆ ಏರುತ್ತಾ ಆಕಾಶವನ್ನು ಮುಟ್ಟದಿದ್ದರೂ ಆಕಾಶ ತಾನೇ ಬಗ್ಗಿ ಅವನ ತಲೆಯನ್ನು ಮುಟ್ಟುತ್ತಿದೆ. ನಾಲ್ಕೂ ಕಡೆ ಹೂವಿನಂತ ಅರಳಿರುವ ನಕ್ಷತ್ರಗಳು. ಕಾಲುಗಳ ಕೆಳಗಡೆ ಕತ್ತಲೆಯಲ್ಲಿ ಭೂಮಿ ಸುತ್ತುತ್ತಿದೆ. ಹಾಗೆಯೆ ಅವನು ಕಾಲು ಜಾಡಿಸುತ್ತಾನೆ, ಜಗತ್ತನ್ನೇ ಗೆಲ್ಲುತ್ತಾನೆ, ದಮನ ಮಾಡಿ ತನ್ನ ಗುರಿಯನ್ನು ಮುಟ್ಟುತ್ತಾನೆ. ಹತ್ತಿರದಲ್ಲೇ ಸಣ್ಣ ಹುತ್ತ, ಅದರ ಮರೆಯಲ್ಲಿರುವ ಸಣ್ಣ ಮುಳ್ಳು ಪೊದೆಯ ಕೆಳಗಡೆ ಮುದುರಿಕೊಂಡು ಕುಳಿತಿರುವವನು ಬನು ಅಲ್ಲವೆ. ಹಲ್ಲು ಕಿಸಿಯುತ್ತಾ ಕುಳಿತಿದ್ದಾನೆ, ಮೇಲುಗಡೆ ನೋಡುತ್ತಿದ್ದಾನೆ. ನಾನು ಅವನ ಮೇಲಧಿಕಾರಿಗಿಂತ ಮೇಲಧಿಕಾರಿ. ಮೇಲಧಿಕಾರಿ, ಇಲ್ಲ, ದಯೆಯಿಲ್ಲ, ಕರ್ತವ್ಯವನ್ನು ಮಾಡು ಮೊದಲು. ದಯೆಯಿಲ್ಲ,

ಮಾಯೆಯಿಲ್ಲ, ಒಳಗಿನಿಂದ ಅಧಿಕಾರಿಯ ಗತ್ತಿನ ಮಾತು ಹೊರಬರುತ್ತದೆ. ಮನುಷ್ಯತ್ವವಿಲ್ಲದ ಕರ್ತವ್ಯಪರಾಯಣತೆ.

ಹಹಹಹ - ಬಲಿದತ್ತ ಗಹಗಹಿಸಿ ನಗತೊಡಗಿದ.

ಮನಸ್ಸಿನ ಒಂದು ಗುಂಗು, ಕ್ಷಣಮಾತ್ರದಲ್ಲಿ ಅಲೆಕ್ಸಾಂಡರ್, ನೆಪೋಲಿಯನ್, ಹಿಟ್ಲರ್ ಆಗುತ್ತಾನೆ. ಇಲ್ಲವೆಂದರೆ ಅಮೆರಿಕೆಯ ರಾಷ್ಟ್ರಪತಿಯಾಗುತ್ತಾನೆ, ಫ್ರಂ ಲಾಗ್ ಕ್ಯಾಬಿನ್ ಟು ವೈಟ್ ಹೌಸ್. ಒಳ್ಳೆಯ ನಡತೆಯಾಗಿ ಅವನಿಗೆ ಬಹುಮಾನವಾಗಿ ಒಂದು ದೊಡ್ಡ ಪುಸ್ತಕ ಸಿಕ್ಕಿತ್ತು. ಅದೇ ಆ ಪುಸ್ತಕ - ಫ್ರಂ ಲಾಗ್ ಕ್ಯಾಬಿನ್ ಟು ವೈಟ್ ಹೌಸ್.

ಆದರೆ ಅವನ 'ವೈಟ್ ಹೌಸ್' ಅದಕ್ಕಿಂತ ಬೇರೆಯಾದುದು.

ಅದೊಂದು ದೊಡ್ಡ ಅಧಿಕಾರಿಯ ಬಂಗಲೆ, ತಾನೇ ಅದರ ಯಜಮಾನ. ಒಂದೆಡೆಯಲ್ಲಿ ಸಾಲುಸಾಲಾಗಿ ಜೋಡಿಸಿರುವ ಟೈಪ್‌ರೈಟರುಗಳ ಸದ್ದು ಕಿವಿಯ ಮೇಲೆ ಬೀಳುತ್ತಿದೆ. ಅಧಿಕಾರಿಯೆನಿಸಿಕೊಂಡಿರುವುದರಿಂದ ಕೇಳಲೇಬೇಕಾದ ಯಂತ್ರ ಸಂಗೀತ, ಕೆಲಸದಲ್ಲಿ ತೊಡಗಿರುವ ಬಾಯಿಗಳು, ಗೊಣಗುಟ್ಟುತ್ತಿರುವ ಸಂಗೀತದ ಆಲಾಪ. ಈ ತುದಿಯಿಂದ ಅವನು ನೋಡಿದರೆ ಸಾಕು, ಕಾಳಿನ ತೆನೆಯಂತೆ ಎಲ್ಲ ತಲೆಗಳೂ ಬಗ್ಗುತ್ತವೆ. ಅವುಗಳನ್ನು ಇವನು ಬೆಳೆಸಿ, ಕರ್ತವ್ಯದ ಅರಿವಿನ ತೃಪ್ತಿಯನ್ನು ಅಳಿಯದ ಯಶಸ್ಸನ್ನು ಪಡೆಯುತ್ತಾನೆ. ಇದಾದ ಮೇಲೆ - ಹಾರಿ ಹೋಗುತ್ತಿದ್ದಾನೆ, ಹುದ್ದೆ ಮೇಲೇರುತ್ತಿದೆ. ದೊಡ್ಡ ದೊಡ್ಡ ಕಟ್ಟಡಗಳು, ಸಾಲುಸಾಲಾಗಿರುವ ಜಮೀನು, ಕಣ್ಣು ಹಾಯುವವರೆಗೂ ತನ್ನದೇ ಹತ್ತಿಪ್ಪತ್ತು ಎತ್ತಿನ ಗಾಡಿಗಳು, ಬೇಸಾಯಕ್ಕಾಗಿ ಮತ್ತು ಬಾಡಿಗೆ ದುಡಿಯುವುದಕ್ಕಾಗಿ. ಪಟ್ಟಣದಲ್ಲಿ ಬಾಡಿಗೆಗೆ ಓಡಿಸುವುದಕ್ಕಾಗಿ ನಾಲ್ಕಾರು ರಿಕ್ಷಾಗಳು.

ಇಷ್ಟರ ಮೇಲೆ ತನಗೊಂದು ಕಾರು. ಸರಿ, ಕಾರಂತೂ ಇರಲೇಬೇಕಲ್ಲ. ಒಂದು ಜೀಪು ಇರಬೇಕು, ವೇಗವಾಗಿ ಸಾಗುತ್ತದೆ.

ಆದರೂ ಒಂದರ ಮೇಲೊಂದು ಮೂಡುತ್ತಿರುವ ಕಲ್ಪನೆಗಳ ಜೋಡಣೆ ಸರಿಯಾಗಿಲ್ಲ.

ಅಭ್ಯಾಸವಿಲ್ಲ, ನಿಧಾನವಾಗಿ ಹೇಗೋ ಆಗುತ್ತದೆ.

ಬೊಂಬು ಬೆಳೆದರೆ ಅದರೊಟ್ಟಿಗೆ ಒಳಗಿನ ಪೊಳ್ಳು ಸಹ ಬೆಳೆಯುತ್ತಾ ಹೋಗುತ್ತದೆ.

ಇದ್ದಕ್ಕಿದ್ದ ಹಾಗೆ ಎದುರಿಗೆ ಪೋಲೀಸು ಹಾಜರು. ಬಿಗಿಮೋರೆ ಮಾಡಿಕೊಂಡು ಗಂಭೀರವಾಗಿ ಹೆಜ್ಜೆ ಹಾಕುತ್ತಾ ಬರುತ್ತಿದ್ದಾನೆ. ಎತ್ತರದ ಆಳು, ಕತ್ತಲೆಯಲ್ಲಿ ಮೈಮೇಲೆ ಎರಗುವಂತೆಯೇ ಬರುತ್ತಿದ್ದಾನೆ. ಅಯ್ಯೋ, ಏನಪ್ಪಾ, ಗತಿದೇವರೆ! ಇದೇನಿದು! ಅದೂ ಬಡಪಾಯಿ ಬಲಿದತ್ತನ ಎದುರಿಗೆ! ಕಂಪನಿಯೊಂದರ ಯಃಕಶ್ಚಿತ್ ಕೆಲಸಗಾರ, ರಾಜಕೀಯದಿಂದ ಬಹುದೂರ. ಕಳ್ಳತನ ಸುಲಿಗೆಗಳೆಂದರೆ ಥರಥರ ನಡುಗುವವನು. ಎರಡು ದಷ್ಟಪುಷ್ಟವಾದ ಕೈಗಳು ಇನ್ನೇನು ಕುತ್ತಿಗೆಯ ಹತ್ತಿರ ಬರಲಾರಂಭಿಸಿದವು. ಮೈಯೆಲ್ಲ ಗಡಗಡ ನಡುಗಿತು. ಜೀವ ಧಗ್ ಅಂದಿತು. ಮುಖದ ಮೇಲೆ ಬೆವರು, ಮಾತಿಲ್ಲ, ಇಕ್ಕಳದಂತೆ ಎರಡು ಕೈಗಳು ಕುತ್ತಿಗೆಯನ್ನು

ಬಳಸುತ್ತಿವೆ, ಮುಖದ ಹತ್ತಿರ ಮುಖ ಬರುತ್ತಿದೆ. ಏನು ಗ್ರಹಚಾರವೊ, ಯಾವುದಕ್ಕೆ ಊನ ಬರುತ್ತದೊ ? ಬೆನ್ನಿನ ಮೇಲೆ ಧಡಾರೆಂದು ಗುದ್ದು, ಫಿರಂಗಿ ಹೊಡೆದಂತಿತ್ತು.

"ಬಡ್ಡಿ.... ಮ... ಗ...ನೆ - ಓಗ್ಯಾಕೋ ಹೆದರಿ ನಡುಗುತ್ತಿದ್ದಿ ? ಏನು ಎಲ್ಲಾದ್ರೂ ಬಾಟ್ಲಿ ಗೀಟ್ಲಿ ಹಾಕ್ಕೊಂಡು ಬರ್ತಾ ಇದ್ದೀಯಾ ? ನನ್ನ ಹತ್ರ ನಿನ್ನ ಆಟ ನಡೆಯೋದಿಲ್ಲ, ನನ್ನದು ಬೀಟು."

"ಯಾರು ? ರಾಜಾನೆ! ಅಯ್ಯೋ, ಒಳ್ಳೆ ರಾಕ್ಷಸನ ಹಾಗೆ ಊದಿದ್ದೀಯಲ್ಲೋ, ಅಯ್ಯೋ ನಿನ್ನ"

"ನಾನು ಯಾವತ್ತು ತಾನೆ ಕಡಮೆಯಾಗಿದ್ದೆ!.... ಶ್, ಮತ್ತೆ ನಡುಗುತ್ತಿದ್ದೀಯ ಏಕೆ ? ಹೆದರಿಕೆ ಆದ್ರೆ ತಲೆಬಗ್ಗಿಸಿ ಕೂತ್ಕೊ, ಆಸಾಮಿ ಇದ್ದಹಾಗೇ ಇದ್ದೇನೆ, ಎವರೆಡಿ, ನೀನು ಹಾಳಾದವನು ಆಕಾಶದಲ್ಲೇ ಕೂತಿದ್ದೀಯಲ್ಲ. ನಿನ್ನ ಮನಸ್ಸು ನನ್ನ ಮೇಲೆ ಮೊದಲಿನ ಹಾಗೇ ಇದೆಯಾ ಹೇಗೆ ?"

ಚೆನ್ನಾಗಿ ಸಿಡುಕಾಡಿ ಬೈಯ್ಯೋಣ ಅಂತ ಮನಸ್ಸಿನಲ್ಲಿ ಅನ್ನಿಸುತ್ತದೆ. ಆದರೆ ಮನಸ್ಸನ್ನು ಹಿಡಿತದಲ್ಲಿ ಇಟ್ಕೊಳ್ಳದೆ ಹೋದರೆ ಪ್ರಯೋಜನವಿಲ್ಲ. ಇದೇ ರಾಜ, ಚಿಕ್ಕಂದಿನ ಜೊತೆಗಾರ. ಎಳೆತನದ ನೆನಪು ಮೂಡುತ್ತದೆ. ದೊಡ್ಡವರಾದ ಮೇಲೆ ಒರಟಾದ ಗಲ್ಲ ಸವರಿದಾಗ ಅಂದಿನ ಅನುಭವಗಳೆಲ್ಲ ನೆನಪಿಗೆ ಬರುತ್ತದೆ. ರಾಜನ ಎದುರಿಗೆ ಏನು ಬಾಯಿಬಿಡಲೂ ಸಾಹಸವಾಗುವುದಿಲ್ಲ. ಅವನ ಲಂಗುಲಗಾಮಿಲ್ಲದ ನಾಲಗೆ ಕಂಡರೆ ಭಯವಾಗುತ್ತದೆ. ಹಾಳಾದವನು ಮನಸ್ಸಿಗೆ ಬಂದದ್ದನ್ನು ಹೇಳಿಬಿಡುತ್ತಾನೆ.

ಇದೇ ರಾಜ, ಒಬ್ಬ ದೊಡ್ಡ ಜಮೀನುದಾರರ ಮಗ, ಈಗ ಕಾನ್ಸ್ಟೇಬಲ್ ಕೆಲಸ ಮಾಡುತ್ತಾ ಇದ್ದಾನೆ. ಅಲ್ಪಸ್ವಲ್ಪ ಧೈರ್ಯ ಒಟ್ಟುಗೂಡಿಸಿಕೊಂಡು ಬಲಿದತ್ತ ಕೇಳಿದ - "ಜಮೀನ್ದಾರರ ಮಗನಾಗಿ ನಿಂಗೆ ಕಾನ್ಸ್ಟೇಬಲ್ ಕೆಲಸ ಹೇಗೆ ಹಿಡಿಯುತ್ತದೆ ರಾಜ ? ಎಲ್ಲಾ ಚೆನ್ನಾಗಿದೆಯಾ , ಹೇಗೆ ?"

"ಅಯ್ಯೋ, ಜಮೀನುದಾರರ ಮನೆ, ಅದಕ್ಕೊಂದು ತೆವಲು ಬಡೀತು, ಚಾಕರೀನಲ್ಲಿ ನಾವೆಲ್ಲ ಜಮೀನ್ದಾರರೇ"

"ಒಳ್ಳೇ ಸರದಾರ ಇದ್ದ ಹಾಗಿದ್ದೀಯಲ್ಲಯ್ಯ, ಅದು ಸರಿ. ಹಳ್ಳೀಲಿದ್ದಿಯಲ್ಲ, ವರ್ಗವಾಗಿ ಇಲ್ಲಿಗೆ ಬಂದ್ಯಾ ?"

"ಹೌದು, ವರ್ಗವಾಗಿದೆ. ಸರದಾರನಾದರೇನು, ಇಲ್ಲದಿದ್ದರೇನು, ಹೇಗೊ ಹೊಟ್ಟೆಪಾಡು ನಡೆದುಕೊಂಡು ಹೋಗುತ್ತಿದೆ. ಇಲ್ಲದಿದ್ದರೆ ? ಜಮೀನುದಾರಿ ಅದೆಲ್ಲ ಅಪ್ಪ ಅಜ್ಜನ ಜೊತೆಯಲ್ಲೇ ಹಾರಿಹೋಯ್ತು. ಹುಡುಗಾಟ ಆಡೋದರಲ್ಲೆ ಓದೋ ಕಾಲವು ಕಳೆದುಹೋಯ್ತು. ಆದರೆ ನೋಡು, ದೊಡ್ಡವರು ಇದೊಂದನ್ನ ನಂಗೆ ಕೊಟ್ಟಿದ್ದಾರೆ - ಈ ಮುಖ. ನೋಡಿದಾಗಲೆಲ್ಲ ನಮ್ಮ ಸಾಹೇಬ್ರ ಹೇಳ್ತಾರೆ - ಫಸ್ಟ್ ಕ್ಲಾಸ್ ಆಗಿದ್ದೀಯ ಅಂತ. ಸರಿ, ಅದನ್ನೇ ಬಂಡವಾಳವಾಗಿಟ್ಟುಕೊಂಡು ವ್ಯವಹಾರ ನಡೆಸೋದು. ಅದು ಸರಿ, ನಿನ್ನ ಕೆಲಸ ಹೇಗಿದೆ ಹೇಳು. ಪ್ರಮೋಶನ್ನೇನಾದರೂ ಸಿಕ್ಕಿತೆ ? ಒಳ್ಳೆ ಗುಂಡಗುಂಡಗೆ ಚೋಂಡಾ ಆಗ್ತಿದ್ದಿ - ಸ್ವಲ್ಪ ತಡಿಯಯ್ಯ ಇರ್ಲಿ. ನೋಡು, ಇನ್ನೊಂದು ನಾಲ್ಕು ದಿನ ಹೋದರೆ ಒಳ್ಳೆ

ಫುಟ್‌ಬಾಲ್ ತರ ಆಗ್ತೀಯ. ಏನಾದರೂ ಬ್ಲಾಕ್ ಮಾರ್ಕೆಟ್ ವ್ಯವಹಾರ, ಒಳಗೊಳಗೇ ? ಚೆನ್ನಾಗಿ ಮೈಗೆ ಹಿಡಿಯುತ್ತಾ ಹೇಗೆ ?"

"ಥೂ ನಿನ್ನ, ಈ ಹಾಳು ಮಾತುಗಳನ್ನು ಆಡೋದನ್ನ ಇನ್ನೂ ಬಿಟ್ಟಿಲ್ಲವೇನೊ."

"ಅಯ್ಯೋ, ಬಿಟ್ಟರೂ ಏನಾಯ್ತು ಹೇಳು ? ನೀನು ಬಡ್ತಿ ಮಗ ದೊಡ್ಡ ಮನುಷ್ಯನಾಗಿಬಿಟ್ಟಿದ್ದಿ. ನೋಡಯ್ಯ, ಕಳ್ಳಕಾಕರು ದರೋಡೆಕೋರರು ಬದ್ಮಾಶ್‌ಗಳೆ ನಮ್ಮ ಜೊತೆಯಲ್ಲಿರುವವರು. ಹಾಗಾಗಿ ನಮ್ಮ ಮಾತೇ ಹೀಗೆ - ಹೂಂ, ಏನೋ ಒಟ್ಟಿನಲ್ಲಿ ತುಂಬ ದಿನದ ಮೇಲೆ ನೋಡಿದ ಹಾಗಾಯ್ತು. ನೀನೋ ಕತ್ತಲಲ್ಲಿ ಓಡಿಹೋಗ್ತಾ ಇದ್ದೆಯಲ್ಲ - ಎಲ್ಲೋ ಏನೋ ಕಸರತ್ತು ಮಾಡಿ ಬಂದಿದ್ದಾನೆ ಅಂದುಕೊಂಡೆ, ಹಾಳಾದ್ದು ಯಾವಾಗಲೂ ಅನುಮಾನದ ಕಣ್ಣುಗಳಲ್ಲ. ಪ್ರಪಂಚ ಎಷ್ಟೊಂದು ಬದಲಾಯಿಸಿ ಹೋಗ್ತಿದೆ, ಬಿಡಯ್ಯಾ"

"ನೋಡಿದ್ರೆ ಏನು ತುಂಬ ಖುಷಿಯಾಗಿರೋ ಹಾಗೆ ಕಾಣ್ತೀಯಲ್ಲ. ಏಕೆಂದರೆ ಎಲ್ಲರೂ ಎಷ್ಟು ದುಡಿದರೂ ಎರಡು ಹೊತ್ತಿಗೆ ಸಾಕಾಗೋದಿಲ್ಲ ಅನ್ನೋರೆ. ನೀನು ನೋಡಿದ್ರೆ ಮಾಮೂಲಿ ಕಾನ್‌ಸ್ಟೇಬಲ್ ಕೆಲಸದಲ್ಲೇ"

"ಅಯ್ಯೋ ನಿನ್ನ, ಕಾನ್‌ಸ್ಟೇಬಲ್ ಕೆಲಸ ಸಾಧಾರಣ ಅಲ್ಲಯ್ಯ. ಇದೇನು ಮಾಮೂಲಿ ಕೆಲಸ ಅಂದುಕೊಂಡುಬಿಟ್ಟೆಯಾ ? ಬೇರೆ ಕೆಲಸಗಳ ಹಾಗೆ ಇದೂ ಒಂದು ಕೆಲಸ. ನೀನು ಒಬ್ಬ ಸಾಹೇಬನ ಬೂಟು ತಿಕ್ಕುತ್ತಿದ್ದರೆ ನಾನು ಇನ್ನೊಬ್ಬ ಸಾಹೇಬನಿಗೆ ಸಲಾಮು ಹಾಕ್ತೀನಿ ಅಷ್ಟೆ. ಕೆಲಸ ಅಂದಮೇಲೆ ಕೆಲಸ, ಎಲ್ಲ ಒಂದೇ."

"ನಿಜ ಹೇಳಬೇಕಂದ್ರೆ ರಾಜ್, ನಿನ್ನ ಸ್ಪಿರಿಟ್ ನನಗೆ ಇಷ್ಟವಾಯಿತು. ಅದೆಷ್ಟೊಂದು ಕಷ್ಟಗಳು ಬಂದವು, ಹೋದವು. ನೀನು ಮಾತ್ರ ಇದ್ದ ಹಾಗೆ ಇದ್ದೀಯ. ನಿನ್ನನ್ನು ಕಂಡರೆ ತುಂಬ ಅಭಿಮಾನ ನೋಡು."

"ಹೌದೌದು. ಶ್ರದ್ಧೆ ಅಭಿಮಾನ ಭಕ್ತಿ ಎಲ್ಲ ಇರಬೇಕಲ್ಲವೆ, ನಮಸ್ಕಾರ ಹೊಡಿ, ನಮಸ್ಕಾರ ಹೊಡಿ ಮಗನೆ. ಹಳ್ಳೀಲಿ ನಿನ್ನ ಮನೆಯ ಹದಿನಾಲ್ಕು ತಲೆಮಾರಿನೋರು ನನ್ನ ಮನೆಯ ಹದಿನಾಲ್ಕು ತಲೆಮಾರಿನ ಮುಂದೆ ತಲೆಬಗ್ಗಿಸಿ ಓಡಾಡಿದ್ದೇ ಓಡಾಡಿದ್ದು. ನೀನೀಗ ಒಬ್ಬ ನಮಸ್ಕಾರ ಹೊಡೆದರೆ ಹೊಸದೇನೂ ಅನಿಸೋದಿಲ್ಲ. ಇರಲಿ ಬಿಡು, ನೀನೇನು ನನಗೋಸ್ಕರ ಇಷ್ಟೊಂದು ಒದ್ದಾಡಬೇಕಿಲ್ಲ. ನಿಂಗೆ ನಿನ್ನದೇ ಬೇಕಾದಷ್ಟು ತಾಪತ್ರಯಗಳಿರಬಹುದು."

"ನನಗೆಂಥ ತಾಪತ್ರಯ ಬಿಡಯ್ಯ."

"ಹಾಗನ್ನಬೇಡ, ಸುಮ್ಮನಿರು, ಎಷ್ಟೇ ದೊಡ್ಡ ಮನುಷ್ಯರಾಗಲಿ ತಾಪತ್ರಯ ಎಲ್ಲಿಗೆ ಹೋಗುತ್ತೆ ? ತಾಪತ್ರಯಗಳು ಬಂದೇ ಬರುತ್ತವೆ. ಈ ಕಡೆಯಿಂದ ಬರ್ತವೆ, ಆ ಕಡೆಯಿಂದ ಹೋಗ್ತವೆ. ಸಂಬಳ ಹೆಚ್ಚುತ್ತೆ, ತುಟ್ಟಿಭತ್ಯ ಹೆಚ್ಚುತ್ತೆ. ಈ ಕಡೆ ಎದ್ದರೆ ಆ ಕಡೆ ಬೀಳಬೇಕು ಅಷ್ಟೆ. ಬರ್ತಾ ಇರತ್ತೆ, ಹೋಗ್ತಾ ಇರತ್ತೆ, ಇದ್ದೇ ಇರೋದು ಇವಲ್ಲ."

"ನೀನು ನಿನ್ನ ಕೈಯನ್ನು ಹಿಂದಕ್ಕೆ ತಗೆದುಕೊ ಮಾರಾಯ, ನೋಡಿದೋರು ಇವನಿಗೆಲ್ಲೊ ಉಸಿರುಕಟ್ಟಿದೆ, ಕೃತ್ರಿಮವಾಗಿ ಉಸಿರಾಡಿಸ್ತಾ ಇದ್ದಾನೆ ಅಂದುಕೊಳ್ತಾರೆ.

ನೋವು ಬಂದುಬಿಡ್ತು ನೋಡು-"

"ಸರಿ, ನಿನಗೆ ಕೃತ್ರಿಮವಾಗಿ ಉಸಿರಾಡಿಸಬೇಕು ಅನ್ನು ಹಾಗಾದರೆ. ಈ ಪ್ರಪಂಚದಲ್ಲಿ ನೋಡು. ನೀವೆಲ್ಲ ಓದುಬರಹ ಕಲಿತು ಗುಮಾಸ್ತರಾದಿರಿ, ಉಸಿರೇ ಇಲ್ಲ. ಖುಷಿಪಡೋದು ಅನ್ನೋದನ್ನ ಕೇಳಿಕೊಂಡೇ ಬರ್ಲಿಲ್ಲ. ಅದನ್ನೆಲ್ಲ ಅನುಭವಿಸೋ ತಾಕತ್ತೂ ಇಲ್ಲ. ದುಃಖದಿಂದ ಉಸಿರು ಹಿಡಿದ ಹಾಗಾಗ್ತಿದೆ. ಅದಕ್ಕೆ ಕೈಕಾಲು ಜಾಡಿಸ್ತಾ ಚಡಪಡಿಸ್ತಿದೀಯಾ? ಕೆಲಸ - ಕೆಲಸ - ಬಿಟ್ರೆ ಇನ್ನೇನಿದೆ ನಿಮಗೆ ?"

"ಆಹಾ, ಎಂಥ ಭಾವುಕ ಕಾನ್ಸ್ಟೇಬಲ್, ಕವಿ ಕಾನ್ಸ್ಟೇಬಲ್-"

"ಹೌದು ಭಾವುಕ, ಇಲ್ಲದಿದ್ರೆ ಕವನ ಎಲ್ಲಿಂದ ಬರ್ಬೇಕು, ನೀನೇನೂ ಹತ್ತಿರ ಇರಲ್ಲವಲ್ಲ-"

"ನಿಜ ಕಣಯ್ಯ, ನಿನ್ನ ಮಾತು ಕಾವ್ಯದಂತೆ ಇರತ್ತೆ-"

"ಗೊತ್ತಿಲ್ಲವಾ ನಿನಗೆ. ನಮ್ಮ ತಾತ ಭಾರತದ ಪದ್ಯಗಳನ್ನು ಹಾಡ್ತಾ ಇದ್ದರೂ - ಅಯ್ಯೋ ಬಿಡಿ, ಆರಾಮವಾಗಿ ಇರಯ್ಯ. ಏನೋ ಹೀಗೇ ಕಂಡಾಗ ಒಂದು ನಾಲ್ಕು ಒಳ್ಳೇ ಮಾತು, ಬರ್ತೀನೆ - ಡ್ಯೂಟಿ ಇದೆ"

"ನಮಸ್ಕಾರ"

"ಥತ್ ಇವನ - " ಹೊರಟುಹೋಗುತ್ತಾನೆ. ಲೆಫ್ಟ್ - ರೈಟ್, ಲೆಫ್ಟ್-ರೈಟ್ ಮಜಬೂತಾದ ಆಸಾಮಿ.

ಅದೆಷ್ಟು ಹಳೆಯ ಕಾಲದ ಜಮೀನುದಾರರ ಮನೆಯ ಮಗ. ದೊಡ್ಡ ದೊಡ್ಡ ಮನೆತನದ ಹುಡುಗರೂ ಕಾನ್ಸ್ಟೇಬಲ್ಲುಗಳಾಗಿ ತಾಪೇದಾರಿಗೆ ಸೇರಿದ್ದಾರೆ. ನಗೋದರಲ್ಲಿ ಕುಣಿಯೋದರಲ್ಲಿ ಹುಡುಗುತನವೆಲ್ಲ ಕಳೆಯುತ್ತದೆ. ಹಾಗೂ ಹೀಗೂ ದುಡ್ಡೆಲ್ಲ ಕೈಬಿಟ್ಟು ಕರಗಿಹೋಗುತ್ತದೆ. ಹಿರಿಯರ ಮುಖದ ಕಳೆ ಮಾತ್ರ ಮುಖದಲ್ಲಿ ಉಳಿದಿರುತ್ತದೆ. ಜಬರದಸ್ತಾದ ಮೈಕಟ್ಟೇ ಅವನ ವ್ಯಕ್ತಿತ್ವದ ಅಡಿಪಾಯ. ತಲೆಮಾರಿನಿಂದ ಬಂದ ದಬ್ಬಾಳಿಕೆ ಪ್ರವೃತ್ತಿ ಮತ್ತ ರೋಫುಹೊಡೆಯುವ ಭಯ ಹುಟ್ಟಿಸುತ್ತದೆ. ಕೆಲಸ ಹೇಗೋ ನಡೆದುಹೋಗುತ್ತದೆ.

ರಾಜನ ಮಾತು ನೆನಪಿಗೆ ಬರುತ್ತದೆ. ಕೈಗೊಬ್ಬ ಕಾಲಿಗೊಬ್ಬ ಆಳುಗಳಿರುತ್ತಿದ್ದರು.

ಆಷಾಢಭೂತಿಯಂತಿದ್ದರೂ ಕ್ಲಾಸಿನಲ್ಲಿ ಅವನು ಮುಂದಿದ್ದ ವಿದ್ಯಾರ್ಥಿಯಾಗಿದ್ದ ಎಂಬುದು ನೆನಪಾಗುತ್ತದೆ. ಆಮೇಲೆ ?

ಹಾಳಾಗಲಿ ಅವನು, ನೆಗೆದುಬಿದ್ದು ಹೋಗಲಿ. ಬಲಿದತ್ತ ನೇರವಾಗಿ ಮನೆಯತ್ತ ಹೆಜ್ಜೆ ಹಾಕುತ್ತಾನೆ.

ಆದರೆ ಅವನು ಚಿಂತೆಗೊಳಗಾಗಿದ್ದಾನೆ. ಮನಸ್ಸು ಕಳವಳಗೊಂಡಿದೆ.

ನೆನಪಿಗೆ ಬರುತ್ತದೆ-ರಾಜನ ನಡೆನುಡಿಗಳಲ್ಲಿ ನಗೆ ಇನ್ನೂ ಮಾಸಿಲ್ಲ. ಇನ್ನೂ ಹಳೆಯ ಕಂತೆ ಪುರಾಣವನ್ನೇ ಓದರಿ ಎಲ್ಲ ಇನ್ನೂ ಹಾಗೇ ಇದೆ ಎಂದು ಸಾಬೀತುಪಡಿಸುತ್ತಾನೆ. ಎಲ್ಲಾದರೂ ಮತ್ತೆ ಗಂಟು ಬಿದ್ದರೆ ?

ಇದ್ದಕ್ಕಿದ್ದಂತೆ ವೆಂಕಟರಾವ್ ಹಾಕುವ ಲೆಕ್ಕಾಚಾರ ಮತ್ತು ಬಲಿದತ್ತನ ಅದೃಷ್ಟ ಒಂದೇ ಅಂತರದಲ್ಲಿ ಪರಸ್ಪರ ಸರಿಯುತ್ತಾ ಒಂದೆಡೆ ಸೇರುವ ಬಯಕೆಯನ್ನು

ವ್ಯಕ್ತಪಡಿಸುತ್ತಿವೆಯೇನೋ ಅನಿಸುತ್ತದೆ. ಇನ್ನೂ ಬೆಳಗಿನ ಮಾತಕ್ಕೆ - ವೆಂಕಟರಾವ್ ಹೇಳಿದ್ದ - "ದಾಸ್, ಈ ಸಾರಿ ಸಿಹಿ ಮಾಡಿಸಿಬಿಡಿ" ಆದರೆ ದೊಡ್ಡ ಹುದ್ದೆ ಎಲ್ಲರ ಕಣ್ಣಮುಂದೂ ಖಾಲಿ ಬಿದ್ದಿದೆ. ವೆಂಕಟರಾವ್, ಬಲಿದತ್ತ ಮತ್ತು ಇನ್ನು ಅನೇಕರು ಅದರ ಮೇಲೆ ಕಣ್ಣಿಟ್ಟಿದ್ದಾರೆ. ಬಲಿದತ್ತ ಸಂದೇಹದಿಂದ ನೋಡಿದ್ದ - ವೆಂಕಟರಾವ್ ಸರಿಯಾಗಿ ಹೇಳುತ್ತಿದ್ದಾನೆಯೆ ?

ವೆಂಕಟರಾವ್ ಈ ರೀತಿ ಹೇಳುತ್ತಾ ಲೆನ್ಸಿನ ಕೆಳಗೆ ತನ್ನ ಬಲಗೈ ಹಿಡಿದು ಅಂಗೈನ ಹಳ್ಳಗಳನ್ನು ಎಚ್ಚರಿಕೆಯಿಂದ ಪರೀಕ್ಷಿಸಿ ಹೇಳುತ್ತಿದ್ದ. ಬೆರಳಿನ ಕೆಳಗೆ ಚೆನ್ನಾಗಿ ಉಜ್ಜಿನೋಡಿದ. ಮುಖ ಸಪ್ಪೆಯಾಯಿತು. ಸ್ನೇಹಿತನ ಪ್ರಶ್ನೆಗೆ ಮುಖವೆತ್ತಿ ನಕ್ಕು ಹೇಳಿದ - "ಏನಂದ್ರಿ ? ಸರಿಯಾಗಿದೆಯಾ ಅಂತಲೆ ? ಸರಿ, ಈ ವಿದ್ಯೆ ಸರಿಯಾಗಿದೆ ಅನ್ನುವುದಾದರೆ ಸರಿಯೆ ?"

ವೆಂಕಟರಾವ್ ಹತ್ತಿರವಿದ್ದ ಗಡಿಯಾರದ ಮಾರ್ಕಿನ ಕಡೆಯ ಸಿಗರೇಟು ಎಳೆದು ಬಾಯಿಗೆ ತುರುಕಿ ಕಡ್ಡಿ ಹಚ್ಚುತ್ತಿದ್ದಂತೆಯೆ ಬಲಿದತ್ತನ ಕೈ ನಡುಗತೊಡಗಿತ್ತು. ಮುಂದಿನ ಬದುಕಿನ ಭಾಗ್ಯದೇವತೆಯ ಹರಕೆಯ ಝೂಳ ದೂರದಿಂದಲೆ ತಟ್ಟುತ್ತಿರುವಂತೆ ಭಾಸವಾಯಿತು.

ಅಂದು ಮಧ್ಯಾಹ್ನವೇ-

ಇದ್ದಕ್ಕಿದ್ದಂತೆ ಸಾಹೇಬರ ಅಪ್ಪಣೆಯಾಗಿದೆ - ಜೊತೆಯಲ್ಲಿ ಹೋಗಬೇಕಂತೆ, ಸಾಹೇಬರ ದೊಡ್ಡ ಕಾರಿನಲ್ಲಿ ಅವರ ಜೊತೆಯಲ್ಲಿ ಕುಳಿತುಕೊಂಡು ಯಾವುದೋ ಸ್ಥಳಕ್ಕೆ ಹೋಗಬೇಕು. ಬಲಿದತ್ತನ ತಲೆ ಗಿರ್ ಅಂತ ತಿರುಗಿತು.

ಕಚೇರಿಯಲ್ಲಿ ಕನ್ನಡಿಯ ಮುಂದೆ ನಿಂತುಕೊಂಡು ಅವನು ಮೊದಲು ತನ್ನ ಮುಖ ನೋಡಿಕೊಂಡ. ಹಲ್ಲಿನಮೇಲೆ ಎಲೆಯಡಿಕೆ ಕೆಂಪಿಲ್ಲ, ನಾಲಗೆಯ ಮೇಲಿದೆ. ಮುಂದಿನ ಹಲ್ಲುಗಳು, ಮುಖದ ಮೇಲಿನ ಬೆವರು, ಕಿವಿಯ ಕೊಳೆ, ಮೂಗಿನ ಸಿಂಬಳ ಎಲ್ಲವನ್ನೂ ಉಜ್ಜಿ ಸರಿ ಮಾಡಿಕೊಂಡ. ತೊಟ್ಟಿರುವ ಬಟ್ಟೆಗಳ ಧೂಳು ಹೊಡೆದುಕೊಂಡ. ಎಲ್ಲ ಬೇಗಬೇಗ. ಕನ್ನಡಿಯಲ್ಲಿ ಮತ್ತೊಂದು ಬಾರಿ ಇಡೀ ಮೈಯನ್ನೆಲ್ಲ ನೋಡಿಕೊಂಡು ಜೈಭವಾನಿ ಅಂತ ಬೇಗಬೇಗನೆ ಹೆಜ್ಜೆ ಹಾಕಿದ.

ಸಾಹೇಬರು ಕಾರಿನ ಕಡೆ ಹೋಗುತ್ತಿದ್ದಾರೆ. ಸ್ಟಿಯರಿಂಗ್ ಮೇಲೆ ಕೈಯ್ಯಾಡಿಸುತ್ತಿದ್ದಾರೆ. ಹಿಂದಿನ ಸೀಟಿನಲ್ಲಿ ಸಾಹೇಬರ ಬಾಡಿಗಾರ್ಡ್ ಅಲ್ಸೇಷಿಯನ್ ಕುಳಿತಿದೆ, ನಾಲಗೆ ಹೊರಚಾಚುತ್ತಿದೆ. ಬಲಿದತ್ತ ದಿಗ್ಭ್ರಾಂತಿಗೊಂಡು ಕಾರಿನ ಆಕಡೆಯಿಂದ ಈ ಕಡೆಯವರೆಗೆ ಗಡಿಬಿಡಿಯಿಂದ ಓಡಾಡುತ್ತಿದ್ದಾನೆ. ಏನು ಮಾಡಬೇಕೆಂದೇ ಹೊಳೆಯುತ್ತಿಲ್ಲ. ಸಾಹೇಬರು ಒಂದು ಸಾರಿ ಅವನ ಕಡೆ ಕಣ್ಣು ಹಾಯಿಸಿದರು, ಅವನು ತಲೆ ಬಗ್ಗಿಸಿ ಸೆಲ್ಯೂಟ್ ಹೊಡೆದ. ಕೂಡಲೇ ಸಾಹೇಬರು ಬೇರೆ ಕಡೆ ಮುಖ ತಿರುಗಿಸಿಕೊಂಡರು. ಈಗ ಮಾಡುವುದಾದರೂ ಏನು ? ಅವರ ಗಮನವನ್ನು ತನ್ನತ್ತ ಸೆಳೆಯಲು ಏನು ಮಾಡಬೇಕು ? ಕೆಮ್ಮಬೇಕೆಂದು ಮನಸ್ಸಾಗುತ್ತಿದೆ - ಬೂಟನ್ನು ಖಟಖಟ ಅಂತ ಸದ್ದು ಮಾಡಬಹುದು, ಆದರೆ ಅವರಿಗೆ ಸಿಟ್ಟು ಉಕ್ಕೇರಿದರೆ ? ಇಂಜಿನ್ ಚಕ್ಕಿನಂತೆ ಗುರ್ ಗುರ್ ಅನ್ನತೊಡಗಿತು. ಇದೆಂಥ ಪೇಚು, ಸ್ವರ್ಗದ ಬಾಗಿಲು ತೆರೆದು ಮತ್ತೆ ನರಕಕ್ಕೆ ತಳ್ಳಲು ಯಾರೋ ಕೈ ಹಾಕುತ್ತಿದ್ದಾರೆ. ರೈಲು

ಓಡಿಯೋ ಹೊತ್ತಿಗೆ ಬಾಗಿಲು ಮುಚ್ಚಿದಂತಾಗಿದೆ, ರೈಲು ಹೊರಡುತ್ತಿದೆ, ಒಳಗಿನಿಂದ ಯಾರೋ ತಳ್ಳುತ್ತಿದ್ದಾರೆ. ಆ ಎರಡು ನಿಮಿಷಗಳು ಅವನ ಪಾಲಿಗೆ ಒಂದು ಯುಗದಂತಾಯಿತು.

ಆಗ ಇದ್ದಕ್ಕಿದ್ದಂತೆ ಎಲ್ಲಿಂದಲೊ ಅದೃಷ್ಟದ ಎಳೆಬಿಸಿಲು ಬಿದ್ದಂತಾಯಿತು. ಹೆಡ್ ಗುಮಾಸ್ತರು ಓಡುತ್ತಾ ಬಂದು ಕಾಗದಗಳ ಕಟ್ಟೊಂದನ್ನು ಸಾಹೇಬರ ಹತ್ತಿರ ತಂದಿಟ್ಟರು. ಸಾಹೇಬರು ಮುಖ ತಿರುಗಿಸಿಕೊಂಡರು. ಗಲಿಬಿಲಿಗೊಂಡು ಆಕಡೆ ಈಕಡೆ ನೋಡುತ್ತಿದ್ದ ಬಲಿದತ್ತ ಮತ್ತೆ ಬಗ್ಗಿ ಸಲಾಮು ಹಾಕಿದ. ಸಾಹೇಬರು ಹಿಂದಿನ ಸೀಟು ತೋರಿಸಿ ಅಪ್ಪಣೆ ಮಾಡಿದರು "ಕೂತುಕೊ."

ಇನ್ನೇನು ಕುಳಿತುಕೊಳ್ಳುತ್ತಿದ್ದಂತೆಯೆ ಕಾರು ಹೊರಟಿತು. ಕಾರಿನ ಬಾಗಿಲನ್ನು ಸರಿಯಾಗಿ ಎಳೆಯಲು ಅವನಿಗೆ ಸಾಧ್ಯವಾಗಲಿಲ್ಲ. ತೆಗೆದಿದೆ, ಜೀವ ಕೈಯಲ್ಲಿ ಹಿಡಿದುಕುಳಿತಿದ್ದಾನೆ. ಮತ್ತೆ ಕೆಟ್ಟ ಯೋಚನೆ. ಈ ಸಾರಿ ಮೈ ಬೆವರೊಡೆಯಿತು. ಇದ್ದಕ್ಕಿದ್ದ ಹಾಗೆಯೇ ಸಾಹೇಬರು ಆಸಕ್ತಿಯಿಲ್ಲದಂತೆ ಹಿಂದುಗಡೆ ನೋಡಿದರು - ಎಡಗೈಯಿಂದ ಜೋರಾಗಿ ಟಕ್ ಅನ್ನಿಸಿದ ಸದ್ದು - ಬಾಗಿಲು ಮುಚ್ಚಿಕೊಂಡಿತು.

ಈಗ ಬಲಿದತ್ತ ತನ್ನ ಸ್ಥಿತಿಯ ಕಡೆ ಕಣ್ಣು ಹಾಯಿಸಿದ. ಭಯಂಕರವಾದ ನಾಯಿ, ನಿಜವಾಗಿಯೂ ಇದೊಂದು ಸಾಕಿದ ಹುಲಿ, - ಕೆಟ್ಟದಾಗಿ ತಿಂದುಬಿಡುವಂತೆ ನೋಡುತ್ತಿದೆ. ಬಾಯಿಂದ ಇಳಿಬಿದ್ದಿರುವ ನಾಲಗೆ ಕಾಣುತ್ತಿದೆ. ಗಂಭೀರವಾಗಿ ಗುರುಗುಟ್ಟತೊಡಗಿತು. ಬಲಿದತ್ತನ ಮೈಯಲ್ಲಿ ರಕ್ತ ಒಣಗತೊಡಗಿತು. ವಿಕಾರವಾಗಿ ಕೂಗಿಕೊಳ್ಳುವುದರಲ್ಲಿದ್ದ, ಜೋರಾಗಿ ಅರಚಬೇಕೆನಿಸಿತು - "ಅಯ್ಯಯ್ಯೋ, ತಿಂದೇ ಹಾಕಿಬಿಡ್ತಲ್ಲ ದೇವರೇ" ಆದರೆ ಹಾಗಾಗಲಿಲ್ಲ. ಅತಿ ಪ್ರಾಚೀನ ಕಾಲದಿಂದ ಬಂದ ಆದಿಮಾನವನ ಹೆದರಿಕೆಯ ತೊಳಲಾಟ ಇಂಥ ಕೂಗಿನ ಮೂಲಕ ಎಂದಿನಂತೆ ಎದೆಯ ಭಾರವನ್ನು ಇಳಿಸುತ್ತಾ ಹರಿದುಹೋಗಬಿಡಬೇಕಿತ್ತು, - ಹೋಗಬೇಕಿತ್ತು, ಆದರೆ ಕೂಗಿಕೊಳ್ಳುವುದಕ್ಕೆ ಬದಲಾಗಿ ಒಂದು ರೀತಿಯ ಮೆಲು ದನಿಯಲ್ಲಿ ಫೂತ್ಕರಿಸಿದ ಸದ್ದು, ಬೆದರಿದ ಸಣ್ಣ ಪ್ರಾಣಿಯ ಆರ್ತನಾದ. ಕೂಡಲೆ ನಾಯಿಯ ಪೂಗರು ಇನ್ನೂ ಜೋರಾಯಿತು. ಈ ಬಾರಿ ಅದರ ಗಂಭೀರವಾದ ಗರ್ಜನೆ ಮುಂದಿನ ಸೀಟಿನವರೆಗೆ ತಲುಪಿದಾಗ ಸಾಹೇಬರು ಜೋರಾಗಿ ಅರಚಿದರು - "ಶಟ್ ಅಪ್ ಡಿಕ್" - ಡಿಕ್ ಇಷ್ಟು ಸೂಚನೆಗಾಗಿ ಕಾಯುತ್ತಿತ್ತು ಅಂತ ಕಾಣುತ್ತೆ. ಅದು ಗುರುಗುಟ್ಟುವುದನ್ನು ನಿಲ್ಲಿಸಿತು. ಆದರೆ ಈಗ ಅದಕ್ಕೆ ಸ್ನೇಹ ಬೇಕು. ತನ್ನ ಭಯಂಕರವಾದ ಮೂತಿಯನ್ನು ಮುಂದೆ ಚಾಚುತ್ತಾ ಬಲಿದತ್ತನನ್ನು ಅಡಿಯಿಂದ ಮುಡಿಯವರೆಗೆ ಮೂಸಿ ನೋಡುತ್ತಾ ತಡಕಾಡಲಾರಂಭಿಸಿತು. ಅವನ ಪ್ಯಾಂಟಿನ ಕಾಲುಗಳನ್ನು ಉಗುರಿನಿಂದ ಕೆರೆದು ಕೊಳೆ ಮಾಡಿತು. ಅವನ ತೊಡೆಯ ಮೇಲೆ ತನ್ನ ಭಾರಿಯಾದ ಕಾಲನ್ನಿಟ್ಟು ನೆಮ್ಮದಿಯಿಂದ ಮಲಗಿತು.

ಏನೇ ಆಗಲಿ, ಇದೊಂದು ರೀತಿಯ ಫಜೀತಿಯಾಯಿತಲ್ಲ, ಕ್ಷಣಕ್ಷಣಕ್ಕೂ ದಿಗಿಲಾಗುತ್ತಿದೆ - ಮನಸ್ಸು ಸ್ವಲ್ಪ ಮೇಲೆ ಹಾರಿ ಹೋದದಲ್ಲಿ ಸೇರಿಹೋಗಲೂ ಬಯಸುತ್ತದೆ. ಆದರೆ ಯಾರೋ ಮೊದಲೇ ಜಿಗುಟಿ ಎಚ್ಚರಿಸುತ್ತಿರುವ ಹಾಗೆ ಕಾಣುತ್ತದೆ - ನೀನು ಇಲ್ಲಿದ್ದಿ.

ಈ ಭಯವೊಂದು ಇಲ್ಲದಿದ್ದರೆ ಮನಸ್ಸು ಮಜವಾಗಿ ಎತ್ತರದಲ್ಲಿ ಗಾಳಿಪಟದಂತೆ ಹಾರಾಡಬಹುದಿತ್ತು. ಕಾರು ಹೋಗುತ್ತಲೆ ಇದೆ. ಜನ ಹೆದರುತ್ತಾ ದಾರಿ ಕೊಡುತ್ತಿದ್ದಾರೆ. ಲೆಕ್ಕವಿಲ್ಲದಷ್ಟು ನಮಸ್ಕಾರಗಳು. ಪರಿಚಯವಿದ್ದವರು ಬಲಿದತ್ತನ ಕಡೆ ಆಶ್ಚರ್ಯದಿಂದ ನೋಡುತ್ತಿದ್ದಾರೆ. ಅವನನ್ನು ಕೆಲಸಕ್ಕೆ ಬಾರದವನು. ಯಾವ ಗಿಡದ ತೊಪ್ಪಲು ಅಂತ ತಿಳಿದಿದ್ದವರೆಲ್ಲ ಅವನ ಕಡೆ ತಲೆಯೆತ್ತಿ ನೋಡುತ್ತಿದ್ದಾರೆ. ಕಾರು ಹೋಗುತ್ತಿದೆ. ನಿಜವಾಗಿ ಹೇಳುವುದಾದರೆ, ಹೋಗುತ್ತಿರುವ ಕಾರಿನಿಂದ ನೋಡಿದರೆ ಪ್ರಪಂಚವೆ ಬೇರೆ ರೀತಿಯಾಗಿ ಕಾಣುತ್ತದೆ. ಅದೇ ಬೀದಿ, ಅದೇ ಓಣಿ, ಅಂಗಡಿಗಳು, ಪೇಟೆ ಬೀದಿ. ಆದರೆ ನೆಲದ ಮೇಲೆ ನಡೆಯುತ್ತಿರುವಾಗ ಅವು ನಮ್ಮನ್ನೇ ಮೆಟ್ಟುತ್ತಿರುವಂತೆ ಕಾಣುತ್ತದೆ, ಕುದುರೆ ಗಾಡಿಯಲ್ಲಿ ಹೋಗುತ್ತಿರುವಾಗ ಬೇರೆ ರೀತಿಯಲ್ಲಿ ಕಾಣುತ್ತವೆ, ಕಾರಿನಲ್ಲಿ ಕುಳಿತಾಗ ಆ ನೋಟವೇ ಬೇರೆ, - ರೈಲಿನಲ್ಲಿ ಕುಳಿತಾಗಲಂತೂ ಅದು ಬೇರೆಯದೆ ಆದ ಸೊಬಗು - ನಿಜ, ಹರಿದಾಡುವ ಛತ್ರದಂತಿರುತ್ತದೆ.

ಸೀಟಿನ ಎತ್ತರ ಮತ್ತು ವಾಹನದ ವೇಗ ಇವೆರಡರಲ್ಲಿ ನೋಡುವವರ ವ್ಯಕ್ತಿತ್ವ ಸಹ ಭಾಗಿಯಾಗಿರುತ್ತದೆ, ನೋಟ ಬದಲಾಯಿಸುತ್ತದೆ - ಭಾವನೆ ಬದಲಾಗುತ್ತದೆ. ಓರಣವಾಗಿ ಆಣಿ ಮಾಡಿರುವುದರಲ್ಲಿ ಸ್ವಲ್ಪ ಅದಲುಬದಲಾದರೂ ಸುತ್ತಲ ಸ್ಥಿತಿಯೆಲ್ಲ ಬದಲಾಯಿಸುತ್ತದೆ, ಮೇಜು ಸರಿದರೆ ಅಥವಾ ಲಾಟೀನು ಆರಿಹೋದರೂ ಅಷ್ಟೆ.

ಎಷ್ಟು ಅಚ್ಚರಿಯ ವಿಷಯ. ಬಲಿದತ್ತ ಯೋಚಿಸುತ್ತಿದ್ದಾನೆ. ಚೆನ್ನಾಗಿ ಹೆಂಡ ಕುಡಿದು ಮೈಮರೆತರೂ ಮನಸ್ಸು ಇಷ್ಟೊಂದು ಉಬ್ಬುವುದಿಲ್ಲ. ಮೊದಲ ಅರ್ಧಗಂಟೆ ಕಾಲ ಅವನು ಮೈ ಉಬ್ಬಿಸಿಕೊಂಡು ಹೊರಗಡೆ ಕಣ್ಣು ಹಾಯಿಸುತ್ತಿದ್ದ, ತಾನು ಮೇಲ್ಪಟ್ಟದವನು ಅಂದುಕೊಂಡು ಎಲ್ಲವನ್ನೂ ಕಡೆಗಾಣಿಸಿ ನೋಡುತ್ತಿದ್ದ. ಮುಂದಿನ ಅರ್ಧ ಗಂಟೆ ಕಾಲ ಮನಸ್ಸಿನಲ್ಲೆಲ್ಲ ಉದಾರವಾದ ಭಾವನೆಗಳು ಸುಳಿಯ ತೊಡಗಿದವು. ಸೊಗಸಾದ ಯೋಚನೆ, ವ್ಯಾಪಕವಾದ ವಿಶ್ಲೇಷಣೆ, ಹೊಸ ಹೊಸ ಭಾವನೆಗಳು, ಹೊಸ ಅನುಭವದ ರುಚಿ, ಹೊಸ ಕಲ್ಪನೆ. ತನ್ನ ನಾಲ್ಕು ಅಡಿ ಒಂಬತ್ತು ಇಂಚಿನ ಮೈಯನ್ನು ನಿಜಕ್ಕೂ ಕಿತ್ತೆಸೆದು ಎತ್ತರದ ಸಾಗವನಿ ಮರದಂತೆ ಬೆಳೆಯುತ್ತಾ ಹೋಗುತ್ತಿದ್ದಾನೆ. ಈಗ ಅವನು ತನ್ನ ದುಃಖವನ್ನು ಮರೆತು ಇನ್ನೊಬ್ಬರಿಗೆ ಸಹಾನುಭೂತಿ ವ್ಯಕ್ತಪಡಿಸಬಲ್ಲ.

ಮುಂದೆ ಅದೇ ಸಾಹೇಬರು, ದೊಡ್ಡವರು, ಆದರೆ ಯೋಚಿಸುತ್ತಿದ್ದಂತೆಯ ದುಃಖವಾಗುತ್ತದೆ. ಏಕೆಂದರೆ ಅವರು ಕುಡಿತ, ನಾಯಿ, ಕುದುರೆ ಇವುಗಳತ್ತ ಮನಸ್ಸು ಕೊಡುತ್ತಾರಲ್ಲ ? ಸಾಹೇಬರು ಸುಮ್ಮನೆ ಕುಳಿತು ಕಾರು ನಡೆಸುತ್ತಿದ್ದಾರೆ. ಎಷ್ಟು ಒಬ್ಬಂಟಿಗರಾಗಿ ಕಾಣಿಸುತ್ತಾರೆ, ಕೆಲಸದಲ್ಲಿ ಮುಳುಗಿದರೆ ಯಂತ್ರದಂತೆ ದುಡಿಯುತ್ತಾರೆ. ಅವತ್ತಿನ ವಿಚಾರ, ಮನೆಯಲ್ಲಿ - ಮೇಜಿನ ಮೇಲೆ ಒಂದು ರಾಶಿ ಫೈಲುಗಳು ಬಿದ್ದಿದ್ದವು. ಬಾಗಿಲಿನ ಬಳಿ ಬಂದೂಕು ಹಿಡಿದು ಸಾಹೇಬರು ಆ ಫೈಲುಗಳ ಕಡೆ ದೃಷ್ಟಿ ಹರಿಸುತ್ತಾ ಬಂದೂಕಿನ ಕುದುರೆಯನ್ನು ಅದುಮಿ ಬಿಡುವುದರಲ್ಲಿದ್ದರು. ಅಮ್ಮಾವರು ತಕ್ಷಣ ಬಿಡಿಸಿಕೊಂಡರು, ಇಲ್ಲದಿದ್ದರೆ

ಏನಾಗುತ್ತಿತ್ತು? ಆ ಕಡೆ ಮುದಿ ಆಳು ತೂಕಡಿಸುತ್ತಿದ್ದ, ಗಡಿಬಿಡಿಗೊಂಡು ಮೇಲೆದ್ದು ನಿಂತ. ಕುಡಿತದ ಅಮಲಿನಲ್ಲಿದ್ದ. ಆಕ್ಷಣದಲ್ಲಿ ಅಥವಾ ಬದುಕಿನ ಬಗ್ಗೆ ಹೆಚ್ಚುತ್ತಿರುವ ಅನಾಸಕ್ತ ಭಾವನೆ ಆ ದಿನ ಬಂದೂಕಿನ ಬಾಯಲ್ಲಿ ಇಣುಕಿ ನೋಡುತ್ತಿತ್ತು.

ಇನ್ನು ಅಮ್ಮಾವರೋ, ಸಾಹೇಬರ ಮನಸ್ಸಿನಲ್ಲಿ ಮೂಡುವ ಬಗೆಹರಿಯದ ಸಮಸ್ಯೆಗಳನ್ನು ಬಿಡಿಸುವ ಕೀಲಿಕೈ ಅವರಲ್ಲಿರುತ್ತದೆಯ? ದೇವರೇ ಬಲ್ಲ! ಸ್ನೇಹಿತರ ಜೊತೆಯಲ್ಲಿ ಕುಣಿಯುವಾಗ ಚೆನ್ನಾಗಿ ಕುಣಿಯುತ್ತಾರೆ, ಸಾಹೇಬರ ಕೈಯಲ್ಲಾದರೋ ಕುಣಿಯಲಾಗದೆ ತೂಕವಾಗಿ ನಿಲ್ಲುತ್ತಾರೆ.

ಇನ್ನು ಕುಡಿತ. ಅವತ್ತಂತೂ ಅದೆಂಥ ಸ್ಥಿತಿಯಲ್ಲಿ ಮದ್ಯ ಗಂಟಲಿನ ಕೆಳಗಿಳಿದಿತ್ತೊ, ಹಾಕಿದ್ದ ಬಟ್ಟೆ ಎರಡಾಗಿ ಬಿಚ್ಚಿಕೊಂಡಿತ್ತು. ಮಗುವಿನಂತೆ ಮೇಲೆತ್ತಿ ಆಳು ಮಂಚದ ಮೇಲೆ ಮಲಗಿಸಿ ಫ್ಯಾನು ಹಾಕಿದ್ದ.

ಅಮ್ಮಾವರು ನೋಡುವುದಕ್ಕೆ ಚಿತ್ರದಲ್ಲಿರುವಂತೆ ಮುದ್ದಾಗಿದ್ದಾರೆ. ಆದರೆ ಚಿತ್ರದಂತೆಯೆ ಮಿಂಚಿ ಮರೆಯಾಗುತ್ತಿರುತ್ತಾರೆ. ಬೇಸಗೆಯಲ್ಲಿ ಊಟಿ ಅಥವಾ ಡಾರ್ಜಿಲಿಂಗ್, ಚಳಿಗಾಲದಲ್ಲಿ ಬೊಂಬಾಯಿ ಇಲ್ಲವೆ ಕಲ್ಕತ್ತಾ ಋತುಗಳನ್ನು ಅನುಸರಿಸಿ ಹಾರುವ ಹಕ್ಕಿಯಂತೆ ಅವರು ಹಾರಾಡುತ್ತಿರುತ್ತಾರೆ, ಒಬ್ಬಂಟಿಗರಾಗಿ.

ಇಡೀ ಪ್ರಪಂಚವೇ ತಮ್ಮದೆಂಬ ಇವರ ಭಾವನೆ ತುಂಬ ವಿಚಿತ್ರ.

ಮಕ್ಕಳು ಇಂಗ್ಲೆಂಡಿನಲ್ಲಿವೆ. ಎರಡು ಮಕ್ಕಳು. ಮುದಿ ತಂದೆ ಹಳ್ಳಿಯಲ್ಲಿ ಕುರಿ ಸಾಕುತ್ತಾನೆ, ಬಿಡುವಿನ ವೇಳೆಯಲ್ಲಿ ಯಾವುದೋ ವಾದ್ಯ ನುಡಿಸುತ್ತಾ ಮೀನು ಹಿಡಿಯುತ್ತಾನೆ.

ಒಬ್ಬ ಸಹೋದರ ಆಫ್ರಿಕದಲ್ಲೇ ನೆಲೆಸಿದ್ದಾನೆ, ಅಲ್ಲಿ ಅವನು ಜಮೀನು ಮಾಡಿಸುತ್ತಿದ್ದಾನಂತೆ.

ಇನ್ನು ಅಕ್ಕತಂಗಿಯರು, ಆಳು ಹೇಳುವ ಹಾಗೆ ಒಬ್ಬ ಒಡಹುಟ್ಟಿದವಳು ಅವರಂತೆಯೆ ಇದ್ದಾಳಂತೆ. ಮೊದಲು ಜರ್ಮನಿಯಲ್ಲಿ ಹಾಡುತ್ತಿದ್ದಳಂತೆ. ಈಗ ಹಾಂಕಾಂಗಿನಲ್ಲಿ ಯಾರೋ ಪಾದ್ರಿಯನ್ನು ಮದುವೆಯಾಗಿದ್ದಾಳಂತೆ. ನಿಜ, ಇವರು ಪ್ರಪಂಚದ ಎಲ್ಲೆಡೆಗಳಲ್ಲೂ ಇದ್ದಾರೆ.

ಇಡೀ ಪ್ರಪಂಚವೇ ಅವರ ಮನೆ.

ಸತ್ತು-ಬದುಕುತ್ತಾ, ಬೀಳುತ್ತ-ಏಳುತ್ತ ಇವರು ಮುನ್ನಡೆಯುತ್ತಿದ್ದಾರೆ. ಬಾಂಬು ದಾಳಿಯಲ್ಲಿ ಹಳ್ಳಿಹಳ್ಳಿಗಳೇ ಭಸ್ಮವಾಗಿ ಹೋಗುತ್ತವೆ. ಮತ್ತೆ ಮತ್ತೆ ಯುದ್ಧದಲ್ಲಿ ರಣಚಂಡಿಯ ಹೋಮ - ಬಲಿ ನಡೆಯುತ್ತದೆ. ಆದರೂ ಬದುಕಿನ ಓರಿಯಾಸ ಹೊತ್ತ ಸಂಸ್ಕೃತಿ ಕೈಬೀಸಿ ಕರೆಯುತ್ತದೆ - ಮಣ್ಣು ತಿನ್ನು, ರಕ್ತ ಕುಡಿ, ಬದುಕು, ಪರಂಪರೆಯನ್ನು ಬೆಳೆಸು. ಹಾಳುಬೀಳಿನ, ನೆತ್ತರಿನಿಂದ ತೊಯ್ದ ಯುದ್ಧಗಳ ನಡುವೆಯೂ ನರೆಗೂದಲಿನ ಮುದಿಮಂದಿ ಹುರಿದುಂಬಿಸುತ್ತಿರುತ್ತಾರೆ - "ಮುನ್ನುಗ್ಗಿ, ದುಃಖವನ್ನು ಮನಸ್ಸಿನಿಂದ ಹೊರದೂಡಿ. ಮತ್ತೆ ನಾವು ಆನಂದದ ಕ್ಷಣಗಳನ್ನು ಕಾಣುತ್ತೇವೆ. ಈ ಕತ್ತಲೆಯಲ್ಲೇ ಬೆಳಕು ಹುಟ್ಟುತ್ತದೆ. ಧಾವಿಸಿ, ಮುನ್ನಡೆಯಿರಿ, ಹಿಪ್ ಹಿಪ್ ಹುರ್ರೆ, ಲಾಂಗ್ ಲಿವ್ ದಿ ಕಿಂಗ್."

ಸಾಹೇಬರು ಆದರೂ ಏಕೆ ಸಪ್ಪಗಿದ್ದಾರೆ ? ಏಕೆ ಸುಸ್ತಾದ ಹಾಗಿರುತ್ತಾರೆ ?

ಅದು ಅವರಿಗೇ ಅರ್ಥವಾಗಬೇಕು ಅಂತ ಬಲಿದತ್ತ ಯೋಚಿಸುತ್ತಾನೆ.

ತಾನೇ ಕಲ್ಪಿಸಿಕೊಂಡ ರೀತಿಯಲ್ಲಿ ಸಾಹೇಬರ ದುಃಖವನ್ನು ತನ್ನ ಮೇಲೆ ಆರೋಪಿಸಿಕೊಂಡು ಮುದುಕಿಯಂತೆ ಯೋಚಿಸುತ್ತಾನೆ - ಅಯ್ಯೋ ಪಾಪ! ದುಃಖದಿಂದ ತೊಳಲಾಡುತ್ತಿರುವ ಅವರಿಗೆ ಸ್ವಲ್ಪ ಸಮಾಧಾನವಾದರೂ ಹೇಳಬಹುದಾಗಿದ್ದರೆ.

ನಲ್ಲೆಯಂತೆ ಯೋಚಿಸುತ್ತಾನೆ, - ಸ್ವಲ್ಪ ಮೈದಡವಿ ಸುಖ ನೀಡಬಹುದಾಗಿದ್ದರೆ.

ಆಳಿನಂತೆ ಯೋಚಿಸುತ್ತಾನೆ, - ಮನಸ್ಸಿಟ್ಟು ಶ್ರದ್ಧೆಯಿಂದ ಸೇವೆ ಮಾಡುವ ಹಾಗಿದ್ದಿದ್ದರೆ.

ಮೈಯನ್ನು ಜೋರಾಗಿ ಅಲುಗಾಡಿಸುವಂತೆ ಸಾಹೇಬರು ಕರ್ಕಶ ಧ್ವನಿಯಲ್ಲಿ ಮುಲುಗುಟ್ಟುವರು, - ಒಮ್ಮೆ ಮತ್ತೊಮ್ಮೆ ಬಲಿದತ್ತನಿಗೆ ಅರ್ಥವಾಗಲಿಲ್ಲ. ಬೆಚ್ಚಿದ, ಮುಂದೆ ಬಗ್ಗಿದ, ಸಾಹೇಬರು ಸುಮ್ಮನಾದರು. ಏಕೋ ಏನೋ ಅವರು ಸಿಟ್ಟಾಗಿದ್ದರು.

ಬಲಿದತ್ತನ ಮನಸ್ಸು ಹಿಂದೋಡುತ್ತಿದೆ. ಈಗ ಅವನ ಮನಸ್ಸಿನಲ್ಲಿ ಹೆಮ್ಮೆ ತನ್ನಷ್ಟಕ್ಕೆ ತಾನೆ ತುಂಬಿದೆ.

ಮುಂದೆ ದಾರಿಕೊಡದೆ ಒಂದು ವಾಹನ ಹೋಗುತ್ತಿದೆ. ದಾರಿಯನ್ನೇ ಬಿಡುತ್ತಿಲ್ಲ, ಡ್ರೈವರ್ ಪಕ್ಕದಲ್ಲೇ ಆತ ಕುಳಿತಿದ್ದಾನೆ. ಉದ್ದವಾದ ಜುಟ್ಟು ಕುತ್ತಿಗೆಯಲ್ಲಿ ತುಳಸಿ ಮಣಿಯ ಹಾರ. ಕಂಕುಳಲ್ಲೊಂದು ಪರ್ಸಿದೆ. ಕೆತ್ತಿದ ವಿಗ್ರಹದಂತೆ ಕುಳಿತಿದ್ದಾನೆ. ಬಾಯಿಂದ ಕ್ಯಾಕರಿಸುತ್ತಾ, ಕೈಯಿಂದ ಸೂಚನೆ ನೀಡುತ್ತಿದ್ದಾನೆ. ಡ್ರೈವರನಿಗೆ ದುಂಬಾಲು ಬಿದ್ದಿದ್ದಾನೆ - "ಇನ್ನೂ ಬೇಗ, ಇನ್ನೂ, ಹೂಂ, ಇನ್ನೂ ಬೇಗ."

ಭೋವನಿ ಸಾಹೂ. ಇಟ್ಟಿಗೆ ಗೂಡಿದೆ. ಕಂಟ್ರಾಕ್ಟರಾಗಿದ್ದಾರೆ. ಯುದ್ಧದ ಸಮಯದಲ್ಲಿ ಕಾಳನಂತೆ ವ್ಯಾಪಾರ ನಡೆಸಿದ್ದಾರೆ. ಡೇರೆಗೆ ಹೊಡೆಯುವ ಮೊಳೆಗೆ ಒಂದು ರೂಪಾಯಿಯಂತೆ ಮಾರಿ ರೂಪಾಯಿಗಳ ಮನೆ ಮಾಡಿದ್ದಾರೆ. ಹೊಸದಾಗಿ ದೊಡ್ಡ ಮನುಷ್ಯನಾಗಿರುವಾತ. ಆದರೂ ಒತ್ತೋದು ನೋಡಿದರೆ ಹೆಬ್ಬೆಟ್ಟೆ. ಮೇಲೊಂದು ಅಂಗವಸ್ತ್ರ ಹೊದ್ದಿದ್ದಾರೆ ಅಷ್ಟೆ.

ಹೊಟ್ಟೆ ಪಾಡಿನ ಹೋರಾಟದಲ್ಲಿ ಭೋವನಿಸಾಹುವಿಗೆ ಗೆಲವು ದೊರೆತಿದೆ. ಆ ಮನುಷ್ಯ ಏನು ಕೇರ್ ಮಾಡುತ್ತಾನೆಯ ? ಹೇ ಬಿಡು !

ಸಾಹೇಬರು ಪೊಂಯ್ ಪೊಂಯ್ ಅಂತ ಹಾರ್ನ್ ಮಾಡುತ್ತಿದ್ದರೂ ಕಿವಿಗೊಡದೆ ಚೆನ್ನಾಗಿ ಧೂಳೆಬ್ಬಿಸುತ್ತಾ ಅವರ ಕಾರು ಹೆಂಡಕುಡುಕನಂತೆ ತೂರಾಡುತ್ತಾ ಮುಂದೆ ಮುಂದೆ ಹೋಯಿತು.

ಸಾಹೇಬರು ಸಿಟ್ಟಿಗೆದ್ದರು, ಎಡಗೈ ಬೆರಳಿನ ದಪ್ಪ ಉಗುರನ್ನು ಕಡಿಯುತ್ತಿದ್ದಾರೆ.

"ಏ ಬಾಬು, ಆ ಕಾರಿನ ನಂಬರನ್ನು ಗುರುತು ಹಾಕಿಕೊಂಡೆಯಾ ?"

ಬಲಿದತ್ತ ತಡವರಿಸುತ್ತಲೆ ಭೋವನಿ ಸಾಹುವಿನ ಹೆಸರು, ಸ್ಥಳ, ಅವರ ಕಾರಿನ ನಂಬರು ಎಲ್ಲವನ್ನೂ ಒದರತೊಡಗಿದ. ಏದುಸಿರಿನಲ್ಲಿ ಅವನು ಕಾರಿನ ಮೇಲೆ ಮಾಲಿಕರ ಸ್ಥಳ, ಹೆಸರು ಎಲ್ಲ ಬರೆದಿರುವುದಿಲ್ಲ ಎಂಬುದನ್ನು ಮರೆತ. ಇಷ್ಟರ

ಮೇಲೆ ನಂಬರು ಇಟ್ಟುಕೊಂಡು ಸಾಹೇಬರು ಏನು ಮಾಡುವುದಕ್ಕಾಗುತ್ತದೆ? ಸಾಹೇಬರೆಂದರೆ ಸರ್ಕಾರವೆ? ಇಲ್ಲ, ಅವರು ಕಂಪೆನಿಯ ಸಾಹೇಬರಷ್ಟೆ." ಆದರೆ ತನಗೇನಾಗಬೇಕು? ಕೇಳುತ್ತಲೆ ಎಲ್ಲ ವಿವರಗಳನ್ನು ವರದಿ ಮಾಡಿದ್ದ, ಜೈಭೂತಿ ಅಂತ.

'ಹೂಂ!' - ಸಾಹೇಬರು ವ್ಯಾಕುಲರಾಗಿದ್ದಾರೆ, "ಸರಿ, ಗುರುತು ಹಾಕಿಟ್ಟಿಕೊ"

ಸರಿ, ಭೋವನಿ ಸಾಹುವಿಗೆ ಗ್ರಹಚಾರ ವಕ್ಕರಿಸಿದೆ. ಆದರೆ ಸಾಹೇಬರೇಕೆ ಸಪ್ಪಗಿದ್ದಾರೆ?

ಮತ್ತೆ ಅನುಮಾನ, ಮತ್ತೆ ಅಪನಂಬಿಕೆ ಮೂಡುತ್ತದೆ.

ಬಲಿದತ್ತನ ಪಾದರಸ ಸರ್ ಅಂತ ಕೆಳಗೆ ಇಳಿದುಹೋಯಿತು, ಇಳಿದು ಅದೆಲ್ಲಿ ಅಡಗಿಕೊಂಡಿತೊ ಪತ್ತೆಯಿಲ್ಲ. ಅವನು ವಿಶ್ವ ವಿಜಯಿಯಲ್ಲ. ಅವನು ಏನೂ ಅಲ್ಲ, ಅವನು ಕೇವಲ ಬಲಿದತ್ತ - ಹೊಟ್ಟೆಪಾಡಿಗಾಗಿ ಹೆಣಗಾಡುವ ಒಬ್ಬ ಬಡಪಾಯಿ.

ಜನ ಎಷ್ಟು ದೊಡ್ಡ ಮನುಷ್ಯರಾಗಿ ಹೋದರು - ಅಬ್ಬಾ!

ರಸ್ತೆಬದಿಯಲ್ಲಿ ಹೊಟ್ಟೆಗಿಲ್ಲದೆ ಅಲೆಯುತ್ತಿದ್ದವರೆಲ್ಲ, ಅದೆಷ್ಟು ಮೇಲೇರಿದ್ದಾರೆ! ಅಬ್ಬಬ್ಬಾ!

ನಾಯಿ ಅವನ ಮೇಲೆ ಅರ್ಧ ಮೈಯಿಟ್ಟು ಮಲಗಿಬಿಟ್ಟಿದೆ.

ಮುದಿ ತಂದೆ ಏನು ಮಾಡುತ್ತಿರಬಹುದು ಅಂತ ನೆನಪಾಗುತ್ತದೆ. ನಾಯಿ ನೋಡುತ್ತಲೆ ಕೂಗಿಕೊಳ್ಳುತ್ತಿದ್ದನೇನೋ - "ಹೊಡಿ, ತಳ್ಳು ಆಚೆಕಡೆ, ಇಲ್ಲದಿದ್ದರೆ ಎಲ್ಲ ಮುಟ್ಟಿ ಹಾಳುಮಾಡುತ್ತ ಮುಂದೇದು-"

ನಿಟ್ಟುಸಿರುಬಿಟ್ಟ ಬಲಿದತ್ತ ಹಿಂಬದಿ ಸೀಟಿನಲ್ಲೇ ಕುಳಿತುಬಿಟ್ಟ.

ಸಾಯಂಕಾಲ.

ದಿನವಿಡೀ ದುಡಿದು ಸೊರಗಿದ ಮೋರೆ ಹೊತ್ತು ಮನೆಗೆ ಬಂದು ಹೊರಗಡೆಯ ಬಾಗಿಲಿನ ಅಗಳಿ ತಟ್ಟಿದ ಕೂಡಲೇ ಹಳೆಯ ಬಿಳಿ ಕುಪ್ಪುಸ ತೊಟ್ಟು, ಸೆರಗು ಹೊದ್ದು, ಕೂದಲು ಸರಿಪಡಿಸಿಕೊಂಡು ಬಾಗಿಲು ತೆರೆದ ಸರೋಜಿನಿ ನಗುತ್ತಾ ಹೇಳಿದಳು - "ಮಹಾಪಾತ್ರರು ಬಂದಿದ್ದರು."

"ಮಹಾಪಾತ್ರರು! ಯಾವ ಮಹಾಪಾತ್ರರು?" ನಗುತ್ತಾ ಬಲಿದತ್ತ ಕೇಳಿದ. "ಯಾರೀ ಮಹಾಪಾತ್ರರು?"

"ಹೌದೌದು, ಗೊತ್ತೇ ಇಲ್ಲದಂತೆ ಆಡುತ್ತೀರಲ್ಲ. ಗೊತ್ತೇ ಇಲ್ಲ ನೋಡಿ. ಅದೇ ಅವರ ಬಗ್ಗೆ ಅಷ್ಟೊಂದು ಹೇಳ್ತಾ ಇರ್ತೀರಲ್ಲ, ನಿಮ್ಮ ಚಿಕ್ಕ ಸಾಹೇಬರೋ ಯಾರೋ ಗೊತ್ತಿಲ್ಲ - ನಿಮ್ಮನ್ನು ಕರೆದುಹೋದರು."

"ಬಂದಿದ್ದರಾ? ಬಂದಿದ್ದರಾ? ನಿಂಗೆ ಹೇಗೆ ಗೊತ್ತಾಯ್ತು? ಏನು ಹೇಳಿ ಹೋಗಿದ್ದಾರೆ?

"ಅಯ್ಯೋ, ಏನು ಹೇಳಲಿ, ಹರಕಲು ಸೀರೆ ಉಟ್ಟಕೊಂಡು ಮನೆ ಕಸ ಗುಡಿಸುತ್ತಿದ್ದೆ. ಹೊರಗಡೆ ವರಾಂಡದ ಕಡೆ ನೋಡಿದೆ. ಯಾರೋ ಬಂದಿದ್ದರು.

'ಬಲಿದತ್ತ ಬಾಬುಗಳು ಮನೆಗೆ ಬಂದಿದ್ದಾರಾ?' ಅಂತ ಕೇಳಿದರು. ನನಗೆ ಏನು ಹೇಳಬೇಕೋ ಗೊತ್ತಾಗಲಿಲ್ಲ. ಅವರೇ ಹೇಳಿದರು - 'ನಾನು ಮಹಾಪಾತ್ರ. ಮನೆಯಲ್ಲಿ ಯಾರೂ ಇಲ್ಲವೆ? ತುಂಬಾ ಬಾಯಾರಿಕೆಯಾಗಿದೆ' ಇವರು ಸಾಹೇಬ ರಲ್ಲ ಅಂತ ಯೋಚನೆ ಮಾಡಿದೆ. ಅವರೇನು ಕುರುಡರೇ? ಮನೆಯೊಳಗೆ ಹೋಗಿ ಸೀರೆ ಬದಲಾಯಿಸಿದೆ. ಸ್ವಲ್ಪ ಹೊತ್ತಾದಮೇಲೆ ನೋಡಿದೆ. ಪಹರೆಯವರಂತೆ ವರಾಂಡದಲ್ಲಿ ಸುತ್ತಾಡುತ್ತಿದ್ದಾರೆ. ನಿಜವಾಗಿಯೂ ತುಂಬ ಬಾಯಾರಿಕೆಯಾಗಿರ ಬೇಕು ಅನ್ನಿಸಿತು. ಧೈರ್ಯ ಮಾಡಿಕೊಂಡು ನಿಂಬೆಹಣ್ಣು ಪಾನಕಮಾಡಿ ಗಾಜಿನ ಲೋಟದಲ್ಲಿ ತೊಗೊಂಡು ಹೋಗಿ ಬಾಗಿಲ ಮರೆಯಿಂದ ವರಾಂಡದಲ್ಲಿಟ್ಟುಬಿಟ್ಟೆ. ಗಟಗಟ ಕುಡಿದವರೇ ಹೇಳಿದರು - "ನೋಡಿ, ನೀವುಗಳು ಹೀಗೆ ನಮ್ಮ ಮನೆ ಕಡೆ ಅಡ್ಡಾಡೋದಕ್ಕೆ ಯಾಕೆ ಬರೋದಿಲ್ಲ? ಬಲಿದತ್ತ ಬಾಬುಗಳು ಬಂದಮೇಲೆ ಅವರಿಗೆ ಹೇಳಿ, ಅವರು ಬರೋದಿಲ್ಲವೆ? ಅವರ ನೌಕರಿಯ ವಿಚಾರದಲ್ಲಿ ಸ್ವಲ್ಪ ತುರ್ತು ವಿಚಾರಗಳನ್ನು ಮಾತಾಡೋದಿದೆ. ನಿಮ್ಮ ಸಾಹೇಬರ ಕಣ್ಣುಗಳೇನು ಬೆಕ್ಕಿನ ಕಣ್ಣುಗಳು - ಕತ್ತಲಲ್ಲೂ ಫಳಫಳ ಅಂತ ಹೊಳೆಯುತ್ತಿರುತ್ತದೆ."

ಎಲ್ಲ ಸರಿಯಾಗೇ ಹೇಳಿದ್ದಾಳೆ.

ಕಣ್ಣು ಹೊಳೆಯುವವರೆಗೂ.

"ಅಂದಹಾಗೆ ಒಂದು ವಿಚಾರ ಹೇಳೋದು ಮರೆತುಬಿಟ್ಟೆ. ಕೆಲಸಕ್ಕೆ ಬಾರದ ಸಣ್ಣ ವಿಚಾರ. ಬಾಯಾರಿಕೆ ತೀರಿಸಿಕೊಂಡ ಮೇಲೆ ಮಹಾಪಾತ್ರರು ಹೇಳಿದರು. 'ಎಷ್ಟು ಸೊಗಸಾದ ನೀರು' ಅಯ್ಯೋ, ಎಂಥ ತಲೆಬುಡವಿಲ್ಲದ ಮಾತು, ನೀರು ಸೊಗಸಾಗಿರೋದು ಅಂದರೇನು? ಹಾಗೆಯೆ ನೀರು ಕುಡಿದಾದ ಮೇಲೆ ಗಾಜಿನ ಲೋಟವನ್ನು ನೆಲದ ಮೇಲಿಡದೆ ಕೈಗೇ ಕೊಡುತ್ತಾ ಕೈಚಾಚಿ ಹೇಳಿದರು - 'ಕೆಳಗೆ ಇಟ್ಟರೆ ಒಡೆದುಹೋಗುತ್ತೆ' ಮತ್ತೆ ಭದ್ರವಾಗಿ ಹಿಡಿದಿದ್ದರೋ ಏನೋ ಒಡೆದು ಹೋಗತ್ತೆ ಅಂತ, ನನ್ನ ಕೈಗೆ ಲೋಟ ಕೊಡಬೇಕಾದರೆ ನಡುಗುತ್ತಿರುವ ಬೆರಳಿನಿಂದ ಚಿವುಟಿದಂತಾಯಿತು."

ಈ ಮಾತುಗಳು ಬಲಿದತ್ತನಿಗೆ ಸ್ವಲ್ಪ ಕಸಿವಿಸಿಯುಂಟು ಮಾಡತೊಡಗಿದ್ದವು. ಮನಸ್ಸಿನ ಯಾವುದೋ ಮೂಲೆಯಲ್ಲಿ ಕಪ್ಪು ಮೋಡಗಳು ಮುಸುಕ ಲಾರಂಭಿಸಿದ್ದವು. ಬೈಯಬೇಕೆನಿಸಿತು, 'ತೆವಲು ಬಡೀತು ಅವನ ಕಾಗೆ ದೃಷ್ಟಿಗೆ. ಹಾಳಾದವನು.' ಆದರೆ ಸರೋಜಿನಿ ಎಷ್ಟು ಖುಷಿಯಾಗಿದ್ದಾಳೆ, ಕಾಲು ನೆಲದ ಮೇಲೆ ನಿಲ್ಲುತ್ತಲೆ ಇಲ್ಲ. ಗಂಡನಿಗೆ ನೌಕರಿಯಲ್ಲಿ ಒಳ್ಳೆಯದಾಗುತ್ತದೆ ಅನ್ನುವ ವಿಚಾರದಿಂದ ಉಬ್ಬಿ ಹೋಗಿದ್ದಾಳೆ, ಒಂದೇ ಜೀವವಲ್ಲವೆ. ಮಹಾಪಾತ್ರರು ನೌಕರಿಯ ವಿಚಾರ ಮಾತಾಡಲು ಹೇಳಿಕಳಿಸಿದ್ದಾರೆ, - ಪ್ರಮೋಷನ್ ಸಿಗಬಹುದು, ವೆಂಕಟರಾವ್ ಸಹ ಹೇಳಿದ್ದು ಇದೇ ಅಲ್ಲವೆ. ನೌಕರಿ-ಬಡ್ತಿ, ಬಡ್ತಿ-ನೌಕರಿ. ಇವತ್ತು ಎಲ್ಲ ಹೊಸದಾಗಿ ಕಾಣುತ್ತಿದೆ.ಸರೋಜಿನಿ ಎಷ್ಟು ಚೆಲುವಾಗಿ ಕಾಣುತ್ತಿದ್ದಾಳೆ. ಮನುಷ್ಯ ಮನೆಗೆ ಬರುವ ವೇಳೆಗೆ ಇದನ್ನೇ ತಾನೇ ಬಯಸೋದು. ನೀಟಾಗಿ ಡ್ರೆಸ್ ಮಾಡಿಕೊಂಡು ತಯಾರಾಗಿ ನಗುತ್ತಾ ನಿಂತಿರುವ ಮಡದಿ. ಇಲ್ಲದಿದ್ದರೆ ಮನೆ ಸಾರಿಸಬೇಕಾದರೆ ಕಸ ಸಗಣಿ ಮೆತ್ತಿಕೊಂಡಿರುವ ಕೈ, ಮುಖದ ಮೇಲೆ ಅಡುಗೆ ಒಲೆಯ ಮಸಿ, ಒಣಗಿದ

ಬಿರುಗೂದಲು, ತಲೆಯ ಮೇಲೆ ಒಲೆಯ ಬೂದಿ, ಛೆಛೆ, ಸರೋಜಿನಿ ಸೊಗಸಾಗಿ ಕಂಗೊಳಿಸುತ್ತಿದ್ದಾಳೆ. ಮುಖದ ಹತ್ತಿರ ಸುವಾಸನೆ ಬೀರುತ್ತಿರುವ ಸ್ನೋ, ಯಾವಾಗಲಾದರೂ ಒಂದೊಂದು ಸಾರಿ ಮಾತ್ರ ಅದನ್ನು ಬಳಸುತ್ತಾಳೆ.

ಇವತ್ತೇನಾದರೂ ವಿಶೇಷ ಇರಲೇಬೇಕು.

ಗುರುಗ್ರಹದ ಚಲನೆ.

ಎಲ್ಲಿ ಆ ಕಪ್ಪು ಮೋಡಗಳು ? ಮನಸ್ಸಿನ ಯಾವುದೋ ಮೂಲೆಯಲ್ಲಿ ಅಡಗಿಹೋದವು. ಬಲಿದತ್ತನ ಮನಸ್ಸಿನ ಕಲ್ಲಿನ ತಳಪಾಯ ಕುಸಿದು ಪ್ರವಾಹ ಉಕ್ಕೇರಿ ಬರುತ್ತಿದೆ. ಅವನ ವ್ಯಕ್ತಿತ್ವವನ್ನೇ ಮುಚ್ಚಿ ಪ್ರವಾಹ ಭೋರ್ಗರೆಯುತ್ತಿದೆ.

ಸರೋಜಿನಿ ಅವನಿಗೆ ಬೇಕು, ಈ ಕ್ಷಣವೇ.

ಮನಸ್ಸಿನಾಳದಲ್ಲಿರುವ ಅಧಿಕಾರ ಭಾವನೆಯನ್ನು ಅವನು ಸರೋಜಿನಿಯ ಮೇಲೆ ಚಲಾಯಿಸಲು ಬಯಸುತ್ತಾನೆ. ಅವಳು ಇಡಿಯಾಗಿ ಅವನವಳು, ಬೇರೆ ಯಾರಿಗೂ ಸೇರಿದವಳಲ್ಲ.

ಆಮೇಲೆ ಮಹಾಪಾತ್ರರ ಮನೆಯ ಕಡೆ ಹೋಗಬೇಕು, ಮಡದಿಯ ಜೊತೆಗೆ.

ಸಾಯಂಕಾಲದ ಮಬ್ಬು, ಜನ ಏಳುತ್ತಿದ್ದಾರೆ. ಅದರಿಂದೇನಾಗಬೇಕು ? ಮುಚ್ಚಿದ ಬಾಗಿಲಿನ ಮನೆಯಲ್ಲಿ ಅವನು ಅದರ ಮಾಲಿಕ ತಾನೇ ಅನ್ನುವ ಅನುಭವ ಪಡೆಯಬಯಸುತ್ತಾನೆ.

ಸರೋಜಿನಿ ಮೆಲ್ಲಗೆ ಚೀರುತ್ತಾಳೆ - ರೀ - ರೀ - ರೀ.

ಅದೇನು ಖುಷಿಯೊ ಸಿಟ್ಟೊ ಅವಳಿಗೆ ಅರ್ಥವಾಗುತ್ತಿಲ್ಲ.

ಬಲಿದತ್ತ ಹ್ಹೆ-ಹ್ಹೆ ಅಂತ ನಗುತ್ತಿದ್ದಾನೆ. ಅದು ಗೆಲುವಿನ ಉಲ್ಲಾಸದ ನಗುವೊ ಅಥವಾ ಏಟುತಿಂದವನ ಆರ್ತನಾದದ ಚೀತ್ಕಾರವೊ ತಿಳಿಯಲಿಲ್ಲ.

ರಸ್ತೆಯ ಆ ಬದಿಯ ಮನೆಯಲ್ಲಿ ಕಾಲೇಜು ಹುಡುಗ ಷೇಕ್ಸ್‌ಪಿಯರನ ಭಾಷಣವನ್ನು ಏರಿಸಿದ ದನಿಯಲ್ಲಿ ಗಂಭೀರವಾಗಿ ಓದುತ್ತಿದ್ದಾನೆ -

"ಹೌಲ್ - ಹೌಲ್ - ಓ ವಿಂಡ್ಸ್-"

"ನಡಿ, ಇನ್ನು ಹೊತ್ತಾಗತ್ತೆ", ಬಲಿದತ್ತ ಅವಸರ ಮಾಡತೊಡಗಿದ. ಅಡ್ಡಾಡುವುದಕ್ಕಾಗಿ ಅವನು ಬೇಗಬೇಗ ಬೇರೆ ಬಟ್ಟೆ ಹಾಕಿಕೊಂಡಿದ್ದಾನೆ. ಬಿಳಿ ಪಂಚೆ, ಷರ್ಟು, ಒದ್ದೆ ಟವಲಿನಿಂದಲೆ ಮುಖ ತೀಡುತ್ತಿದ್ದಾನೆ. ತಲೆಯನ್ನು ಒದ್ದೆ ಕೈಯಿಂದಲೆ ಬಾಚಿಕೊಳ್ಳುತ್ತಿದ್ದಾನೆ. ಸರೋಜಿನಿ ಆರಾಮವಾಗಿ ಎಲೆಯಡಿಕೆ ಹಾಕಿಕೊಳ್ಳುತ್ತಿದ್ದಾಳೆ. ಅವಳು ಹೊರಡುವ ಅವಸರದಲ್ಲಿಲ್ಲ. "ಇವತ್ತು ಹೋಗೋದೆ ಬೇಡ ಅನಿಸುತ್ತೆ ನನಗೆ, ಬರಬೇಕಾದರೆ ತುಂಬಾ ಹೊತ್ತಾಗುತ್ತೆ" ಅಂದಳು.

"ಏನೇ ಆಗಲಿ, ಅವರು ಕರೆದಿದ್ದಾರೆ, ಏಳು, ಹೋಗೋಣ"

"ನೀವು ಹೋಗಿ ಬನ್ನಿ ಅಂದ್ರೆ, ಆದು ಸರಿ, ಕರೆಯೋ ಜನ ಕಾರು ಯಾಕೆ ಕಳಿಸಲ್ಲ ? ಅವರ ಹತ್ತಿರ ಕಾರಿಲ್ಲವೆ ?"

"ಅಯ್ಯೋ, ಅದೇನು ಸಿರಿ, ಕಾರಿನಲ್ಲಿ ಕುಳಿತುಕೊಳ್ಳುವಿಯಂತೆ, ಹೋಗೋಣ,

ಎದ್ದೇಳು, ತಲೆ ಬಾಚಿಕೊ.

"ತಲೆ ಬಾಚಿಕೊಂಡೇ ಇದ್ದೀನಲ್ಲ."

"ನಡಿ ಹಾಗಾದ್ರೆ, ಸುಮ್ಮನೆ ಮಾತಲ್ಲಿ ಕಾಲ ಕಳೀಬೇಡ"

ಐದು ನಿಮಿಷಗಳಾದ ಮೇಲೆ ಸರೋಜಿನಿ ತಾನು ತಯಾರಾಗಿದ್ದೇನೆ ಅಂತ ಸೂಚನೆ ಕೊಟ್ಟಳು. ವ್ಯಮುರಿಯುತ್ತಾ ಹೇಳಿದಳು-

"ಸರಿ, ನಡೀರಿ-"

"ಇದೇನು ನಿನ್ನ ಅವತಾರ? ಒಳ್ಳೇ ಸೀರೆ ಎಲ್ಲಿ ಹೋಯಿತು?"

"ಅಗಸನಿಗೆ ಹಾಕಿದ್ದೇನೆ."

"ಮತ್ತೆ ಚಪ್ಪಲಿ, ಚಪ್ಪಲೀನಾದರೂ ಹಾಕಿಕೊ"

"ಇದೇನು ಇಷ್ಟು ಅಲಂಕರಿಸಿಕೊಂಡು ಹೊರಡಬೇಕಾ? ಹೋಗೋಣ ಅಂದ್ರೆ ನಡೀರಿ, ಇಲ್ಲದಿದ್ರೆ ನಾನು ಒಳಗೆ ಹೋಗ್ತೇನೆ, ಕೆಲಸವಿದೆ."

"ನೋಡು ಸರೋಜ, ಕೆಲಸ ಯಾವಾಗಲೂ ಇದ್ದೇ ಇರುತ್ತೆ. ಮಾಡೋದು ಬೇಡ ಅಂದ ಕೆಲಸಾನೇ ಎಷ್ಟೋ ಸಾರಿ ಮಾಡಬೇಕಾಗುತ್ತೆ ನಡೀ."

ಈ ರೀತಿ ಹೇಳಿದಾಗ ಅವನಿಗೆ ಖುಷಿಯಾಯಿತು. ತಾನು ವಿವೇಕದಿಂದ ಪಾಂಡಿತ್ಯದಿಂದ ಕೂಡಿದ ಮಾತೊಂದನ್ನು ಹೇಳಿಬಿಟ್ಟೆ ಅಂತ ಅನಿಸಿತು. ಮನೆಗೆ ಬೀಗ ಹಾಕಿ ಇಬ್ಬರೂ ಹೊರಟರು.

ಇವತ್ತು ದಾರಿಯಲ್ಲಿ ಬದುಕಿನ ಆಳ ಅಲೆ ಅಲೆಯಾಗಿ ಏಳುತ್ತಿದೆ. ಎಂದಿನಂತೆ ಇರುವ ರಾತ್ರಿಯ ಕತ್ತಲಿನ ಹಾದಿ, ಆದರೆ ಇವತ್ತು ಅದು ಹೊಸದಾಗಿ ಕಾಣುತ್ತಿದೆ. ಬದುಕಿನ ಇಂದಿನ ಅನುಭವ ನಿರಾಶೆಯಿಂದ ಕೂಡಿಲ್ಲ ಅಥವಾ ಕೊರತೆಯ ಸುಳಿಯಲ್ಲಿ ಸಿಕ್ಕಿ ಗರಿಮುಚ್ಚಿ ಸುರುಟಿ ಹೋಗಿಲ್ಲ. ಇವತ್ತು ಹೆಜ್ಜೆಹೆಜ್ಜೆಗೂ 'ನಾನು' ನೆನಪಿಗೆ ಬರುತ್ತಿದೆ. ಮನದಾಸೆಯನ್ನು ಅದು ಚಂಚಲಗೊಳಿಸುತ್ತದೆ. ಬಲಿದತ್ತ ಬದುಕಿನ ಸವಿಯನ್ನು ಅನುಭವಿಸುತ್ತಾ ಹೆಜ್ಜೆಯಿಡುತ್ತಿದ್ದಾನೆ. ದಾರಿಯುದ್ದಕ್ಕೂ ಸರೋಜಿನಿಯ ಜೊತೆಯಲ್ಲಿ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಿದ್ದಾನೆ. ತಮಾಷೆ ಮಾಡುತ್ತಿದ್ದಾನೆ. ತನ್ನ ಜೊತೆ ತಾನೇ ಮಾತಾಡುತ್ತಿರುವಂತೆ ತನ್ನ ಪ್ರಶ್ನೆಗಳಿಗೆ ತಾನೇ ಉತ್ತರ ಕೊಡುತ್ತಿದ್ದಾನೆ.

ಎದುರಿಗೇ ಮಹಾಪಾತ್ರರ ಮನೆ. ಸರೋಜಿನಿ ಹಿಂದೇಟು ಹಾಕುತ್ತಾ ಹೆಜ್ಜೆಯಿಡುತ್ತಿದ್ದಾಳೆ. ಬಲಿದತ್ತ ಬೇಗಬೇಗ ನಡೆಯತೊಡಗಿದ. ಸರೋಜಿನಿಯ ನಡವಳಿಕೆಯಲ್ಲಿ ಸಂಕೋಚವಿದೆ, ಹಿಂಜರಿಕೆಯಿದೆ - ಇಲ್ಲಿ ಅವಳಿಗೆ ಯಾರೂ ಪರಿಚಯವಿಲ್ಲ. ಪರಿಸ್ಥಿತಿ ಏನೆಂದು ಬಲಿದತ್ತನಿಗೂ ಗೊತ್ತಿಲ್ಲ. ಬಾಗಿಲು ಮುಂದಾಯಿತು. ಈ ಬಾಗಿಲು ಒಂದು ಪರಿಚಿತವಾದ ಬದುಕಿನ ರೂಪಕವಿದ್ದಂತೆ. ಇಲ್ಲಿ ಮೇಲು-ಕೀಳು, ಸಣ್ಣ-ದೊಡ್ಡ - ಈ ಭೇದಭಾವನೆಗಳ ಮೋಸಗಾರಿಕೆ ಹಗಲೇರುತ್ತದೆ. ಎಲ್ಲರ ಬೇಳೆಕಾಳೂ ಎಷ್ಟೆಂದು ಗೊತ್ತಾಗಿಹೋಗುತ್ತದೆ. ಸಿಲಿಂಡ್ರಿಕಲ್ ಕನ್ನಡಕದ ಗಾಜಿನಂತೆ ಮತ್ತೆ ಬದುಕಿನ ದೃಷ್ಟಿಕೋನವನ್ನು ತಿರುಗಿಸಿ ಹೊಸ ರೂಪವನ್ನು ತೋರುತ್ತದೆ. ಮೇಲಿನಿಂದ ಮೇಲ್ಛಾವಣಿ ಮುಚ್ಚಿರುವ ಎರಡು ದಪ್ಪಗಿರುವ ಕಂಬಗಳು, ಮಧ್ಯದಲ್ಲಿ ಕೋಲ್‌ಟಾರ್ ಹಚ್ಚಿರುವ ಸಾಗವಾನಿ ಮರದ

ಬಾಗಿಲು. ಅಲ್ಲಿಯ ಬದುಕು ವಿಕಾರವಾಗಿ ಹಲ್ಲುಬಿಟ್ಟು ನಗುತ್ತಿರುವಂತೆ ಅದರಿಂದಲೆ ಗೊತ್ತಾಗುತ್ತಿದೆ. ಅದನ್ನು ನೋಡಿದಾಗ ಬಲಿದತ್ತನಿಗೆ ತನಗೆ ಪರಿಚಯವಿರುವ ವ್ಯಕ್ತಿತ್ವವೊಂದು ಎದುರಾಗುತ್ತದೆ. ಮಹಾಪಾತ್ರರು ಹಾಗೂ ಮೇಲಿನವರಿಗೆ ಹೋಲಿಸಿದರೆ ಆ ವ್ಯಕ್ತಿತ್ವ ಸೊಟ್ಟಗಿದೆ - ನೇರವಾಗಿಲ್ಲ; ತೆಳ್ಳಗಿದೆ - ದಪ್ಪವಾಗಿಲ್ಲ; ಸಣ್ಣದಾಗಿದೆ - ದೊಡ್ಡದಾಗಿಲ್ಲ. ಮೈಯನ್ನು ತಿರುಗಿಸಿ ಬಗ್ಗಿಸಿ ತಲೆಕೆರೆಯುತ್ತಾ ರೋಮರೋಮದಲ್ಲೂ ಕೃತಜ್ಞತೆಯನ್ನು ತುಂಬಿಕೊಂಡು ದೈನ್ಯದಿಂದ ನೋಡುತ್ತಾ ಭಯ ತುಂಬಿದ ಧ್ವನಿಯಲ್ಲಿ ಯಾಚಿಸುತ್ತಾ, ಸ್ವಲ್ಪ ತೆರೆದ ಹಲ್ಲಿನ ಸಾಲು, ತಿರುಚಿದಂತಾಗಿ - ತೆರೆಯುತ್ತದೆ, ಮುಚ್ಚುತ್ತದೆ, ತೆರೆಯುತ್ತದೆ, ಮುಚ್ಚುತ್ತದೆ. ಅದು ಒಂದು ರೀತಿಯ ನಗೆ. ಅಲ್ಲಿ ಶೌರ್ಯವಿಲ್ಲ, ಹೊಟ್ಟೆಪಾಡಿನ ಯೋಚನೆ, ಗೇಣು ಹೊಟ್ಟೆಗಾಗಿ ಸಹಜವಾದ ದಾಸ್ಯಭಾವದಿಂದ ಅನುಗ್ರಹಕ್ಕಾಗಿ ಭಿಕ್ಷಾಟನೆ.

ಬಲಿದತ್ತ ನಿಂತಿದ್ದ, ಹೊರಗೆ ಅವನಲ್ಲಿ ತೀವ್ರ ಬದಲಾವಣೆಯಾಗುತ್ತದೆ. ಮೈಯು ಒಳಗಿನ ಬಹುಮುಖಿಯಾದ ಸ್ವಭಾವಕ್ಕೆ ರಕ್ಷಾಕವಚ ತೊಡಿಸುತ್ತಿದ್ದಾನೆ. ಅಕ್ಕಪಕ್ಕದ ಪರಿಸರವನ್ನು ಗಮನಿಸಿ ಅದಕ್ಕೆ ತಕ್ಕಂತೆ ತಾಳಹಾಕಲು ಯೋಚಿಸುತ್ತಿದ್ದಾನೆ.

ಸರೋಜಿನಿ ಹೇಳಿದಳು - "ಇದೇನಾ ಮಹಾಪಾತ್ರರ ಮನೆ? ಒಳಗೆ ನಡೀರಿ. ಹೊರಗಡೆ ಏಕೆ ನಿಂತುಬಿಟ್ಟಿರಿ?"

"ಸ್ವಲ್ಪ ತಡಿ", ಬಲಿದತ್ತ ಹೇಳಿದ, "ಸ್ವಲ್ಪ ಹೊರಗೆ ಹೋಗಿಬರ್ತೀನೆ." ಅವನ ಸ್ವರದ ಮೇಲೆ ಮುಚ್ಚಳ ಮುಚ್ಚಿದಂತಿತ್ತು. ಸರೋಜಿನಿ ಅತ್ತಇತ್ತ ನೋಡುತ್ತಾಳೆ. ಗಂಡನ ಚಹರೆಯಲ್ಲಾದ ಬದಲಾವಣೆ ಅವಳಿಗೆ ಗೊತ್ತಾಗಲಿಲ್ಲ. ಇವತ್ತು ಬಂದಿದ್ದರಲ್ಲ, ಅವರು ಇದೇ ಮನೆಯಲ್ಲಿ ಇದ್ದಾರೆ ಅಂದುಕೊಳ್ಳುತ್ತಾಳೆ.

ಲೋಟವನ್ನು ಕೈಗೆ ಕೊಡಬೇಕಾದರೆ - ಛಿ.

ಪಕ್ಕದಲ್ಲಿ ತನ್ನ ಗಂಡ, ತನ್ನ ಹೆಮ್ಮೆಯು, ನಂಬಿಕೆಯ ಹೆಗ್ಗುರುತು.

ಆದರೆ ಮನುಷ್ಯನ ಚರ್ಮ ಕಲ್ಲಿನಿಂದ ಮಾಡಿದ್ದಲ್ಲ, ಮುಟ್ಟಿದರೆ ಅರ್ಥವಾಗುತ್ತದೆ.

ಮನಸ್ಸಿನಲ್ಲೇ ಒಂದು ಕೆಟ್ಟ ನೆರಳಿನ ಕಲ್ಪನೆ ಮಾಡಿಕೊಳ್ಳಬಹುದು. ಇದಕ್ಕಾಗಿ ಯಾವ ಸ್ಥೂಲ ನಿದರ್ಶನದ ಅಗತ್ಯವೂ ಇಲ್ಲ, ಹೆಣ್ಣಿನ ಮನಸ್ಸು, ಅದರ ಸೂಕ್ಷ್ಮ ಅನುಭವವೇ ಸಾಕು.

ಅದೊಂದು ಅತೃಪ್ತ ಗಂಡಿನ ನೆರಳು. ಏಟು ತಿಂದ ದರಿದ್ರ, ಬಾಯಾರಿದ ಗಂಡಿನ ನೆರಳು.

ಹೌದು, ಅವರಿಗೆ ತುಂಬ ಬಾಯಾರಿಕೆಯಾಗಿರಬೇಕು.

ಕರುಣೆ ಮೂಡುತ್ತದೆ.

ಹಾಗೆಯೆ ಈ ಬಾಗಿಲ ಬಳಿ ನಿಂತಿರುವಂತೆಯೆ ಕುತೂಹಲ ಮೂಡುತ್ತದೆ - ಈ ಮನೆಯಲ್ಲೇ ಅಲ್ಲವೆ ಅವರು ಇರೋದು, ಅವರ ಹೆಂಡತಿ ಮಕ್ಕಳು. ಅವರ ಹೆಂಡತಿ ಹೇಗಿರಬಹುದು?

- ಸರೋಜಿನಿಯ ಮನಸ್ಸಿನಲ್ಲಿ ಇವನ್ನೆಲ್ಲ ನೋಡುವ ತೀವ್ರ ಕುತೂಹಲವಿದೆ. ಅವಳು ಮನಸ್ಸಿನಲ್ಲೇ ನಗುತ್ತಿದ್ದಾಳೆ.

ಬಲಿದತ್ತ ಗಡಿಬಿಡಿಯಿಂದ ನಡೆಯುತ್ತಿದ್ದಾನೆ, ಅವನ ಹಿಂದೆ ಸರೋಜಿನಿ, ಅವಳ ನಡಿಗೆಯಲ್ಲಿ ಸ್ವಾರ್ಥದಿಂದ ದೂರವಾದ ಯೌವನದ ಮಾಧುರ್ಯವಿದೆ.

ಬರಿಮೈಗೆ ಪಂಚೆ ಸುತ್ತಿಕೊಂಡು ಹೊಗೆಸೊಪ್ಪಿನ ತುಂಡು ಜಗಿಯುತ್ತಾ ಯಾರೋ ಹಲ್ಲುಜುಮ್ಮತ್ತಿರುವ ಆಸಾಮಿ ಅತ್ತಇತ್ತ ಅಡ್ಡಾಡುತ್ತಿದ್ದಾರೆ. ರಾತ್ರಿ ಎಂಟೂವರೆ ಸಮಯ, ಗುರುತು ಹಿಡಿಯಲಾಗುತ್ತಿಲ್ಲ. ಹೊಗೆಸೊಪ್ಪಿನ ರಸ ಜೊಲ್ಲಾಗಿ ಬಾಯಿಂದ ಇಳಿಯುತ್ತಿದೆ. ಹಾಗಾಗಿ ಮಾತು ಅಸ್ಪಷ್ಟವಾಗಿದೆ. ಹಾಗೆಯೆ ಅನೇಕ ಮಾತುಗಳು ಮನೆಯೊಳಗಡೆ ಕಾಣುವ ಬೆಳಕಿನ ನಡುವೆ ಮೆಲ್ಲನೆ ಕೇಳಿಬರುತ್ತಿದೆ.

"ಲೋ ಮರಿ, ಬೇಗ ಬೇಗ ಬರಿ ಮತ್ತೆ, ಒಂದು ಹೇಳಿದರೆ ಒಂದು ಬರೀತಿದೀಯಲ್ಲ. ಏನು ಬರೀತೀಯೊ ನಿನ್ನ ತಲೆ. ಬೇಗ ಬರಿ. ಸರಿ ಸರಿ, ನೀನಂತೂ ಮುಂದೆ ಬರೋ ಹಾಗಿಲ್ಲ. ತುಂಬಿ ಹಿಂದಿದ್ದಿ. ಕಂಪನಿ ಏನು ಮುಫತ್ತಾಗಿ ಸಂಬಳ ಕೊಡ್ತಾ ಇದೆಯೊ ? ಬೇಗ ಬರಿ, ಗೊತ್ತಾಯ್ತಾ ?"

ಹೆಂಡತಿಯೊಡನೆ ಬಲಿದತ್ತ.

"ಯಾರು ? ಯಾರಲ್ಲಿ ? ಲೋ ಗೋಪಾಲಿ, - ಯಾರನ್ನೂ ಬಿಡಬೇಡ ಅಂತ ಹೇಳಿರಲಿಲ್ಲವೇನೋ. ಇಲ್ಲಿ ಕೆಲಸ ಮಾಡ್ತಾ ಇದೀವಿ. ಏನೋ, ಈಗಲೇ ಮಾಡ್ತೀನಿ ತಡಿ ನಿಂಗೆ. ಯಾರಪ್ಪಾ ಅಲ್ಲಿ, ಇಲ್ಲೇನು ಇಲ್ಲಿ, ನಡೀರಿ, ಬಿಡಿ ಗಾಡಿ ಇಲ್ಲಿಂದ - ಆಫೀಸಿನಲ್ಲಿ ಸಿಗ್ತೀನಿ. ಸುಮ್ಮನೆ ಯಾಕೆ ಇಲ್ಲಿ ನಿಂತಿದ್ದೀರಾ ? ಯಾಕೆ ಮಾತಾಡ್ತಿಲ್ಲ ?"

"ಸರ್-"

"ಓಹೋ, ಮಿಸ್ಟರ್ ದಾಸ್, ಜೊತೇಲಿ ಯಾರಿದ್ದಾರೆ ?"

"ಸರ್, ನನ್ನ ಹೆಂಡತಿಯೂ ಬಂದಿದ್ದಾಳೆ-"

"ಓ, ಐಸೀ, ಬನ್ನಿ ಬನ್ನಿ. ಒಳಗೆ ಬನ್ನಿ. ಹೀಗೆ, ಹೀಗೆ ಬನ್ನಿ. ಇವತ್ತು ನಮ್ಮ ಅದೃಷ್ಟ - ಏನು ಮಾಡೋದು, ಮನುಷ್ಯ ಕೆಲಸಕಾರ್ಯದಲ್ಲಿ ಕೂತ ಅಂದ್ರೆ ಏನೂ ಕಣ್ಣಿಗೆ ಬೀಳಲ್ಲ - ಬನ್ನಿ, ಹೀಗೆ ಬನ್ನಿ - ಲೋ, ಸ್ವಲ್ಪ ದೀಪ ಹಿಡಿ-"

ಮಹಾಪಾತ್ರರು ದಾರಿ ತೋರಿಸತೊಡಗಿದರು. ಬಲಿದತ್ತ ಒಳಗೆ ಹೋಗಿ ನೋಡಿದ-

"ಅರೆ, ಬಿನುಬಾಬುಗಳು, ಇಷ್ಟು ಹೊತ್ತಿನ ತನಕ ?"

ಹೊರಗಿನ ಕೋಣೆಯಲ್ಲಿ ಬಿನುಬಾಬು ಪಿಸುಗುಟ್ಟಿದರು - "ನೀವೇ ಕಣ್ಣಾರೆ ನೋಡ್ತಾ ಇಲ್ಲವೆ, ಹತ್ತು ಗಂಟೆಗೆ ಒಂದಿಷ್ಟು ಹೊಟ್ಟೆಗೆ ಹಾಕಿಕೊಂಡು ಬಂದಿದ್ದು, ಇನ್ನೂ ಮನೆಗೆ ಹೋಗೋದಕ್ಕೆ ಆಗಿಲ್ಲ. ಜಲಬಾಧೆ, ಮಲಬಾಧೆ ಅಂತ ಅವಸರವಾಗಿ ಅದೂ ನಿಂತುಹೋಯಿತು. ಆದರೆ ಇನ್ನೂ ಕೆಲಸ ನಡೆಯುತ್ತಿದೆ. ಹಲ್ಲುಜುಮ್ಮತ್ತಾ ಬಾಯಿಂದ ಅದೇನು ಹೇಳ್ತಾರೋ, ಅನೇಕ ವೇಳೆ ಅರ್ಥವಾಗಲ್ಲ. ಸಾಹೇಬರುಗಳು ಬಾಯಲ್ಲಿ ಪೈಪ್ ಕಚ್ಚಿಕೊಂಡು ಡಿಕ್ಟೇಷನ್ ಕೊಡೋದನ್ನ ನೋಡಿದ್ದೇನೆ. ಆದರೆ ಅವು ಸಾಹೇಬರುಗಳ ಶಬ್ದಗಳು, ಅವುಗಳ ಧಾಟಿಯು, ಬೇರೆ ಅರ್ಥವಾಗುತ್ತದೆ. ಇಷ್ಟರ ಮೇಲೆ ಪಿಟ್‌ಮನ್ ಷಾರ್ಟ್ ಹ್ಯಾಂಡ್ ಬೇರೆ. ಒಳ್ಳೇ ಫಜೀತಿ ಅಂದ್ರೆ ಬಾಯಲ್ಲಿ ಮಾತು ಸರಿಯಾಗಿ ಹೊರಡಲ್ಲ. ಅದರ ಮೇಲೆ ಇಂಗ್ಲಿಷ್ ಭಾಷೆ. ಅದೂ ಹೋಯಿತು. ಅಂದರೆ ಪಿಟ್‌ಮನ್ ಷಾರ್ಟ್ ಹ್ಯಾಂಡ್ ಬೇರೆ. ಅಯ್ಯೋ ಬಿಡಿ, ಇದು

ನಮ್ಮ ಶರ್ಮ - ಎಲೆಯಡಿಕೆ ಇಟ್ಟಿದ್ದೀರಾ? ಇವತ್ತು ಸಾಹೇಬರ ಜೊತೆಯಲ್ಲಿ ಹೋಗಿದ್ರಲ್ಲಾ ಏನು ಸಮಾಚಾರ ? ನಿಮಗಂತೂ ಅದೃಷ್ಟ ಖುಲಾಯಿಸಿದೆ, ಬಲಿದತ್ತ ಬಾಬು, ಅದೃಷ್ಟ ಖುಲಾಯಿಸಿದೆ."

"ಹಾಂ, ಹೂಂ" ಕ್ಯಾಕರಿಸಿದ ಶಬ್ದ, ಅವರು ಹಿಂದಿರುಗಿ ಬಂದರು. ಬಲಿದತ್ತ ಹೊರಗೆ ಬಂದು ಕರವಸ್ತ್ರದಿಂದ ಮುಖ ಒರೆಸಿಕೊಂಡು ನಿಧಾನವಾಗಿ ಅಡ್ಡಾಡಲಾರಂಭಿಸಿದ. ಅವನಿಗೆ ಅಂತಹದೇನೂ ಗೊತ್ತಿಲ್ಲ. ಬಿನುಬಾಬು ರಿಜಿಸ್ಟರಿನ ಮೇಲೆ ತಲೆಯಿಟ್ಟರು.

ಮಹಾಪಾತ್ರರು ಹೇಳಿದರು - "ಕೆಲಸ ಅರ್ಧಕ್ಕೇ ನಿಂತಿತು- ಪರವಾಗಿಲ್ಲ, ಬಿನುಬಾಬು. ನೀವು ಮನೆಗೆ ಹೋಗಿ. ಇದು ನಿಮ್ಮ ಕೈಲಿ ಹರಿಯಲ್ಲ. ನೀವು ತಗೊಳ್ಳಿ ಬಲಿದತ್ತ ಬಾಬು. ನಿಮ್ಮ ಕೈ ಜೋರಾಗಿ ಸಾಗುತ್ತೆ - ಬೇಕೆಂದರೆ ನೀವು ಈಗಲೇ ಮುಗಿಸಬಲ್ಲಿರಿ. ಅಯ್ಯೋ, ಈ ಕೆಲಸಕ್ಕೆ ಬಾರದವರೇ ಗಂಟು ಬೀಳ್ತಾರೆ - ಬಿಡಿ. ನೀವು ಕೈಗೆ ತೊಗೊಳ್ಳಿ, ಗೊತ್ತಾಯ್ತಾ. ಇವತ್ತು ನಾನು ನಿಮ್ಮ ಮನೆಗೆ ಬಂದಿದ್ದೆ. ಇರಲಿಬಿಡಿ, ಅದೆಲ್ಲ ಆಮೇಲೆ ಮಾತಾಡೋಣ. ತಗೊಳ್ಳಿ ಈಗ - ಬರೆದುಕೊಳ್ಳಿ-"

ಹೊಗೆಸೊಪ್ಪಿನ ತುಂಡನ್ನು ಪೂರ್ತಿಯಾಗಿ ಜಗಿದಿದ್ದಾಯಿತು. ಈಗ ಕೆಲಸ ಸರಾಗ.

ಬಲಿದತ್ತ ಬರೆದುಕೊಳ್ಳುತ್ತಾನೆ.

ಢಣ್ - ಢಣ್ - ಒಂಬತ್ತು ಬಡಿಯಿತು, ಬರವಣಿಗೆ ಸಾಗುತ್ತಿದೆ.

ಮತ್ತೆ - ಢಣ್ ಒಂಬತ್ತೂವರೆಗ ಗಂಟೆ ಬರವಣಿಗೆ ಹಾಗೆಯೆ ಸಾಗಿದೆ.

ಬಲಿದತ್ತ ಸುಮ್ಮನೆ ಅಡ್ಡಾಡಲು ಬಂದಿದ್ದ ಅಷ್ಟೆ.

ಈಗ ಅವನ ವಿಶಿಷ್ಟ ವ್ಯಕ್ತಿತ್ವದಲ್ಲಿ ಬದುಕಿನ ಜೀವಾಳವಿರಲಿಲ್ಲ. ಅವನು ಯಂತ್ರದಂತೆ ಕೆಲಸ ಮಾಡುವ ಮನುಷ್ಯ. ಬರವಣಿಗೆ ಮುಗಿಯುವ ಹಂತಕ್ಕೆ ಬಂತು. ಈಗ ಬಹುಶಃ ಬಿಡುವು ಸಿಗಬಹುದು.

ಮಹಾಪಾತ್ರರು ಅವನನ್ನು ಯಾಕೆ ಕರೆಸಿದರು, ಕೇಳಲು ನೆನಪಾಗಲಿಲ್ಲ. ಕಾದಿರುವ ನಾಳೆಗಾಗಿ ಮಾಡಬೇಕಾದ ದುಡಿಮೆ ಕಣ್ಣ ಮುಂದೆ ಕುಣಿಯುತ್ತದೆ,. ಬರೆದದ್ದೆಲ್ಲವನ್ನು ಟೈಪ್ ಮಾಡಿಕೊಡಬೇಕು.

ಕೈಬರೆಯುತ್ತಾ ಹೋಗಿದೆ. ಮನಸ್ಸು ಸತ್ತಿದೆ. ಬಲಿದತ್ತ ಕೆಲಸ ಮಾಡುತ್ತಿದ್ದಾನೆ.

ಅತ್ತ ಸರೋಜಿನಿ–

ಕಟುವಾಸ್ತವದ ಮುಂದೆ ಎಲ್ಲ ಆಸೆಗಳೂ ಕಮರಿಹೋಗಿದ್ದವು - ಮಹಾಪಾತ್ರರ ಮೊದಲ ಸಂಭಾಷಣೆ ಕೇಳಿ, ಆಮೇಲೆ ಬೆಂಕಿಯ ಮೇಲೆ ನೀರೆರೆಚಿದಂತೆ ಇದ್ದಕ್ಕಿದ್ದಂತೆ ಅವರ ಅಸಹಜವಾದ ಗಾಂಭೀರ್ಯ ಬಿಸಿ ಚಹ ಭಾವನೆಯ ಮೋಡವೆಬ್ಬಿಸುತ್ತದೆ, ನೆಮ್ಮದಿ ಅನ್ನುವ ಹೆಸರೇ ಇರುವುದಿಲ್ಲ.

ಮನುಷ್ಯ ಏನು ಮಾಡಬೇಕು, ಇಲ್ಲಿಂದ ಹೇಗೆ ಹೊರಬೀಳಬೇಕು. ಸರೋಜಿನಿ ಕೂಡಲೇ ಯೋಚಿಸಿದಳು.

ಆದರೆ ಮಹಾಪಾತ್ರರು ಮುಂದೆ ಮುಂದೆ, - "ಬನ್ನಿ, ಹೀಗೆ ಬನ್ನಿ" ಅದೇ ವೇಗದ

ನಡಗೆ, ವೇಗದ ಮಾತುಕತೆ - ಎಲ್ಲ ಗಂಡಸರೂ ಒಂದೇ ಬಗೆಯ ಹೇಡಿಗಳು - ಸರೋಜಿನಿ ಯೋಚಿಸಿದಳು - ಎಲ್ರೋ ಅಲ್ಪಸ್ವಲ್ಪ ವ್ಯತ್ಯಾಸವಿರಬೇಕಷ್ಟೆ.

ಒಳಗಡೆ ಹಜಾರದ ಬಾಗಿಲನ್ನು ತಳ್ಳಿ ಮಹಾಪಾತ್ರರು ಕೂಗು ಹಾಕಿದರು, "ನೋಡಿಲ್ಲಿ, ಬಲಿದತ್ತ ಬಾಬುಗಳ ಮನೆಯಾಕ ಬಂದಿದ್ದಾರೆ." ಹೀಗೆ ಹೇಳಿ ಹೊರಟುಹೋದರು. ಸರೋಜಿನಿ ತೆಪ್ಪಗೆ ನೋಡುತ್ತಾ ನಿಂತಿದ್ದಳು. ಎಲ್ಲಿ ಯಾರಿದ್ದಾರೆ ? ಪಕ್ಕದಲ್ಲಿ ಅಡುಗೆ ಮನೆಯಿಂದ ಧ್ವನಿ ಬರುತ್ತಿದೆ. ಅಡುಗೆ ಏನು ಮಾಡಬೇಕೆಂಬ ಚರ್ಚೆ ನಡೆಯುತ್ತಿದೆ. ಒಂದೆಡೆ ಶಾಲೆಗೆ ಹೋಗುತ್ತಿರುವ ಹುಡುಗರು ಪಾಠ ಓದುತ್ತಿದ್ದಾರೆ. ಒಂದು ಕೊಠಡಿಯಲ್ಲಿ ಎರಡು ಮೂರು ಮಂದಿ ಮಕ್ಕಳು ಕಿಲಕಿಲ ನಗುತ್ತಾ ಆಟವಾಡಿಕೊಳ್ಳುತ್ತಿವೆ. ಉಗ್ರಾಣದ ಬಾಗಿಲು ತೆರೆದಿದೆ, ದೀಪ ಉರಿಯುತ್ತಿದೆ - ಮನೆಯ ಸಾಮಾನುಗಳು ಕಾಣುತ್ತಿವೆ, ಮಂಚ, ಹಾಸಿಗೆ, ಬೀಗ, ಸಮೃದ್ಧವಾಗಿರುವ ದೊಡ್ಡ ಮನುಷ್ಯರ ಮನೆ. ಎಲ್ಲ ಕೆಲಸದಲ್ಲಿ ತೊಡಗಿದ್ದಾರೆ, ಅವಳು ಇಲ್ಲಿ ಯಾವ ಲೆಕ್ಕ ?

ಆಡುತ್ತಾ ಆಡುತ್ತಾ ಮೂರು ಮಕ್ಕಳು ಹೊರಕ್ಕೆ ಬಂದವು. ಅವಳನ್ನು ನೋಡಿ ಥಟ್ಟನೆ ಹಾಗೆಯೇ ನಿಂತವು. ಆಮೇಲೆ ಅಮ್ಮನ ಬಳಿಗೆ ಓಡಿಹೋದವು. ಕೆಲಸದವಳು ಬಂದು ತನಗೆ ತಾನೇ ಹೇಳಿಕೊಂಡಳು "ಯಾರೋ ಬಂದಿದ್ದಾರೆ" ಹಾಗೆಯೆ ನೋಡುತ್ತಲೆ ಎಲ್ಲರೂ ಬಂದರು. ಮನೆಯಾಕೆ, ಮಕ್ಕಳು, ಅಡಿಗೆಯವರು, ಕೆಲಸದವರು ಒಟ್ಟಿಗೆ ಎಲ್ಲರನ್ನೂ ನೋಡಿದ ಹಾಗಾಯಿತು.

ಮನೆಯಾಕೆ ಪ್ರಶ್ನಿಸಿದಳು-

"ಯಾರು ?"

"ನಾನು ಸುತ್ತಾಡುವುದಕ್ಕೆ ಬಂದಿದ್ದೆ."

ಆ ಕಡೆಯಿಂದ ಉತ್ಸಾಹದ ಪ್ರತಿಕ್ರಿಯೆ ಸಿಗಲಿಲ್ಲ. ರಾತ್ರಿಯ ಈ ವೇಳೆಯಲ್ಲಿ ಅಪರಿಚಿತ ವ್ಯಕ್ತಿ ಸುತ್ತಾಡುತ್ತಾ ಬರುವುದು, ಯಾಕೋ ಸರಿಹೋಗಲಿಲ್ಲ. ಮತ್ತೆ ಪ್ರಶ್ನೆ - "ಜೊತೇಲಿ ಯಾರಿದ್ದಾರೆ ?"

"ಅವರೂ ಬಂದಿದ್ದಾರೆ - ಹೊರಗಡೆ ಮಾತಾಡ್ತಾ ಇದ್ದಾರೆ."

"ಓಹೋ ! ಸಾಹೇಬರ ಬಳಿ ಇದ್ದಾರಾ ?"

"ಹೂಂ"

"ಸರಿ, ಹಾಗಾದ್ರೆ ಮೇಲೆ ಬನ್ನಿ. ಲೇ, ಚಾಪೆ ತಂದು ಹಾಕು. ಎಲೆಯಡಿಕೆ ಹಾಕಿಕೊಳ್ತೀರಾ ? ಯಾವ ತರಹದ್ದು ಬೇಕು ? ಲೇ, ಹಾಗೆ ನನ್ನ ಎಲೆಯಡಿಕೆ ಚೀಲ ತಗೊಂಡು ಬಾ, ನಿಮ್ಮ ಮನೆ ಎಲ್ಲಿದೆ ? ಇಷ್ಟು ದಿವಸ ನಿಮ್ಮನ್ನು ನೋಡಲೆ ಇಲ್ಲವಲ್ಲ. ಎಲ್ಲೂ ಹೋಗಲ್ಲ ಅಂದ ಮೇಲೆ ಅವರಿವರ ಪರಿಚಯವಾದರೂ ಹೇಗಾಗುತ್ತೆ ? ಯಾವಾಗಲೂ ಆಫೀಸು, ಕೆಲಸ ಅಂತಾನೇ ಇರ್ತಾರೆ. ಮತ್ತೇನು ? ಅಂದಹಾಗೆ ನಿಮಗೆಷ್ಟು ಮಕ್ಕಳು ? ಓಹೋ, ಛಿಛಿ, ನಿಮಗಿನ್ನೂ ವಯಸ್ಸು ತಾನೆ ಏನಾಗಿದೆ ? ಇನ್ನೇನು ? ತವರು ಮನೆ ಯಾವುದು ? ಅತ್ತೆ ಮನೆ ? ಏನೇನು ಅಡುಗೆ ಮಾಡ್ತೀರಾ ?"

ಆಮೇಲೆ ? ಪ್ರಶ್ನೆಗಳು ನಿಂತುಹೋದವು.

ಸಾಹೇಬರ ಹೆಂಡತಿ ಚಕ್ಕಂಬಟ್ಟಲು ಹಾಕಿ ಕುಳಿತುಬಿಟ್ಟಳು. ಸರೋಜಿನಿ ನೋಡುತ್ತಿದ್ದಾಳೆ. ಯಾವ ವಿಶೇಷವೂ ಇಲ್ಲ. ಆರೋಗ್ಯ ಕುಂದಿದ ಸಾಧಾರಣ ಹೆಂಗಸು. ಸಣ್ಣ ಕೊಠಡಿಯಲ್ಲಿ ಒಂದು ಮೂಲೆಯಲ್ಲಿ ಮಲಗಿದ್ದರೆ ಗುರುತೇ ಸಿಗುವಂತಿಲ್ಲ. ಅಸ್ಥಿಪಂಜರದ ಮೇಲೆ ಚಿನ್ನದ ಒಡವೆಗಳನ್ನು ಹೇರಿಕೊಂಡಿದ್ದಾಳೆ, ಅಷ್ಟೆ. ಏನೋ ಒಂದು ರೀತಿಯ ಗತ್ತು ಮುಖದಲ್ಲಿ. ಮಾತಾಡುವುದರಲ್ಲೂ ಏನೋ ಅಪ್ಪಣೆ ಮಾಡುವ ಧಾಟಿ.

ಮನೆಯಾಕೆ ಆಳಿಗೆ ಗುಟ್ಟಾಗಿ ಅಪ್ಪಣೆ ಮಾಡಿದ್ದಳು, ಆ ಪ್ರಕಾರ ಅವನು ಹೋಗಿ ಆಫೀಸು ಕೊಠಡಿಯಿಂದ ಅಪರಿಚಿತಳ ಪರಿಚಯ ಪಡೆದುಕೊಂಡು ಬಂದ. ಅದುಗೆ ಮನೆಗೆ ಹೋಗುವ ನೆಪದಲ್ಲಿ ಅವಳು ಒಳಗೆ ತಲೆಹಾಕಿ ವಿವರಗಳನ್ನು ತಿಳಿದುಕೊಂಡು ಬಂದಳು. ಮಕ್ಕಳು ಊಟ ಮಾಡುವುದಕ್ಕಾಗಿ ಹಟ ಮಾಡುತ್ತವೆ, "ಬಂದೆ" ಅಂದವಳೆ ಆಕೆ ಎದ್ದು ನಿಂತಳು.

ಆಮೇಲೆ ಜೊತೆಯಲ್ಲಿದ್ದವಳು ಮನೆ ಕೆಲಸದವಳು, "ಅಮ್ಮಾವ್ರೆ, ನಿಮ್ಮ ಜಮಾನ್ರು ಏನು ಮಾಡ್ತವ್ರೆ ? ನಮ್ಮ ಸಾಹೇಬರ ಹತ್ರ ಗುಮಾಸ್ತೆ ಕೆಲಸ ಮಾಡ್ತಾರಾ ? ಎಷ್ಟು ಸಂಬಳ ಬರುತ್ತೆ ?" - ಆದರೆ ಈ ಮಾತುಕತೆಗೂ ಅಡ್ಡಿಬಂತು- "ಲೇ ಮಲ್ಲಿ, ಪಾತ್ರೆ ತೊಳೀತೀಯೊ ಅಥವಾ ಹಾಗೇ ಕೂತಿರ್ತೀಯೋ ?"

ಮತ್ತೆ ಅವಳು ಒಬ್ಬಂಟಿಗಳಾದಳು. ಮನೆಯಾಕೆ ಕೆಲಸಕಾರ್ಯಗಳಲ್ಲಿ ತೊಡಗಿದಳು. ಸರೋಜಿನಿ ಮನಸ್ಸಿನಲ್ಲೇ ಚಡಪಡಿಸತೊಡಗಿದಳು - "ಈಗೇನು ಮಾಡೋದು ? ಈಗೇನು ಮಾಡೋದು ?"

ಮನೆಯ ಕೆಲಸಗಳೆಲ್ಲ ಎಂದಿನಂತೆ ಸಾಗುತ್ತಿವೆ, ಈ ಮಧ್ಯೆ ಇವಳು ಯಾರು ?

ಯೋಚಿಸುತ್ತಿದ್ದಂತೆಯೆ ಒಳಗಿನಿಂದ ಅವಳ ಸ್ವಂತ ವ್ಯಕ್ತಿತ್ವ ಎದ್ದು ಕಾಣುತ್ತದೆ, ನೆನಪಾಗುತ್ತದೆ - ನೂಕುನುಗ್ಗಾಟದ ಈ ಪ್ರಪಂಚದಲ್ಲಿ ಅವಳೂ ಒಬ್ಬ ಹೆಂಗಸು, ಅವಳಿಗೆ ಆಕಾರವಿದೆ, ಕೆಲಸಕಾರ್ಯಗಳಿವೆ, ಮನೆ ಮಠವಿದೆ, ಬದುಕಿಗೊಂದು ಅರ್ಥವಿದೆ.

ಅರ್ಥವಿದೆ! ಅವಳ ಬದುಕಿಗೆ ಏನರ್ಥ ? ತಿರಸ್ಕಾರಕ್ಕೊಳಗಾದ ಮನಸ್ಸಿನಲ್ಲಿ ಬದುಕಿನ ಅರ್ಥವೂ ಚೂರುಚೂರಾಗಿ ಸುರುಟಿಹೋಗುತ್ತದೆ. ಅದರ ಗುರುತೇ ಇರುವುದಿಲ್ಲ. ವ್ಯಕ್ತಿತ್ವ ಸಣ್ಣದಾಗುತ್ತಾ ಬಂದು ಅದಾವ ಮೂಲೆಯಲ್ಲಿ ಮುಖ ಮುಚ್ಚಿಕೊಂಡು ಅದಗಿ ಕುಳಿತುಬಿಡುತ್ತದೊ ಗೊತ್ತೇ ಆಗುವುದಿಲ್ಲ.

ಅವಳು ಇಲ್ಲಿ ಯಾರು ? ಯಾರೂ ಅಲ್ಲ. ಹಾಗಾದರೆ ಕೇವಲ ಪ್ರೇಕ್ಷಕಳೆ ? ಬಲವಾಗಿ ಹಿಡಿಯುವ ಬಯಕೆಯನ್ನು ಮನಸ್ಸಿನಲ್ಲಿ ತುಂಬಿಕೊಂಡು ಮತ್ತೆ ಮತ್ತೆ ನೋಡುತ್ತಾಳೆ - ಕೆಂಪಾಗಿ ಉರಿಯುತ್ತಾಳೆ, ಕಡೆಗೆ ಕಪ್ಪು ಬಣ್ಣ ಮೆತ್ತಿಕೊಂಡಿರುತ್ತದೆ. ಅವಳು ಬರೀ ಅಷ್ಟೆ.

ಅವಳ ಪಲಾಯನವಾದಿ ವ್ಯಕ್ತಿತ್ವ ಎದ್ದುಹೋಗಲು ಚಡಪಡಿಸುತ್ತಿದೆ. ಆದರೆ ಹೋಗಲಾಗುತ್ತಿಲ್ಲ. ಪರಿಸ್ಥಿತಿ ದಾರಿಗೆ ಅಡ್ಡವಾಗಿ ಅಗಳಿ ಹಾಕಿನಿಂತಿದೆ. ಮನಸ್ಸಿನಲ್ಲಿ ಹುಟ್ಟಿದಂದಿನಿಂದ ನೆಲೆನಿಂತ ಸಂಕೋಚ.

ಸುಮ್ಮನೆ ಮತ್ತೆ ಮತ್ತೆ ನಿಟ್ಟುಸಿರುಬಿಡುತ್ತಾ ವ್ಯಾಕುಲಗೊಂಡು ನೋಡುತ್ತಾ ಕುಳಿತುಬಿಟ್ಟಿದ್ದಾಳೆ. ದುರ್ಬಲವಾದ ಮನಸ್ಸು ಮುಕ್ತಿಗಾಗಿ ದೇವರನ್ನು ಕರೆಯಬಲ್ಲದಷ್ಟೆ. ತಾನು ಅನುಭವಿಸುತ್ತಿರುವ ಬೇಗುದಿಗಾಗಿ ಬೇರೆಯವರ ಮೇಲೆ ದೋಷಾರೋಪಣೆ ಮಾಡಿ ಬೈಯಬಲ್ಲಳಷ್ಟೆ. ಇನ್ನೇನು ತಾನೆ ಮಾಡಲು ಸಾಧ್ಯ ಅವಳಿಗೆ.

ಸರೋಜಿನಿಯ ಕಣ್ಣುಗಳೇನೊ ತೆರೆದಿವೆ. ಆದರೆ ಅವು ನೋಡುತ್ತಿಲ್ಲ. ಮೇಲುಸಿರಿನಂತೆ ಭಾವನೆಗಳು ಏಳುತ್ತ ತೇಲಿಹೋಗುತ್ತಿವೆ, ತಾನು ತಿರಸ್ಕಾರಕ್ಕೆ ಒಳಗಾದವಳು ಅಂತ ಅವಳಿಗೆ ಮತ್ತೆ ಮತ್ತೆ ಅನಿಸುತ್ತದೆ. ಮನಸ್ಸಿನಲ್ಲೇ ಮಹಾಪಾತ್ರರನ್ನು ಬೈಯುತ್ತಿದ್ದಾಳೆ, ಆಮೇಲೆ ಗಂಡನನ್ನು, ಅನಂತರ ತನ್ನ ತಿಳಿಗೇಡಿತನವನ್ನು.

ಹೀಗೆಯೆ ರಾತ್ರಿ ಹನ್ನೊಂದೂವರೆ ಗಂಟೆಯಾಯಿತು. ಒಳಗಿನಿಂದ ಮಾತು ಕೇಳಿಸಿತು, "ಏನು ? ಇನ್ನೂ ಹೋಗಲಿಲ್ವಾ ?" ಮನೆಯಾಕೆ ಬಾಗಿಲು ತೆರೆದುಕೊಂಡು ಹೊರಗೆ ಬಂದು ಹೇಳಿದಳು - "ಇಷ್ಟು ಹೊತ್ತು ನಿಮ್ಮನ್ನು ಇಲ್ಲಿ ಕೂಡಿಸಿ, ತಮ್ಮ ಪಾಡಿಗೆ ತಾವು ಕೆಲಸ ಮಾಡಿಕೊಳ್ಳುತ್ತಿದ್ದಾರಾ. ಯಾರಿಗೆತಾನೆ ಕಾಯೋದಕ್ಕೆ ಆಗುತ್ತೆ, ನೀವೇ ಹೇಳಿ ಲೋ ಗೋಪಾಲ - ಎಲ್ಲಿದ್ದೀಯೋ, ಹೋಗಿ ನಿಮ್ಮ ಸಾಹೇಬರಿಗೆ ಹೇಳು. ಸರಿ, ನೀವು ಹೋಗಿ. ಲೋ ಗೋಪಾಲ, ದಾರಿ ತೋರಿಸೊ, ಕತ್ತಲಾಗಿದೆ. ಸರಿ ಹೋಗಿ ಬನ್ನಿ. ಹೀಗೇ ಬರ್ತಾ ಇರಿ. ಗೊತ್ತಾಯ್ತಾ ?"

ಗೋಪಾಲ ದಾರಿ ತೋರಿಸುತ್ತಾ ಮುಂದೆ ನಡೆದ. ಸರೋಜಿನಿ ಹೊರಗೆ ಬಂದು ನಿಂತಳು. ಆಫೀಸು ರೂಮಿನಲ್ಲಿ ಗೋಪಾಲ ಏನೋ ಹೇಳುತ್ತಾನೆ: ಮಹಾಪಾತ್ರರು ರೇಗಿ ಮೇಲೇಳುತ್ತಾರೆ.

"ಛೆ ಛೆ! ಇರಲಿ ಬಿಡಿ. ಇನ್ನೂ ಒಂದು ಕಾಗದ ಬರೆಯಬಹುದಿತ್ತು. ಸರಿ, ನೀವಿನ್ನು ಹೊರಡಿ ಬಲಿದತ್ತ ಬಾಬು. ತುಂಬಾ ಹೊತ್ತಾಯ್ತು ಅಂತ ಕಾಣುತ್ತೆ. ಇಷ್ಟನ್ನು ನೀವು ಜೊತೇಲಿ ತೊಗೊಂಡು ಹೋಗಿ. ನಾಳೆ ಟೈಪ್ ಮಾಡಿಕೊಂಡು ಬರ್ತೀರಿ ತಾನೆ."

ಬಲಿದತ್ತ ನಮಸ್ಕಾರ ಅಂತ ಹೇಳುವ ಮೊದಲೇ ಮಹಾಪಾತ್ರರು ಧಡಾರ್ ಅಂತ ಬಾಗಿಲು ಹಾಕಿಕೊಂಡರು.

ಕತ್ತಲೆ ರಸ್ತೆ, ಬಲಿದತ್ತ ಮತ್ತು ಸರೋಜಿನಿ ಇಬ್ಬರೇ ದಾರಿಯುದ್ದಕ್ಕೂ.

"ತುಂಬಾ ಹೊತ್ತು ಮಾಡಿಬಿಟ್ಟಿರಿ ?" ಸರೋಜಿನಿಗೆ ಹೆಚ್ಚು ಮಾತನಾಡಲಾಗಲಿಲ್ಲ.

ಬಲಿದತ್ತ ತುಂಬ ಕಷ್ಟಪಟ್ಟುಕೊಂಡು ಹೇಳಿದ, "ನೀನೇ ನೋಡ್ತಾ ಇದ್ದೀಯಲ್ಲ"

ಇಬ್ಬರೂ ಸುಮ್ಮನೆ ಮನೆಯ ಕಡೆ ಹೆಜ್ಜೆ ಹಾಕುತ್ತಿದ್ದಾರೆ.

ಒಂದು ಹೊಸ ಅನುಭವ - ಅದುಮಿಟ್ಟ ಬಂಡಾಯ, ಒಂದೆಡೆ ಪರಿಸ್ಥಿತಿಯ ದೆಸೆಯಿಂದಾಗಿ ದಬಾವಣೆಗೆ ಸಿಕ್ಕಿದರೆ ಮತ್ತೊಂದೆಡೆ ಒಂದು ರೀತಿಯ ಗೌಣ ಮನೋಭಾವದ ಕಬ್ಬಿಣದ ದಿರುಸಿನ ಅಡಿಯಲ್ಲಿ ಸಿಕ್ಕಿಕೊಂಡಿದೆ.

ಬೆಳಗ್ಗೆ ಎದ್ದು ಇನ್ನೂ ಮುಖ ಸಹ ತೊಳೆದಿಲ್ಲ. ಕಳೆದ ರಾತ್ರಿ ಕಟ್ಟಿಕೊಂಡು ತಂದ ಕಾಗದಗಳ ರಾಶಿ ನೋಡುತ್ತಾನೆ - ಬಲಿದತ್ತ ದಾಸ್, ಇದೇ ನಿನ್ನ ಬದುಕಿನ ಕವಿತೆ.

ಈ ಪ್ರಪಂಚದಲ್ಲಿ ಪ್ರತಿನಿತ್ಯ ಬೆಳಗಾಗುತ್ತದೆ. ಪ್ರತಿಯೊಂದು ಜೀವಿಯೂ ತನ್ನ ಕಣ್ಣಿಗೆ ಅಥವಾ ಅನುಭವಕ್ಕೆ ರುಚಿಸುವ ಸಾಮಗ್ರಿಯನ್ನು ಕಂಡುಕೊಂಡು ಆನಂದಪಡುತ್ತದೆ.

ಪ್ರತಿಯೊಬ್ಬರ ಪಾಲಿಗೂ ತಮತಮಗೆ ರುಚಿಸುವುದೇ ವಿಶಿಷ್ಟವಾದುದು. ಒಬ್ಬರು ಕಣ್ಣುತುಂಬ ನೀರು ತುಂಬಿಕೊಂಡು ಚಿಂತೆಯಿಂದ ತೊಳಲಾಡಬಯಸಬಹುದು. ಸಿಟ್ಟೇರುತ್ತ ಬಂದಹಾಗೆಲ್ಲ ಒಂದು ರೀತಿಯ ರುಚಿಯ ಅನುಭವವಾಗುತ್ತದೆ - ಕಣ್ಣೀರಿನ ಉಪ್ಪುಪ್ಪಾದ ರುಚಿ, - ಕಡವೆ ಜಾತಿಯ ಜಿಂಕೆಗೆ ಪ್ರಿಯವಾದ ಉಪ್ಪು ಮಣ್ಣು. ಬೇರೊಬ್ಬರು ತಮಗೆ ತಾವೇ ಬೆತ್ತದಿಂದ ಹೊಡೆದುಕೊಂಡು ರಕ್ತಸಿಕ್ತವಾಗಿ ಮಾಡಿಕೊಂಡು ಆನಂದ ಪಡೆಯಬಹುದು. ಇನ್ನು ಕೆಲವರಿಗೆ ನಗುತ್ತಿರುವ ಹೂವಿನಿಂದ ತುಂಬಿದ ಕೊಂಬೆಯೆ ಆನಂದದ ಸಾಮಗ್ರಿ, ಬುಟ್ಟಿ ತುಂಬ ಬಿಳಿ ಹೂವಿನ ಸುವಾಸನೆ.

ಗೊಬ್ಬರದ ಗುಂಡಿಯಲ್ಲಿ ಕಾಗೆ ಕೊಕ್ಕಿಡುತ್ತದೆ. ಹಾದಿಯ ಬದಿಯಲ್ಲಿ ಯಾವುದೋ ನಾಯಿ ಹರಿದ ಎಂಜಲೆಲೆಯ ಜೊತೆಯಲ್ಲಿ ಕುಸ್ತಿ ಮಾಡುತ್ತದೆ.

ರಸ್ತೆಯ ಆ ಮಗ್ಗುಲಲ್ಲಿ ಕಾಲೇಜು ಹುಡುಗ ವ್ಯಾಯಾಮ ಮುಗಿಸಿದ ಮೇಲೆ ಅಂಗೈಯಿಂದ ಬೆವರು ಒರೆಸಿಕೊಳ್ಳುತ್ತಿದ್ದಾನೆ. ಅವನ ಉದ್ದದ ಕೂದಲು ಹಣೆಯ ಮೇಲೆ ಇಳಿಬಿದ್ದಿದೆ. ಬೆವರು ಒರೆಸಿಕೊಳ್ಳುವುದು ಚೆನ್ನಾಗಿರುತ್ತದೆ. ಅದಕ್ಕಾಗಿಯೆ ಅವನು ಚೆನ್ನಾಗಿ ಕಸರತ್ತು ಮಾಡುತ್ತಾನೆ. ಬೆವರೇ ಅವನ ಪಾಲಿಗೆ ಆನಂದದ ಸಾಮಗ್ರಿ.

ಕೇವಲ ಪುನರಾವರ್ತನೆಯಲ್ಲಿ ಅನುಭವದ ಹೆಚ್ಚುಗಾರಿಕೆಯುಂಟು - ತನ್ನ ಮನಸ್ಸಿಗೆ ಬಂದಂತೆ ಮತ್ತೆ ಮತ್ತೆ ಆನಂದವನ್ನು ಅನುಭವಿಸುವುದು. ವಸ್ತು ಜಡವಾಗಿರುತ್ತದೆ. ಚೇತನ ಚಿನ್ಮಯವಾಗಿರುತ್ತದೆ. ಘಟನೆಗಳು ಹಳೆಯದಾಗಿರುತ್ತವೆ. ಆದರೆ ಪುನರಾವರ್ತನೆಯಿಂದಾಗಿ ಹೊಸ ರೀತಿಯ ಆನಂದ ದೊರೆಯುತ್ತದೆ.

ಬಲಿದತ್ತ ಫೈಲುಗಳನ್ನು ಹಿಡಿದಿದ್ದಾನೆ.

ಅನಂತರ ಟೈಪ್ ಮಾಡುವುದಕ್ಕಾಗಿ ಓಡುತ್ತಾನೆ, ಮುಗಿಯುವ ಹೊತ್ತಿಗೆ ಹತ್ತೂವರೆ ಬಡಿಯುತ್ತಿದೆ.

ಮನೆಯಲ್ಲಿ ತರಕಾರಿ ಇಲ್ಲ ಅಂತ ಸರೋಜಿನಿ ಹೇಳಿದ್ದಳು.

ಇಲ್ಲದಿದ್ದರೇನಂತೆ.

ಎರಡು ತುತ್ತು ಬಿಸಿ ಬಿಸಿ ಅನ್ನ, ಬೇಳೆ ನೀರು, ಹೊಗೆಯಾಡುತ್ತಿರುವ ಬೇಯಿಸಿದ ಒಂದು ಆಲೂಗಡ್ಡೆ, ಕೊಳಕಾಗಿರುವ ಎರಡು ಕಾಳು ಉಪ್ಪು, ಎರಡು ಕೆಂಪು ಮೆಣಸಿನ ಕಾಯಿ, ಎರಡು ತುತ್ತು ಬಾಯಿಗೆ ಹಾಕಿಕೊಳ್ಳುವ ವಿಚಾರ - ಊಟ ಮುಖ್ಯವೊ ಅಥವಾ ಯಶಸ್ಸು ಪಡೆಯಲು ಮುಂದುವರಿಯುವುದರಲ್ಲಿ ಸಿಗುವ ಆನಂದ ಮುಖ್ಯವೋ ?

ತರಕಾರಿ ಇರಲಿ, ಬಿಡಲಿ ಏನಂತೆ, ಏನಿಲ್ಲದಿದ್ದರೂ ಏನು ಗಂಟು ಹೋಗುತ್ತದೆ-

ಕಟ್ಟಿಗೆ ಹಸಿಯಾಗಿದ್ದರೇನಂತೆ, ಒಲೆ ತಣ್ಣಗಾಗಿದ್ದರೇನಂತೆ. ಮನೆಗೆ ಓಡು, ಪ್ಯಾಂಟು ಏರಿಸು. ಹಾಗೇ ಕಷ್ಟಪಟ್ಟುಕೊಂಡು ಚಕ್ಕಂಬಟ್ಟಲು ಹಾಕಿ ಕುಳಿತು ಎರಡು ತುತ್ತು ಗಬಗಬ ಅಂತ ನುಂಗಿ ಆಫೀಸಿಗೆ ಓಡು.

ಆಫೀಸು ತಲುಪಿದ ಮೇಲೆ ಗಡಿಯಾರ ನೋಡಿಯೆ ಸಮಾಧಾನದ ಉಸಿರಾಡುತ್ತಾನೆ.

-

ಇದು ದಿನದ ಪ್ರಾರಂಭ.

ಮೊದಲು - ಮಹಾಪಾತ್ರರ ಬಳಿ.

ಅವರು ಕುಳಿತಿದ್ದಾರೆ - ಕರಿಯ ಬೂಟು, ಬಾಯಿ ಸ್ವಲ್ಪ ತೆರೆದಿದೆ. ಕಾವಿ ಬಣ್ಣದ ಲೇಸು, ಕೆಂಪು ಕಾಲು ಚೀಲ, ಹಳದಿ ಪ್ಯಾಂಟು, ಮುಸುಕಾಗಿ ಹೋಗಿರುವ ನೀಲಿ ಅಂಗಿ, ಗೆರೆಗೆರೆಗಳುಳ್ಳ ಪಾಚಿ ಹಸುರುಕೋಟು, ಮೂರು ಬಣ್ಣದ ಉದ್ದದ ಬೈಯಿನ ಗಂಟು ಸ್ವಲ್ಪ ತಿರುಚಿದಂತಿದೆ. ಮುಖದ ಮೇಲೆ ನುಣುಪಾದ ಸ್ನೋ ಲೇಪನ, ಕಣ್ಣುಗಳಿಗೆ ಅಗಲವಾದ ಫ್ರೇಮಿನ ಕನ್ನಡಕ, ತಲೆ ಬಾಚಿಲ್ಲ, ನಿಂತ ಬಾಗಿದ ಅನೇಕ ಭಂಗಿಗಳಲ್ಲಿರುವ ನರೆಗೂದಲು, ಅದರಿಂದ ಸುಗಂಧದೆಣ್ಣೆಯ ದಟ್ಟವಾದ ಕಂಪು ಹರಡುತ್ತಿದೆ. ಮೇಜಿನ ಮೇಲೆ ದರ್ಪದ ಭಂಗಿಯಲ್ಲಿ ಕಾಲುಗಳನ್ನು ಹಾಕಿದ್ದಾರೆ. ಕುರ್ಚಿಯ ಮೇಲೆ ಕುಳಿತು ಒಂದು ಬರೆಯುವ ಪ್ಯಾಡಿಗೆ ಕೈ ಒತ್ತಿಕೊಂಡಿದ್ದಾರೆ, ದಪ್ಪದಪ್ಪ ಅಕ್ಷರಗಳನ್ನು ಬರೆಯುತ್ತಾ ಕೈ ಓಡುತ್ತಿದೆ. ಮೇಜಿನ ಮೇಲೆ ಬೂಟುಗಾಲಿಟ್ಟಿರುವ ಜಾಗಕ್ಕೆ ಸ್ವಲ್ಪ ದೂರದಲ್ಲಿ ಒಂದು ಗಂಟುಗಳಿರುವ ಚಡಿಬೆತ್ತ, ಒಂದೆಡೆ ದೊಡ್ಡ ಎಲೆಯಡಿಕೆ ಪೆಟ್ಟಿಗೆ. ಅದರಲ್ಲಿ ಎಲೆಯಡಿಕೆ, ಹೊಗೆಸೊಪ್ಪು, ಮೂರು ಬಾಟಲುಗಳು - ಒಂದರಲ್ಲಿ ಪೆಪ್ಪರ್‌ಮೆಂಟ್ ಮತ್ತು ಅರ್ಕ್‌ಮೆಂಥಾಲ್, ಒಂದರಲ್ಲಿ ಕಚ್ಚಾ ಓಮ ಹಾಗೂ ಮತ್ತೊಂದರಲ್ಲಿ ಕೆಂಪು-ಕೆಂಪು ಸಣ್ಣ ಉಂಡೆಗಳು,- ಬಹುಶಃ ಎಲೆಯಡಿಕೆಗೆ ಸೇರಿಸುವ ಸಿಹಿ ಮಸಾಲೆಯಿರಬೇಕು.

ಬಲಿದತ್ತ ಯೋಚಿಸುತ್ತಾನೆ, ಪ್ರತಿಯೊಬ್ಬ ದೊಡ್ಡ ಮನುಷ್ಯನೂ ಒಂದೊಂದು ಅವತಾರವೇ. ಮುಹೂರ್ತ ನೋಡಿ ಸೇವೆ ಸಲ್ಲಿಸಿದರೆ ಫಲ ದೊರೆಯುತ್ತದೆ. ಇದು ಮಹಾಪಾತ್ರರ ಅವತಾರ - ಮನುಷ್ಯನ ಅಹಂ ರೂಪ, ಡ್ಯಾಮ್ ಕೇರ್. ಪ್ರಪಂಚಕ್ಕೆ ಗೋಲಿ ಹೊಡಿ. ಚೆನ್ನಾಗಿ ತಿಳಿವಳಿಕೆಯುಳ್ಳ ಮನುಷ್ಯ, ಹೌದು. ಡಿಗ್ರಿಗಳೆ ಅದಕ್ಕೆ ಸಾಕ್ಷಿ. ಕೇವಲ ಓದಿನಲ್ಲೇ ಅಲ್ಲ, ವ್ಯವಹಾರದಲ್ಲೂ ಅಷ್ಟೇ ನಿಸ್ಸೀಮ. ಇಸ್ಪೀಟು, ವೈದ್ಯ, ಹೋಮಿಯೋಪತಿ, ಜ್ಯೋತಿಷ್ಯ, ವೇದಾಂತ, ಕಚೇರಿ ಕೆಲಸ, ಮಾತುಕತೆ, ಚಾಕಚಕ್ಯತೆ ಎಲ್ಲದರಲ್ಲೂ. ಮನಸ್ಸಿಗೆ ಏನಾದರೂ ಮಾಡಬೇಕೆಂದು ಬಂದರೆ ಸಾಕು, ತಕ್ಷಣ ಅದರಲ್ಲಿ ತೊಡಗುತ್ತಾರೆ. ಅದರಲ್ಲೆಲ್ಲಾ ಪಳಗಿದ ಆಸಾಮಿ. ಆದರೆ ಆ ತಿಳಿವಳಿಕೆಗೆ ವಿಶಿಷ್ಟವಾದ ರೂಪವೊಂದಿದೆ, ಅದು ಪ್ರಪಂಚದ ಕಣ್ಣಿಗೆ ಒಂದು ಸೊಟ್ಟ ಚಿತ್ರದಂತೆ ಕಾಣುತ್ತದೆ.

ಬಾಯಲ್ಲಿ ಬೀಡಿ ಕಚ್ಚಿಕೊಂಡು ಒಂದು ಧಂ ಹೊಗೆ ಎಳೆದು ಬನು ಈ ಅಸಮಂಜಸವಾದ ವಿಷಯದ ಮೇಲೆ ಒಂದು ಲೆಕ್ಚರ್ ಹೊಡೆಯಬಲ್ಲ - "ಆಹಾ!

ಆಹಾ! ಅಯ್ಯಾ ಬಡಪಾಯಿ ಬಲಿದತ್ತ, ದೇವರ ಪೂಜೆ ಮಾಡು. ವರ ಸಿಗುತ್ತೆ, ದೇವರ ಜಪ ಮಾಡು ಉದ್ಧಾರವಾಗುತ್ತಿ, ಬೇಗ ಸ್ವರ್ಗಕ್ಕೆ ಚಾನ್ಸ್ ಸಿಗುತ್ತೆ. ಅದು ಬಿಟ್ಟು ಸುಮ್ಮನೆ ಮಹಾಪಾತ್ರ, ಮಹಾಪಾತ್ರ ಅಂತ ಭಜನೆ ಮಾಡಿದರೆ ಏನು ಸಿಗುತ್ತೆ ?"

ಬಲಿದತ್ತ ಕೈಯಷ್ಟು ಉದ್ದವಾಗಿ ನಾಲಗೆ ಚಾಚಿ ಹೇಳುತ್ತಾನೆ "ನಿನ್ನನ್ನು ನಂಬಿದರೆ ದೇವರೇ ಗತಿ, ಹೇಳು ಹೇಳು, ಯಾರು ಕೇಳ್ತಾರೆ ನಿನ್ನ ಮಾತು. ಅವರಿಗೆ ಎಷ್ಟು ತಿಳಿವಳಿಕೆ ಇದೆ ಅಂತ ಗೊತ್ತಾ"

"ಆಹಾಹಾ! ಎಂಥ ವಿಚಿತ್ರ - ದೊಡ್ಡ ಬ್ರಹ್ಮಜ್ಞಾನಿ ನೋಡು-"

"ನೋಡು ಬನು, ಹಾಗೆ ಚಟಕಿ ಹೊಡೆದು ಜ್ಞಾನದ ಲೇವಡಿ ಮಾಡಬೇಡ, ನೀನು ಕೇರಂ ಬೋರ್ಡು ಹೊಡೀತಾನೂ, ಚೇಷ್ಟೆ ಮಾಡ್ತಾನೂ ಕಾಲ ಕಳೆಯುತ್ತಾ ಇದ್ದೆಯಲ್ಲ, ಆಗ ಅವರು ಪುಸ್ತಕ ಓದುತ್ತಿದ್ದರು"

"ಅವರು ಆಗ ಪುಸ್ತಕ ಓದುತ್ತಿದ್ದರಿಂದ ನನಗೆ ನಿನಗೆ ಏನೂ ಪ್ರಯೋಜನವಾಗಿರಲಿಲ್ಲ. ಈಗ ಅವರ ಬ್ರಹ್ಮಜ್ಞಾನದಿಂದಲೂ ನನಗಾಗಲಿ ನಿನಗಾಗಲಿ ಯಾವ ಲಾಭ ನಷ್ಟ ಇಲ್ಲ. ಪ್ರಪಂಚಕ್ಕೆ ಮನುಷ್ಯತ್ವ ಬೇಕು, ನಮಗೆ ಸ್ನೇಹ ಅನುಕಂಪ ಬೇಕು. ಅದೂ ಇಲ್ಲ ಅಂದರೆ ಕನಿಷ್ಠ ಪಕ್ಷ ಭದ್ರತೆ ಬೇಕು, - ಮನುಷ್ಯನ ಜೊತೆ ಮನುಷ್ಯನಂತೆ ವ್ಯವಹಾರ, ಆದರೆ ಅದೂ ಇಲ್ಲ - ಹಾಳಾಗಿ ಹೋಗಲಿ, ಡ್ಯಾಮ್ ಇಟ್. ಅಯ್ಯೋ ಬಲಿದತ್ತ ದಾಸ್! ಒಂದು ವಿಷಯದ ಬಗ್ಗೆ ಹತ್ತು ಮಾತುಗಳನ್ನು ಉರುಹೊಡೆದ ಮಾತ್ರಕ್ಕೆ ಮನುಷ್ಯ ಜ್ಞಾನಿಯಾಗುವುದಿಲ್ಲ. ಅಥವಾ ನಿನ್ನ ಈ ಮಹಾಪಾತ್ರನಂತೆ ಅಹಂಕಾರದಿಂದ ಹೊಟ್ಟೆ ಊದಿಸಿಕೊಂಡು ದೊಡ್ಡವನೆಂದು ಕರೆಸಿಕೊಂಡ ಮಾತ್ರಕ್ಕೆ ದೊಡ್ಡವನಾಗುವುದಿಲ್ಲ. ಇಂಥ ಮಹಾಪಂಡಿತರೇ ಪ್ರಪಂಚದಲ್ಲಿ ಎಲ್ಲ ಅನರ್ಥಗಳಿಗೂ ಕಾರಣ. ನೀನು ಜ್ಞಾನ ಅಂತ ಅಂತಿದ್ದೀಯಲ್ಲ. ಅದರಲ್ಲಿ ಅವನು ಅಷ್ಟು ಆಳಮುಟ್ಟಿಲ್ಲ, ಸುಮ್ಮನೆ ಆಟೋಪ ಅಷ್ಟೆ. ಬೊಗಳೆ ಮಾತುಗಳಿಗೆ ಬೆರಗಾಗಬೇಡ. ಫ್ರಾಯ್ಡನ ಮಾತಿನಲ್ಲಿ ಹೇಳುವುದಾದರೆ ಅಂಥ ಮನುಷ್ಯ ಒಂದು ರೀತಿಯಲ್ಲಿ ತೀವ್ರ ಸ್ವಭಾವದ ಎಕ್ಸಿಬಿಷನಿಸ್ಟ್, ಬಗ್ಗಿ ನೋಡಿದರೆ ಇನ್ನೂ ಮಜವಾಗಿರುತ್ತೆ, ಹೋಗು"

ಸರಿ, ಇನ್‌ಫೀರಿಯಾರಿಟಿ ಕಾಂಪ್ಲೆಕ್ಸ್ - ಬಲಿದತ್ತ ಯೋಚಿಸುತ್ತಾನೆ. ಅವನಿಗೆ ಅನ್ನಿಸುತ್ತದೆ - ಈ ಬನು ತನ್ನ ಪಾಂಡಿತ್ಯ ಪ್ರದರ್ಶನದಲ್ಲಿ ಒಂದು ವಿಚಾರವಾಗಿ ತಪ್ಪು ಮಾಡುತ್ತಾನೆ. ಇಷ್ಟು ದೊಡ್ಡ ಪ್ರಪಂಚದಲ್ಲಿ ಕೋಟ್ಯಂತರ ಜೀವಿಗಳ ನಡುವೆ, ಬೇರೆ ಬೇರೆ ಸ್ವಭಾವಗಳ ಮನುಷ್ಯರ ನಡುವೆ ನಾವು ಎಲ್ಲರೊಡನೆ ಹೊಂದಿಕೊಂಡು ಹೋಗಬೇಕಾಗುತ್ತದೆ. ಅಂತೆಡೆಯಲ್ಲಿ ಎಲ್ಲರ ವ್ಯಕ್ತಿತ್ವದ ಬಗ್ಗೆ ಯಾವಾಗಲೂ ಜಾಗರೂಕವಾಗಿದ್ದು ಎಲ್ಲರ ಗುಣರೂಪಗಳನ್ನು ವಿಶ್ಲೇಷಣೆ ಮಾಡಿ ತಲೆಯಲ್ಲಾಡಿಸುತ್ತಾ ಇರದಿದ್ದರ ಮನುಷ್ಯನಿಗೆ ಎರಡು ಹೆಜ್ಜೆ ಮುಂದಿಡಲೂ ಸಾಧ್ಯವಾಗುವುದಿಲ್ಲ.

ಮಹಾಪಾತ್ರ ಎಕ್ಸಿಬಿಷನಿಸ್ಟ್! - ಬೇಕಾದರೆ ಸ್ಯಾಡಿಸ್ಟ್ ಆಗಿರಲಿ, ತನಗಿಷ್ಟವಿದ್ದರೆ, ಇದರಿಂದ ಬಲಿದತ್ತನಿಗೆ ಗಂಟೇನು ಹೋಗಬೇಕು ?

ಇಂಥ ಮಹಾಪಾತ್ರರು ಕುಳಿತಿದ್ದಾರೆ.

ಬಲಿದತ್ತ ಒಳಗೆ ಬಂದು ಎರಡು ಮೂರು ನಿಮಿಷಗಳಾಗಿವೆ.

ಮಹಾಪಾತ್ರರು ಅವನನ್ನು ನೋಡಿಲ್ಲವೆ ? ನೋಡಿರಲೇಬೇಕು.

ಆದರೆ ಕೂಗುವವರೆಗೂ ಯಾರಾದರೂ ಇರುವ ಬಗ್ಗೆ ತಾವೇ ತಿಳಿದುಕೊಳ್ಳುವುದು ಅವರ ನೀತಿಗೆ ವಿರುದ್ಧ. ಏಕೆಂದರೆ ಅವರ ಸ್ವಂತ ಪ್ರತಿಷ್ಠೆಗೆ ಧಕ್ಕೆಯೊದಗುತ್ತದೆ.

ಬಲಿದತ್ತ ನಿಂತುಕೊಂಡೇ ಅವರಿಗೆ ಕಾಯುವುದಿರಲಿ, ಇಡೀ ಪ್ರಪಂಚವೇ ಕಾಯುತ್ತ ನಿಂತರೂ ಮಹಾಪಾತ್ರರು ಕೆಲಸ ಮಾಡುತ್ತಲೇ ಇರುತ್ತಾರೆ. ಕೆಲಸದ ಹೊರೆ ಭಾರವಾಗಿ ಕುಳಿತಿರಬೇಕಾದರೆ ಮನುಷ್ಯ ಯಾವ ಲೆಕ್ಕ ಅದರ ಮುಂದೆ ? ವ್ಯಕ್ತಿತ್ವವನ್ನು ಅಲ್ಲಿ ಕೇಳುವವರಾದರೂ ಯಾರು ?

ಫೈಲನ್ನು ಕಂಕುಳಿಗೆ ಸಿಕ್ಕಿಸಿಕೊಂಡು ಬಲಿದತ್ತ ನಿಂತಿದ್ದಾನೆ. ಮಹಾಪಾತ್ರರು ಅವನ ಆಫೀಸರ್ ಏನಲ್ಲ. ಆದರೇನಂತೆ, ಆಗಬಹುದು. ಅವನು ತನಗೆ ತಾನೇ ಆ ಬಗ್ಗೆ ಭರವಸೆ ಕೊಟ್ಟುಕೊಳ್ಳುತ್ತಾನೆ. ಬಾಯಿ ಮುಚ್ಚಿಕೊಂಡು ಬೆನ್ನಿನ ಹಿಂದೆ ಕೈಕಟ್ಟಿಕೊಂಡು, ಸೊಂಟ ಬಗ್ಗಿಸಿಕೊಂಡು ಯಾರ ಮುಂದಾದರೂ ನಿಲ್ಲುವುದೆಂದರೆ, - ಬಹುಶಃ ತನ್ನ ಆಂಥ್ರೋಪಾಯಿಡ್ ಪೂರ್ವಜರ ಹೊಣೆಗಾರಿಕೆಯ ಅನುಭವ ವಾಗುತ್ತದೆ. ಕತ್ತರಿಸಿ ಹೋಗಿದ್ದ ಸಣ್ಣ ಬಾಲ ನಿಧಾನವಾಗಿ ಹತ್ತಿರ ಹತ್ತಿರ ಬರುತ್ತಿದೆ - ತನ್ನ ವ್ಯಕ್ತಿತ್ವವನ್ನು ಮರೆತು ಇನ್ನೊಬ್ಬರ ವ್ಯಕ್ತಿತ್ವದಲ್ಲಿ ಆಗ ಲೀನವಾಗಿ ಹೋಗುತ್ತದೆ - ಇದು ಯಾವುದೋ ಒಂದು ತ್ಯಾಗವನ್ನು ಮಾಡಿದಂತೆ. ಆಸೆಯಿಂದ ಮಾಡಬೇಕಾಗುತ್ತದೆ - ಏಕೆಂದರೆ ಅದರೊಂದಿಗೆ ಅವನ ಹೊಟ್ಟೆಪಾಡಿನ ಹೊಂಗನಸು ಸೇರಿಕೊಂಡಿರುತ್ತದೆ.

ಟೆಲಿಫೋನು ಗಂಟೆ ಬಾರಿಸಿತು. ಮಹಾಪಾತ್ರರು ಎಗರಿ ಫೋನೆತ್ತಿದರು "ನಾನು, ನಾನು ಮಹಾಪಾತ್ರ, ಹೌದು, ಮಹಾಪಾತ್ರ ಮಾತಾಡ್ತಾ ಇದ್ದೀನಿ... ಸರಿ ಸರಿ.... ಸರಿ - ಈಡಿಯಟ್..."

ಈಗ ಬಲಿದತ್ತನ ಕಡೆ ತಿರುಗಿದರು - "ಹಲೋ ಮಿಸ್ಟರ್ ದಾಸ್" ಬಲಿದತ್ತನ ಎಲ್ಲ ವ್ಯಕ್ತಿತ್ವವನ್ನೂ ಮುಳುಗಿಸಿಕೊಂಡು ಉಬ್ಬರವಾಗಿ ಆನಂದ ಮೇಲೇರಿ ಬಂದಿದೆ. ಮುಖದಲ್ಲಿ ನಗೆ, ಅಂಗಾಂಗಗಳಲ್ಲೆಲ್ಲ ಅಪೂರ್ವವಾದ ಭಂಗಿ.

"ಸರ್, - ಸರ್, ಇದನ್ನು ತಂದಿದ್ದೀನಿ-"

"ಹೌದಾ, ತಂದಿದ್ದೀರಾ ? ಇಷ್ಟು ಬೇಗ ಮುಗಿಸಿದಿರಾ ? ಪರವಾಗಿಲ್ಲವೆ-"

"ಮಾಡಿ ಮುಗಿಸದೆ ಇರೋದಕ್ಕಾಗುತ್ತದೆಯೆ ಸರ್. ನಿಮ್ಮ ಅರ್ಜೆಂಟ್ ಕೆಲಸ ಅಂದಮೇಲೆ"

"ಸರಿ, ಸರಿ, ಹೌದು, ತುಂಬ ಅರ್ಜೆಂಟಾಗಿತ್ತು ಬಲಿದತ್ತ ಬಾಬು, ತುಂಬಾ ತುಂಬಾ ಥ್ಯಾಂಕ್ಸ್"

ಮಹಾಪಾತ್ರರು ಕಾಗದಗಳನ್ನು ತೆಗೆದುಕೊಂಡರು. ಬಲಿದತ್ತ ನಿಂತಿದ್ದ. ಆಮೇಲೆ ಮಹಾಪಾತ್ರರು ಕೆಲಸದಲ್ಲಿ ತೊಡಗಿದರು. ಬಲಿದತ್ತ ನಿಂತೇ ಇದ್ದ.

ತುಟಿಯಂಚಿನಲ್ಲಿ ನಗು ತಂದುಕೊಂಡು ಹೇಳಿದರು - "ಸರಿ ಮಿಸ್ಟರ್ ದಾಸ್,

ಸಾಧ್ಯವಾದರೆ ಈ ಸಂಜೆ ಸಹ ಸ್ವಲ್ಪ ಬರ್ತೀರಾ.”

ಮಹಾಪಾತ್ರರು ಬಾಯಿಬಿಟ್ಟು ಹೇಳದಿದ್ದರೂ ಅವರ ಹೊಗಳಿಕೆ ಮಾತನ್ನು ಮನಸ್ಸಿನಲ್ಲಿ ನೆನೆದೇ ಬಲಿದತ್ತ ಖುಷಿಪಟ್ಟ. ಯೋಚಿಸಿದ - ಈ ದಿವಸ ಶುಭದಿಂದ ಆರಂಭವಾಯಿತು. ಇದನ್ನೇ ಬೋಣಿಗೆ ಅಂತ ಭಾವಿಸಬೇಕು.

ಅದಾದ ಮೇಲೆ ಕಚೇರಿಯ ಹೆಡ್ ಗುಮಾಸ್ತರು. ಧಡೂತಿ ಆಸಾಮಿ, ಪ್ರೌಢ ಮುಖದ ಮನುಷ್ಯ, ತುಂಬಿದ ಮೈಯನ್ನು ವಯಸ್ಸು ಅಲ್ಲಲ್ಲಿ ಎಳೆದೆಳೆದು ಇಳಿಬಿಟ್ಟಿದೆ. ಇಡೀ ಮುಖದಲ್ಲಿ ಅವರ ತುಟಿಗಳದೇ ಒಂದು ವೈಶಿಷ್ಟ್ಯ, ಕೆಳತುಟಿ ಯಾವಾಗಲೂ ಸುತ್ತಾಡುವ ಅಭ್ಯಾಸ ಮಾಡಿಕೊಂಡಿದೆ. ದೊಡ್ಡ ದೊಡ್ಡ ಹಲ್ಲುಗಳು, ದಪ್ಪದಪ್ಪ ಕಿವಿಗಳ ಮೇಲೆ ಒತ್ತಾದ ಕಪ್ಪು ಕೂದಲು. ಕಣ್ಣಿಗೆ ಫ್ರೇಮಿಲ್ಲದ ಕನ್ನಡಕ ವನ್ನು ಹಳದಿ ಮತ್ತು ಕೆಂಪು ನೂಲನ್ನು ಕೂಡಿಸಿ ಹೆಣೆದ ದಾರದಿಂದ ಕಟ್ಟಿದೆ. ಬಾಯಿ ಸ್ವಲ್ಪ ತೆರೆದಿದೆ. ಕಿವಿಗೊಟ್ಟು ಕೇಳುವ ಸನ್ನಾಹದಲ್ಲಿ ತಲೆ ಬಾಗುತ್ತಿರುತ್ತದೆ. ಅಕ್ಕಪಕ್ಕದ ಮೇಜುಗಳತ್ತ ದೃಷ್ಟಿ ಹರಿದರೆ ಸಾಕು, ಗಡಿಬಿಡಿ ಉಂಟಾಗುತ್ತದೆ. ಮೇಜುಗಳ ಮೇಲೆ ಕೈಗಳು ಸರಸರ ಓಡುತ್ತವೆ. ಕಾಗದ ಪತ್ರಗಳು ಪರಪರ ಹರಿದಾಡುತ್ತದೆ. ಕೆಲಸದಲ್ಲಿ ತೊಡಗಿದ ತಲೆಗಳು ಮೇಜಿನ ಮೇಲೆ ಬಾಗಿರುತ್ತದೆ. ಬಾಡಿದ ಹೂವಿನ ರೀತಿಯಲ್ಲಿ.

ಈ ವ್ಯಕ್ತಿತ್ವದ ಬಲದ ಮೇಲೆ ಅವರು ಇಲ್ಲಿ ಹೆಡ್ ಗುಮಾಸ್ತರು - ಇಲ್ಲದಿದ್ದರೆ ಜನ ಅವರ ಮುಖ ಹೀಗಿದೆ ಹಾಗಿದೆ ಅಂತ ಲೇವಡಿ ಎಬ್ಬಿಸುತ್ತಿದ್ದರೊ ಏನೋ. ಆದರೆ ಅದರಿಂದ ಅವರ ಗಂಟೇನು ಹೋಗುತ್ತದೆ? ಮುಖದ ಮೇಲೆ ಅಗತ್ಯಕ್ಕೆ ಅನುಸಾರವಾದ ಕಾರ್ಯತತ್ಪರತೆ, ಬಾಯಲ್ಲಿ ಮಾತು ಅಧಿಕಾರಯುತವಾಗಿ ಎಂಬಂತೆ ಹೊರಡುತ್ತದೆ. ತಲೆಯಲ್ಲಾಡಿಸುವ ರೀತಿಯಲ್ಲಿ ಒಂದು ರೀತಿಯ ಪಾಂಡಿತ್ಯ ತೊಟ್ಟಿಕ್ಕುತ್ತದೆ. ಕೆಲಸ ಅವರಿಗೆ ಸ್ವಂತ ಮಾಡುವುದಕ್ಕೆ ಬರದಿದ್ದರೂ ಇನ್ನೊಬ್ಬರನ್ನು ಹಿಡಿದು ಹೆದರಿಸಿ ಬೆದರಿಸಿ ಕೆಲಸ ತೆಗೆಯುವುದರಲ್ಲಿ ನಿಸ್ಸೀಮರು. - ಈ ಚಾಕಚಕ್ಯತೆ ಏನು ಕಡಮೆ ಮಟ್ಟದ್ದೇ.

ನಾಲ್ಕು ಮಂದಿ ಸುತ್ತುವರೆದು ಕುಳಿತಿದ್ದಾರೆ - ಹರಿ ಬಾಬು, ಕೃಷ್ಣಬಾಬು, ರಾಮಬಾಬು ಮತ್ತು ಗೋಪಾಲಬಾಬು ನಿಂತಿದ್ದಾರೆ. ಬಡಪಾಯಿ ವೀರಬಾಬು ಈ ದಿನ ಬೈಗಳಿಗೆ ಗುರಿಯಾಗಿದ್ದಾರೆ.

“ನೋಡಿ, ಇನ್ನೊಂದು ಸಾರಿ ಲೆಕ್ಕ ಹಾಕಿ ಹೇಳಿಬಿಡುತ್ತೇನೆ, ಕೇಳಿ” ಹೆಡ್‌ಗುಮಾಸ್ತರು ಗರ್ಜಿಸುತ್ತಿದ್ದಾರೆ, ಮೇಜಿನ ಮೇಲೆ ಮಧ್ಯದ ಬೆರಳನ್ನು ತಟ್ಟುತ್ತಾ ಎಣಿಸಿ ಹೇಳುತ್ತಿದ್ದಾರೆ. “ಮೊದಲನೆಯದಾಗಿ - ಪ್ರತಿದಿನವೂ ನೀವು ತಡವಾಗಿ ಬರುತ್ತೀರಿ! ಹತ್ತು ಗಂಟೆಗೆ ಬರಬೇಕು ಅಂತ ಹೇಳಿರಲಿಲ್ಲವೇ? ಬಂದದ್ದು ಹತ್ತೂ ಕಾಲು ಗಂಟೆಗೆ, ಬಹಳ ದೊಡ್ಡ ಸಾಹೇಬರಾಗಿ ಹೋಗಿದ್ದೀರಿ ಅಲ್ಲವೆ-”

ದೊಡ್ಡ ಸಾಹೇಬರು ಹತ್ತೂ ಕಾಲುಗಂಟೆಗೆ ಬರುತ್ತಾರೋ, ಇಲ್ಲವೊ ಯಾರೂ ಯೋಚಿಸಿಲ್ಲ. ಆದರೆ ದೊಡ್ಡ ಸಾಹೇಬರು ಅಂದುಬಿಟ್ಟರೆ ಆ ಮಾತಿಗೆ ಹೆಜ್ಜೆ ಹೆಜ್ಜೆಗೂ ಮಹತ್ವ ಬಂದುಬಿಡುತ್ತದೆ.

“ಓಹೋ, ಮನಸ್ಸಿನಲ್ಲಿ ತುಂಬ ದೊಡ್ಡಸಾಹೇಬ ಆಗಿಹೋಗಿದ್ದೇನೆ ಅಂತ ಯೋಚಿಸುತ್ತಿದ್ದೀರಾ? ಈ ಪೆನ್ನು ನೋಡಿ. ಇದು ಒಂದು ಗೆರೆ ಹೀಗೆ ಎಳದರೆ

ಸಾಕು, ನಿಮ್ಮ ಹೊಟ್ಟೆಪಾಡಿಗೆ ಸೊನ್ನೆ ಬೀಳಬಹುದು"

ಎಲ್ಲರೂ ಗಂಭೀರವಾಗಿದ್ದಾರೆ, ಹೆಡ್ ಗುಮಾಸ್ತರ ಮಾತು ಅಂದಮೇಲೆ ಹೂಂಗುಟ್ಟಲೇಬೇಕು. ಆದರೆ ಬಾಯಿಂದ ಒಂದು ಶಬ್ದ ಹೊರಗೆ ಹಾಕುವ ತಾಕತ್ತು ಯಾರಿಗೂ ಇಲ್ಲ. ಹೆಡ್ ಗುಮಾಸ್ತರಾದ ಮೇಲೆ ವೀರಬಾಬು ತಮ್ಮ ವೀರತ್ವವನ್ನು ಪ್ರದರ್ಶಿಸುವರು. ಎಲ್ಲರೂ ತೆಪ್ಪಗೆ ವೀರಬಾಬುಗಳನ್ನು ಅಡಿಯಿಂದ ಮುಡಿಯ ವರೆಗೆ ನೋಡುತ್ತಿದ್ದಾರೆ. ಆಮೇಲೆ ಮೌನ ಸಹಾನುಭೂತಿ ವ್ಯಕ್ತಪಡಿಸ ಬೇಕೆಂದಿದ್ದಾರೆ, ಅಲ್ಲಿ ಇನ್ನೇನು ತಾನೆ ಮಾಡಲು ಸಾಧ್ಯ.

ವೀರಬಾಬು ಹೆದರಿ ನಡುಗಿಹೋದರು. "ಸರ್, ನನ್ನ ಹೆಂಡತಿಗೆ ಖಾಯಿಲೆ. ನಾನೇ ಅಡುಗೆ ಮಾಡಿ ಬರಬೇಕು. ಆದರಲ್ಲೂ ಈಗ ಸಿಗುವ ಸೌದೆ ನೋಡಿ, ಊದಿ ಊದಿ ಉಸಿರುಕಟ್ಟಿಹೋಗುತ್ತೆ, ಇಬ್ಬರು ಮಕ್ಕಳಿಗೂ ಸ್ವಲ್ಪ ಊಟ ಹಾಕಿ ಬರದಿದ್ದರೆ ದಿನವೆಲ್ಲಾ ಗಲಾಟೆ ಮಾಡುತ್ತಿರುತ್ತಾರೆ - ಮನೆ ನೋಡಿದರೆ ಅಷ್ಟು ದೂರ ಸಾರ್. ಏನೋ ಒಂದು ಐದು ನಿಮಿಷ ಈ ಕಡೆ ಆ ಕಡೆ."

"ಅಯ್ಯೋ, ಸುಮ್ಮನಿರಿ ಸಾಕು. ಕೇಳಿ ಕೇಳಿ ಕೂದಲು ಬೆಳ್ಳಗಾಯಿತು. ನಮಗೆಲ್ಲ ಮನೆಬಾಗಿಲು ಅಂತ ಇಲ್ಲವೆ ಇಲ್ಲ ನೋಡಿ. ಆಹಾ - ಮಕ್ಕಳಿಗೆ ಹಾಲು ಕುಡಿಸುವುದರಲ್ಲಿ ಕಂಪೆನಿ ಕೆಲಸಕ್ಕೆ ತಡವಾಗುತ್ತಿರುತ್ತದಾದರೆ ಕೆಲಸ ಬಿಟ್ಟುಬಿಡಿ. ಮನೇಲಿ ಒಲೆ ಊದುತ್ತಾ ಕುಳಿತುಕೊಳ್ಳಿ. ಹೆಂಡತಿಗೆ ಪಥ್ಯದ ಅಡುಗೆ ಮಾಡಿ ಬಡಿಸಿ. ಸುಮ್ಮನೆ ಮಾತಾಡ್ತಾರೆ, ಕಾದಂಬರಿ ಬರೀರಿ, ಚೆನ್ನಾಗಿರುತ್ತೆ."

"ಸುಳ್ಳು ಹೇಳೋದಿಲ್ಲ ಸಾರ್, ಹೆಂಡತಿಗೆ ಖಾಯಿಲೆ-"

"ಸರಿ, ಇರಬಹುದು, ಆದರಿಂದ ಕಂಪೆನಿಗೆ ಏನಾಗಬೇಕು? ನಾವೇನು ಇಲ್ಲಿ ಆಸ್ಪತ್ರೆ ತೆರೆದುಕೊಂಡು ಕೂತಿದ್ದೇವೇನು? ಅಥವಾ ಇದೇನು ಅನಾಥಾಶ್ರಮವೆ? ಹೇಳಿ, ಪ್ರತಿದಿನವೂ ತಡ ಅಂದರೆ ತಡ, ಮನುಷ್ಯ ಅಂದಮೇಲೆ ಇನ್ನೆಷ್ಟು ತಡೆಯೋದು? ಏನು ಕಂಪೆನಿ ಕಾಸು ಅಂದರೆ ಬಿಟ್ಟಿ ಬಂದಿದ್ದು ಅಂತ ತಿಳಿದಿದ್ದೀರಾ? ಸರಿ, ಇದು ಮೊದಲನೇ ಚಾರ್ಜ್ ಆಯಿತು. ಆಮೇಲೆ ನಿಮ್ಮಿಂದ ರಿಟರ್ನ್, ಅದೇ ಕೆಲಸದ ಬಾಕಿ ಎಷ್ಟು ದಿನದ್ದು ಉಳಿದಿದೆ? ಇವತ್ತು ನಿಮಗೆ ಗ್ರಹಚಾರ ಬಿಡಿಸ್ತೀನಿ."

"ಸಾರ್, ಸಾರ್ - ಕೇವಲ ಎರಡು ದಿನದ್ದು ಮಾತ್ರ ಸಾರ್. ತಾವೇ ಹೇಳಿದ್ದೀರಲ್ಲ, ತಾವು ನೋಡಿ ಸರಿ ಅಂತ ಹೇಳಿದ ಮೇಲೆ ರಿಟರ್ನ್ಸ್ ಬರೀರಿ ಅಂತ-"

"ಹಾಗಾದರೆ ಮತ್ತೆ ಸಾಯಂಕಾಲ ಮತ್ತು ಬೆಳಗ್ಗೆ ಎಲ್ಲಿ ಹೋಗಿದ್ದೀರಿ?"

ಎಲ್ಲರೂ ಒಬ್ಬರ ಮುಖ ಇನ್ನೊಬ್ಬರು ನೋಡತೊಡಗಿದರು. ನಿಜವಾದ ಕೋಪದ ಕಾರಣವೇನೆಂದು ಈಗ ಎಲ್ಲರಿಗೂ ಅರಿವಾಗಿತ್ತು. ವೀರಬಾಬುಗಳ ಮೂರ್ಖತನದ ಮೇಲೆ ಎಲ್ಲರಿಗೂ ಸಿಟ್ಟು ಬಂತು.

ಅಳುಮೋರೆ ಮಾಡಿ ವೀರಬಾಬು ಹೇಳಿದರು - "ಸಾರ್, ನನ್ನ ಹೆಂಡತಿಗೆ ಮೈ ಹುಷಾರಿಲ್ಲ. ಬೆಳಗ್ಗೆ ಡಾಕ್ಟರನ್ನು ಕರೆಯೋದಕ್ಕೆ ಅಂತ ಹೋಗಿದ್ದೆ. ಸಾಯಂಕಾಲ ಔಷಧ ತರಲು ಹೋಗಿದ್ದೆ. ಇಷ್ಟೇ ಅಲ್ಲದೆ. ಸ್ವಂತ ಅಡುಗೆ ಕೆಲಸಬೇರೆ. ಇಲ್ಲದಿದ್ದರೆ ಸಾರ್, ಬರದ ಇರುತ್ತಿದ್ದೆನಾ? ಇಷ್ಟರ ಮೇಲೆ ಇನ್ನೆಲ್ಲಿಗೆ ತಾನೇ ಹೋಗುತ್ತೇನೆ?

ತಮ್ಮ ಹತ್ತಿರ ಬರದಿದ್ದರೆ ಹೋಗುವುದಾದರೂ ಎಲ್ಲಿಗೆ? ಇವತ್ತು ಖಂಡಿತ ಬರ್ತೀನಿ ಸಾರ್. ಅಗಸನನ್ನು ತರಾಟೆಗೆ ತೆಗೆದುಕೊಂಡು ಬಟ್ಟೆಗಳನ್ನು ಖಂಡಿತ ತಂದುಕೊಡುತ್ತೇನೆ. ತಮಗೆ ಗೊತ್ತಿಲ್ಲವಾ ಸಾರ್, ತಮ್ಮ ಹತ್ತಿರ ಬಿಟ್ಟರೆ ನನಗೆ ಬೇರೆ ಜಾಗವಾದರೂ ಎಲ್ಲಿದೆ? ಮನೇಲಿ ಹೆಂಗಸರಿಗೆ ಸ್ವಲ್ಪ ಆರೋಗ್ಯ ಸರಿಯಿಲ್ಲ ಅಷ್ಟೆ. ಇಲ್ಲದಿದ್ದರೆ-"

'ಸರ್' ಅಂದರೆ ಮಹಾಶಯರೆ ಎಂದರ್ಥ. ಆದರೆ ವೀರಬಾಬುಗಳ ಬಾಯಲ್ಲಿ 'ಸಾರ್' ಎನ್ನುವುದು ಹೇಗೆ ಪ್ರಯೋಗವಾಗುತ್ತದೆಂದರೆ ಅದರ ಅರ್ಥ ಮಹಾಸ್ವಾಮಿ, ಚಕ್ರವರ್ತಿ ಇನ್ನೂ ಏನೇನಾಗುತ್ತದೊ ಯಾವ ಯಾವ ಮಟ್ಟಕ್ಕೇರುತ್ತದೊ ಗೊತ್ತಿಲ್ಲ. ಏನಾದರೂ ಆಗಲಿ - ಆ ವಿನಯ, ಆ ವ್ಯವಹಾರ, ಆ ಹಲ್ಲುಗಿಂಜುವಿಕೆ, ಹಾಗೆಯೆ ಕಡೆಯಲ್ಲಿ ಅಗಸನ ಅಂಗಡಿಗೂ ಹೋಗುವುದು, ಇನ್ನೂ ಹೀಗೆ ಏನೇನೋ ಹೆಡ್ ಗುಮಾಸ್ತರು ಮಾತು ಬದಲಾಯಿಸಿದರು -

"ಸರಿ, ನಡೀರಿ, ಕೆಲಸಮಾಡಿ - ಮತ್ತೆ ನಾನು ಹೇಳುವ ಹಾಗಾಗಬಾರದು. ಗಮನವಿರಲಿ. ಹೆಂಡತಿಗೆ ಹುಷಾರಿಲ್ಲವಂತೆ. ಇಂಥ ಕೆಲಸಕ್ಕೆ ಬಾರದ ನೆಪಗಳನ್ನು ಹೇಳೋದಕ್ಕೆ ಧೈರ್ಯವಾದರೂ ನಿಮಗೆ ಹೇಗೆ ಬರುತ್ತೆ? ಹೆಂಗಸಿನ ಸೆರಗಿನ ಮರೆಯಲ್ಲಿ ಬಚ್ಚಿಟ್ಟುಕೊಂಡು ಆತ್ಮರಕ್ಷಣೆ ಮಾಡಿಕೊಳ್ಳೋದಕ್ಕೆ ನಾಚಿಕೆ ಯಾಗೋದಿಲ್ಲವೆ ನಿಮಗೆ?"

ವೀರಬಾಬು ತಲೆತಗ್ಗಿಸಿ ತಿರುಗಿತಿರುಗಿ ನೋಡುತ್ತಾ ಹೊರಟುಹೋದರು. ಸಮಯ ನೋಡಿ ಹಾಸ್ಯದ ಲಹರಿಯಲ್ಲಿ ಬಲಿದತ್ತ ಹೇಳಿದ - "ಹುಡುಗ ನಾಗಿದ್ದಾಗಲಿಂದಲೂ ಇವನು ಹಾಗೇ ಸಾರ್. - ಅಲ್ಲಿ ಮೇಷ್ಟ್ರು ಕೂಗುತ್ತಾ ಇದ್ದರೆ ಇಲ್ಲಿ ಮನೆಯಲ್ಲಿ ಮೂಲೆ ಸೇರಿಕೊಂಡು ಅಜ್ಜಿಯ ಹಿಂದೆ ಹಿಂದೆ ಇವನು - ಇವತ್ತು ಹೊಟ್ಟೆಯಿಂದ ದುಃಖ ಉಕ್ಕೇರಿ ಬರುತ್ತೆ. ಬಹಳ ದುಃಖ ಆಗುತ್ತಾ ಇದೆ ಅಲ್ಲವಾ. ಸರಿ ಸರಿ."

ತಿರುಗಿ ನೋಡದೆಯೂ ಹೊರಟು ಹೋದರು ವೀರಬಾಬು, ಏನೂ ಆಗಲೇ ಇಲ್ಲವೇನೋ ಎಂಬಂತೆ. ಇಷ್ಟರ ಮೇಲೆ ಆಗಿದ್ದಾದರೂ ಏನು? ಇದು ದಿನನಿತ್ಯದ ಮಾತು, ಅಭ್ಯಾಸವಾಗಿ ಹೋಗಿದೆ. ಮುಖ ಒರೆಸಿಕೊಂಡು ಹೊರಟರೆ ಕೆಲಸ ಮುಗಿಯಿತು. ಅತ್ತ ಬಲಿದತ್ತನ ಮಾತು ಕೇಳಿ ಹೆಡ್ ಗುಮಾಸ್ತರು ನಕ್ಕರು.

ಹೆಡ್ ಗುಮಾಸ್ತರು ನಕ್ಕರು.

ಅಕ್ಕಪಕ್ಕದ ನಾಲ್ಕಾರು ನೌಕರರೂ ನಕ್ಕುಬಿಟ್ಟರು - ಯಾರಿಗೆ ಹೇಗೆ ಬರುತ್ತದೋ ಹಾಗೆ. ಬಲಿದತ್ತನಾದರೂ ಕೋಳಿಯಂತೆ ಕೆಲಸ ಮಾಡತೊಡಗಿದ್ದಾನೆ. ಮೊಟ್ಟೆ ಇಡುವುದಕ್ಕೆ ಮುಂಚೆ ಕೋಳಿ ಬಿರುಸಿನ ಚಟುವಟಿಕೆಯಲ್ಲಿ ತೊಡಗಿದ್ದು 'ಸೀಮೈನರ್' ನಂತಿರುವುದಿಲ್ಲವೆ. ತಡೆತಡೆದು ಬರುವಂಥ ಅಂಥದೇ ನಗು. ಏಕೆಂದರೆ ಹೆಡ್ ಗುಮಾಸ್ತರು ನಗುತ್ತಿದ್ದಾರೆ. ಕೃಷ್ಣಬಾಬುವಿನ ನೀಳವಾದ ಕತ್ತೆಯ ಸ್ವರ ಹೆಂ ಹೆಂ ಹೆಂ ಅನ್ನುತ್ತಿದೆ. ಹರಿಬಾಬುಗಳು ಜೋರಾಗಿ ಕೆಮ್ಮುತ್ತಾ ಕ್ಯಾಕರಿಸುತ್ತಿದ್ದಾರೆ. ಸೆಮಿಕೋಲನ್ನಿನಂತೆ ರಾಮಬಾಬುಗಳ ನಗುವಿನ ಅಲೆ ನಿಂತುಹೋಗುತ್ತದೆ. ಅವರು ಸಣಕಲು ಕಡ್ಡಿ ಆಸಾಮಿ, ದಮ್ಮುಳ್ಳವರು ಮತ್ತೆ ಶುರುಮಾಡುತ್ತಾರೆ. ಗೋಪಾಲ

ಬಾಬುವಿನ ಅಂಗಪ್ರತ್ಯಂಗಗಳೆಲ್ಲ ನಗೆಬೀರುತ್ತಿವೆ. ಮೇಜಿನ ಕೆಳಗಡೆ ದಪ್ಪ ಬೂಜ್ಸು ತುಯ್ದಾಡುತ್ತಿದೆ - ಹೆಂ.. ಹೆಂ.. ಹೆಂ. ಹೆಡ್ ಗುಮಾಸ್ತರು ಕೂಡ ನಗುತ್ತಿದ್ದಾರೆ - ಹೆಂ. ಹೆಂ. ಹೆಂ

ಸಾಲುಸಾಲಾಗಿ ಜನರು ಆ ನಗುವಿನ ಹರಿವನ್ನು ಬೆಳೆಸಿಕೊಂಡು ಹೋಗುತ್ತಿದ್ದಾರೆ. ಈ ನಗುವಿನ ಒಂದು ಗಮ್ಮತ್ತೆಂದರೆ, ಎಲ್ಲರೂ ಹೆಡ್ ಗುಮಾಸ್ತರ ಮುಖ ನೋಡುತ್ತಿದ್ದಾರೆ. ಅವರ ನಗು ನಿಲ್ಲುವವರೆಗೂ ಇನ್ನಾರ ನಗುವೂ ನಿಲ್ಲಬಾರದೇನೋ ಎಂಬಂತೆ. ಡಿಸಿಪ್ಲಿನ್ ಮಾತಲ್ಲವೆ - ಏನು ತಮಾಷೆಯ ವಿಚಾರವೆ ?

ವೆಂಕಟರಾವ್ ಬಾಯಿಗೆ ಕರ್ಚೀಫು ತುರುಕಿಕೊಂಡು ಕೆಲಸ ಮುಂದುವರಿಸಿದ್ದಾನೆ.

ಹೆಡ್‌ಗುಮಾಸ್ತರು ಕುಂಟ ತೈಮೂರನಂತೆ ಅರಚಿದರು - "ಸಾಕು, ನಿಲ್ಲಿಸಿ ನಗು, ಕೆಲಸ ಮಾಡಿ ಎಲ್ಲರೂ."

ಗಪ್‌ಚಿಪ್.

ಎಲ್ಲ ಸ್ತಬ್ಧ. ಕೇವಲ ಕಾಗದಗಳನ್ನು ಮಡಚುವ ಸರ್ ಸರ್ ಸದ್ದು ಇಲ್ಲವೆ ಕಾಗದದ ಮೇಲೆ ಪೆನ್ನಿನ ಚರ್-ಚರ್.

ಹೆಡ್‌ಗುಮಾಸ್ತರ ಮೇಜಿನ ಮೇಲಿನಿಂದ ಒಂದು ಕಾಗದ ಕೆಳಗೆ ಜಾರಿ ಬಿದ್ದುಹೋಯಿತು. ತಕ್ಷಣ ಐವರೂ ಬಗ್ಗಿದರು. ಗೋಪಾಲ ಬಾಬು-ಅವರಿಗೆ ಬಗ್ಗುವುದು ಸಾಧ್ಯವಿಲ್ಲ. ಆದರೆ ಪ್ರಯತ್ನವನ್ನಾದರೂ ಮಾಡಲೇಬೇಕಲ್ಲ. ಸಣ್ಣಗೆ ತೆಳ್ಳಗಿರುವ ರಾಮುಬಾಬು ಸೊಂಟ ಬಗ್ಗಿಸಿ ಮೇಜಿನ ಕೆಳಗೆ ಒಂದು ಬಾರಿ ಬಗ್ಗಿ ನೋಡುತ್ತಿದ್ದಾರೆ. ಆದರೆ ಅವರದು ಮಂದ ದೃಷ್ಟಿ. ಬಲಿದತ್ತ ಎಗರಿ ನೆಲದ ಮೇಲೆ ಕುಳಿತುಬಿಟ್ಟ. ಅವನ ಕೈಗೆ ಸಿಕ್ಕಿತು. ಮೇಜಿನ ಮೇಲಿಟ್ಟು ಅದರ ಮೇಲೆ ಒಂದು ಕಲ್ಲನ್ನಿಟ್ಟ, ಹೆಡ್‌ಗುಮಾಸ್ತರು ಆ ಕಡೆ ನೋಡಲೇ ಇಲ್ಲ. ಹೆಡ್‌ಗುಮಾಸ್ತರು ಕೆಲಸದಲ್ಲಿ ತುಂಬ ಮುಳುಗಿದ್ದಾರೆ.

ನಾಲ್ಕು ಮಂದಿಯೂ ಹೊರಟುಹೋಗಿದ್ದಾರೆ.

ಆಗ ಬಲಿದತ್ತ ತನ್ನ ಪ್ಯಾಂಟು ಜೇಬಿನಿಂದ ಸಣ್ಣ ಪದಾರ್ಥವೊಂದನ್ನು ಹೊರಕ್ಕೆ ತೆಗೆದ, ಟೇಬಲ್ಲಿನ ಕೆಳಗೆ ಅದನ್ನು ನೋಡಿದ, ಮೆಲ್ಲಗೆ ಮೇಲಕ್ಕೆ ಎತ್ತಿದ.

ಅದೊಂದು ಪಾನ್‌ಬೀಡಾ. ಹಳದಿ ಬಣ್ಣದ ರೇಕಿನಲ್ಲಿ ಸುತ್ತಿದೆ. ಮೇಲೆ ಸುಗಂಧದ ವಾಸನೆ. ಹೆಸರುವಾಸಿಯಾದ ಬೀಡಾ ಅಂಗಡಿಯೊಂದರಿಂದ ಬಂದಿದೆ.

ಅವನು ತಾನೇ ಎಂದೂ ಬೀಡಾ ತಿನ್ನುವುದಿಲ್ಲ. ಆದರೆ ಒಂದೊಂದು ಬಾರಿ ಕಾಣಿಕೆಯಾಗಿ ಕೊಡುವುದಕ್ಕಾಗಿ ಇಟ್ಟುಕೊಂಡಿರುತ್ತಾನೆ.

"ಓಹೋ! ಎನರ್ಜಿಪಿಲ್! ಗುಡ್-" ಬೀಸುಕಲ್ಲಿನಲ್ಲಿ ಬೀಸುವಂತೆ ತುಟಿಗಳು ಜೋರಾಗಿ ಅಲ್ಲಾಡುತ್ತಿವೆ. ಹೆಡ್‌ಗುಮಾಸ್ತರು ಕೇಳಿದರು - "ಸರಿ, ಏನಾಯಿತು ?"

"ಅದೇ ಮಾತನ್ನು ಕೇಳೋದಕ್ಕೆ ಬಂದಿದ್ದೇವೆ ಸಾರ್. ಎಲ್ಲಾ ತಮ್ಮ ಕೈಯಲ್ಲೇ ಇದೆ. ತಮ್ಮ ದಯೆ. ಎಲ್ಲಾ ತಮ್ಮದ್ದೇ, ಏನು ತೋಚುತ್ತೋ ಮಾಡಿ."

"ವಿಷಯ ಇನ್ನೂ ಫೈನಲಾಗಿಲ್ಲವೆ ?" ಹೆಡ್ ಗುಮಾಸ್ತರು ಕೇಳಿದರು. ಸ್ವರ ಗಂಭೀರವಾಗಿದೆ.

"ಆಗದಿದ್ದರೆ ಏನಂತೆ, ಏನಾಗುತ್ತೆ, ಒಂದೆರಡು ದಿನಗಳ ಮಾತು ಅಷ್ಟೇ

ಅಲ್ಲವೆ ?"

"ಹಾಗಾದರೆ ಸರಿ" ಹೆಡ್‌ಗುಮಾಸ್ತರು ಬರವಣಿಗೆಯಲ್ಲಿ ಮುಳುಗಿದರು.

ಚಿಕ್ಕ ಮಕ್ಕಳಂತೆ ಸ್ವಲ್ಪ ಮುದ್ದುಮುದ್ದಾದ ಸ್ವರದಲ್ಲಿ ಬಲಿದತ್ತ ಹೇಳಿದ - "ಸಾರ್, ಸಾರ್ - ನನ್ನದೇನಾಯಿತು ? ತಾವು ಹೇಳದಿದ್ದರೆ ನಾನು ಉಪವಾಸ ಸತ್ಯಾಗ್ರಹ ಮಾಡಿಬಿಡುತ್ತೇನೆ. ಹೇಳೋದಿಲ್ಲವಾ ಸಾರ್ ?"

ಹೆಡ್‌ಗುಮಾಸ್ತರು ಮುಗುಳ್ನಗೆ ನಕ್ಕರು. ಏನೂ ಹೇಳಲು ಇಷ್ಟವಿಲ್ಲವೆಂಬಂತೆ ಅನ್ಯಮನಸ್ಕರಾಗಿ ಹೇಳತೊಡಗಿದರು -"ಸಾಹೇಬರೇನೊ ಚೆನ್ನಾಗಿ ಬರೆದಿದ್ದಾರೆ. ಆದರೆ ಇನ್ನೂ ಸ್ವಲ್ಪ ಆಗಬೇಕು-"

ಮನಸ್ಸಿನೊಳಗೆ ಖುಷಿಯಾದರೂ ನೀಳವಾಗಿ ಉಸಿರೆಳೆದು ಬಲಿದತ್ತ ಹೇಳುತ್ತಾ ಎದ್ದುನಿಂತ - "ಏನೋ ತಮ್ಮಂಥವರು ಇರೋ ಹೊತ್ತಿಗೆ ನನಗೆ ಬಲವಿದ್ದಂತೆ ಸಾರ್. ಇಲ್ಲದಿದ್ದರೆ ಈ ಜನ ನನ್ನನ್ನು ನುಂಗಿಬಿಡುತ್ತಿದ್ದರು. "ನಮಸ್ಕಾರ ಹೇಳಿ ಅವನು ಹೊರಟ. ಸ್ವಲ್ಪ ದೂರ ಹೋಗಿ ಪುನಃ ಹಿಂದಿರುಗಿ ಬಂದ. ಹೆಡ್‌ಗುಮಾಸ್ತರ ಕಿವಿಯ ಹತ್ತಿರ ಬಗ್ಗಿ ಹೇಳತೊಡಗಿದ -" ಒಂದು ವಿಷಯ ಇತ್ತು ಸಾರ್. ತಾವೇನು ತಿಳಿದುಕೊಳ್ಳುತ್ತೀರೊ ಅಂತ ಯೋಚನೆಯಾಗಿದೆ. ತಾವೇನೂ ಅಂದು ಕೊಳ್ಳದಿದ್ದರೆ-"

"ಏನು ?"

"ಸಾರ್, ವೆಂಕಟರಾವ್‌ಗೆ ತಾವೇನಾದರೂ ಅಂದಿದ್ದೀರಾ ?"

"ಯಾವ ವಿಚಾರದಲ್ಲಿ ?"

"ಹಾಗಲ್ಲ, ಸಾರ್, ಅವನ ಮೇಲೇನಾದರೂ ನಿಷ್ಠುರವಾಗಿ, - ಅಂದರೆ ಏನಾದರೂ ಬೈಯ್ದುಗಿಯ್ದು ?"

"ಥತ್, - ಏನಾಯಿತು ? ಏನು ವಿಷಯ ಸ್ವಲ್ಪ ಬಿಡಿಸಿ ಹೇಳಬಾರದೆ ?"

ಬಲಿದತ್ತ ಸ್ವಲ್ಪ ಹಿಂದುಮುಂದು ನೋಡಿದ. ಮಾತು ಕುತ್ತಿಗೆಯವರೆಗೆ ಬರುತ್ತಿತ್ತು. ಅಲ್ಲಿಂದ ಮುಂದೆ ಬರುತ್ತಿರಲಿಲ್ಲ. ಹೆಡ್‌ಗುಮಾಸ್ತರ ಬಗೆಗೆ ಮಾತುಗಳನ್ನು ಕೇಳಿ ಪೆಟ್ಟು ತಿಂದವನಂತಾಗಿದ್ದಾನೇನೋ ಬಹಳ ಕಳವಳಗೊಂಡಿದ್ದಾನೇನೋ ಎಂಬಂತಿದ್ದಾನೆ. ಆದರೂ ಅಪ್ರಿಯವಾದ ಮಾತುಗಳು ನಾಲಗೆಯ ಮೇಲೆ ಬರುತ್ತಿಲ್ಲ. ತಲೆಬಗ್ಗಿಸಿ ಬೆರಳುಕಚ್ಚುತ್ತಾ ಒಂದು ಸಾರಿ ಇಲ್ಲಿಂದಲ್ಲಿಗೆ ಸುತ್ತುಹೊಡೆದು ಬಂದಿದ್ದಾನೆ ಅವನು. ಹೆಡ್‌ಗುಮಾಸ್ತರು ಆಶ್ಚರ್ಯಚಕಿತರಾದರು. ಕೆಲಸ ನಿಲ್ಲಿಸಿ ಅವನನ್ನೇ ದಿಟ್ಟಿಸಿ ನೋಡತೊಡಗಿದರು. ಸಾಮಾನ್ಯವಾಗಿಯೆ ಗೆರೆಗಳು ಬಿದ್ದಿರುವ ಹಣೆಯಲ್ಲಿ, ಭಯಮಿಶ್ರಿತ ಕುತೂಹಲದಿಂದ ಇನ್ನೂ ಹೆಚು ಗೆರೆಗಳು ಬೀಳುತ್ತಿದ.

"ಸಾರ್, ಹಾಳು ಜನಗಳದ್ದು ಎಂಥ ಸ್ವಭಾವ ಅಂತ ..ನಪಿಸಿಕೊಂಡರೆ ನನಗೆ ತುಂಬಾ ಬೇಜಾರಾಗುತ್ತೆ. ಏನೂ ಕಾರಣವಿಲ್ಲದೆ ಕೆಟ್ಟದ್ದು ಬಗೆಯುತ್ತಾರೆ. ಬಾಯಿಗೆ ಬಂದ ಹಾಗೆ ಮಾತಾಡುತ್ತಾರೆ. ಬರೀ ಒಬ್ಬನೇ ಅಲ್ಲ ಸಾರ್. ಮನೆಯಲ್ಲಿ ಎಲ್ಲರ ಎದುರಿಗೆ ಹೀಗೇ ಆಡ್ತಾನೆ. ಸಮಯ ಸಿಕ್ಕರೆ ಸಾಹೇಬರ ಮುಂದೆ ಎಲ್ಲ ಹೇಳಿಬಿಡ್ತೇನೆ. ಎಕ್ಸ್‌ಪೋಸ್ ಮಾಡಿಬಿಡ್ತೇನೆ. ನೋಡೋಣ ಹೇಗೆ ಬಚಾವಾಗ್ತಾನೆ ಅಂತಿರ್ತಾನೆ. ಹಾಳಾದವನು ಏನಂತ ಎಕ್ಸ್‌ಪೋಸ್ ಮಾಡೋದು ? ಮಾಡೋದಾದರ

ಮಾಡಿಕೊಳ್ಳಲಿ, ಸುಮ್ಮನೆ ಹೇಳಿಕೊಂಡು ಏಕೆ ತಿರುಗಾಡೋದು? ಜನ ಏನಂದುಕೊಳ್ತಾರೆ? ಅದೂ ತಮ್ಮ ಹಿಂದುಗಡೆ ಈ ತರಹ. ತಾವೇ ಸರಿಯಾಗಿ ವಿಚಾರಿಸಬೇಕು ಛೆ ಛೆ" ವಿನಯದ ಅವತಾರವೇನೋ ಎಂಬಂತೆ ಕಾಲುಗಳ ಮೇಲೆ ಬೀಳುವ ಹಾಗೆ ಬಗ್ಗಿದ. ಕಾಲುಗಳೇನು ಮರದ ಮೇಲಿರುತ್ತವೆಯೆ?

"ಏನು, ವೆಂಕಟರಾವ್? ನೀನು ಏನು ಹೇಳುತ್ತಿದ್ದಿ ಬಲಿದತ್ತ?" ತೊದಲುತ್ತ ಕೇಳಿದರು, - "ನೀನು ಸರಿಯಾಗಿ ಹೇಳುತ್ತಿದ್ದೀಯಾ?"

"ಮೆಲ್ಲಗೆ ಸಾರ್, ಸ್ವಲ್ಪ ಮೆಲ್ಲಗೆ. ಕೇಳಿಸಿಕೊಂಡರೆ ಅವನು ನನ್ನ ಪ್ರಾಣ ಹಿಂಡಿಬಿಡ್ತಾನೆ. ಇಂಥ ಮನುಷ್ಯನ ಪ್ಲಾನೇ ಬೇರೆ ರೀತಿ. ನೋಡಿದಿರಾ, ಎಲ್ಲರೂ ತಮ್ಮನ್ನು ಅನುಮಾನದಿಂದ ನೋಡಲು ಶುರುಮಾಡಿದರು. ಸಾರ್, ಈ ದಿನ ಸಂಜೆ ತಮ್ಮ ಮನೆಗೆ ಬರ್ತೀನಿ. ಎಲ್ಲ ವಿಚಾರ ತಿಳಿಸ್ತೀನಿ. ಎಕ್ಸ್‌ಪೋಸ್ ಮಾಡುತ್ತಾನಂತೆ. ದೊಡ್ಡ ಮನುಷ್ಯ ಬಂದುಬಿಟ್ಟ ಎಕ್ಸ್‌ಪೋಸ್ ಮಾಡೋದಕ್ಕೆ ಹುಂ-"

"ಅಯ್ಯೋ! ಎಂಥ ಪ್ರಪಂಚ - ಹಾವಿನಂತೆ, ಅದೂ ತೋಳನ್ನು ಬಳಸಿರುವ ಹಾವಿನಂತೆ ಈ ನನ್ಮಗ" ನಮಸ್ಕಾರ ಹೇಳಿ ಬಲಿದತ್ತ ತಲೆತಗ್ಗಿಸಿಕೊಂಡು ಬಂದುಬಿಟ್ಟ. ಅವನು ಹೋದ ಕಡೆಗೆ ಹೆಡ್‌ಗುಮಾಸ್ತರ ಗಮನ ಹರಿಯಲೇ ಇಲ್ಲ. ಒಂದೇ ಸಮನೆ ಎದುರಿಗಿರುವ ಮೇಜುಗಳ ಸಾಲನ್ನೇ ನೋಡುತ್ತಿದ್ದಾರೆ.

ಅಲ್ಲಿ ಒಳಗೊಳಗೇ ಗೊತ್ತಾಗದಂತೆ ವಿದ್ರೋಹ ಹೊಗೆಯಾಡುತ್ತಿದೆ.

ತಮ್ಮ ಹೊಟ್ಟೆಪಾಡಿನ ಮೇಲೇ ಕತ್ತಿಮಸೆಯಲು ಹೊರಟಿದ್ದಾನೆ ವೆಂಕಟರಾವ್. ಏಕೆ? ಹಲ್ಲುಗಳು ಕೆಳತುಟಿಯನ್ನು ಕಚ್ಚಿದವು, ಪ್ರಾಣಿಯಂತೆ ಒಂದು ರೀತಿಯ ಶಬ್ದ ಮಾಡಿ ಹೆಡ್ ಗುಮಾಸ್ತರು ಎದ್ದು ನಿಂತರು. ಡ್ರಾಯರನ್ನೆಳೆದು ಬೀಗದ ಕೈ ಗೊಂಚಲನ್ನು ಕೈಗೆತ್ತಿಕೊಂಡರು. ಪಕ್ಕದಲ್ಲಿದ್ದ ಕಬ್ಬಿಣದ ಬೀರುವನ್ನು ತೆಗೆದು ಒಂದು ಫೈಲನ್ನು ಕೈಗೆತ್ತಿಕೊಂಡರು. ಹಲ್ಲು ಕಡಿಯುತ್ತಲೆ ಅದರ ಮೇಲೆ ಏನೋ ಬರೆಯಲು ಕುಳಿತರು.

ಬಲಿದತ್ತ ವೆಂಕಟರಾವ್ ಹತ್ತಿರ ಕುಳಿತುಕೊಂಡೇ ನೋಡುತ್ತಿದ್ದಾನೆ. ಪ್ರೇಮಸಲ್ಲಾಪ ಸಾಗಿದೆ -

"ಓಹೋ, ಇಷ್ಟೊಂದು ಮೈಮುರಿದು ದುಡಿದು ಯಾತಕ್ಕೆ ಸಾಯುತ್ತಿದ್ದೀಯಯ್ಯ ವೆಂಕಟರಾವ್, ಯಾರು ಕೇಳಬೇಕು ಇಲ್ಲಿ, ಯಾರು ತಾನೆ ಕಿರೀಟ ಹೊರಿಸುತ್ತಾರೆ? ಪ್ರಪಂಚದಲ್ಲಿ ಹೇಗೆ ಹೇಗ ನಡೆಯುತ್ತದೆ ಅಂತ ನೋಡುತ್ತಿಲ್ಲವೆ? ಮೋಸ ಅಂದರೆ ಮೋಸ, ಯಾರಿಗೆ ಎಷ್ಟು ಸಾಧ್ಯವೋ ಅಷ್ಟು ಮೋಸ ಮಾಡುವುದು. ನಿನ್ನ ತರಹ ಕೆಲಸ ಮಾಡೋ ಜನರು ಮನೆ-ಆಫೀಸು-ಕೆಲಸ ಆಫೀಸು-ಕೆಲಸ-ಮನೆ ಅಂತ ಯಾವಾಗಲೂ ಒದ್ದಾಡುತ್ತಿರುತ್ತಾರೆ. ತಲೆ ಮೇಲೆತ್ತಿ ಸಹ ನೋಡೋದಿಲ್ಲ. ನಿಜವಾದ ದುಡಿಮೆಯ ಬೆಲೆ ಯಾರು ಅರ್ಥ ಮಾಡಿಕೊಳ್ಳುತ್ತಾರೆ? ನಿನ್ನಂತಹ ವಜ್ರಕ್ಕೆ ಬೆಲೆ ಕಟ್ಟೋರು ಯಾರಾದರೂ ಇನ್ನೆಲ್ಲಾದರೂ ಇದ್ದಿದ್ದರೆ ಇಷ್ಟು ಹೊತ್ತಿಗೆ ಏನಾಗಿರುತ್ತಿದ್ದೆಯೋ, ಇಲ್ಲೋ - ಬಿಡುಬಿಡು-"

ವೆಂಕಟರಾವ್ ನಕ್ಕು ಬಿಡುತ್ತಾನೆ. ತನ್ನ ಚಿಕ್ಕ ಫ್ಲಾಸ್ಕಿನ ಕಡೆ ಬೆರಳು ತೋರಿಸುತ್ತಾನೆ.

"ಕಾಫಿ, ಕಾಫಿ ಬೇಕಾ?-"

ಬಲಿದತ್ತ ಬೇಡ ಬೇಡ ಅನ್ನುತ್ತಲೆ ಅತ್ತ ನೋಡುತ್ತಿದ್ದ. ಇದು ಅವನ ಒಂದು ಅಭ್ಯಾಸ. ಅರ್ಧ ಲೋಟ ಕಾಫಿಯನ್ನು ಅವನತ್ತ ಸರಿಸಿ ವೆಂಕಟರಾವ್ ಹೇಳಿದ - "ಇರಲಿ ಸ್ವಲ್ಪ ತಗೊಳಯ್ಯ-"

"ನೋಡಯ್ಯ ಅಲ್ಲಿ ವೆಂಕಟರಾವ್, ಮುದುಕ ಏನೋ ಕಾನ್‌ಫಿಡೆನ್ಷಿಯಲ್ ಬೀರು ತೆಗೀತಾ ಇದಾನೆ. ಅಯ್ಯೋ, ಫೈಲೂ ತೆಗೀತಾ ಇದಾನೆ, ಏನಪ್ಪಾ ಸಮಾಚಾರ ?"

"ಮೊದಲು ನೀನು ಈ ಕಡೆ ನೋಡಯ್ಯ, ಕಾಫಿ ತಣ್ಣಗಾಗಿ ಹೋಗ್ತಿದೆ. ಇನ್ನೊಬ್ಬರ ವಿಚಾರ ಕಟ್ಟಿಕೊಂಡಲು ನಮಗೇನು ಆಗಬೇಕು ?"

ಸುದ್ದಿ ನಾಲ್ಕು ಗಂಟೆ ವೇಳೆಗೆ ಸಿಕ್ಕಿತು - ಬಲಿದತ್ತನಿಗೆ ಪ್ರಮೋಷನ್ ದೊರತಿತ್ತು. ಆಫೀಸಿಗೆ ಆಫೀಸೇ ಅವನನ್ನು ಮುತ್ತಿಗೆ ಹಾಕಿದೆ. ಎಲ್ಲರೂ ಅಭಿನಂದಿಸಿದರು - ಒಣಮೋರೆಯಿಂದ, ನೀರಸವಾದ ಮಾತುಗಳಿಂದ ಒಬ್ಬನಿಗೆ 'ಆಗಿದೆ' ಅನ್ನುವುದರ ಅರ್ಥ ಅಂದರೆ ಪ್ರತಿಯೊಬ್ಬನೂ ಯೋಚಿಸುತ್ತಿದ್ದಾನೆ. ತನ್ನದು 'ಆಗಿಲ್ಲವಲ್ಲ' 'ಆಗಬಹುದಾಗಿತ್ತು' ಅಂತ. ಆದರೂ ಹೊಟ್ಟೆಪಾಡಿನ ಈ ಸಣಸಾಟದಲ್ಲಿ, ಈ ರೀತಿ ಅಭಿನಂದಿಸುವುದು ಕಡಮೆ ಮಾತ ? ಪಾನ್ ಬೀಡಾ ಕೇಳುವುದು, ತಿಂಡಿ ಗಿಟ್ಟಿಸುವುದು, ಪಾರ್ಟಿ ಕೊಡಿಸುವಂತೆ ಒತ್ತಾಯ ಮಾಡುವುದು, ರಹೀಮನಿಂದ ಹಿಡಿದು ರಿಚರ್ಡ್‌ವರೆಗೆ ಎಲ್ಲ ಜವಾನರೂ ಬಕ್ಷೀಸಿಗೆ ಗಂಟುಬಿದ್ದಿದ್ದಾರೆ.

ತುಂಟತನ ತುಂಬಿದ ಕಣ್ಣುಗಳಿಂದ ವೆಂಕಟರಾವ್ ನಗುತ್ತಾ ಎದುರಿಗೆ ಬಂದು ನಿಂತ. ಕೈ ನೀಡಿ ಹೇಳಿದ - "ಲೆಕ್ಕಾಚಾರದ ಫಲ ಸಿಕ್ಕಿತಲ್ಲ, ಈಗೇನೂ ಆರೋಪ ಮಾಡೋದಿಲ್ಲ ತಾನೆ ?"

"ಆರೋಪ ! ಎಂಥ ಆರೋಪವಯ್ಯ ?" ಬಲಿದತ್ತ ಬೆಚ್ಚಿಬಿದ್ದ.

"ಲೆಕ್ಕಾಚಾರದಲ್ಲಿ ತಪ್ಪಾದರೆ ನೀನೇನು ಕಡಮೆ ಆರೋಪ ಮಾಡುತ್ತಾ ತಿರುಗುತ್ತೀಯ ? ತೆಗೋ ಹಚ್ಚು ಸಿಗರೇಟು, ಕೆಲಸ ಆಯಿತಲ್ಲ, ನಡಿ ಹೋಗೋಣ."

ಕಂಪೆನಿ ಕಚೇರಿಯ ದೊಡ್ಡ ಬಾಗಿಲನ್ನು ದಾಟಿ ಹೊರಬಂದ ಮೇಲೆ ಬಲಿದತ್ತನಿಗೆ ತನ್ನಲ್ಲಿ ಏನೋ ವ್ಯತ್ಯಾಸವಾಗಿದೆ ಅನ್ನಿಸಿತು. ಹೆಜ್ಜೆಗಳು ಬಹಳ ಹಗುರವಾಗಿದೆ. ಹೋಗುವುದೆ ಗೊತ್ತಾಗುತ್ತಿಲ್ಲ ಅಂತ ಅನಿಸತೊಡಗಿತು. ಹಾರಾಡುತ್ತಿದ್ದೇನೆಯೋ ಅಂತ ಅನಿಸತೊಡಗಿತು. ಎದೆ ಗಾಳಿ ತುಂಬಿ ಉಬ್ಬಿದಂತಾಗುತ್ತದೆ. ನಾಲ್ಕೂ ಕಡೆ ಕುಣಿದಾಡಲೆ, ನೆಗೆದಾಡಲೆ ಅಂತ ಮನಸ್ಸಿಗೆ ಬರುತ್ತಿದೆ. ಅವನ ಭಾವನೆಗಳ ಮೆರವಣಿಗೆ ಗಾಳಿಯೊಡನೆ ಬೀಸಿಕೊಂಡು ಮುಂದುವರಿಯುತ್ತಿದೆ. ಆಲೋಚನೆ ದೂರದೂರದವರೆಗೂ ಸಾಗುತ್ತಿದೆ. ಅವನ ಭಾವನೆಯಲ್ಲಿ ಎಲ್ಲವೂ ಸಾಧ್ಯ, ಎಲ್ಲವೂ ಅವನ ಕೈಗೆಟಕುವಷ್ಟು ದೂರದಲ್ಲೇ ಇದೆ.

ಅವನಿಗೆ ಪ್ರಮೋಷನ್ ಸಿಕ್ಕಿದೆ.

ಒಂದೇ ಏಟಿಗೆ ಖಟ್ ಅಂತ ಅವನು ತನ್ನ ಬೆಲೂನಿನ ದಾರವನ್ನು ಕತ್ತರಿಸಿ ಹಾಕಿಬಿಟ್ಟ. ತನ್ನ ಸುತ್ತಮುತ್ತಲಿನ ಪರಿಸ್ಥಿತಿಯ ಬಂಧನಗಳಿಂದ ಬಿಡುಗಡೆ ಹೊಂದಿ

ಜುಂಯ್ ಅಂತ ಹಾರುತ್ತಾ ಹೋಗುತ್ತಿದ್ದಾನೆ.

ಪ್ರಮೋಷನ್ ಆಗುವುದೇ ಇಲ್ಲವೆ? ಕೆಲವು ಆಗಿವೆ, ಕೆಲವು ಆಗುತ್ತವೆ. ಪ್ರಮೋಷನ್ನಿನ ಗಮ್ಮತ್ತಾದರೂ ಇನ್ನೇನು? ಅದರಲ್ಲಿ ಏನಿಲ್ಲ? ಆದರೆ ಈ ಕ್ಷಣದಲ್ಲಿ ಬಲಿದತ್ತ ಚರಿತ್ರಕಾರನಲ್ಲ, ದಾರ್ಶನಿಕನಲ್ಲ, ವಿಜ್ಞಾನಿಯಲ್ಲ. ಅವನೊಬ್ಬ ಯಶಸ್ವಿಯಾದ ಮನುಷ್ಯ ಅಷ್ಟೆ. ಮೋಹಮಾಯೆಗಳಿಂದ ಸಂತುಷ್ಟನಾಗುತ್ತಾನೆ.

ಅವನ ಯಶಸ್ಸಿನ ಸೆಲೆಯೆಲ್ಲ ನೌಕರಿಯ ಒಳಗಡೆ ಅಡಗಿದೆ. ಅದರ ಸ್ಥೂಲ ಹೊರರೂಪ ಪ್ರಮೋಷನ್ನಿನಲ್ಲಿದೆ. ಕೇವಲ ಕೆಲವು ರೂಪಾಯಿಗಳಷ್ಟು ಬಡ್ತಿ ಪಡೆದ ಆನಂದ ಅಷ್ಟೆ. ಅವನ ಮಟ್ಟಿಗೆ ಈ ಪ್ರಮೋಶನ್ ಅವನ ವ್ಯಕ್ತಿತ್ವವನ್ನು ಮೇಲೆತ್ತಿದೆ. ವೆಂಕಟರಾವ್, ಕೇಶವಬಾಬು, ಮಧುಬಾಯಿಗಿಂತಲೂ ಅವನು ದೊಡ್ಡವನಾಗಿದ್ದಾನೆ. ಸಾಧಾರಣ ಬದುಕಿನಲ್ಲಿ ಅಷ್ಟೇ ಅಸಾಧಾರಣವಾಗಿ ಹೋಗಿದ್ದಾನೆ. ಇಷ್ಟಕ್ಕೇ ಅವನು ನಿಲ್ಲುವುದಿಲ್ಲ. ಇನ್ನೂ ತುಂಬಿ ಬೆಳೆಯುತ್ತಾನೆ, ಬೆಳೆಯುತ್ತಲೇ ಹೋಗುತ್ತಾನೆ. ಆಗ ಅವನು ಏನಾಗುತ್ತಾನೆ? ರಸ್ತೆ ಕಾಣುವುದಿಲ್ಲ. ಕಣ್ಣಿನ ಮುಂದೆ ಆಸೆಯಿದೆ, ಮೆಲ್ಲಗೆ ಮುಖದಲ್ಲಿ ನಗೆ ಸೆಲೆಯೊಡೆಯುತ್ತದೆ. ಬಲಿದತ್ತ ದಾಸ್ ಕುಪ್ಪಳಿಸಿಕೊಂಡು ಹೋಗುತ್ತಿದ್ದಾನೆ.

ಅವನಿಗೆ ನೆನಪಿರುವಾಗಿನಿಂದಲೂ - ಯಾರ ಮುಂದೆಯೂ ದೇಹ ಸಾಮರ್ಥ್ಯದಿಂದ ಸೈ ಎನಿಸಿಕೊಳ್ಳಲಾಗಲಿಲ್ಲ. ಅವನ ಪುಟ್ಟ ಆಕಾರದ ಮುಂದೆ ಜನರೇ ತಲೆತಗ್ಗಿಸಿ ಅವನನ್ನು ನೋಡುತ್ತಾ ಬಂದಿದ್ದಾರೆ. ಎದೆಯುಬ್ಬಿಸಿಕೊಂಡು ಬಂದಿದ್ದಾರೆ. ಅವನ ಮೇಲೆ ಜೋರು ಜಬರದಸ್ತು ಮಾಡಿಕೊಂಡೇ ಬಂದಿದ್ದಾರೆ. ಎಲ್ಲವನ್ನು ಅವನು ಸಹಿಸಿಕೊಂಡೆ ಬಂದಿದ್ದಾನೆ. ಬೇಕೆಂತಲೇ ಜಗಳ, ತಂಟೆ ತಕರಾರುಗಳಿಗೆ ಅವಕಾಶ ಕೊಡಲಿಲ್ಲ. ಆಟ, ವ್ಯಾಯಾಮಗಳಿಂದ ದೂರವೇ ಇದ್ದ. ಯಾರಿಗೂ ಯಾವುದಕ್ಕೂ ಬೇಡವೆನ್ನಲಿಲ್ಲ. ಎದುರಾಡಲಿಲ್ಲ. ಆದರೆ ಈ ರೀತಿ ಹಿಂದುಮುಂದು ಲೆಕ್ಕ ಹಾಕುವುದರಿಂದ ಅವನು ಒಂದು ಗುಂಪನ್ನು ಮೈಗೂಡಿಸಿಕೊಂಡಿದ್ದಾನೆ. ಏಕೆಂದರೆ ದೇಹಬಲದಿಂದ ಅವನು ಯಾರನ್ನೂ ಎದುರಿಸಲಾರ. ಸ್ವಂತ ವ್ಯಕ್ತಿತ್ವವನ್ನು ಬಾವುಟದಂತೆ ಮೇಲೆ ಹಿಡಿದು ಓಡುತ್ತಾ ಓಡುತ್ತಾ ಎಡವಿ ಬೀಳುವುದಕ್ಕಿಂತ ಮಿಗಿಲಾಗಿ ಬೆನ್ನು ತೋರಿಸಿ ಗಾಳಿಗಂಟಲು ಮಾಡಿ ಅವನು ತನ್ನ ಕೆಲಸ ಸಾಧಿಸಿಕೊಂಡಿದ್ದಾನೆ. ಮನುಷ್ಯನನ್ನು ಕೈಯಿಂದ ತಿರುಚಿ ಎಸೆಯದೆ ಸೇವೆ ಮಾಡಿ ತಿರುಚಿ ಎಸೆಯುವುದನ್ನು ಕಲಿತಿದ್ದಾನೆ. ವಿನಯದಿಂದ, ಅಟ್ಟಕ್ಕೇರಿಸುವುದರಿಂದ ಕೆಲಸ ಸಾಧಿಸಿಕೊಳ್ಳುವುದನ್ನು ಕಲಿತುಕೊಂಡಿದ್ದಾನೆ. ಶಾಲೆಯಲ್ಲಿ ಅವನು ಗುಡ್ ಬಾಯ್ ಆಗಿದ್ದ. ಒಳ್ಳೆಯ ಹುಡುಗನೆಂದೆನಿಸಿಕೊಂಡಿದ್ದ. ಮೇಷ್ಟ್ರುಗಳಿಗೆ ಅವನಿಂದ ಏನೂ ಭಯವಿರಲಿಲ್ಲ. ಯಾವ ಹುಡುಗ ಏನು ಚೇಷ್ಟೆ ಮಾಡಿದ ಅಂತ ತಿಳಿಸಿ ಏನು ಶಿಕ್ಷೆ ಕೊಡಬಹುದು ಅಂತ ಸಲಹೆ ಮಾಡುವುದರಲ್ಲಿ ಯಾವಾಗಲೂ ನೆರವಾಗುತ್ತಿದ್ದ. ನೌಕರಿಯಲ್ಲೂ ಅವನು ಇದೇ ಉಪಾಯದಿಂದ ಮೇಲಿನವರ ಕೃಪಾಕಟಾಕ್ಷಕ್ಕೆ ಪಾತ್ರನಾಗಿದ್ದಾನೆ. ದೇವರು ಅವನ ಕೈಯಲ್ಲಿ ಹೆಚ್ಚು ಶಕ್ತಿ ಕೊಡಲಿಲ್ಲ. ಕೊಡದಿದ್ದರೂ ಬೇಡ - ಅವನು ತನ್ನ ಬೆನ್ನನ್ನು ತಾನೇ ತಟ್ಟಿಕೊಳ್ಳುತ್ತಿರುತ್ತಾನೆ. ಏಕೆಂದರೆ ಅವನಿಗೆ ಗೊತ್ತಿರುವ ಒಂದೇ ಒಂದು ಮಾರ್ಗವೆಂದರೆ - ಬುದ್ಧಿರ್ಯಸ್ಯಂ

ಬಲಂ ತಸ್ಯ ಮೊಲದಂತೆ ನಾಜೂಕಾಗಿ ಕೆಲಸ ಸಾಧಿಸಿಕೊಂಡು ಹೋಗುತ್ತಿರುತ್ತಾನೆ.

ಕೂಟ ನೀತಿ, ಕುಟಿಲೋಪಾಯಗಳಿಂದ ತಕ್ಷಣದಲ್ಲೇ ಫಲಿತಾಂಶ ಪಡೆದು ಅವನು ಮನೆಯ ಕಡೆ ಹೊರಟಿದ್ದಾನೆ. ಹಳೆಯ ಪೊರೆಯನ್ನು ಕಚೇರಿಯಲ್ಲೇ ಕಳಚಿ ಹಾಕಿಬಂದಿದ್ದಾನೆ. ಈಗ ಅವನು ತೇಜಸ್ವಿಯಾಗಿದ್ದಾನೆ, ಸುಂದರವಾಗಿದ್ದಾನೆ, ಮುಖಕ್ಕೆ ಕಳೆಬಂದಿದೆ. ಆದರೆ ಅವನಿಗೆ ತನ್ನ ಕಳೆ ತುಂಬಿದ ಮುಖವೇ ಇಷ್ಟವಾಗುತ್ತಿಲ್ಲ. ಅವನು ಕಳವಳಗೊಂಡಿದ್ದಾನೆ.

ನೆರಳು ಪಸರಿಸತೊಡಗಿದೆ. ಮನೆ ಹತ್ತಿರದಲ್ಲೇ ಇದೆ. ಸರೋಜಿನಿ ಕುಳಿತಿರಬಹುದು. ಅವನು ಸರೋಜಿನಿಗೆ ಹೇಳುವನು. ಆಮೇಲೆ ? ಬೇಗ ಬೇಗ ಹೆಜ್ಜೆ ಹಾಕುತ್ತಾ ಮನೆ ಕಡೆ ಮುಖ ಮಾಡಿ ಹೊರಟ.

ದೂರದಿಂದ ಕೊಳಲಿನ ನಾದ ಕೇಳಿ ಬರುತ್ತಿದೆ. ಚೆನ್ನಾಗಿದೆ, ತುಂಬಾ ಚೆನ್ನಾಗಿದೆ. ಸೂರ್ಯ ಮುಳುಗುತ್ತಿರುವಂತೆಯೆ ಮಧುರವಾದ ಕೊಳಲು, ಪ್ರಶಾಂತವಾದ ಸಂಜೆ, ಇದಾದ ಮೇಲೆ ಸುಮ್ಮನೆ ಮನೆಯ ಕಡೆಗೆ - ಚಿಕ್ಕ ಅಂಗಳದಲ್ಲಿ ಹುಲುಸಾದ ತರಕಾರಿ ಗಿಡಗಳು ಮತ್ತು ಹೀರೆಬಳ್ಳಿಯಲ್ಲಿ ಹೂವುಗಳು ಅರಳುತ್ತಿರಬಹುದು. ಹತ್ತಿರ ಬಂದರೆ ದನಗಳ ಕೊಟ್ಟಿಗೆಯಿಂದ ಹಸುಗಳು ಅಂಬಾ ಅನ್ನುತ್ತವೆ, ತುಳಸಿಗಿಡದ ಹತ್ತಿರ ದೀಪ ಹಚ್ಚಿ ತಲೆಯ ಮೇಲೆ ಸೆರಗು ಹೊದ್ದು, ಅವನ ಮಡದಿ ನಮಸ್ಕಾರ ಮಾಡುತ್ತಿರಬಹುದು. ಅವನಿಗೆ ಒಳ್ಳೆಯದು ಮಾಡಲೆಂದು ಪ್ರಾರ್ಥನೆ ಸಲ್ಲಿಸುತ್ತಿರಬಹುದು. ಪೂಜೆಯ ಕೋಣೆಯಿಂದ ಗಂಟೆ ಮತ್ತು ಜಾಗಟೆಗಳ ಧ್ವನಿ, ನೆರೆಮನೆಯಿಂದ ಸಾಯಂಕಾಲ ದೀಪ ಬೆಳಗುವ, ಆರತಿಯೆತ್ತುವ ಸದ್ದು ಕೇಳಿಬರುತ್ತಿದೆ - "ದೀಪಂ ಜ್ಯೋತಿ ಪರಂ ಜ್ಯೋತಿ-"

ದೂರದಿಂದ ಬರುತ್ತಿರುವ ಕೊಳಲಿನ ನಾದ, ಬಹಳ ಚೆನ್ನಾಗಿದೆ, ಇಂಪಾಗಿದೆ.

ಆದರೆ ಇದೆಂಥ ಸೊಬಗು ? ಇದೇನು ಹಳ್ಳಿಯದೆ ? ಸಾಧ್ಯವಿಲ್ಲ, ಪುಸ್ತಕಗಳಲ್ಲಿ ಓದುವ ಮಾತು. ಬಹುಶಃ ಸಿನಿಮಾದಲ್ಲಿ ತೋರಿಸುತ್ತಾರೆ ? - ಅವನು ಸಿನೆಮಾ ನೋಡುವುದಿಲ್ಲ. ಮನಸ್ಸಿನಲ್ಲಿ ಅದ್ಭುತವಾದ ವಿಚಾರ ತುಂಬಿದೆ. ಅದು ಬಾಯಾರಿದ ಗಂಟಲಿನಲ್ಲಿ ಒಸರುತ್ತಿರುವ ನೀರಿರಬಹುದು, ಯಾಂತ್ರಿಕ ಬದುಕಿನ ಕಳಕಳಿಯ ಆರ್ತನಾದವಿರಬಹುದು.

ಇಷ್ಟು ಕೆಲಸಕ್ಕೆ ಬಾರದ ವಿಚಾರ. ಬಲಿದತ್ತ ಆ ಕಡೆ ನೋಡಿದ. ಆ ಕಾಲೇಜು ಹುಡುಗ ಕಿಟಕಿಯ ಬಳಿ ನಿಂತು ಕೊಳಲು ಬಾರಿಸುತ್ತಿದ್ದಾನೆ. ಈ ಕಡೆ ಸರೋಜಿನಿ ಮನೆಯ ಕಿಟಕಿಯ ಬಳಿಯಲ್ಲಿ ಗಲ್ಲದ ಮೇಲೆ ಕೈಯಿಟ್ಟುಕೊಂಡು ಕುಳಿತಿದ್ದಾಳೆ. "ಥೂ, ಹಾಳಾದ ಹುಡುಗ" ಬಲಿದತ್ತ ಮನಸ್ಸಿನಲ್ಲೇ ಗರ್ಜಿಸಿದ - ಬೇಕೂಫ ಹುಡುಗ - ಬೇಕೂಫ ಹುಡುಗ - ಆದರೆ ಅವನು ಕೊಳಲು ಬಾರಿಸುವುದಕ್ಕೂ ಸರೋಜಿನಿ ಇಲ್ಲಿ ಕುಳಿತಿರುವುದಕ್ಕೂ ಏನು ಸಂಬಂಧ ? ಆದರೆ ಸರೋಜಿನಿ ಇಲ್ಲಿ ಕುಳಿತು ತನಗಾಗಿಯೆ ಕಾಯುತ್ತಿರುತ್ತಾಳೆ. ಅಯ್ಯೋ ಹುಡುಗಿ, ಅವಳಿಗೆ ಎಷ್ಟು ಬಿಕೊ ಅಂತ ಅನಿಸುತ್ತಿರಬಹುದು. ಆದರೂ ಮನಸ್ಸಿಗೆ ಒಪ್ಪಿಗೆಯಾಗುವುದಿಲ್ಲ. ಕಿಟಕಿಯ ಆಕಡೆ ಕೊಳಲು ಬಾರಿಸುತ್ತಿರುವ ಹುಡುಗ ಮತ್ತು ಇತ್ತ ಕಿಟಕಿಯ ಬಳಿ ಕುಳಿತಿರುವ ಸರೋಜಿನಿ ಒಂದೇ ಚಿತ್ರದ ಎರಡು ಮುಖಗಳಿದ್ದಂತೆ ತೋರುತ್ತಿದೆ.

ಕೋಪದಿಂದ ಮೈ ನಡುಗುತ್ತದೆ, ಉಸಿರಾಟ ಜೋರಾಗುತ್ತದೆ. ಬಲಿದತ್ತ ಬಾಗಿಲಿನ ಚಿಲಕ ಅಲ್ಲಾಡಿಸಿದ. ಸರೋಜಿನಿ ಬಾಗಿಲು ತೆಗೆದಳು. ಕೋಪದಲ್ಲಿ ಆವನು ಮನೆಯೊಳಗೆ ಅರ್ಧದೂರ ಹೋಗಿ ಹಿಂದಿರುಗಿ ಬಂದು ಸರೋಜಿನಿಯನ್ನು ನೋಡಿದ. ಪ್ರಮೋಷನ್ ಸಿಕ್ಕ ವಿಷಯವನ್ನು ಜಾಹೀರು ಪಡಿಸುವುದನ್ನು ಮರೆತು ಬಿಟ್ಟ. ಸರೋಜಿನಿಯ ಬೆನ್ನು ಕಾಣಿಸುತ್ತಿದೆ. ಸರೋಜಿನಿ ಮೆಲ್ಲಗೆ ಬಾಗಿಲು ಮುಚ್ಚುತ್ತಿದ್ದಾಳೆ, ಸರೋಜನಿಯ ಬೆನ್ನು ವಿರಾಟ ಕಾಯದಂತೆ ಕಾಣುತ್ತಿದೆ . ಬಾಗಿಲಿನ ಒಂದು ಭಾಗದಂತೆ. ಅಲ್ಲಿ ಅವನ ವಿಕೃತ ಮನಸ್ಸಿನ ಬರ್ಬರ ಚಿಂತೆ ಒಳಹೊಕ್ಕು ಭೇದಿಸುವುದಿಲ್ಲ, ಹಿಮ್ಮೆಟ್ಟುತ್ತದೆ. ಕೊಳಲಿನ ನಾದ ಹೆಚ್ಚಾಗುತ್ತದೆ. ನೋಡುತ್ತಿರುವಂತೆಯೆ ಮಳೆಯಂತೆ ಸುರಿದುಬರುತ್ತದೆ. ಇದಾದ ಮೇಲೆ ಗಾಳಿ ಯಲ್ಲಿ ಧೂಳಿನಂತೆ ಹಾಹಾಕಾರವೇಳುತ್ತದೆ, ಕೀಟಗಳ ಜೊಂಯ್ ಜೊಂಯ್.

ಸರೋಜಿನಿ ತಿರುಗಿ ನೋಡುತ್ತಾಳೆ, ಬಲಿದತ್ತ ಗಂಭೀರವಾಗಿ ನಿಂತಿದ್ದಾನೆ, ತಲೆ ತಗ್ಗಿದೆ, ಹಲ್ಲುಮಸೆಯುತ್ತಿದ್ದಾನೆ, ಯಜಮಾನರು ಎಲ್ಲೋ ಕೊಳಲಿನ ನಾದದಲ್ಲಿ ಮುಳುಗಿದ್ದಾರೆ ಅಂತ ಲೆಕ್ಕ ಹಾಕಿದಳು. ಹೇಳಿದಳು - "ಬಹಳ ಇಂಪಾಗಿದೆ, ಕೊಳಲಿನ ನಾದ, ಅಲ್ಲವೆ ? ಏಕಿಷ್ಟು ಸಪ್ಪೆಯಾಗಿದ್ದೀರಿ ? ಗೊಲ್ಲರಿಗೆ ಇಷ್ಟು ಚೆನ್ನಾಗಿ ನುಡಿಸಲು ಎಲ್ಲಿ ಬರುತ್ತದೆ ? ಆಹಾ ! ಎಷ್ಟು ಇಂಪಾಗಿದೆ-"

"ಏಯ್, ಏನಂದಿ ?" ಇಷ್ಟು ಹೊತ್ತಾದ ಮೇಲೆ ಕೋಪಕ್ಕೆ ದಾರಿ ಸಿಕ್ಕಿತು, "ಬಹಳ ಚೆನ್ನಾಗಿ ಬಾರಿಸುತ್ತಾನೆ ಅಲ್ಲವೆ, ಬಹಳ ಚೆನ್ನಾಗಿ ಬಾರಿಸುತ್ತಾನೆ. ಹಾಳು ಮುಂಡೆಗಂಡ. ಒಳ್ಳೆ ಪೀಡೆ ಸಹವಾಸವಾಯ್ತಲ್ಲ. ಮನುಷ್ಯ ಏನೂ ಮಾತಾಡಲಿಲ್ಲ ಅಂದರೆ ಈ ಪೀಡೆ ಹೆಚ್ಚಾಗುತ್ತಾ ಹೋಗುತ್ತೆ. ಮರ್ಯಾದಸ್ಥರು ಈಗ ಈ ವಠಾರದಲ್ಲಿ... ಶಾಬಾಸುಗಿರಿ ಪಡೆಯುತ್ತಾರೆ, ಸಲಾಮು ಹೊಡೆಸಿಕೊಳ್ಳುತ್ತಾರೆ. ಸ್ವಲ್ಪ ತಡಿ ನಿನಗೆ ಚಳ್ಳೆ ಹಣ್ಣು ತಿನ್ನಿಸ್ತೀನಿ ಈಗ" - ಬಲಿದತ್ತ ದೃಢವಾಗಿ ಪ್ರತಿಜ್ಞೆ ಮಾಡುವವನಂತೆ ಅರಚಿಕೊಂಡ. ಉದ್ವೇಗಗೊಂಡು ಬಾಗಿಲಿನವರೆಗೆ ಮುಂದೆ ಬಂದ. ಸರೋಜಿನಿ ಗಾಬರಿಗೊಂಡು ಅವನನ್ನು ನಿಲ್ಲಿಸಿ ಹೇಳಿದಳು "ಇದೇನು ಮಾಡುತ್ತಿದ್ದೀರಿ ? ಯಾರು ಏನಾದರೂ ಮಾಡಿಕೊಳ್ಳಲಿ, ಅದರಿಂದ ನಮ್ಮ ಗಂಟೇನು ಹೋಗುತ್ತೆ ?"

ಭುಜದ ಮೇಲೆ ಸರೋಜಿನಿಯ ವಜ್ರಮುಷ್ಟಿ, ಸರೋಜನಿಯ ಎದೆ ತಲೆಯ ಮೇಲೆ, ಅದರ ಮೇಲೆ ಅವನ ಮುಖ, ಗಲಿಬಿಲಿಗೊಂಡು ಬಲಿದತ್ತ ಬಡಬಡಿಸಿದ, "ಬಿಡು, ಜಾಗ ಬಿಡು."

ಬಿಡು, ಜಾಗಬಿಡು - ಅದರೊಡನೆ ಆತನ ಉಗ್ರಮೂರ್ತಿ. ಎಂದೋ ನೋಡಿದ ಯಾವುದೋ ಒಂದು ಅಭಿನಯದ ಸಣ್ಣ ಭಾಗ. ಕಲೆ ಗೋಪ್ಯವಾಗಿಯೆ ಬದುಕನ್ನು ಪ್ರಭಾವಕ್ಕೊಳಪಡಿಸುತ್ತದೆ. ಅದರ ಮೇಲೆ ಇನ್ನೊಂದು ಹೂಂಕಾರ, ಕಾವಲುಗಾರ, ಕಾವಲುಗಾರ.

"ಅಯ್ಯೋ ದೇವರೆ, ಎಲ್ಲಿಗೆ ಹೊರಟಿರಿ ? ಇದೇನು ಇವತ್ತು ಹೀಗಾಡುತ್ತಿದ್ದೀರಿ ?"

"ನೋಡ್ತಾ ಇರು, ಆ ಕೊಳಲು ಬಾರಿಸುತ್ತಿರುವ ಹಾಳು ಹುಡುಗ, ಎಲ್ಲಿಯ

ಪೀಡೆಯೊ, ಮೊದಲು ಅವನನ್ನು ಸರಿ ಮಾಡಿ ಬರುತ್ತೇನೆ."

ಅವನು ಜೋರಾಗಿ ಅರಚಿದ್ದ. ಆ ಕಡೆ ಕೊಳಲಿನ ನಾದ ಚಕ್ ಅಂತ ನಿಂತುಹೋಯಿತು. ಬಲಿದತ್ತನ ನಡುಗಾಟ ಸರೋಜನಿಯವರೆಗೂ ತಲುಪಿದೆ. ಬಾಗಿಲಿಗೆ ಬೆನ್ನು ಒಡ್ಡಿ, ಬಲಿದತ್ತನನ್ನು ಹಿಡಿದುಕೊಂಡು ಸರೋಜನಿ ಹೇಳಿದಳು - "ಎಲ್ಲಿಗೆ ಹೊರಟಿರಿ? ಏನಾಯಿತು? ನಿಮಗೇನಾಗಿ ಹೋಗಿದೆ? ನಿಮ್ಮ ಈ ಕೆಂಗಣ್ಣು, ಮುಖದಲ್ಲಿ ರಸವೇ ಇಲ್ಲ. ಯಾಕೆ ಹೀಗಾಡುತ್ತಿದ್ದೀರಿ? ಎಲ್ಲಿಗೆ ಹೊರಟಿರಿ? ಯುದ್ಧ ಮಾಡಲು ಹೊರಟಿರಾ? ಮಾಡಬಲ್ಲಿರಾ? ಹೇಳಿ, ಯಾಕೆ ಹೀಗೆ ಹುಚ್ಚುಹುಚ್ಚಾಗಿ ಆಡುತ್ತಿದ್ದೀರಾ? ಪ್ರತಿನಿತ್ಯ ಶಾಂತವಾಗಿರುತ್ತೀರಿ. ಇವತ್ತೇನಾಯಿತು. ಕೈಕೈ ಮಿಲಾಯಿಸುವುದಕ್ಕೆ ಬರುತ್ತಾ? ಹೋಗೋದಾದರೆ ಹೋಗಿ ನೋಡೋಣ"

ಏಯ್, ಏನಂದಳು? ಮಾಡಬಲ್ಲಿರಾ ಅಂತ? ಚೂಪಾದ ಮುಳ್ಳಿನಂತಿರುವ ಬಿರುಸು ಮಾತಿನಿಂದ ಯಾರೋ ತಲೆಗೆ ಚುಚ್ಚಿದಂತಾಯಿತು. ತಣ್ಣಗೆ ಎಲ್ಲವೂ ತಣ್ಣಗಾಗಿ ಹೋಯಿತು. ಯೋಚನೆ ಮಾಡಿದಾಗ ನೆನಪಾಗುತ್ತದೆ - ದೃಢಕಾಯವಾದ ಹರಯದ ಹುಡುಗ, ಕರಡಿಯಂತಹ ಎದೆ. ಕಸರತ್ತು ಮಾಡಿ ತಾಕತ್ತು ತೆಗೆದುಕೊಂಡಿದ್ದಾನೆ. ಫುಟ್‌ಬಾಲ್ ಆಡುತ್ತಾನೆ. ಕಾಲೇಜಿನಲ್ಲಿ ಓದುತ್ತಾನೆ, ಅವನಿಗೆ ಯಾವ ಬಂಧನವೂ ಇಲ್ಲ. ಅಂಥ ಓಡಾಡುವ ಕಲ್ಲು ಬಂಡೆಯ ಮುಂದೆ ಈ ಬಲಿದತ್ತ -

ಮೈಬಿಸಿಯಾಗಿ ಬೆವರೊಡೆಯುತ್ತಿದೆ. ಕೋಟಿನ ಗುಂಡಿ ಬಿಚ್ಚುತ್ತಾ ಗತ್ತಿನಿಂದ ಹೇಳಿದ - "ಓ ಸರೋಜ, ಎಕ್ಸ್‌ಕ್ಯೂಸ್ ಮಿ, ಮೈ ನರ್ವ್ಸ್ ಆರ್ ಜಂಪಿಂಗ್ - ಅಂದರೆ ನನ್ನ ನರಗಳು ಕುಣಿಯುತ್ತಿವೆ. ಬಹುಶಃ ಮೈಯಲ್ಲಿ ಸರಿ ಇಲ್ಲ ಅಂತ ಕಾಣುತ್ತೆ. ಕಚೇರಿಯಲ್ಲಿ ಕೆಲಸದ ಹೊರೆ, ಕೆಲಸ ಮಾಡುತ್ತಾ ಮಾಡುತ್ತಾ ತಲೆ ಸಿಡಿದುಹೋಗುತ್ತೆ. ಮತ್ತೆ ಮನೆಗೆ ಬರುತ್ತಿದ್ದಂತೆಯೆ ಕಿವಿಯಲ್ಲಿ ಈ ಪೊಂಯ್ ಪೊಂಯ್ ಕೇಳಿ ಸಿಟ್ಟು ನೆತ್ತಿಗೇರಿತ್ತು. ಮನೆಗೆ ಬಂದ ಮೇಲೆ ಮನುಷ್ಯ ಒಂದು ಕ್ಷಣ ಆರಾಮವಾಗಿ ಕುಳಿತುಕೊಳ್ಳಬೇಡವೆ, ಶುರು ಮಾಡಿಬಿಟ್ಟ ಇವನು ಆಗಲೇ ಪೊಂಯ್ ಪೊಂಯ್ ಅಂತ. ಆಹಾ, ನೀನು ಬಾರಿಸಿಬಿಟ್ಟರೆ ನಾನು ಕೇಳೋಣ ಅನ್ನೋದಕ್ಕೆ ಕೊಳಲು ಬಾರಿಸೋದಕ್ಕೆ ಬರುತ್ತಾ ನಿನಗೆ? ಒಳ್ಳೆ ಕಾಗೆ ಬಡಕೊಂಡ ಹಾಗೆ ಕವಗುಟ್ಟುತ್ತಿದ್ದಾನೆ - ಈಡಿಯಟ್."

"ಅವನು ತನ್ನ ಕೊಳಲು ಬಾರಿಸಿಕೊಳ್ಳಲಿ. ಅದಕ್ಕಾಗಿ ನಾವೇಕೆ ಕಷ್ಟಪಡಬೇಕು? ಸ್ವಲ್ಪ ತಡೀರಿ. ನಾನು ನೀರೋದ ಬಾಬುಗಳಿಗೆ ಹೇಳಿಕಳಿಸ್ತೀನಿ. ಅವನು ಮತ್ತೆ ಹೇಗೆ ಬಾರಿಸುತ್ತಾನೊ ನೋಡೋಣ."

"ಆಹಾ, ಅವರೇನು ನಿನ್ನ ಮಾತಿಗೆ ಕಾಯ್ಕೊಂಡು ಕೂತಿದ್ದಾರೆ ಅಲ್ಲವಾ?-"

"ನಾನು ನನ್ನ ಹೆಸರಿನಲ್ಲಿ ಯಾಕೆ ಹೇಳಿಕಳಿಸಲಿ? ನೀವು ಹೇಳಿಕಳಿಸಿದ್ದೀರಿ ಅಂತೀನಿ. ನಿಮ್ಮ ಹೆಸರು ಹೇಳಿದ ಮೇಲೂ ಕೇಳಲ್ಲ ಅಂದರೇನು, ಹುಡುಗಾಟವೆ? ಇವಲ್ಲ ಕೇಳಿದರೆ ತಲೆನೋವು ಬರುತ್ತದೆಂದು ಹೇಳಿಕಳಿಸ್ತೀನಿ. ಆಹಾ, ಇಂಥ ಹುಡುಗರು ಕೊಳಲು ಬಾರಿಸುತ್ತಿದ್ದರೆ ಅವರ ಅಮ್ಮಂದಿರಿಗೂ ಊಟ ಸೇರೋದಿಲ್ಲ.

ಬಾರಿಸೋದಕ್ಕೆ ತೆವಲಿದ್ದರೆ ಹೋಗಪ್ಪಾ ಹೋಗು, ಮೈದಾನದಲ್ಲಿ ಬಾರಿಸು."

"ಹೌದೌದು, ಅದೇ ಸರಿ-"

"ಹಾಗಾದರೆ ಬನ್ನಿ, ಊಟ ಮಾಡಿ."

ಎರಡು ನಿಮಿಷದಲ್ಲಿ ಸರೋಜಿನಿ ಊಟ ಬಡಿಸಿದಳು. ಊಟಕ್ಕೆ ಕುಳಿತುಕೊಳ್ಳುತ್ತಿದ್ದ ಹಾಗೆಯೆ ಬಲಿದತ್ತ ಹೇಳಿದ "ಕೆಲಸದ ಹೊರೆಯಿಂದಾಗಿ ತಲೆ ಸರಿಯಾಗಿಟ್ಟುಕೊಳ್ಳುವುದೆ ಕಷ್ಟ" ಊಟ ಮಾಡುತ್ತಾ ಹಾಗೂ ಹೀಗೂ ಒಂದು ಸಣ್ಣ ಭಾಷಣವನ್ನೇ ಹೊಡೆಯಲು ಶುರು ಮಾಡಿದ, "ನಿನಗೆ ಗೊತ್ತಿದೆಯೊ ಸರೋಜ, ಕೆಲಸ ಮಾಡುವವರ ಹಣೆಬರಹ ಅಂದರೆ ಹೀಗೇನೆ. ದುಡಿದು ಮನೆಗೆ ಬರ್ತಾರೆ, ಸಿಟ್ಟೆಲ್ಲ ಮನೆಯವರ ಮೇಲೆ ತಿರುಗುತ್ತದೆ. ಸಂಜೆ ಹೊತ್ತು ಜಗಳಗಿಗಳ ಏನೋ ಅಸಮಾಧಾನ. ಏನು ಮಾಡೋದು ಕೆಲಸದ ಹಣೆಬರಹವೆ ಇಷ್ಟು, ಮನಸ್ಸೇ ಕೆಟ್ಟು ಹೋಗುತ್ತೆ-"

ಸರೋಜಿನಿ ತಲೆಬಗ್ಗಿಸಿ ಕುಳಿತಿದ್ದಾಳೆ. ಬಿರುಗಾಳಿಯನ್ನು ತಳ್ಳಿಹಾಕಲು ಅವಳಿಗೆ ಅಷ್ಟು ಸಹಜವಾಗಿ ಸಾಧ್ಯವಾಗಲಿಲ್ಲ. ಬಾಯಿ ಕಟ್ಟಿದೆ, ಮೋಡದಂತೆ.

ಮಾತಾಡುತ್ತಿರುವಂತೆಯೆ ಬಲಿದತ್ತ ಮತ್ತೂ ಬಾಯಿಗೆ ಹಾಕಿಕೊಳ್ಳುತ್ತಿದ್ದಾನೆ. ಮುಕ್ಕಾಲು ಊಟ ಮುಗಿಯಿತು. ಹೊಟ್ಟೆಯ ಹಸಿವು ಇಂಗಿತು. ಮೈಯಲ್ಲಿ ಸ್ವಲ್ಪ ಸಮಾಧಾನವಾಯಿತು. ತಕ್ಷಣ ಅವನಿಗೆ ನೆನಪಾಯಿತು - ಎಲಾ? ಎಂಥ ಮುಖ್ಯವಾದ ವಿಚಾರ ಮರೆತುಬಿಟ್ಟಿದ್ದೇನೆ. ಬಹಳ ತಮಾಷೆ ಅನಿಸಿತು. ಜೋರಾಗಿ ನಕ್ಕು ಹೇಳಿದ - "ಇವತ್ತು ಆಫೀಸಿನಲ್ಲಿ ಏನಾಯಿತೆಂದು ಗೊತ್ತಾಯ್ತಾ ಸರೋಜ, ಬರೀ ನನಗೆ ಮಾತ್ರ ಪ್ರಮೋಷನ್ನು ಸಿಕ್ಕಿತು."

ಸರೋಜಿನಿಯ ಕಣ್ಣು ಮಿಂಚಿತು. ಕ್ಷಣಮಾತ್ರದಲ್ಲಿ ಅವಳ ಮುಖದ ಮೇಲಿದ್ದ ಮೋಡಗಳು ಕರಗಿದವು. ಹೊಂಬಿಸಿಲು ಮೂಡಿತು. ನಗುತ್ತಾ ಬಳಕುತ್ತಲೆ ಎದ್ದು ಅಂದಳು "ನಿಜವಾಗಿಯೂ, ಇಷ್ಟು ಹೊತ್ತಿನ ತನಕ ಏಕೆ ಹೇಳಲಿಲ್ಲ? ಇಷ್ಟು ಮರೆವಾ ನಿಮಗೆ?"

ಹಿಂದಿನ ಯೋಚನೆ ಹೆಸರಿಲ್ಲದ ಹಾಗೆ ಹಾರಿಹೋಯಿತು. ವಾಸ್ತವಿಕ ಪ್ರಪಂಚದಲ್ಲಿ ಮಂತ್ರವಾದಿಯ ಜಾದುಗೋಲೂ ಬೀಸಿದ ಹಾಗಾಯಿತು. ಎರಡು ಹೃದಯಗಳು ಒಂದಕ್ಕೊಂದು ಹತ್ತಿರ ಬಂದವು. ಎರಡೂ ಒಂದೇ ಧಾಟಿಯಲ್ಲಿ ಮಿಡಿಯತೊಡಗಿದವು.

ಆ ಮಿಡಿತದ ಹೆಸರು ಶಾರ್ದೂಲ ವಿಕ್ರೀಡಿತ ಛಂದಸ್ಸು ಅಂತಲ್ಲ, ಅದರ ಹೆಸರು ನೌಕರಿಯಲ್ಲಿ ದೊರೆಯುವ ಪ್ರಮೋಷನ್ ಅಂತ. ಎರಡು ಹಕ್ಕಿಗಳೂ, ಒಂದರೊಡನೆ ಇನ್ನೊಂದಿದೆ - ಗಂಡು ಹಕ್ಕಿ - ಹೆಣ್ಣು ಹಕ್ಕಿ, ಹೆಣ್ಣು ಹಕ್ಕಿ ಸ್ವಲ್ಪ ದೊಡ್ಡದಾದರೆ ಅದು ಗಂಡು ಹಕ್ಕಿಯೇನೂ ಆಗುವುದಿಲ್ಲ. ಕೆಲಸದಲ್ಲಿ ದೊರಕುವ ಪ್ರಮೋಷನ್, ಗಂಡುಹಕ್ಕಿ ಹುಲ್ಲುಕಡ್ಡಿಗಳನ್ನು ತಂದುಹಾಕಿ ಗೂಡು ಕಟ್ಟುತ್ತದೆ. ಹೆಣ್ಣು ಹಕ್ಕಿ ಮೊಟ್ಟೆಯಿಡುತ್ತದೆ. ಇದಾದಮೇಲೆ ಹೊಸಮನೆ, ಗಂಡು ಹಕ್ಕಿ - ಹೆಣ್ಣು ಹಕ್ಕಿ ಮತ್ತು ಮೊಟ್ಟೆಗಳು.

ನೌಕರಿಯಲ್ಲಿ ಪ್ರಮೋಷನ್.

ಸರೋಜಿನಿ ಎಲೆಯಡಿಕೆ ಮಡಚಿ ಕೈಮುಂದುಮಾಡಿದಳು. ಬಲಿದತ್ತ ಅದನ್ನು ಬಾಯಲ್ಲಿ ಕಚ್ಚಿಕೊಂಡು ತನ್ನ ಮುಖವನ್ನು ಸರೋಜನಿಯ ಮುಖದತ್ತ ತಿರುಗಿಸಿದ. ಆವಳು ನಗುತ್ತಾ ನಗುತ್ತಾ ಅದನ್ನ ಬಾಯಲ್ಲಿ ಕಚ್ಚಿಕೊಂಡಳು.

"ಆಮೇಲೆ" ಕೇಳಿದಳು.

ಅವಳ ಮುಖಭಾವವನ್ನು ನೋಡಿ ಪ್ರಮೋಷನ್ ಬಗ್ಗೆ ಕೇಳುತ್ತಿದ್ದಾಳೆಂದು ಅರ್ಥ ಮಾಡಿಕೊಂಡು ಬಲಿದತ್ತ ಹೇಳುತ್ತಾ ಹೋದ, "ಆಮೇಲೆ ಇನ್ನೇನು, ಬಹುಶಃ ಎರಡು ಹೊತ್ತು ಹೊಟ್ಟೆ ತುಂಬ ಊಟ ಮಾಡಬಹುದು. ಏಕೆಂದರೆ ಸಂಬಳ ಎಪ್ಪತ್ತೈದರಿಂದ ನೂರೈವತ್ತಕ್ಕೆ ಏರಿದೆ. ನಾಳೆಯಿಂದ ಒಬ್ಬ ಆಳು ಸಿಗುತ್ತಾನೆ. ಮನೆಯನ್ನು ಖಂಡಿತ ಬದಲಾಯಿಸಬೇಕಾಗುತ್ತದೆ. ಈ ಮಾದರಿಯ ಮನೆಯಲ್ಲಂತೂ ಇರೋದಕ್ಕಾಗುವುದಿಲ್ಲ. ಅದೇನೆ ಇರಲಿ, ಪ್ರಮೋಷನ್ನಿನಿಂದ ಏನು ಪ್ರಯೋಜನ ಗೊತ್ತೆ? ಅವರಿವರಿಂದ ಅನ್ನಿಸಿಕೊಳ್ಳೋದು ತಪ್ಪುತ್ತೆ. ಇವತ್ತಿನಿಂದ ನಾನೇನೂ ಸಣ್ಣ ಗುಮಾಸ್ತನಲ್ಲ. ಚಿಕ್ಕದಾಗಲಿ ದೊಡ್ಡದಾಗಲಿ ನಾನು ಈಗ ಒಬ್ಬ ಆಫೀಸರ್. ಗೊತ್ತಾಯ್ತಾ, ನಾನೀಗ ಆಫೀಸರ್ ಆಗಿಹೋಗಿದ್ದೀನಿ. ಕೆಲಸ ಹೀಗೆ ಮಾಡ್ತಾ ಹೋದರೆ ನಾನು ಮಹಾಪಾತ್ರನಾಗುತ್ತೇನೆ, ನಾನು ಸಾಹೇಬನಾಗುತ್ತೇನೆ ತಿಳೀತಾ. ಕೇವಲ ಕೆಲವು ದಿನಗಳ ದುಡಿಮೆ, ದುಡಿಮೆಯ ಜೊತೆಗೆ ಸ್ವಲ್ಪ ತಿಳಿವಳಿಕೆ - ಜನಗಳ ಮನಸ್ಸನ್ನು ಸೆಳೆದುಕೊಳ್ಳುವ ಟ್ಯಾಕ್ಟ್ - ಟ್ಯಾಕ್ಟ್ ಅಂದರೆ ಏನು ಗೊತ್ತಾ? ನಮ್ಮ ಭಾಷೆಯಲ್ಲಿ ಟ್ಯಾಕ್ಟ್ ಅನ್ನೋದಕ್ಕೆ ಸರಿಯಾದ ಪದ ಇಲ್ಲ ಅಂತ ನಿನಗೆ ಹೇಗೆ ತಿಳಿಯಹೇಳಲಿ. ನಮಗೆ ಟ್ಯಾಕ್ಟ್ ಅಂದರೇನೆಂದು ಗೊತ್ತಿಲ್ಲ. ಆದ್ದರಿಂದಲೇ ಬೇರೆ ಬೇರೆ ದೇಶಗಳ ಜನ ಟ್ಯಾಕ್ಟಿನ ಬಲದ ಮೇಲೆ ಮೇಲಿನವರನ್ನು ಫ್ರೀಸ್ ಮಾಡಿ ಕೆಲಸ ಸಾಧಿಸಿಕೊಳ್ಳುತ್ತಾರೆ. ನಮ್ಮ ಜನ ಬಾಯಿಬಿಟ್ಟುಕೊಂಡು ಹಾಗೇ ಇರುತ್ತಾರೆ. ಹಾಗೆ ಕುಳಿತಿರಿ, ಹಾಗೇ ಬಾಯಿ ಮುಚ್ಚಿಕೊಂಡು ಕುಳಿತಿರಿ. ಯಾರಿಂದ ಹೇಗೆ ಕೆಲಸ ಮಾಡಿಸಿಕೊಳ್ಳಬೇಕು, ಬಲ-ಖದೀಮತನ-ಕೈಚಳಕ - ಹೇಗೆ ಎಲ್ಲಿ ಎಂಥ ಮಾತಾಡಬೇಕು. ನೀರಿನ ಮೇಲೂ ಕೆನೆಗಟ್ಟಿಸಬೇಕು. ಬದುಕಿರುವ ಮನುಷ್ಯನ ಚರ್ಮ ಸುಲಿದರೂ ಅವನು ಸುಮ್ಮನೆ ನೋಡುತ್ತಾ ನಿಂತಿರಬೇಕು. ಇದರ ಹೆಸರೇ - ಟ್ಯಾಕ್ಟ್. ನೋಡಿದೆಯಾ, ಎಷ್ಟು ಬೇಗ ಪ್ರಮೋಷನ್ ಸಿಕ್ಕಿತು. ರಜಪೂತರಿಗೆ ಟ್ಯಾಕ್ಟ್ ಏನೆಂದು ಗೊತ್ತಿತ್ತು, ಆದ್ದರಿಂದಲೇ ಮೊಗಲರ ರಾಜ್ಯದಲ್ಲೂ ಆಡಳಿತ ನಡೆಸುತ್ತಿದ್ದರು. ರಜಪೂತರು ಅಯ್ಯೋ ಬಿಡು, ಅದು ಚರಿತ್ರೆಯ ಮಾತಾಯಿತು. ಈಗ ಬೇರೆಯವರನ್ನು ನೋಡು."

ತನ್ನ ಭಾಷಣ ನೋಡಿ ತಾನೇ ಬೆನ್ನುತಟ್ಟಿಕೊಳ್ಳುತ್ತಾ ಬಲಿದತ್ತ ಬೊಗಳೆ ಹೊಡೆಯುತ್ತಲೆ ಹೋದ. ಇದೊಂದು ರೀತಿಯ ಅಮಲು ಇದ್ದಂತೆ, ಅಮಲಿನಿಂದ ಅಮಲು ಏರುತ್ತಾ ಹೋಗುತ್ತದೆ. ಸರೋಜಿನಿ ಸುಮ್ಮನೆ ಕೇಳುತ್ತಾ ಕುಳಿತಿದ್ದಾಳೆ. ಸರಿಯೊ ಇಲ್ಲವೊ ಗೊತ್ತಿಲ್ಲ. ಬಲಿದತ್ತನಂತೂ ಒಂದು ಹೊಸ ವ್ಯಕ್ತಿತ್ವದ ಅವತಾರವೆಂಬಂತೆ ಕಂಡುಬರುತ್ತಿದ್ದಾನೆ. ಅವನ ಕಣ್ಣುಗಳು ಸರೋಜಿನಿಯ ಕಣ್ಣುಗಳನ್ನು ಕಟ್ಟಿವೆ, ಹೇಳಿದ - "ನಾನು ಹೇಳಿದರೆ ನಿನಗೆ ನಂಬಿಕೆ ಬರೋದಿಲ್ಲ. ಈಗ ನೀನೇ ನೋಡಿದೆಯಲ್ಲ. ಇನ್ನೂ ಏನು, ಬೇಕಾದಷ್ಟು ನೋಡುವಿಯಂತೆ ಇದು

ಕೇವಲ ಶುರು ಅಷ್ಟೆ. ಆದರೆ ನಮಗೆ ನಿಜವಾಗಲೂ ಬೇಕಾದುದೇನು ? ಕೆಲಸದಲ್ಲಿ ಹೆಂಗಸರಿಂದ ಮೂರು ಕಾಸು ಸಹಾಯವೂ ಆಗೋದಿಲ್ಲ. ನಿನಗೆ ಅಡುಗೆ ಮಾಡೋದು ಬರುತ್ತದೆ, ನಾನು ಇಲ್ಲ ಅನ್ನೋದಿಲ್ಲ. ಆದರೆ ಅದನ್ನು ಐದು ರೂಪಾಯಿಯ ಅಡುಗೆಯವನು ಮಾಡುತ್ತಾನೆ - ಅಂದರೆ, ನೀನು ತಪ್ಪು ತಿಳಿದುಕೊಳ್ಳಬಾರದು - ಕೆಲಸದಲ್ಲಿ ನಿನ್ನಿಂದ ನನಗೆ ಏನು ಸಹಾಯವಾಗುತ್ತೆ ?

"ಹೆಂಗಸು ಸಹಧರ್ಮಿಣಿಯಾಗಿರುತ್ತಾಳೆಂದು ಶಾಸ್ತ್ರದಲ್ಲಿ ಹೇಳಿದೆ. ಧರ್ಮ ಅಂದರೆ ವೃತ್ತಿ ಎಂದರ್ಥ. ಆದರೆ ನಿನ್ನದು ನನ್ನದು ಬೇರೆ ಬೇರೆ ವೃತ್ತಿಗಳು. ಅದೇ ಬೇರೆಯವರ ವಿಚಾರ ನೋಡು, ಕಂಪೆನಿಯಲ್ಲಿ ಎಷ್ಟು ಜನ ಆಫೀಸರುಗಳಿದ್ದಾರೆ, ಅವರ ಹೆಂಡತಿಯರೆಲ್ಲ ಫಾರ್ವರ್ಡ್ ಹೆಂಗಸರು. ಕ್ಲಬ್ಬಿನಲ್ಲಿ ಅವಕಾಶ ನೋಡಿ ಕೊಂಡು ಮೇಲಧಿಕಾರಿಗಳಿಗೆ ಒಂದೆರಡು ಮಾತು ಕಿವಿಯಲ್ಲಿ ಊದಿದರೆ ಸಾಕು, ಈ ಕಡೆ ಗಂಡನಿಗೆ ಪ್ರಮೋಷನ್ ಗ್ಯಾರಂಟಿ. ಕೆಲವರು ಹಾಡುವುದನ್ನು ಕಲಿತಿದ್ದಾರೆ, ಕೆಲವರಿಗೆ ಡ್ಯಾನ್ಸ್ ಬರುತ್ತೆ. ಕೆಲವರು ಆಟವಾಡಿದರೆ ಇನ್ನು ಕೆಲವರು ಸೊಗಸಾಗಿ ಮಾತಾಡುತ್ತಾರೆ. ಮಾತುಮಾತಿನಲ್ಲೇ ಕೆಲಸಮಾಡಿ ಸಾಧಿಸಿಕೊಳ್ಳುತ್ತಾರೆ ಬಿಡು. ಯಾರಿಗೆ ತಾನೇ ಗೊತ್ತಾಗುತ್ತೆ ಜನ ಎಲ್ಲಿಂದ ಎಲ್ಲಿಗೆ ಹೋಗಿ ತಲುಪುತ್ತಾರೆ ಅಂತೀನಿ. ನೆನ್ನೆ ಕಬ್ಬಿಣ ಕುಟ್ಟುತ್ತಿದ್ದವರು ಮಗ್ಗ ಆಡಿಸುತ್ತಿದ್ದವರು ಎಲ್ಲಿ ಇವತ್ತು ದೊಡ್ಡ ಆಫೀಸರುಗಳಾಗಿ ಓಡಾಡಿಕೊಂಡಿರುವುದಲ್ಲದೆ ನಮ್ಮ ತಲೆ ಮೇಲೆ ಕುಳಿತಿರುತ್ತಾರೆ."

ಬಲಿದತ್ತನ ವ್ಯಕ್ತಿತ್ವ ದೊಡ್ಡದು, ಸರೋಜಿನಿಯದು ಚಿಕ್ಕದು. ತನ್ನ ಬೆನ್ನು ತಟ್ಟಿಕೊಳ್ಳುತ್ತಾ ಹೆಂಗಸನ್ನು ಕತ್ತರಿಸಿ ಕಲ್ಲು ಮಾಡಿ ಇಟ್ಟುಬಿಟ್ಟ. ಸರೋಜಿನಿ ಸುಮ್ಮನೆ ಕುಳಿತಿದ್ದಳು. ಸ್ವಲ್ಪ ಹೊತ್ತು ಯೋಚನೆ ಮಾಡಿ ಹೇಳಿದಳು "ಹೆಂಗಸರೂ ಚಾಕರಿಗೆ ಹೋಗಲಿ, ಅಂದ ಮೇಲೆ ಮನೆ ಕಡೆ ನೋಡೋರು ಯಾರು ? ಯಾರಿಗೋಸ್ಕರ ? ಇಷ್ಟರ ಮೇಲೆ ಮನೆ ಮಠ ಅಂತ ಯಾರಿಗೆ ಬೇಕಾಗಿದೆ ? ಸರಿಬಿಡಿ, ಎಲ್ಲರೂ ಎಲ್ಲ ಕೆಲಸ ಮಾಡೋದಕ್ಕೆ ಸಾಧ್ಯವಾಗೋದಿಲ್ಲ. ಯಾರ ಯಾರ ಸ್ವಭಾವ ಹೇಗಿರುತ್ತೋ, ನನಗಂತೂ ಅದೆಲ್ಲಾ ಸಾಧ್ಯವಿಲ್ಲ, ಅಂದಮೇಲೆ ನನ್ನ ಮೇಲೆ ತಪ್ಪು ಹೊರಿಸ್ಸಿದರೆ ನಾನೇನು ಮಾಡಲಿ ?"

"ಥೂ ನಿನ್ನ, ಸರಿಯಾಗಿ ಅರ್ಥ ಮಾಡಿಕೊಂಡೆ. ಇದನ್ನೇ ತಿಳಿಗೇಡಿತನ ಅನ್ನೋದು- ವಾಂಟಿಂಗ್ ಇನ್ ಟ್ಯಾಕ್ಟ್. ನಿನಗೆ ಸಾಧ್ಯವಾಗೋದಿಲ್ಲ ಅಂತ ಯಾರು ನಿನಗೆ ಹೇಳಿದರು ? ಎಲ್ಲರೂ ಎಲ್ಲಾ ಕೆಲಸ ಮಾಡಬಲ್ಲರು. ಮನಸ್ಸಿದ್ದರೆ ಅಲ್ಲವೆ, ನೀನೂ ಎಲ್ಲಾ ಕೆಲಸ ಮಾಡಬಹುದು."

"ನನಗೇನೂ ಬೇಡ, ನನಗೇನೂ ಮಾಡಲು ಸಾಧ್ಯವಿಲ್ಲ."

"ಹೋಗಲಿ, ನೀನು ಶುರುವಾದರೂ ಮಾಡು. ಸಿಎಟಿ - ಕ್ಯಾಟ್, ಬಿಎಟಿ-ಬ್ಯಾಟ್. ಎರಡು ದಿನ ಉರು ಹೊಡೆದರೆ ಆಯಿತು. ಒಂದು ಸ್ವಲ್ಪ ಬೀಡಾನಾದ್ರೂ ಮಾಡಿಕೊಡು. ಹಾಗೆ ಸುತ್ತಾಡಿ ಬರುತ್ತೇನೆ."

ಸರೋಜಿನಿ ಬೀಡಕಟ್ಟಿಕೊಟ್ಟಳು.

ಬಲಿದತ್ತ ಹೊರಕ್ಕೆ ಹೊರಟ.

ಬೀಡ ಜಗಿಯುತ್ತಾ ಜಗಿಯುತ್ತಾ ಕತ್ತಲೆಯಲ್ಲೇ ಹೊರಟಿದ್ದಾನೆ ಬಲಿದತ್ತ. ಸುಮ್ಮನೆ, ಯಂತ್ರದ ಜೊತೆಯಲ್ಲೇ ಚಿಂತೆ ಸಹ ಅಂಡಲೆಯುತ್ತಿದೆ.

ಕತ್ತಲೆಯಲ್ಲಿ ಅವನ ಪಾಲಿಗೆ ಬೆಳಕಿನ ಸುರಂಗ ತೆರೆದುಕೊಳ್ಳುತ್ತಿದೆ. ನೇರವಾದ ರಸ್ತೆ, ದೂರದಲ್ಲಿ ಫಳಫಳ ಹೊಳೆಯುವ ಬೆಳಕು, ಈ ದಾರಿಗೆ ಕೊನೆಯೆಂಬುದಿಲ್ಲ. ಇನ್ನೊಂದು ಕಡೆಯಲ್ಲಿ ಕತ್ತಲೆಯಿದೆ. ಬಲಿದತ್ತ ಮುಂದುವರಿಯುವನು. ಎಷ್ಟು ದೂರ ? ಅದು ಎಷ್ಟೇ ಇರಲಿ, ಬಲಿದತ್ತ ಮುಂದುವರಿಯುತ್ತಲೆ ಹೋಗುವನು. ಅದೃಷ್ಟ ! ಹೂ ! ಎಲ್ಲ ತನ್ನ ಕೈಚಳಕ, ಮೂರ್ಖರು ಮಾತ್ರ ಅದೃಷ್ಟಕ್ಕೆ ಕಾಯುತ್ತಾರೆ - ಆಫೀಸರ್, ಇದು ಪ್ರಾರಂಭ ಅಷ್ಟೆ.

ಇದಾದ ಮೇಲೆ, ಅವನಿಗೆ ತನ್ನ ಭವಿಷ್ಯ ಸ್ಪಷ್ಟವಾಗಿ ಕಾಣಿಸುತ್ತಿದೆ. ಯಾರಂತೆ ಇರುತ್ತಾನೆ ? ಮಹಾಪಾತ್ರ, ಮಹಾಂತಿ, ಸಿಂಹ, ತ್ರಿಪಾಠಿ, ದಾಸ್, ದಂಡಸೇನಾ, ಮಿಶ್ರ, ಭಂಗರಾಜ್, ಜಾನ್ಸನ್, ಮಿಲ್ - ಲೆಕ್ಕವಿಲ್ಲದಷ್ಟು ಜನ ಮತ್ತು ಅವರ ಲೆಕ್ಕಕ್ಕೆ ಸಿಗದಷ್ಟು ಹೆಸರುಗಳು. ಆದರೂ ಕಡಮೆಯೆ. ಹತ್ತು ಸಾವಿರದಲ್ಲಿ ಒಬ್ಬ ಯಾವ ಲೆಕ್ಕ. ಅವರದು ಸ್ವತಂತ್ರವಾದ ಜೀವನ. ಅವರ ಗ್ರೇಡುಗಳೂ ಸ್ವತಂತ್ರ.

ನಮಸ್ಕಾರ ಮಾಡಿಸಿಕೊಂಡು ಮಾಡಿಸಿಕೊಂಡು ಒಂದು ವೇಳೆ ಕಲ್ಲೂ ದೇವರಾಗಿ ಭಕ್ತಿಯನ್ನು ಸ್ವೀಕರಿಸಬಹುದಾದರೆ, ಸಲಾಮು ಹೊಡೆಸಿಕೊಂಡು ಹೊಡಸಿಕೊಂಡು ಮನುಷ್ಯನಲ್ಲಿ ದೃಢತೆಯ ಸಂಚಾರವಾಗುವುದಿಲ್ಲವೆ. ಮುಖದ ಮೇಲೆ ಸಾಮರ್ಥ್ಯದ ಕಳೆ, ಧ್ವನಿಯಲ್ಲಿ ಗತ್ತು, ನಡಿಗೆಯಲ್ಲೂ ದೊಡ್ಡಸ್ತಿಕೆ–ಇವೆಲ್ಲ ನಾನು ಸಾಧಾರಣನಲ್ಲ ಅಂತ ಸಾರಿ ಹೇಳುತ್ತವೆ. ಗಾಳಿಯಲ್ಲಿ ಬರುವ ಅವರ ವಾಸನೆ ಕಂಡುಕೊಂಡೇ ಜನ ದಾರಿ ಬಿಡುತ್ತಾರೆ. ದೂರದಿಂದಲೇ ನೋಡಿ ರಸ್ತೆಯ ಬದಿಯಲ್ಲಿರುವ ಮರದ ಕೆಳಗೆ ಮಾತಾಡಿಕೊಳ್ಳುತ್ತಾರೆ. ಸ್ವಂತ ಬದುಕನ್ನು ಮನಸ್ಸಿಗೆ ಬಂದಂತೆ ಸಾಗಿಸಬಹುದು. ಪ್ರಪಂಚದ ಸಾಧಾರಣ ರೀತಿನೀತಿಗಳಿಗನುಗುಣವಾಗಿ ಇದೆಯೆ ಎಂದು ಅವರ ಬಗ್ಗೆ ಯಾರೂ ನೋಡಲು ಹೋಗುವುದಿಲ್ಲ. ಅವರು ಅಂಥ ಲೆಕ್ಕಾಚಾರಗಳಿಂದ ಹೊರಗುಳಿಯುವವರಲ್ಲವೆ.

ಅದೇ ಗುಂಪಿಗೆ ಈಗ ಸೇರಿದ್ದಾನೆ ಅವನು - ಬಲಿದತ್ತ ದಾಸ್. ಈಗ ಯಾರದೇನು ಮುಲಾಜು ?

ಇಂದು ಮರದ ಕೊಂಬೆಯ ಮೇಲೆ ಹತ್ತಿ ಕೆಳಗಡೆ ಬಗ್ಗಿ ಯಾವ ಅಪಾಯವೂ ಇಲ್ಲದೆ ನೋಡಿ ಮುಗುಳ್ನಗೆ ಬೀರಬಹುದು. ತನ್ನ ತಾಪತ್ರಯದ ಬದುಕನ್ನು ಮೇಲಿನಿಂದ ನೋಡಬಹುದು. ಅದರ ಬಗ್ಗೆ ತಿರಸ್ಕಾರ ಉಂಟಾಗುತ್ತದೆ, ಹೆಚ್ಚಿನ ತಿರಸ್ಕಾರ ಉಂಟಾಗುತ್ತದೆ. ಏಕೆಂದರೆ ಅದು ತನ್ನ ಕಳೆದುಹೋದ ಬದುಕು. ಆ ಗುಂಪಿನ ಜನರ ಬಗ್ಗೆ ಈಗ ಅವನ ಮನಸ್ಸಿನಲ್ಲಿ ಸ್ವಲ್ಪವೂ ಸಹಾನುಭೂತಿಯಿಲ್ಲ. ಈಗ ಅವನು ಅವರನ್ನು ಕುಣಿಸುವನು, ಪಟ್ಟು ಹಿಡಿದು ಕೆಲಸ ತೆಗೆಯುವನು. ಆ ಗುಂಪಿನ ಎಲ್ಲ ಮರ್ಮಗಳೂ ಅವನಿಗೆ ಚೆನ್ನಾಗಿ ಗೊತ್ತು. ಆದರೆ ಅವನೂ ಆ ಶ್ರೇಣಿಯಲ್ಲಿದ್ದವನೆಂದು ಯಾರಿಗೂ ಪತ್ತೆಯಾಗುವುದಿಲ್ಲ. ಹರಿದು ಚಿಂದಿಯಾದ ಹೊದಿಕೆಯ ರೀತಿಯಲ್ಲಿ ಹಳೆಯದು ಹೊರಟುಹೋಯಿತೆಂದರೆ ಹೋಗಲಿ ಬಿಡಿ, ಪೀಡೆ ತೊಲಗಿತು.

ಈಗ ಅವನು ಆಫೀಸರ್.

ಅವನು ಬಲದ ಅವತಾರ, ವಾಯುವಿನದಾಗದಿದ್ದರೆ ಏನಂತೆ, ಸಮರ್ಥನಾಗಿ ಕೆಲಸ ಮಾಡುವವನ ಅವತಾರವಂತೂ ಸರಿಯೆ. ದುಡಿಮೆಯ ಕುದುರೆ, ಟ್ರ್ಯಾಕ್‌ನಲ್ಲಿ ನಿಸ್ಸೀಮ, ಬುದ್ಧಿಯಲ್ಲಿ ಗಣಪತಿ, ಶ್ರೇಣಿಯಲ್ಲಿ ಅತಿಮಾನವ, ನಾಚಿಕೆಯಿಲ್ಲ, ಸಂಕೋಚವಿಲ್ಲ, ಮಾಯೆ ಮಮತೆಗಳಿಲ್ಲ. ಕಠೋರವಾದ ಹೊಣೆಗಾರಿಕೆಗಳನ್ನು ಹೊರಬೇಕಾದ ಅವನ ಶಕ್ತಿ ಕಲ್ಲಿನಂತಾಗಿದೆ. ನೇರವಾಗಿ ತನ್ನ ದಾರಿಯಲ್ಲಿ ಸಾಗುತ್ತಾ ಅವನು ಮುಂದುವರಿಯುವನು, ನಿಂದತು ನೀತಿ ನಿಪುಣಾಃ.

ಜನ ಅವನ ಹಿಂದೆ ಹೋಗುವರು. ಅವನ ಮುಂದೆ ತಲೆಬಾಗುವರು. ಅವನಿಗಾಗಿ ನಿಂತು ದಾರಿ ಕಾಯುವರು. ಭೇಟಿ ಕೊಡುವ ಉದ್ದೇಶದಿಂದ ತಮ್ಮ ಹೆಸರಿನ ಚೀಟಿ ಬರೆದು ಕಳಿಸುವರು. ಹೊರಗಡೆ ಧೂಳು ಕುಡಿಯುತ್ತಾ ಅಲೆಯುವರು. ಭೇಟಿಗಾಗಿ ಅವನು ಪ್ರತಿಯೊಬ್ಬರಿಗೂ ಒಂದೊಂದೇ ನಿಮಿಷವನ್ನು ಕೊಡುವುದು. ಕ್ಷಣಕ್ಷಣಕ್ಕೂ ಗಡಿಯಾರ ನೋಡುತ್ತಾ ಕೇಳುವನು, "ಇನ್ನೇನಾದರೂ ವಿಷಯ ?"

ಅವನ ಮನಸ್ಸು ಉಬ್ಬಿಹೋಗುತ್ತದೆ. ಅವನು ಒಬ್ಬಂಟಿಗ, ಜೊತೆಗಾರರು ಸ್ನೇಹಿತರೂ ಯಾರೂ ಇಲ್ಲ.

ಒಂದು ಸಿಗರೇಟನ್ನಾದರೂ ಕುಡಿಯೋಣ ಅಂತ ಮನಸ್ಸಾಯಿತು. ಬೀಡಾ ಅಂಗಡಿಯ ಬಳಿ ಸಾಗುತ್ತಾನೆ, "ಏಯ್, ಒಂದು ಕ್ಯಾಪ್ಸ್ಟನ್". ಪಾನ್‌ವಾಲಾ ಬೀಡಾ ಕಟ್ಟುತ್ತಿದ್ದಾನೆ. ಯಾವನೋ ಒಬ್ಬ ಹೊಸ ಆಟಗಾರ - ಫರೀದ್ ಮಿಯಾಂ, ಅವನ ಆಟದ ಬಗೆಗೆ ಗಿರಾಕಿಗಳ ಹತ್ತಿರ ಚರ್ಚೆ ನಡೆಸುತ್ತಿದ್ದಾನೆ. ಬೀಡಾ ಕಟ್ಟುವುದರಲ್ಲಿ ಸ್ವಲ್ಪ ಹೊತ್ತಾಗುತ್ತದೆ.

"ಏಯ್, ಒಂದು ಕ್ಯಾಪ್ಸ್ಟನ್-"

ನಾಲ್ಕು ಬಾರಿ ಜೋರಾಗಿ ಕೇಳಿದಾಗ ಪಾನ್‌ವಾಲಾ 'ಸ್ವಲ್ಪ ಕೊಟ್ಟೆ' ಅಂತ ಹೇಳಿ ಮತ್ತೆ ಗಿರಾಕಿಗಳನ್ನು ಮತ್ತೆ ಕೇಳಿದ - "ಸ್ವಾಮೀ, ನಿಮ್ಮದ್ದೇನು ? ನಿಮಗೆ ಕಾಚು ಹಾಕಿದ ಸಿಹಿಬೀಡಾನೋ ಅಥವಾ ದೇಪಿ ಜರ್ದಾ ಬೀಡಾನೋ ಹೇಳಿ ?" ಅನಂತರ ಮತ್ತೆ ಫರೀದ್ ಮಿಯಾನ ವಿಚಾರ. ನೇತಾಡುತ್ತಿರುವ ಹಗ್ಗಕ್ಕೆ ಹಚ್ಚಿರುವ ಬೆಂಕಿಯಿಂದ ಯಾರೋ ಬೀಡಿ ಹಚ್ಚಿಕೊಳ್ಳುತ್ತಿದ್ದ. ತಲೆಗೆ ಕರ್ಚೀಫು ಕಟ್ಟಿದ್ದ. ಮೂಳೆಗಳೆದ್ದಿರುವ ಮುಖದ ಮೇಲೆ ಕುರುಚಲು ಗಡ್ಡ, ಹರಿದ ಕೊಳಕಲು ಪೈಜಾಮದ ಮೇಲೆ ತೋಳಿಲ್ಲದ ಅಂಗಿ, ಸೊಂಟದಲ್ಲಿ ಲಾಡಿ ಕಟ್ಟಿದ್ದ ಆ ಮನುಷ್ಯ ಮಾತಿಗೆ ಇನ್ನಷ್ಟು ತುಪ್ಪ ಸುರಿಯುತ್ತಾನೆ - "ಬಿಡಿ ಸ್ವಾಮಿ, ಫರೀದ್ ಮಿಯಾಗಿಂತ ಅವನ ಚಿಕ್ಕಪ್ಪ ಸಮದ್‌ಮಿಯಾಂ ಇನ್ನೂ ಚೆನ್ನಾಗಿ ಆಡುತ್ತಿದ್ದ. ಏಟುಬಿದ್ದು ಮಂಡಿಮುರಿದುಹೋಯಿತು, ಇಲ್ಲದಿದ್ದರೆ - "ಬೀಡಿಯೂ ಸಹಜವಾಗಿ ಉರಿಯ ಬಯಸುತ್ತಿರಲಿಲ್ಲ. ಅದರ ಮೇಲೆ ಬಾಯಲ್ಲಿ ಫರೀದ್ ಮಿಯಾಂ. ಬಲಿದತ್ತನ "ಏಯ್ ಕ್ಯಾಪ್ಸ್ಟನ್ ಕೊಡು" ಎಂಬ ಮಾತನ್ನು ತನ್ನಲ್ಲೆ ಮುಳುಗಿಸಿಕೊಂಡು ಫರೀದ್ ಮಿಯಾನ ವಿಚಾರ ಅಂಗಡಿಯವನ ಬಾಯಲ್ಲಿ ಉಬ್ಬರದಂತೆ ಏರುತ್ತಲೆ ಹೋಗಿದೆ. ಕಂಡರಿಯದ ಆಟಗಾರ ಫರೀದ್ ಮೀಯಾಂ ಪಾನ್‌ವಾಲಾನ ದೃಷ್ಟಿಯಲ್ಲಿ ಒಂದು ಅಚ್ಚಳಿಯದ ಆದರ್ಶವಾಗಿದ್ದಾನೆ. ಮಿಯಾನಿಗಾಗಿ ಅವನು ಏನು

ಬೇಕಾದರೂ ಮಾಡಲು ಸಿದ್ಧ. ಎಂಥ ಸೆಣಸಾಟ ನಡೆಯುತ್ತದೆಂದರೆ ಆಟದ ಮೈದಾನದಲ್ಲಿ ನೋಡುತ್ತಿರುವಂತೆಯೆ ತಮ್ಮತಮ್ಮಲ್ಲೇ ಬಡಿದಾಡಿ ರಕ್ತ ಬರಿಸಿಕೊಳ್ಳುವರು.

ಅವನು ಯಾರಿಗಾದರೂ ಹೆದರುತ್ತಾನೆಯೆ ? ಫರೀದ್ ಮಿಯಾಂ ಚೆನ್ನಾಗಿ ಆಡುತ್ತಾನೆ. ಆದ್ದರಿಂದ ಅವನ ಪರವಾಗಿ ಹತ್ತುಮಾತುಗಳನ್ನಾದರೂ ಆಡುವನು. ಎಷ್ಟಾದರೂ ಅದು ಒಂದು ರೀತಿಯದರದಲ್ಲವೆ.

"ಏನಯ್ಯಾ, ಸಿಗರೇಟು ಕೊಡೋದಿಲ್ಲವೆ ?" ಕಡೆಯಲ್ಲಿ ಸಿಡಿಮಿಡಿಕೊಂಡು ಬಲಿದತ್ತ ಕೇಳಿದ. ಆದರೆ ಅವನ ದೊಡ್ಡಸ್ತಿಕೆಗೆ ಇಲ್ಲಿ ಯಾವ ಕಿಮ್ಮತ್ತೂ ಇಲ್ಲ, ಇಲ್ಲಿ ಫರೀದನಿಗೇ ಬೆಲೆ. ಪಾನ್‌ವಾಲಾ ಅಯ್ಯೋ ಪಾಪ ಅನ್ನುವಂತೆ ನೋಡಿದ, ಮನುಷ್ಯ ತುಂಬ ಹೊತ್ತಿನಿಂದ ನಿಂತಿದ್ದಾನೆ, ಸಿಗರೇಟು ಮುಂದೊಡ್ಡುತ್ತಾ ಹೇಳಿದ, "ನೀವಾದರೂ ಹೇಳಿ ಸ್ವಾಮಿ. ಇವತ್ತು ಆಟ ನೋಡಲು ಹೋಗಿದ್ದೀರಾ ? ಯಾರು ಚೆನ್ನಾಗಿ ಆಟವಾಡುತ್ತಿದ್ದರು ಅಂತ ನಿಮಗೆ ಅನಿಸಿತು. ನೀವೇ ಸ್ವಲ್ಪ ಹೇಳಿ."

"ನಾನು ಹೋಗಿರಲಿಲ್ಲ."

"ಓಹೋ" ಕೆಲಸಕ್ಕೆ ಬಾರದ ಮನುಷ್ಯ. ಯಾರೋ ಮಾಮೂಲಿ ಗಿರಾಕಿ ಅಲ್ಲವೆ. ಅಂಗಡಿಯವನು ಬೇರೆಯವರನ್ನು ವಿಚಾರಿಸುವುದರಲ್ಲಿ ತೊಡಗಿದ. ಬಲಿದತ್ತ ಕೇಳಿದ, "ಮ್ಯಾಚಸ್ ಕೊಡು, ಸ್ವಲ್ಪ ಸಿಗರೇಟು ಹತ್ತಿಸಿಕೊಡ್ತೀನಿ"

"ಅಲ್ಲಿ ನೋಡಿ ಹಗ್ಗದಲ್ಲಿ ಬೆಂಕಿಯಿದೆ."

"ಬೆಂಕಿಕಡ್ಡಿ ಇಲ್ಲವೆ ?"

"ಬೇಕಾದಷ್ಟಿದೆ, ಕೊಂಡುಕೊಳ್ತೀರಾ ? ಇದೋ ತೊಗೊಳ್ಳಿ."

"ಬೇಡ ಬಿಡು."

ಸಿಗರೇಟು ಕೊಂಡು ತನ್ನ ಮರ್ಯಾದೆಯ ಒಂದು ದೊಡ್ಡ ಭಾಗವನ್ನೇ ಮಾರಿದಂತಾಯಿತು ಅವನಿಗೆ. ಇನ್ನೊಂದು ಸ್ವಲ್ಪ ಉಳಿದಿತ್ತು. ಅದೂ ಹೊರಟು ಹೋಗಲಿ. ಹಗ್ಗದ ತುದಿಯಲ್ಲಿ ಬೆಂಕಿಕಡ್ಡಿ ಇರುವುದೇನೂ ನಿಜ, ಆದರೆ ಹಗ್ಗದ ತುದಿಯವರೆಗೂ ಸಿಗರೇಟು ಹೋಗುವುದಿಲ್ಲ. ಹಗ್ಗ ಅಲ್ಲಾಡುತ್ತಿದೆ. ಸರಿಯಾಗಿ ಹಿಡಿಯಲಾಗುತ್ತಿಲ್ಲ. ಹಾಗೇ ಎಳೆದು ಬೆಂಕಿ ತಗಲಿಸುತ್ತಿರುವಂತೆಯೇ ಮನದಲ್ಲಿ ಕೋಲಾಹಲ - "ಅರೆ ಹತ್ತಿಕೊಂಡಿತು."

ಸಮತೆಯ ದೇಗುಲದಂತಿರುವ ಈ ಊರಿನ ಈ ಪಾನ್‌ವಾಲಾನ ಅಂಗಡಿ ಅವನ ಸಾಮಂತವಾದಿ ಮನೋಧರ್ಮಕ್ಕೆ ಬಗ್ಗುವುದಿಲ್ಲ.

ಏಟು ತಿಂದವನಂತಾಗಿ ಮತ್ತೆ ಹೊರಟಿದ್ದಾನೆ. ಮತ್ತೆ ಅದೇ ಚಿಂತೆ, ತನ್ನನ್ನು ಯಾರು ಅರ್ಥ ಮಾಡಿಕೊಳ್ಳಲಿಲ್ಲವಲ್ಲ ಅಂತ. ಯಾರೂ ಅವನಿಗೆ ತಕ್ಕ ಮರ್ಯಾದೆ ಕೊಡಲಿಲ್ಲ. ಹೆಂಡತಿಯೂ ಕೊಡಲಿಲ್ಲ. ಜನಸಾಮಾನ್ಯರೂ ಕೊಡಲಿಲ್ಲ. ಇವರೆಲ್ಲ ಹಳ್ಳಿಮುಕ್ಕರೇ ಸರಿ. ಈ ದೇಶದಲ್ಲಿ ವೀರಪೂಜೆಗೆ ಬರಬಂದಿದೆ, ಗತಿಗೆಟ್ಟ ದೇಶ ! ದುರಾದೃಷ್ಟ - ಯಾರು ಯಾರ ಒಳಿತು ಕೆಡುಕುಗಳಿಗಾಗಿ ಕಾಯುತ್ತಾ ಕುಳಿತಿದ್ದಾರೆ ? ಮುಂದೆ ಬರಲೇಬೇಕು. ಅವನು ಸ್ಟೀಮ್ ರೋಲರ್, ಅವನು ಆಫೀಸರ್, ಜನ ತಾವಾಗಿಯೇ ತಿಳಿದುಕೊಳ್ಳುವರು. ತಮಗೆ ತಾವೇ ಹತ್ತಿರ ಬಂದು ಮಸ್ಕಾ

ಹೊಡೆಯುವರು. ಆಗ ? ಸರಿ, ಆಗ ನೋಡೋಣ.

ಉತ್ಸಾಹ ಇಮ್ಮಡಿಸುತ್ತಿದೆ. ಹೊಚ್ಚ ಹೊಸದಾಗಿ ತಯಾರಾದ ಆಫೀಸರ್ ಹೋಗುತ್ತಿದ್ದಾನೆ. ಈ ರೀತಿ ರಸ್ತೆಯಲ್ಲಿ ಎದೆಯುಬ್ಬಿಸಿಕೊಂಡು ಹೋಗುತ್ತಿರುವುದ ರಿಂದ ಉತ್ಸಾಹವೇ ಮೂರ್ತಿವೆತ್ತಿಬಂದಂತೆ ಕಾಣುತ್ತಿದ್ದಾನೆ. ಅನಂತರ ಅವರು ಕತ್ತಲೆಯಲ್ಲಿ ಜೊತೆಗೂಡುತ್ತಾರೆ. ಈವರೆಗೆ ಎಷ್ಟು ಮಂದಿ ರಾಜರು, ಎಷ್ಟು ಮಂದಿ ಶಾಸಕರು, ಎಷ್ಟು ಮಂದಿ ಅಧಿಪತಿಗಳು, ಭಾರಿಭಾರಿ ಅಮಾತ್ಯರು, ಮುದಿಮಂತ್ರಿಗಳು, ಮಹಾಪಾತ್ರರು ಆಗಿಹೋಗಿದ್ದಾರೆ. ಅವರು ಸಹ ಹೊಸ ಹುರುಪು ಮೂರ್ತಿವೆತ್ತಂತೆ ದಾರಿಯಲ್ಲಿ ಓಡಾಡುತ್ತಿದ್ದಿರಬೇಕಲ್ಲವೆ. ಮಣ್ಣಿನ ಮೇಲೆ ಮೊಹರನ್ನೊತ್ತುತ್ತಾ ಹೋಗಬೇಕೆಂದು ಯೋಚಿಸುತ್ತಿದ್ದಿರಬಹುದಲ್ಲವೆ. ಮುಷ್ಟಿ ಬಿಗಿಹಿಡಿದಿದ್ದಿರಬಹುದು. ಕಾಲಿನಿಂದ ತುಳಿಯುತ್ತಾ ಹೋಗಿದ್ದಿರಬಹುದು. ಸಮಯದ ಪರಿವಿನಲ್ಲಿ ಅವನೊಂದು ಯಂತ್ರ, ಸೋಲೊಪ್ಪಿದರೆ ಮಣ್ಣಾಗುತ್ತಾನೆ, ಮಣ್ಣಿನಲ್ಲಾದರೋ ಉತ್ಸಾಹವೂ ಇಲ್ಲ, ತೇಜಸ್ಸೂ ಇಲ್ಲ. ಆದರೆ ಬಲಿದತ್ತ ಏನಾದರೂ ವಿಶೇಷವಾಗಿರುವುದನ್ನು ಹುಡುಕುತ್ತಿದ್ದಾನೆ. ಅವನ ನೋಟ ಮೇಲೆ ಆಕಾಶದ ಕಡೆಗಿಲ್ಲ, ನೆಲದ ಕಡೆಗೂ ಇಲ್ಲ. ಮನಸ್ಸಿನ ಆಳದಲ್ಲಿ ಸ್ಟೀಮ್ ರೋಲರಿನ ಭಾವನೆಯನ್ನು ತಳೆದು ವೇಗವಾಗಿ ಮುಂದೆ ಹೋಗುತ್ತಿದ್ದಾನೆ.

ಯಾರೋ ಬಾಯಿಂದ ಊದಿದ ಸೋಪಿನ ನೊರೆಯಿಂದಾದ ಗುಳ್ಳೆಯಂತೆ ಅವನ ಸಣ್ಣದಾಗಿರುವ 'ನಾನು' ಕತ್ತಲೆಯಲ್ಲಿ ಪ್ರತಿಷ್ಠೆಯನ್ನು ಆರಸುತ್ತಾ ಹೊರಟಿದೆ, ಉಬ್ಬಿದೆ, ಒಡೆದಿಲ್ಲ.

ಅವನು ಹೋಗುತ್ತಿದ್ದಾನೆ.

ಮನಸ್ಸಿನಾಳದಲ್ಲಿ ತನ್ನ ಶಕ್ತಿ ಹೆಚ್ಚಾಗಿದೆಯೆಂಬ ಭರವಸೆ ಮೂಡಿದಾಗ ಮನುಷ್ಯ ತನ್ನ ಆ ಶಕ್ತಿಯನ್ನು ಅನೇಕ ರೀತಿಯಲ್ಲಿ ಕೆದಕಿನೋಡಿ ಪರೀಕ್ಷಿಸುತ್ತಾನೆ. ಯಾರು ಅವನನ್ನು ತಾಕತ್ತಿಲ್ಲದವನು, ಕೆಲಸಕ್ಕೆ ಬಾರದವನು, ಅವನಿಂದ ಏನೂ ಅಪಾಯ ವಿಲ್ಲ ಅಂದುಕೊಂಡಿರುತ್ತಾರೊ ಅವರ ಮೇಲೆ ಪರೀಕ್ಷಿಸಿ ನೋಡುತ್ತಾನೆ. ಚಿಕ್ಕ ಮಗು ಸ್ವಲ್ಪ ಸ್ವಲ್ಪವಾಗಿ ಪ್ರಾಣಿಗಳ ಬೆನ್ನು ತಟ್ಟಿ ನೋಡುತ್ತದೆ, ಪೆನ್ಸಿಲನ್ನು ಮತ್ತು ಸೀರೆಯನ್ನು ಹಲ್ಲಿನಿಂದ ಕಚ್ಚಿ ಹಲ್ಲಿನ ಬಲವನ್ನೇ ಪರೀಕ್ಷಿಸಿನೋಡುತ್ತದೆ. ದಪ್ಪ ಹೋರಿ ದೊಡ್ಡ ಮರವನ್ನು ಕೊಂಬಿನಿಂದ ತಿವಿದುನೋಡುತ್ತದೆ. ಅರ್ಧ ಮುರಿದಿರುವ ಬಾಗಿಲಿಗೆ ಬೆನ್ನೊಡ್ಡಿ ತಿಕ್ಕುತ್ತದೆ. ಫ್ಯಾಸಿಸ್ಟ್ ರಾಷ್ಟ್ರ ನೆರೆಯ ಸಣ್ಣ ರಾಷ್ಟ್ರದ ಮೇಲೆ ಆಕ್ರಮಣ ನಡೆಸುತ್ತದೆ.

ಪರೀಕ್ಷಿಸಿ ನೋಡುವ ಈ ಬಾರಿ ಅಮಲು ಬಲಿದತ್ತ ದಾಸನನ್ನು ಅವನ ಹಿಂದಿನ ಸಹೋದ್ಯೋಗಿ ಬನುವಿನ ಮನೆಯ ಬಾಗಿಲಿಗೆ ಎಳೆದೊಯ್ಯುತ್ತದೆ. ಏಕೆಂದರೆ ಹೊಟ್ಟೆಪಾಡಿನ ಹೋರಾಟದಲ್ಲಿ ಬನು ತುಂಬ ಹಿಂದೆ ಬಿದ್ದಿದ್ದಾನೆಂದು ಬಲದತ್ತನಿಗೆ ಗೊತ್ತು. ಬನು ಸೋತಿದ್ದಾನೆ. ಅವನಾದರೋ ತಾನೇ ಸ್ವತ ಗೆದ್ದಿದ್ದಾನೆ. ಅಲ್ಲೇ ಅವನು ಇಂದಿನಿಂದ ತಾನೊಬ್ಬ ಆಫೀಸರ್ ಅಂತ ಹೇಳುವನು, ಸ್ವಲ್ಪ ಮುಗುಳ್ನಗೆ ನಕ್ಕು, ಯಾವಾಗಲೂ ತೆರವಾಗಿರುವ ಆರಾಮಕುರ್ಚಿ ಎಳೆದು ಕುಳಿತುಕೊಂಡು ಮಾತನಾಡುತ್ತಾ ಕೇಳುವನು, "ಏನಯ್ಯಾ ಬನು, ಖುಷಿಯಾಗಿರುವಂತೀದ್ದೀಯಲ್ಲಾ,

ಎಲ್ಲಾ ಟೀಕುಟಾಕಾಗಿ ನಡೆಯುತ್ತಿದೆಯಾ?" ಸಾಧ್ಯವಾದರೆ ಬನುವಿಗೆ ಎರಡು ತಿಳಿವಳಿಕೆ ಮಾತುಗಳನ್ನು ಹೇಳುವನು. ಅವನಿಗೆ ಉಪದೇಶ ನೀಡುವುದು ತುಂಬ ಇಷ್ಟ, ಕೇಳುವವರು ಒಪ್ಪುವುದಿದ್ದರೆ, ಅದೇ ಅವನ ದಿನನಿತ್ಯದ ಸಮಾಜಸೇವೆ, ಯಾವ ಪರೋಪಕಾರ ಮಾಡದ ಸಮಾಜಕ್ಕೆ ಅವನು ನೀಡುವ ಅಮೂಲ್ಯವಾದ ದಾನ ಅದು. ಸ್ವರ್ಗ ಗಿಟ್ಟಿಸೋದಕ್ಕೆ ಪರೋಪಕಾರ. ಅವನು ಬುದ್ಧಿಯನ್ನು ಹಂಚುತ್ತಾನೆ.

ಆದ್ದರಿಂದ ಅವನು ಬಹುಶಃ ಹೀಗೆ ಹೇಳುವನು - "ಈ ರೀತಿಯ ಜಗಳಗಂಟಿ ಬುದ್ಧಿ ಬಿಟ್ಟುಬಿಡು ಬನು, ಎಲ್ಲಿ ಮಳೆ ಬೀಳುತ್ತೊ ಅಲ್ಲಿ ಛತ್ರಿ ಹಿಡೀಬೇಕು. ಇಲ್ಲದಿದ್ದರೆ ಹೀಗೇ ಎಷ್ಟು ದಿನ ತಳ್ಳೋದಕ್ಕೆ ಸಾಧ್ಯ?" ಅಣ್ಣ ಅನ್ನುವ ಪದವನ್ನೂ ಸೇರಿಸಬೇಕು, ಸಹಾನುಭೂತಿ ವ್ಯಕ್ತಪಡಿಸುವಂತಹ ಸಮಯದಲ್ಲಿ ಈ ಪದದ ಉಚ್ಚಾರಕ್ಕೆ ಗಂಟಲ ಮೇಲ್ಭಾಗದಿಂದ ಆವಿಯಂತೆಯೆ ಹೊರಡುತ್ತದೆ. ಎಲ್ಲವನ್ನೂ ಶುದ್ಧೀಕರಿಸಿ ಮೆತ್ತಗೆ ಮಾಡಿಬಿಡುತ್ತದೆ. ಗ್ಲಿಸಿರಿನ್ ಎನಿಮಾದಂತೆ, "ನೋಡಣ್ಣಾ, ನೀನು ಸ್ವಲ್ಪ ಮೆತ್ತಗಾಗಬೇಕು, ನಿನಗೆ ಬೇಕಾದಷ್ಟು ಬುದ್ಧಿಯಿದೆ, ವಿದ್ಯೆಯಿದೆ; ಎಲ್ಲ ಇದೆ, ಆದರೆ ಎಲ್ಲಿ ಯಾವುದನ್ನು ಹೇಗೆ ಸೇರಿಸಬೇಕು ಅಂತ ಗೊತ್ತಿಲ್ಲ. ಎಲ್ಲಾ ಸರಿಯಾಗಿ ಸೇರಿಸಿನೋಡು, ಒಂದೆರಡು ತಿಂಗಳಾದ ಮೇಲೆ ಮತ್ತೆ ನೀನೇ ಹೇಳುವಿಯಂತೆ."

ಹಾಗೆಯೆ, ಪುಸ್ತಕಗಳ ಮೂಲಕ ಅವನು ಬನುವಿನ ಮನಸ್ಸಿನ ಮೇಲೆ ಪ್ರಭಾವ ಬೀರಲು ಬಯಸುತ್ತಾನೆ. ಏಕೆಂದರೆ ಬನು ಪುಸ್ತಕ ಓದುತ್ತಾನೆ, ಪುಸ್ತಕದ ಮೂಲಕ ಪ್ರಪಂಚಕ್ಕೆ ಹಾದಿ ಹುಡುಕಲು ಹೊರಟಿದ್ದಾನೆ ಈ ಮೂರ್ಖ. ಆದರೆ ಪುಸ್ತಕಗಳಲ್ಲೇನಿದೆ ಮಣ್ಣು, ಯಶಸ್ಸನ್ನು ಕುರಿತೇ ರಾಶಿರಾಶಿ ಪುಸ್ತಕಗಳು ಬಂದಿವೆಯಲ್ಲ.

"ಪುಸ್ತಕ ಓದುತ್ತೀಯಲ್ಲ ಬನು, ಅದೂ ಸರಿಯೆ. ಸರಿಯಾದ ಪುಸ್ತಕಗಳೆಂದರೆ ಹೌಟು ವಿನ್ ಫ್ರೆಂಡ್ಸ್, ಮೇಲಿನವರನ್ನು ವಶಮಾಡಿಕೊಳ್ಳುವ ವಿದ್ಯೆ. ಅದೂ ಬೇಡ ಅಂದರೆ ಬೇಟನ್ ಓಕಿಮಾರಾ ಪುಸ್ತಕ - ಸಕ್ಸೆಸ್. ಒಂದು ವಿಚಾರವೆಂದರೆ, ಅದನ್ನೇ ತಿರುಗಿಸಿ ನೋಡು, ಮೊದಲು. ವಾಸ್ತವವಾಗಿ ಪ್ರಪಂಚದಲ್ಲಿ ಪ್ರತಿಯೊಬ್ಬರೂ ತಮ್ಮ 'ನಾನು' ಎಂಬುದನ್ನು ಮುಂದಿಟ್ಟುಕೊಂಡು ತಮ್ಮ ಅಭಿಪ್ರಾಯವೇ ಸರಿಯೆಂದು ಯೋಚಿಸುತ್ತಾರೆ. ಅದು ತಪ್ಪು ಅಂತ ಹೇಳಿ ಎದುರಿಸಿ ವಾದ ಮಾಡಿದರೆ ತಮಗೆ ಅವಮಾನವಾಯಿತು ಅಂದುಕೊಳ್ಳುತ್ತಾರೆ. ತಮ್ಮ ಮಾತನ್ನೇ ಇನ್ನೂ ಬಲವಾಗಿ ಪ್ರತಿಪಾದಿಸುತ್ತಾರೆ. ಹಾಗಾದರೆ ಏನು ಮಾಡಬೇಕು? ಒಂದೇ ಒಂದು ಉಪಾಯವೆಂದರೆ ಪ್ರಾರಂಭದಲ್ಲೇ ಅವರ ಮಾತಿಗೆ ಹೂಂಗುಟ್ಟುತ್ತಾ ಹೋಗು. ಸರಿ, ಸರಿ ತಾವು ಹೇಳುತ್ತಿರೋದು ಸರಿಯಾಗೇ ಇದೆ. ಅದಕ್ಕಿಂತಲೂ ಚೆನ್ನಾಗಿ ಯಾರಿಗ ಹೇಳೋಕಾಗುತ್ತೆ? ಆದರೆ ಅದೇ ಮಾತನ್ನು ಹೀಗೆ ಹೇಳಿದರೆ ಹೇಗಿರುತ್ತೆ? ಅದೂ ತಮ್ಮಿಷ್ಟ. ಈ ರೀತಿ ಮಾಡಿದ ಮೇಲೆ 'ತಾವು' ಹೇಳುತ್ತಿರಿ, ಸರಿ 'ಹೀಗೆ... ಹೀಗೆ' ಆಗ ನೋಡಿ ಹೇಗಿರುತ್ತೆ ಅಂತ.

ಅಂದರೆ ಮಾತುಮಾತಿಗೂ "ತಾವು... ತಾವು ಮಾಡುತ್ತಿದ್ದೀರಿ..... ತಾವು

ಯೋಚಿಸುತ್ತಿದ್ದೀರಿ, 'ನಾನು' ಅಲ್ಲ ಅನ್ನುತ್ತಿರಬೇಕು. ಇಲ್ಲಿ 'ನಾನು' ಎಂಬುದಕ್ಕೆ ಸ್ವಲ್ಪವೂ ಜಾಗವಿಲ್ಲ. 'ತಾವೇ' ಸ್ವತಃ ತಮ್ಮ ಅಭಿಪ್ರಾಯವನ್ನು 'ತಮ್ಮದೇ ಆದ ಅಭಿಪ್ರಾಯ' ಅಂದುಕೊಂಡು ಪಟ್ಟಾಗಿ ಜಾರಿಮಾಡಿ. ಇನ್ನು 'ನನ್ನ ವಿಚಾರ', ಅದನ್ನು 'ತಾವು' ನೋಡಿಕೊಳ್ಳುತ್ತೀರಿ. 'ನನ್ನ' ಮಾತು ಹಾಗೆಯೆ ಉಳಿಯುತ್ತದೆ. 'ತಾವು' ತಮ್ಮ ಮಾತಿಗೆ ಖುದ್ದಾಗಿ ಎದುರಾಡುತ್ತೀರಿ. ಹೌದಲ್ಲ, ಇದೂ ಸರಿಯಾಗಿಯೆ ಇದೆಯಲ್ಲ. ನಾನು ಹಾಗೇಕೆ ಯೋಚಿಸುತ್ತಿದ್ದೆ ?" ಆಗಲೇ ಯೋಚಿಸಿ ಬಿಸಿಯನ್ನು ಆಗದವರ ಮೇಲೆ ಕಾರುತ್ತಾರೆ. ಏಕೆಂದರೆ ಅವನು ತಪ್ಪಾಗಿ ಹೇಳಿದ್ದ. ಅದರಿಂದ ತಮಗೆ ದಾರಿ ತಪ್ಪಿತು. ಆಮೇಲೆ ಮೂರ್ಖರಾದ 'ತಾವು' ತಮ್ಮ ಮೊದಲ ಅಭಿಪ್ರಾಯದ ಹೊಣೆಗಾರಿಕೆಯನ್ನು ಆಗದ ಎದುರಾಳಿಯ ತಲೆಗೆ ಕಟ್ಟುತ್ತೀರಿ. ಕಡೆಗೆ ನನ್ನ ನಡೆಯೋದು, ಜೊತೆಗೆ ಒಬ್ಬ ಎದುರಾಳಿಯ ರೆಕ್ಕೆ ಪುಕ್ಕ ಮುರಿದಂತಾಗುತ್ತದೆ. ನೋಡು ಹೇಗಿದೆ, ಏನನಿಸುತ್ತೆ, "ನೋಡು ಬನು, ಮೇಲೇರುವವರೆಲ್ಲರೂ ಈ ಹಗ್ಗವನ್ನೇ ಹಿಡಿಯೋದು. ನೀನೇಕೆ ಹಿಡಿಯಬಾರದು ?"

ಬನುವಿನ ಗಂಭೀರವಾದ ಮುಖ. ಸುಮ್ಮನೆ ಬೀಡಿ ಉರಿಯುತ್ತಿದೆ ಅಂತ ಕಲ್ಪಿಸಿಕೊಳ್ಳುತ್ತಾನೆ. ಅಯ್ಯೋ ಬಡಪಾಯಿ ಬನು!

ಇವತ್ತು ಬಲಿದತ್ತ ಸಹಾನುಭೂತಿಯ ಹೊಳೆಯನ್ನೇ ಹರಿಸುತ್ತಾನೆ, ಏಕೆಂದರೆ ಅವನಿಗೆ ಪ್ರಮೋಷನ್ ಸಿಕ್ಕಿದೆ. ಸಹೃದಯ ವ್ಯಕ್ತಿತ್ವದ ನೆರಳಿನಲ್ಲಿ ಅವನ ಸಣ್ಣ ಗಡಿಗೆ ತುಂಬಿದೆ.... ಪೂರ್ತಿ ತುಂಬಿ ಹೋಗಿದೆ. ಸಹಾನುಭೂತಿ ವ್ಯಕ್ತಪಡಿಸುವುದರಲ್ಲಿ ಬೇಕಾದವರ ಆರ್ಥಿಕ ದುರವಸ್ಥೆಯ ಬಗ್ಗೆ ಒಂದೆರಡು ಹನಿ ಕಣ್ಣೀರನ್ನು ಸುರಿಸಬಹುದು. ಆಮೇಲೆ ಇಮ್ಮಡಿ ಉತ್ಸಾಹದಿಂದ ಅಲ್ಲಿ ಜಪಾನಿನ ವೈರೇನ್ ಓಕಿಮಾರಾ ಮತ್ತು ಅಮೆರಿಕನ್ ಕಾರ್ನೆಗಿ ಇಳಿಯುತ್ತಾರೆ. ಬಲಿದತ್ತ ಬೊಗಳೆ ಹೊಡೆಯುತ್ತಲೆ ಹೊರಟಿದ್ದಾನೆ. ಬನುವಿನ ಚಹ ಬಿಸಿಯಾಗಿದೆ, ಬನುವಿನ ಬೀಡಿ ತೀಕ್ಷ್ಣವಾಗಿದೆ. ಬಹುಶಃ ಅವನು ಸಿಗರೇಟು ಎಳೆದು ಮುಂದಿಡಬಹುದು, ಟಿನ್ ತುಂಬಿದೆ.

ಅವನು ಹೇಳುತ್ತಲೆ ಹೋಗುತ್ತಾನೆ.

ಈಗಿನ್ನು ಸಾಯಂಕಾಲ.

ಇದೇ - ಬನುವಿನ ಮನೆ. ಎಲ್ಲಾ ಪರಿಚಯವಿರುವುದೇ, ಪರಿಚಯವಿರುವ ಸುವಾಸನೆ, ಅದರ ಅನುಭವವಾಗುತ್ತಲೆ ಹಳೆಯ ನೆನಪೆಲ್ಲ ಹಸುರಾಗಿ ಮರುಕಳಿಸುತ್ತದೆ. ತೆರೆದ ಬಾಗಿಲಿನ ಮೇಲೆ ಜಾಜಿಯ ದಪ್ಪನೆಯ ಬಳ್ಳಿ, ಬೆಳಕಿನಲ್ಲಿ ಜಗಮಗಿಸುತ್ತಿರುವ ಸಣ್ಣ ಕೋಣೆ ಕತ್ತಲು ತುಂಬಿದ ರಸ್ತೆಯ ಮೇಲೆ ಕಿರಣಗಳನ್ನು ಸೂಸುತ್ತಿದೆ. ಇನ್ನೊಂದು ಕಡೆ ದೊಡ್ಡದಾದ ಮನೆ, ರಸ್ತೆ ಆಗಂತುಕರ ಪಾಲಿಗೆ ವಾಹನಗಳನ್ನು ನಿಲ್ಲಿಸುವ ಗ್ಯಾರೇಜ್ ಆಗಿಬಿಟ್ಟಿದೆ. ವಾಹನಗಳ ಮಧ್ಯೆ ತೂರಿಕೊಂಡು ಹೋಗಬೇಕಾಗುತ್ತದೆ.

ಬನುವಿನ ಮನೆಯಲ್ಲಿ ಕಾಲಿಡುತ್ತಿದ್ದಂತೆಯ ಕರ್ಕಶವಾಗಿ ಬೌಬೌ ಅನ್ನುತ್ತಾ

ಕರಿನಾಯಿ ಮೇಲೆ ಬೀಳಲು ಹಾಜರು. "ಏಯ್. ನಡಿ ಶ್... ಶ್..."

"ಭೋಃ ಭೋಃ ಭೋಃ ಭೋಃ - ಕಸ್ತವಮ್ ಭೋಃ-"

ಕರಿನಾಯಿ ಬಾಲ ಅಲ್ಲಾಡಿಸಿ ದಾರಿಬಿಡುತ್ತದೆ. ವಾಸನೆ ನೋಡುತ್ತಾ ಹಿಂದೆ ಹಿಂದೆ ಬರುತ್ತದೆ. ಇದೆಂಥ ವಿಚಿತ್ರ ಇವತ್ತು! ನಾಯಿ ವಾಸನೆಯಿಂದಲೇ ಮನುಷ್ಯನನ್ನು ಪತ್ತೆ ಹಚ್ಚುತ್ತದೆ, ಕರಿನಾಯಿಯ ಮೂಗಿಗೆ ಇವತ್ತು ಬಲಿದತ್ತ ಅಪರಿಚಿತ, ಬಹಳ ವಿಚಿತ್ರ ಅನಿಸಿತು.

ಬಲಿದತ್ತ ತಪ್ಪಿಸಿಕೊಳ್ಳಲು ಇಟ್ಟಿಗೆ ಚೂರು ಕೈಗೆತ್ತಿಕೊಂಡ. ಕರಿನಾಯಿ ಸ್ವಲ್ಪ ಹಿಂದೆ ಸರಿದು ಜೋರಾಗಿ ಬೊಗಳಿತು. ನಾಲಗೆ ಹೊರಚಾಚಿ ಗೊಂಯ್ ಗೊಂಯ್ ಅನ್ನತೊಡಗಿತು. ಆ ರೀತಿ ದೀರ್ಘವಾಗಿ ಮುಲುಗುಟ್ಟಿದರೆ ನಾಯಿಗಳ ಭಾಷೆಯಲ್ಲಿ ಸಹಾಯಬೇಕು ಎಂದರ್ಥವಿರಬೇಕು. ಅದು ಸಾಕಷ್ಟು ಗೌರವ ಸಂಪಾದಿಸಿ ಕೊಂಡಿರುವ ನಾಯಿ, ಈ ಮೊಹಲ್ಲಾದ ಗಲ್ಲಿಗಲ್ಲಿಗಳಲ್ಲಿ ಅದನ್ನು ಹೊಗಳುವ, ಆರಾಧಿಸುವ ಬೇಕಾದಷ್ಟು ನೆಂಟರಿಷ್ಟರಿದ್ದಾರೆ. ಅವೆಲ್ಲ ದೂರದಿಂದಲೇ ಉತ್ತರ ನೀಡಿದವು. ಬಲದತ್ತನಿಗೆ ಅದೆಲ್ಲ ಏನು ಅರ್ಥವಾಗುತ್ತೆ? ಸ್ವಲ್ಪ ಹೊತ್ತಿನಲ್ಲೇ ನಾಯಿಗಳ ಒಂದು ವ್ಯೂಹದಲ್ಲೇ ತಾನು ಸಿಲುಕಿರುವುದು ಅವನಿಗೆ ಗೊತ್ತಾಯಿತು. ಅವನು ಕಂಪನಿಯಲ್ಲಿ ಆಫೀಸರಾಗಿ ಬಡ್ತಿ ಹೊಂದಿದ್ದಾನೆ. ಆದರೇನು, ಮೆಲ್ಲಗೆ ಸಿಟ್ಟು ಇಳಿದು ಭಯ ಆ ಜಾಗವನ್ನು ಆಕ್ರಮಿಸಿತು. ಅದರಲ್ಲೂ ರಾತ್ರಿ ಹೊತ್ತು, ಈ ರಾತ್ರಿಯಲ್ಲಿ ಮೊಹಲ್ಲಾದ ನಾಯಿಗಳೆಲ್ಲ ಆಕ್ರಮಣಕ್ಕೆ ಸಿದ್ಧವಾಗಿ ಬರುತ್ತಿವೆ. ಹಲ್ಲು ತೋರಿಸುತ್ತಾ, ನಾಲಗೆ ಹೊರಚಾಚುತ್ತ ಬರುತ್ತಿವೆ. ಕೆಲವು ನಾಯಿಗಳು ಉಗುರಿನಿಂದ ನೆಲ ಕೆರೆಯುತ್ತಾ ಬರುತ್ತಿವೆ. ಒಂದು ನಾಯಿ ಕಾಲುಮೇಲೆತ್ತಿ ಉಚ್ಚೆಹೊಯ್ಯಲು ಸಿದ್ಧವಾಗುತ್ತಿದೆ. ಎಲ್ಲ ನಾಯಿಗಳ ಬಾಯಲ್ಲೂ ಜೋರಾದ ಧ್ವನಿ, ಬಗೆಬಗೆಯ ಸ್ವರಾಲಾಪಗಳು, ಜಾಜಿಗಿಡದ ಕೆಳಗಡೆ ಕುಣಿಯುತ್ತಾ ಬೊಗಳುತ್ತಾ ಈ ರಣರಂಗ ಏರ್ಪಡಿಸಿದ ಕರಿನಾಯಿ ಅವುಗಳನ್ನು ಹುರಿದುಂಬಿಸುತ್ತಿದೆ - ಮುನ್ನುಗ್ಗಿ, ಮುನ್ನುಗ್ಗಿ ಈ ಅಂಜುಕುಳಿ ಅನುಕೂಲಸಿಂಧು ಸಮಯ ಸಾಧಕನಿಗೆ ತೋರಿಸಿ ಒಗ್ಗಟ್ಟಿನ ಬಲ ಏನೆಂಬುದನ್ನು.

ದಾರಿಯಲ್ಲಿ ನಿಂತುಕೊಂಡೇ ಬಲಿದತ್ತ ಜೋರಾಗಿ ಅರಚಿತ - "ಬನು ಬನು-"

"ಅಯ್ಯಯ್ಯೋ - ಏ ಟಾಮಿ! ನಡಿಯಾಚೆ, ಬಾರಯ್ಯ ಒಳಗೆ. ಏನೂ ಮಾಡಲ್ಲ."

ಟಾಮಿಗೆ ಅವಮಾನವಾದಂತಾಗಿ ಬೌಬೌ ಅಂತ ಒಳಗೆ ಓಡಿಹೋಯಿತು. ಸೂಚನೆಯನ್ನು ಗ್ರಹಿಸಿ ಮೊಹಲ್ಲಾದ ಉಳಿದ ನಾಯಿಗಳೂ ಹಿಂದಿರುಗಿದವು. ಬಲಿದತ್ತ ನಿಧಾನವಾಗಿ ಉಸಿರಾಡಿದ. ಆದರೂ ಬೆದರಿ ಬನುವಿನ ಕೈಯನ್ನು ಬಿಡಲೇ ಇಲ್ಲ. ಒರಟು ಕೈಯಿಂದ ಅವನ ತೋಳನ್ನು ಹಿಡಿದು ಬನು ಒಳಗೆ ಎಳೆದುಕೊಂಡು ಹೋದ - ಹುಚ್ಚು ಬನು - "ಅಯ್ಯೋ, ಅದೇಕೆ ಹಾಗೆ ನಡುಗುತ್ತಿದ್ದಿ? ಹೆದರಿಬಿಟ್ಟೆಯಾ? ಅಯ್ಯೋ ಹುಚ್ಚಪ್ಪಾ, ನೋಡು ಅದೇ ಸಂಟೂದಾ, ಅದೇ ಅಶೋಕ, ಅದೇ ನಂದ- ಎಲ್ಲರೂ ಇಲ್ಲಿ ನೋಡಿ - ಬಲಿದತ್ತ ಬಂದಿದ್ದಾನೆ." ಆರಾಮ ಕುರ್ಚಿಯೊಳಕ್ಕೆ ಅವನನ್ನು ತುರುಕಿ ಹೇಳಿದ "ಕೂತುಕೊ, ಚಹಾ ಕುಡಿ,

ಸ್ವಲ್ಪ ಸುಧಾರಿಸಿಕೊ, ಪಾಪ ಬಡಪಾಯೀನ ನಾಯಿಗಳು ತುಂಬ ಗೋಳು ಗುಟ್ಟಿಸಿವೆ.''

''ನಮಸ್ಕಾರ-'' ಬಲಿದತ್ತ ಅಂದ.

''ನಮಸ್ಕಾರ - ಬಲಿದತ್ತ, ನಿನಗೇನಾಗಿದೆ ? ಮುಖ ಯಾಕೆ ಹಾಗೆ ಒಣಗಿದೆ ? ಏನು ಸಮಾಚಾರ ಬನು ?''

''ಅವರಿಗೆ ಪ್ರಮೋಷನ್ ಸಿಕ್ಕಿದೆ'' ನಂದ ಹೇಳಿದ, ''ಹೌದಲ್ಲವೆ ?

ಎಲ್ಲರೂ ನಕ್ಕರು. ಅನಂತ ಹೇಳಿದ - ''ಒಳ್ಳೆ ಲಾಜಿಕ್, ನೀನು ಹೇಳೋದು ಸರಿಹೋಯಿತು ನಂದ. ಪ್ರಮೋಷನ್ ಸಿಕ್ಕರೆ ಮುಖ ಯಾಕೆ ಒಣಗಬೇಕು ?''

''ಏಕೆಂದರೆ ನಾಯಿಗಳು ಹಿಂದೆ ಬೀಳುತ್ತವೆ.'' ಎಲ್ಲರಿಗೂ ನಕ್ಕು ನಕ್ಕು ಹೊಟ್ಟೆ ಹುಣ್ಣಾದಂತಾಯಿತು. ಬೇರೆ ಉಪಾಯವಿಲ್ಲದೆ ಬಲಿದತ್ತನೂ ನಕ್ಕ. ನಂದ ಎದ್ದುನಿಂತು ಹೇಳಿದ, ''ಮೂರು ನಾಲ್ಕು ಸಾರಿ ನನಗೂ ಪ್ರಮೋಷನ್ ಸಿಕ್ಕಿ ಚೆನ್ನಾಗಿ ಅನುಭವವಾಗಿದೆ ಬಲಿದತ್ತ, ನಾಯಿಗಳು ಹಿಂದೆ ಬೀಳುತ್ತವೆ. ನನ್ನ ಹಿಂದೂ ನಾಯಿಗಳು ಬಿದ್ದಿದ್ದವು. ಅದರಿಂದಾಗಿ ನಾನು ಪ್ರಪಂಚವನ್ನೇ ಬಿಟ್ಟು ಹೊರಡುತ್ತಿದ್ದೇನೆ. ನಾನು ಇನ್ನು ಹೊರಟೆ, ಬನು.''

''ಇಷ್ಟು ಬೇಗ ?''

''ಒಂದಲ್ಲ ಒಂದು ದಿನ ಹೋಗಲೇಬೇಕಲ್ಲವೆ ಪೆದ್ದು ಮುಂಡೇದೆ. ಅದಕ್ಕಿಂತ ಮೊದಲೆ ಹೋಗಿಬಿಡೋದು ವಾಸಿ. ತನ್ನ ಕೈಯಿಂದಲೇ ದಾರಿಮಾಡಿಕೊಂಡು ಮನುಷ್ಯ ಹೋಗಬಲ್ಲ, ನಾನಂತೂ ಹೊರಟೆ ಬನು'' - ನಂದ ಮುಂದೆ ಹೆಜ್ಜೆ ಹಾಕಿದ.

''ಎಲ್ಲಿಗೆ ಹೊರಟಿರಿ ನಂದಬಾಬು, ಇಷ್ಟು ಬೇಗ ?'' ಬಲಿದತ್ತ ಕೇಳಿದ. ನಂದ ಉತ್ತರ ಕೊಟ್ಟ, ''ನಾನೂ ಒಂದು ಪ್ರಮೋಷನ್ನಿನ ಸುಳಿಯಲ್ಲಿ ಸಿಕ್ಕಿಬಿದ್ದಿದ್ದೇನೆ ಬಲಿದತ್ತ ಬಾಬು, ಸಾಯಂಕಾಲ ಹೋಗದಿದ್ದರೆ ಆಗೋದಿಲ್ಲ, ಏನು ಅಂದು ಕೊಳ್ತಾರೆ ಅವರು ?'' ನಂದ ನಗುತ್ತಿದ್ದ.

''ನಿಜವಾಗಲೂ, ಖಂಡಿತವಾಗಿಯೂ ಹೌದಲ್ಲವೆ-'' ಬಲಿದತ್ತ ತಿಳಿದವನಂತೆ ತಲೆಯಲ್ಲಾಡಿಸುತ್ತಾ ಹೇಳಿದ. ''ಸ್ವಲ್ಪ ನಿಲ್ಲು'' ಬನು ಅಂದ. ಸಂಟೂದಾ ಧ್ಯಾನಮಗ್ನರಾಗಿದ್ದಾರೆ. ಅನಂತ ಮತ್ತು ಅಶೋಕ ಪೇಪರು ಓದುತ್ತಿದ್ದಾರೆ.

''ನೀನು ತಡಿ ಅನ್ನುತ್ತಿದ್ದಿ, ನಿನಗೇನು ಗೊತ್ತಾಗುತ್ತೆ ? ಅದೇ ಬಲಿದತ್ತ ಬಾಬುಗಳನ್ನು ನೋಡು, ಎಷ್ಟು ಬೇಗ ಅರ್ಥ ಮಾಡಿಕೊಂಡರು. ಎಷ್ಟಾದರೂ ಪಳಗಿದ ಮನುಷ್ಯರಲ್ಲವೆ. ಅಯ್ಯೋ ಮುಟ್ಠಾಳ ಸಾಯಂಕಾಲ ಹೋಗಲೇಬೇಕು, ಗೊತ್ತಾಯ್ತಾ, ನಿನ್ನ ಹಾಗೆ ಮನೇಲಿ ಕೂತಿದ್ದರೆ ನಡೆಯೊಲ್ಲ.''

''ಒಳ್ಳೆಯದು, ಬನು ಬಿಟ್ಟುಬಿಡು, ಅವರು ಹೋಗಲಿ, ಅದು ಸರಿ ನಂದಬಾಬು, ನಮಗೆ ಎಲ್ಲಿ ಪ್ರಮೋಷನ್ ಸಿಕ್ಕುತ್ತದೇ ?''

''ಎಲ್ಲಿ ? ಹೇಳಬಿಡಬೇಕೆ ? ಅದು ಸರಿ, ಪ್ರಮೋಷನ್ ಆಗುವ ಮೊದಲೇ ಯಾರಾದರೂ ಗುಟ್ಟು ಬಿಟ್ಟು ಕೊಡ್ತಾರಾ ? ಮನಸಾಚಿಂತಿತಂ ಕರ್ಮಂ ವಚನಾ ನ ಪ್ರಕಾಶಯೇತ್ ಅನ್ಯಲ್ಲಕ್ಷಿತ ಕಾರ್ಯಸ್ಯ ಯತಃ ಸಿದ್ಧಿರ್ನಯಾಯತೇ. ಅಲ್ಲವೆ,

ಬಲಿದತ್ತ ಬಾಬು ? ನೀವು ಏನನ್ನುತ್ತಿದ್ದೀರಾ ? ಸರಿ. ಎಲ್ಲ ಹೇಳಬೇಕೆಂದರೆ, ಹೂಂ, ಪ್ರಮೋಷನ್ ಆಗುತ್ತಿದೆ ಅಂತ ಅಷ್ಟು ಹೇಳಿದ್ದೀನಲ್ಲ, ಇನ್ನೊಂದು ಗಂಟೆಯಲ್ಲೇ ಖಂಡಿತ ಪತ್ರಿಕೆಗಳಲ್ಲಿ ಹೊರಬೀಳುತ್ತೆ. ಅಂದ ಮೇಲೆ ಮತ್ತೇನು ಹೇಳುವುದಿದೆ ? ನೀವೇ ಎಲ್ಲ ಇಟ್ಟುಕೊಳ್ಳಿ. ಬನು, ಹೇಳಲೊಬೇಡವೋ ?" ನಂದ ನಗುತ್ತಿದ್ದ.

"ಹೇಳು, ಹೇಳಿಬಿಡು" - ಬನು ಹೇಳಿದ.

"ಹೇಳಿ ಮತ್ತೆ, ಹೇಳಿ" ಬಲಿದತ್ತನೂ ಒತ್ತಾಯ ಮಾಡಿದ.

"ಹೇಳಬೇಡ" ಅನಂತ ಅಂದ.

"ಅಯ್ಯೋ ಹುಚ್ಚಪ್ಪಾ" ಸಂಟೂದಾ ಹೇಳಿದರು, "ಅದೇನು ಹೇಳಬೇಕಯ್ಯ ?"

ನಂದು ಕುಳಿತುಬಿಟ್ಟ, "ಹೇಳೇ ಹೋಗುತ್ತೇನೆ ಮತ್ತೆ. ಯಾಕೆ ? ಯಾಕೆಂದರೆ ಅನಂತ ಬೇಡ ಅನ್ನುತ್ತಿದ್ದಾನೆ. ಕೇಳಿ ಬಲಿದತ್ತ ಬಾಬು, ಪ್ರಮೋಷನ್ನಿಗಾಗಿ ಎಲ್ಲಿ ಹೊಂಚು ಹಾಕುತ್ತಿದ್ದೇನೆ ಅಂತ ನಿಮಗೆ ಹೇಳಿಬಿಡುತ್ತೇನೆ. ಏಕೆಂದರೆ ಅಲ್ಲಿ ನಿಮ್ಮ ಜೊತೆ ಕಾಂಪಿಟಿಷನ್ ಇಲ್ಲ. ಸಂಟೂದಾ ಬಹಳ ಮುಂದಿದ್ದಾರೆ, ಅಮ್ಮನಿಗೆ ಎಲ್ಲರಿಗಿಂತ ಕಡೇ ಮಗ. ಅನಂತ ಜೊತೆಯಲ್ಲಿದ್ದರೂ ಅವನೇ ಮುಂಚೆ ತಲುಪುತ್ತಾನೆ. ಅವನು ತನ್ನ ಜೋರಿನಿಂದಲೇ ಕಟ್ಟಿಗೆಯಂತೆ ಒಣಗಿ ಮುಳ್ಳಾಗುತ್ತಿದ್ದಾನೆ.

"ಹೇಳಲಾ - ಹೇಳಿಬಿಡಲಾ - ನನಗೆ ಪ್ರಮೋಷನ್ ಎಲ್ಲಿ ಆಗುತ್ತಿದೆ ಅಂತ."

ಆಮೇಲೆ ಅವನು ಎತ್ತರಿಸಿದ ಕಂಠದಲ್ಲಿ ನಗುತ್ತಾ ಹಾಡತೊಡಗಿದ–

ಶೂನ್ಯಮಂದಿರೇ ವಿಹಾರ್ ರೂಪರೇಖ ನಾಹಿಂ ಜಾರ
ದುಇಪಾದ ನ ಮಿಶಇ ಏಕ್ ಪಾದ್ ಧರ್ ಧರ್...
ಅಲೇಖ ಪಾಟಣಾಪುರ ಸೇತಾಬರೆ ತಾಂಕ ಘರ್
ನಾಹಿಂ ಶರದ ಉಷುಮ ಸಾಧುಜನೇ ಹೇತುಕರ
ನಿರಾಮಿಶ ನಿಅಇಂತಾ ಪಿಉಥಿಲೆ ಲಾಗೇ ಮಿತಾ
ಅದೇಬಾ ಅನಾಮೇ ಸ್ವಾದ ಏಮಂತ ಸಾಧುರ್
ದೇಖಿತಾ ಛಟರ್ ಚಾಲಿ ಜ್ಞಾನೀ ಮರುಭಂತಿ ಭಾಲಿ
ಚಕ್ಷು ಛಟಕಡಂ ಬೇಗೇ ವಿಜುಲಿರು ಅತಿಖರ್
ಜೆಉಂ ಠಾರೇ ಬ್ರಹ್ಮಾ ಆಖಿ ಉದೇಅಸ್ತ ನಾಹೀಂ ಕಿಛಿ
ಕಹೇ ಭೀಮಂ ಅರಕ್ಷಿತ ನಿರ್ಮೇಲ್ ನಿಅಂಧಕಾರ್

(ಯಾವ ರೂಪ ಆಕಾರಗಳೂ ಇಲ್ಲದ ಆ ಅಲೇಖಸ್ವಾಮಿ ಶೂನ್ಯಮಂದಿರಲ್ಲಿ ವಿಹಾರಮಾಡುತ್ತಾನೆ. ಅಲೇಖ ಪಾಟಣಾಪುರದಲ್ಲಿ ಅವನ ಮನೆ, ಅಲ್ಲಿಗೆ ಚಳಿಗಾಲ, ಬೇಸಗೆ ಯಾವುದಕ್ಕೂ ಪ್ರವೇಶವಿಲ್ಲ. ಅಲ್ಲಿ ಎರಡು ಪಾದಗಳು ಸೇರುವಂತಿಲ್ಲ, ಕೇವಲ ಒಂದೇ ಪಾದ ಎಲ್ಲವನ್ನು ಧಾರಣೆ ಮಾಡಿಕೊಳ್ಳುವ ಸಾಮರ್ಥ್ಯ ಪಡೆದಿದೆ. ಅವನಿಗೆ ಹೆಸರಿಲ್ಲ, ಅವನನ್ನು ಯಾರೂ ನೋಡಿಲ್ಲ, ಅವನು ನಿರಾಮಿಷ, ಅನುಚ್ಛಿಷ್ಟ, ಆದರೆ ಅವನ ಹೆಸರನ್ನು ನೆನೆಯುವುದರಿಂದಲೇ ಪ್ರತಿಕ್ಷಣವೂ ಮಧುರವಾಗುವುದು. ಈ ಮಧುರ ತೃಪ್ತಿಗೆ ಯಾವ ಕೊನೆಯೂ ಇಲ್ಲ, ಅವನನ್ನು ನೆನೆಸುವುದರಿಂದಲೇ ಜ್ಞಾನಿಗಳು ಪರಮಾನಂದದ ಅನುಭವ ಪಡೆಯುತ್ತಾರೆ. ಅವನು ಕಣ್ಣಿವೆ

ಮಿಟುಕಿಸುವುದಕ್ಕಿಂತಲೂ ತೀವ್ರಗಾಮಿ, ಅವನ ವೇಗ ವಿದ್ಯುತ್ತಿಗಿಂತಲೂ ಮಿಗಿಲಾದುದು. ಅಂಥ ಪರಬ್ರಹ್ಮವಿರುವೆಡೆಯಲ್ಲಿ ಉದಯವೂ ಇಲ್ಲ, ಅಸ್ತವೂ ಇಲ್ಲ. ಅಲ್ಲಿ ಅಂಧಕಾರವಿರುವುದೇ ಇಲ್ಲ, ನಿತ್ಯನೂತನವಾದ ನೈರ್ಮಲ್ಯ ಮನೆ ಮಾಡುತ್ತಿರುತ್ತದೆ ಎಂಬುದಾಗಿ ಆರಕ್ಷಿತ ಭೀಮಾ ಭಾಯಿ ಹೇಳುತ್ತಾರೆ.)

"ಅಲ್ಲಿಗೇ ನನಗೆ ಪ್ರಮೋಷನ್ ಸಿಗುತ್ತಿರುವುದು ಬಲಿದತ್ತ ಬಾಬು, ಅದೇ, ಆಲೇಖ ಪಾಠಣಪುರಕ್ಕೆ" ಆಮೇಲೆ ಅವನ ಕಣ್ಣುಗಳು ಹನಿದುಂಬಿದವು, ಗಂಟಲು ಉಬ್ಬಿಬಂತು, ಕಣ್ಣೀರಿನ ನಡುವೆಯೇ ನಕ್ಕು ನಂದ ಹೇಳಿದ "ಎಲ್ಲಿ ಸಿಗುತ್ತಿದೆ, ಇನ್ನೂ ಬಹಳ ಬಾಕಿಯಿದೆ, ಎಲ್ಲಾಗಿದೆ ?" ಅಳುತ್ತಲೆ ಮತ್ತೆ ಹಾಡತೊಡಗಿದ.

ಹಾಡುತ್ತಲೆ ಹೊರಟುಹೋದ, ರಸ್ತೆಯಿಂದಲೇ ಜೋರಾಗಿ ಕೂಗಿ ಹೇಳಿದ, "ನೋಡಪ್ಪಾ, ಯಾರೂ ನನ್ನನ್ನು ಸಾಲಗಾರನನ್ನಾಗಿ ಮಾಡಬೇಡಿ, ಯಾವ ಋಣವೂ ಬೇಡ. ಮೊದಲೇ ಹೇಳಿಬಿಟ್ಟಿದ್ದೇನೆ. ನಮಸ್ಕಾರ, ನಮಸ್ಕಾರ-"

ಬನು ಸಪ್ಪೆಯಾಗಿ ಹೇಳಿದ. "ನಡಿ, ಸೀದಾ ಸ್ಮಶಾನದ ಹತ್ತಿರವಿರುವ ಮಠಕ್ಕೆ ಹೋಗು." ಸಂಟೂದಾ ನಿಟ್ಟುಸಿರುಬಿಟ್ಟು ಹೇಳಿದರು, "ಎಲ್ಲವೂ ದೇವರ ಇಚ್ಛೆ."

ಬಲಿದತ್ತ ಅವಾಕ್ಕಾಗಿ ನೋಡುತ್ತಾ ಕುಳಿತುಬಿಟ್ಟ. ಏನಿದಲ್ಲ ? ಇದು ಥಿಯೇಟರ್ ಕೂಡ ಹೌದು. ಸಾಧಾರಣ ಬದುಕಿನಲ್ಲೂ ಹೀಗೆಯೆ ಆಗುವುದುಂಟು. ಮನುಷ್ಯ ಚೆನ್ನಾಗಿ ವಂಚನೆ ಮಾಡುತ್ತಾನೆ. ಆ ಮೊದಲ ನಂದ ನೆನಪಿನಲ್ಲಿ ಇನ್ನೂ ಹಸುರಾಗಿದ್ದಾನೆ. ಅವನಿಗೂ ಇವನಿಗೂ ಎಷ್ಟು ವ್ಯತ್ಯಾಸ. ಆ ನಂದ ಬಟ್ಟೆಬರೆಗಳಲ್ಲಿ, ನಡೆನುಡಿಗಳಲ್ಲಿ ತುಂಬ ಸ್ಮಾರ್ಟ್, ಧಡಿಯ ದುಖಿೂ ಜೊತೆ ಯಾವಾಗಲೂ ಅವನು ವಾದಕ್ಕಿಳಿಯುತ್ತಿದ್ದ. ದುಖಿೂ ಇವತ್ತು ಇಲ್ಲ, ಆದರೆ ಅವನ ಉಬ್ಬಿದ ಕೆನ್ನೆಗಳ ನಡುವೆಯಿದ್ದ ಸಣ್ಣ ಮೂಗು, ಕಣ್ಣಿಗೆ ಕನ್ನಡಕ, ನಿಧಾನವಾಗಿ ಪಿಸುಗುಟ್ಟುವಂತ ಮಾತು. ಅವನ ಅಂಗಿ, ಅದರಿಂದ ಇಣುಕುತ್ತಿರುವ ರೇಷ್ಮೆ ಕರವಸ್ತ್ರ ಪರಿಮಳ ಪೂಸಿದ ಮೈ ಮನಸ್ಸಿಗೆ ಹಿಡಿಸುವಂತಿತ್ತು. ಎಂ.ಎ., ಬಿ.ಎಲ್. ಓದಿದ್ದ ದುಖಿೂವಿಗೆ ಏಳು ಮಂದಿ ಅಕ್ಕ ತಂಗಿಯರು, ಅವನೊಬ್ಬನೇ ಗಂಡು ಮಗ, ತುಂಬ ಶ್ರೀಮಂತ, ತೆರೆದ ಮನಸ್ಸು. ದುಖಿೂ ನಡುಹರಯದಲ್ಲೇ ಸತ್ತುಹೋದ.

ನಂದನ ಬಗ್ಗೆ ಯೋಚಿಸುತ್ತಿದ್ದಂತೆಯೆ ದುಖಿೂ ನೆನಪಿನಲ್ಲಿ ಮೂಡಿದ್ದ.

ಈ ಕುರ್ಚಿಯಲ್ಲಿ ಹಿಂದೊಂದು ದಿನ ದುಖಿೂ ಕುಳಿತುಕೊಳ್ಳುತ್ತಿದ್ದ. ಈ ಕೊಠಡಿಯಲ್ಲೆಲ್ಲ ರಂಪ ಎಬ್ಬಿಸುತ್ತಿದ್ದ. ಈ ದಿನ ದುಖಿೂ ಈ ಪ್ರಪಂಚದಲ್ಲಿ ಇಲ್ಲವೆನ್ನುವುದಂತೂ ನಿಜ.

ಇದೇ ನಂದ ದುಖಿೂ ಜೊತೆಯಲ್ಲಿ ವಾಗ್ವಾದಕ್ಕೆ ಇಳಿಯುತ್ತಿದ್ದ, ಅವನಿಗಿಂತಲೂ ಇವನದು ಮೇಲುಗೈ. ದುಖಿೂಗೆ ಬದುಕೆಂದರೆ ತುಂಬ ಇಷ್ಟ. ಅದರಲ್ಲಿ ಬರುವ ಸುಂದರವಾದ ರಾತ್ರಿ, ಸೊಗಸಾದ ಹೂವು, ಸುವಾಸನೆ, ಸುಂದರಳಾದ ಹುಡುಗಿ, ಆದರೆ ಅವನು ಇಷ್ಟಪಡುತ್ತಿದ್ದುದು ಹೂವನ್ನು ಮಾತ್ರ, ಹೂವಿನಂತೆ ಮೇಲೆತ್ತಿ ದೂರದಿಂದಲೇ ಮೂಸಿನೋಡುತ್ತಿದ್ದ, ಕೈಯಲ್ಲಿ ಹಿಡಿಯುವುದಕ್ಕಾಗಿ ಅವನ ಬೆರಳು ಸಹ ಬಗ್ಗುತ್ತಿರಲಿಲ್ಲ. ಅಷ್ಟು ಸ್ಥೂಲಕಾಯ ಅವನದು - ಮೈಯಲ್ಲೆಲ್ಲ ಸಂಕೋಚ ತುಂಬಿರುತ್ತಿತ್ತು. ಹಾಗಾಗಿ ಸುಮ್ಮನೆ ನೋಡುವ ಚಪಲ ಹೊತ್ತು ದಿಲ್ಲಿಯಿಂದ

ಕಲ್ಕತ್ತಾ, ಕಲ್ಕತ್ತೆಯಿಂದ ಬೊಂಬಾಯಿಗೆ ಓಡುತ್ತಿದ್ದ. ಬೊಂಬಾಯಿಯಲ್ಲಂತೂ ಪೂರ್ತಿ ಸಮುದ್ರ ತೀರವೇ. ಅಲ್ಲಿಂದ ಮತ್ತೆ ಕರಾಚಿಗೆ ಓಡುತ್ತಿದ್ದ. ಯಾವಾಗಲೂ ಕೈಯಲ್ಲಿ ಕ್ಯಾಮರಾ, ಒಂದು ರಾಶಿ ಫೋಟೋ ಹಿಡಿದುಕೊಂಡು ಬರುತ್ತಿದ್ದ, ಸೊಬಗಿನ ಹುಡುಗಿಯರು, ಅವರದೇ ಬೇರೆ ಬೇರ ಭಂಗಿಗಳು. ಅನೇಕ ರೀತಿಯ ಕಥೆಗಳು - ಸೊಗಸಾದ ರಾತ್ರಿಯಲ್ಲಿ ದೂರದಿಂದ ನೋಡುವ ಅನುಭವ. ಈ ಕೊಠಡಿಯಲ್ಲಿ ಅವನು ಉತ್ಸಾಹದಿಂದ ತನ್ನ ಮಾತಿನ ಗಂಟನ್ನು ಬಿಚ್ಚುತ್ತಿದ್ದ - "ಗೊತ್ತಾಯ್ತಾ ಬನು" ಅಂತ. ದುಖೂ, ಬಿಳಿಯ ಮಿರಿಮಿರಿ ಮಿನುಗುವ ಪಂಚೆ, ಗುಂಗುರು ಕೂದಲು, ಸಣ್ಣ ಚೂಪಾದ ಮೂಗು, ಮುಖದಲ್ಲಿ ಮಕ್ಕಳಂತೆ ನಗೆ, ಊರಿಗೇ ನಂಟ! ಹೊಟ್ಟೆಪಾಡಿನ ಬವಣೆ ಅವನ ಬದುಕನ್ನು ಎಂದೂ ಸೋಕಲೇ ಇಲ್ಲ. ಪ್ರಪಂಚದಲ್ಲಿ ಅವನಿಗೆ ಯಾವ ಶತ್ರುಗಳೂ ಇರಲಿಲ್ಲ. ಕೇವಲ ಮೂವತ್ತು ವರ್ಷ ಮಾತ್ರ ಬದುಕಿದ್ದ. ಹಾಗಾದರೆ ಅವನೂ ಭೀಮಾ ಬೋಲು ಹೇಳುವ ಚಳಿಬಿಸಿಲುಗಳಿಲ್ಲದ ಅದೇ ಪಾಠಣಪುರಕ್ಕೆ ಹೊರಟುಹೋದನೆ ?

ಬೇದೂಬೋಯಿಯ ಭಜನೆಯೊಂದಿಗೆ ನೆನಪೆಲ್ಲ ಹಸುರಾಗಿ ಮೂಡುತ್ತದೆ. ದುಖೂ ನೆನಪಿಗೆ ಬರುತ್ತಾನೆ, ಅವನು ಎಲ್ಲಿ ಕಣ್ಮರೆಯಾದ, ನಂದ ಒಂದು ರೀತಿಯಲ್ಲಿ ದುಖೂವಿಗೆ ಎದುರಾಳಿಯಾಗಿದ್ದ. ಅವನಿಗೂ ಸೊಗಸಾದ ರಾತ್ರಿ, ಸುವಾಸನೆ ತುಂಬಿದ ಹೂವು, ಅರಗಿಳಿಯಂಥ ಹೆಣ್ಣು ಎಲ್ಲವೂ ಇಷ್ಟವಿತ್ತು. ಆದರೆ ಬರೀ ನೋಡುವುದಕ್ಕೆ ಮಾತ್ರ ಅಲ್ಲ, ಚೆನ್ನಾಗಿ ಅನುಭವಿಸಿಯೇ ಅವನು ತೃಪ್ತಿಪಡುತ್ತಿದ್ದ. ನಂದ ಸುಖಭೋಗಗಳನ್ನು ಅನುಭವಿಸಬಲ್ಲವನಾಗಿದ್ದ. ದೇವಿಯ ಚರಣಾಮೃತ ಕುಡಿಯಬಲ್ಲವನಾಗಿದ್ದ. ಏನು ಪರಿಣಾಮವುಂಟಾಗುತ್ತದೆ ಎಂಬುದರ ಬಗೆಗೆ ಅವನು ಎಂದೂ ತಲೆಕೆಡಿಸಿಕೊಳ್ಳಲಿಲ್ಲ. ಅದೆಷ್ಟು ರೀತಿಯ ಅನುಭವಗಳು ಅವನದು. ಒಂದೆಡೆ ಅವನು ಒಬ್ಬ ಮನುಷ್ಯನಿಗೆ ಧರ್ಮಬಂಧುವಾದರೆ ಇನ್ನೊಬ್ಬನಿಗೆ ಟ್ಯೂಷನ್ ಮಾಸ್ಟರ್. ಯಾರದೋ ಮೈಯಿನ ಹಸಿವನ್ನು ನೀಗುವ ಸದವಕಾಶ ಪಡೆಯಲು ದೇವಸ್ಥಾನಗಳಿಗೆ ಪ್ರದಕ್ಷಿಣೆ ಹಾಕಿದ್ದಾನೆ. ಚರ್ಚಿನಲ್ಲಿ ಮಂಡಿಯೂರಿ ಪ್ರಾರ್ಥನಾ ಸಭೆಗಳಲ್ಲಿ ಪಾಲುಗೊಂಡಿದ್ದಾನೆ. ಮಸೀದಿಯ ಹಿಂದಿನ ಗಲ್ಲಿಗಳಲ್ಲಿ ಗಸ್ತು ಹೊಡೆದಿದ್ದಾನೆ. ಇದಕ್ಕಾಗಿ ಅವನು ಕಷ್ಟಪಟ್ಟು ಬಂಗಾಳಿ ಕಲಿತಿದ್ದಾನೆ, ಸಮುದ್ರದ ದಡದಲ್ಲಿ ಇಡೀ ದಿನ ಹೊಟೇಲಿನಲ್ಲಿ ತಂಗಿದ್ದಾನೆ. ಹೆಸರು ಬದಲಾಯಿಸಿಕೊಂಡಿದ್ದಾನೆ. ಏನು ತಾನೆ ಮಾಡದೆ ಬಿಟ್ಟಿದ್ದಾನೆ. ಒಟ್ಟಿನಲ್ಲಿ ಅವನಿಗೆ ಕಚ್ಚಾಮಾಂಸದ ರುಚಿ ಬೇಕು. ಈ ಓಡಾಟದಲ್ಲಿ ಅವನು ಅನೇಕ ಬಾರಿ ಪೆಟ್ಟು ತಿಂದಿದ್ದಾನೆ. ಅನೇಕ ವೇಳೆ ಯಾರದೋ ಹೆಸರು ಬರೆದಿರುವ ಕರವಸ್ತ್ರಗಳನ್ನು ಬಳುವಳಿಯಾಗಿ ಪಡೆದಿದ್ದಾನೆ. ನಾಳೆಗಾಗಿ ಕಾದುಕೂಡುವುದಿಲ್ಲ. ಇಂದೇ ಪ್ರಯತ್ನಿಸುತ್ತಾ ಇರುತ್ತಾನೆ. ಯಾವಾಗಲೂ ನೀಟಾಗಿ, ಟಿಪ್ ಟಾಪಾಗಿ, ನಗುನಗುತ್ತಾ, ಬಾಯಲ್ಲಿ ಜಾಹಿರಾತಿನಂತೆ ಒಂದಾದ ಮೇಲೊಂದು ಹೃದಯ ಗೆಲ್ಲುವ ಕತೆಗಳನ್ನು ಹೇಳುತ್ತಿರುತ್ತಾನೆ. ಆಗ ಏನಾಯಿತು ಅಂತೀರಾ, ರೈಲಿನಲ್ಲಿ ಹೋಗುತ್ತಿದ್ದೆ. ತುಂಬ ಜನಸಂದಣಿ, ಭುವನೇಶ್ವರ ರೈಲ್ವೆ ಸ್ಟೇಷನಿನಲ್ಲಿ ಒಬ್ಬ ಹುಡುಗಿ ರೈಲು ಹತ್ತುತ್ತಿದ್ದಳು. ಕೈಯಲ್ಲಿ ವ್ಯಾನಿಟಿ ಬ್ಯಾಗ್, ತುಟಿಯಲ್ಲಿ ಲಿಪ್‌ಸ್ಟಿಕ್.

ಇದ್ದಕ್ಕಿದ್ದಂತೆ ನನ್ನನ್ನು ಕಂಡು ಕೂಗಿ ಹೇಳಿದಳು - 'ನೋಡಿ ಮಿಸ್ಟರ್, - ನನಗೊಂದು ಸೀಟು - ಆಮೇಲೆನಾಯ್ತು ನೋಡಿ-

ಅಂಥವನು ನಂದ.

ಬಲಿದತ್ತ ಅಚ್ಚರಿಯಿಂದ ಯೋಚಿಸತೊಡಗಿದ. ಕೇವಲ ಆತನ ಮನಸ್ಸು ಮಾತ್ರ ಬದಲಾಯಿಸಿದೆಯೆ ? ಮುಖ ಸಹ. ತಲೆಬಾಚಿರಲಿಲ್ಲ. ಬೆಳೆದ ಕುರುಚಲುಗಡ್ಡ, ಹಣೆಯ ಮೇಲೆ ಕುಂಕುಮದ ಗೆರೆ, ಕೆಂಪು ಕಣ್ಣು, ರಂಗಾದ ಚಹ, ಕುಳಿತಂತೆಯೆ ಯಾವ ಕಾರಣವಿಲ್ಲದಿದ್ದರೂ ಅನೇಕ ಬಾರಿ ಮುಗುಳ್ನಗುತ್ತಾನೆ. ಸುಮ್ಮನೆ ಬೊಕಳೆ ಹೊಡೆಯುವ ಧರ್ಮದ ಪಿತ್ತ ತಲೆಗೇರಿದೆ.

ಅವನೇ ನಂದ. ಓದಿರುವುದು ಎಂ.ಎ. ಉದ್ಯೋಗದಲ್ಲಿ ಮೇಲಿದ್ದಾನೆ. ಸ್ವಂತ ವಿಚಾರದಲ್ಲಿ ಯಾವಾಗಲೂ ಅನುಕೂಲ ಸಿಂಧು, ವಸ್ತುವಾದಿ, ಧರ್ಮದಲ್ಲಿ ನಾಸ್ತಿಕ, ಚಾರ್ವಾಕ ಪಂಥದವನು.

ಆ ನಂದನೇ ಇವತ್ತು ಸಾಧು ಸನ್ಯಾಸಿಗಳ ಹಾದಿ ಹಿಡಿದಿದ್ದಾನೆ ಅಂದರೆ ನಂಬುವುದಕ್ಕೆ ಸಾಧ್ಯವಿಲ್ಲ. ಬದುಕು ಅವನ ಪಾಲಿಗೆ ತುಚ್ಛ, ಇನ್ನು ಹೊಟ್ಟೆಪಾಡಿನ ಯೋಚನೆ, ಅದನ್ನಂತೂ ಮರೆತೇಬಿಟ್ಟಿದ್ದಾನೆ.

"ಏನು ಯೋಚಿಸುತ್ತಾ ಇದ್ದಿ ಬಲಿದತ್ತ, ತೂಗೊ ಬೀಡಿ ಹಚ್ಚು-"

"ಇಲ್ಲ, ಇಲ್ಲ, ಏನೂ ಯೋಚಿಸುತ್ತಾ ಇಲ್ಲ."

"ಥತ್, ಸುಳ್ಳು ಹೇಳ್ತಾನೆ, ಏನೂ ಯೋಚಿಸುತ್ತಾ ಇಲ್ಲವಂತೆ, ಹೇಳು, ಇಲ್ಲದಿದ್ರೆ ಕಿವಿ ಹಿಂಡ್ತೇನೆ."

"ಆಹಾಹಾ ! ಎಂಥ ಭಾವುಕ ಮನುಷ್ಯ. ಏನು ಯೋಚಿಸುತ್ತಿದ್ದಿ ಬಲಿದತ್ತ ?" ಸಂಟೂದಾ ಕೇಳಿದರು.

"ನೀವು ಎಷ್ಟು ಚೆನ್ನಾಗಿ ಮಾತಾಡ್ತೀರಿ, ಸಂಟೂದಾ" ಬಲಿದತ್ತ ಹೇಳಿದ.

"ಅದನ್ನು ಕೇಳಬೇಡ. ಒಂದಾದ ಮೇಲೊಂದು ಒದರಿಬಿಡೋ ಹಾಗಾಗುತ್ತಿರುತ್ತೆ."

"ನೀವು ಎರಡೆರಡು ಭಾಷೆ ಸೇರಿಸಿ ಮಾತಾಡ್ತೀರಲ್ಲಾ ಯಾಕೆ ?"

ಸಂಟೂದಾ ಬಂಗಾಳಿಯಲ್ಲಿ ಏನೋ ಹೇಳಿ "ಎಲ್ಲ ಭಗವಂತನ ಇಚ್ಛೆ" ಅಂದರು.

"ಇದೊಂದು ಹುಚ್ಚರ ಸಂತೆ" ಅಂತ ಬಲಿದತ್ತ ಯೋಚಿಸಿದ.

ಅನಂತ ಹೇಳಿದ - "ಬಹಳ ಹೊತ್ತಿನವರೆಗೂ 'ಬಟ್ ಎಂಡ್' ಮಾಡಿದ ಬನು, ನಮಗೂ ಸ್ವಲ್ಪ ಹೇಳಬಾರದ ? ಬಟ್ ಎಂಡ್ ಅಂದರೇನು ? ಬಿಯುಟಿ ಬಟ್ ಅಂದರೆ ಆದರೆ, ಎಂಡ್ ಅಂದರೆ 'ತುದಿ' 'ಆದರೆ ತುದಿ' ಇದರಲ್ಲೇ ಸಿಲುಕಿದ ಬಲಿದತ್ತ. ಆದರೆ ಯೋಚಿಸುವುದಕ್ಕೆ ಅವಕಾಶ ಕೊಡದಂತೆ ಅವನು ಎದ್ದು ಹೇಳಿದ. "ತಪ್ಪು ನನ್ನದು, ಇಡೀ ರಾಮಾಯಣವೆಲ್ಲ ಮುಗಿದರೂ ಸೀತೆ ಯಾರು ಅಂತ ಹೇಳೋದಕ್ಕೆ ಗೊತ್ತಾಗಲಿಲ್ಲವೆ ? ಅಪ್ಪಾ ಬಲಿದತ್ತ ದಾಸ್ - ಓಹೋ, 'ಶ್ರೀ' ಅಂತ ಸೇರಿಸೋದನ್ನ ಮರೆತುಬಿಟ್ಟೆ. ಇವರು ಕಂಪನಿಯ ನಂಬಿಕಸ್ತರಾದ ಉದ್ಯೋಗಿ, ಇವತ್ತು ಇವರಿಗೆ ಪ್ರಮೋಷನ್ ಸಿಕ್ಕಿದೆ."

"ಮತ್ತೆ ಇವರು ? ಇವರು ಮಿಸ್ಟರ್ ಅನಂತ ಕುಲಕರ್ಣಿ ಚೌಪಟ್, ಅಂದರೆ ಶ್ರೀ

ಅನಂತ ಕುಲಕರ್ಣಿ ಚೌಪಟ್ಟ ನಾಯಕ. ಪ್ರಸಿದ್ಧ ಕವಿಗಳು, ಕುಶಲ ರಾಜಕಾರಣಿಗಳು, ಬೊಂಬಾಯಿಯ ಹೆಸರುವಾಸಿಯಾದ ಫಿಲ್ಮ್ ಪ್ರೊಡ್ಯೂಸರ್. ಅನಂತಶಯ್ಯ ಮೊದಲನೆ ಚಿತ್ರ, ಅಷ್ಟೇ ಅಲ್ಲದೆ ಹೆಸರಾಂತ ವಿಮರ್ಶಕರು, ಮತ್ತು ಸ್ವಲ್ಪ ತಡಿಯಯ್ಯಾ ಇರಲಿ, ಅಡ್ಡ ಬರಬೇಡ, ಹೆಸರುವಾಸಿಯಾದ 'ಹಟಹಟಾ' ಹಳ್ಳಿಯ ಜಮೀನುದಾರರು ಹಾಗೂ ಬ್ಯಾರಿಸ್ಟರ್ ಎಟ್‌ಲಾ, ಲಿಂಕನ್ಸ್ ಇನ್, ಬಿ.ಎ. ಹಾನ್ಸ್"-

"ಆಹಾ"-

ಬಲಿದತ್ತನ ಉದ್ಗಾರ ಇನ್ನೂ ಮುಗಿದಿರಲಿಲ್ಲ.

"-ಮತ್ತೆ ಇವರು ಮಿಸ್ಟರ್ ಅಶೋಕ ಮೆಹತಾ ಎಂ.ಕಾಂ. ಹದಿನೇಳು ತಲೆಮಾರುಗಳಿಂದ ಇಲ್ಲಿಯೆ ನೆಲೆಸಿರುವವರು. ಕವಿಮಾಧವ ಮೆಹತಾ ಅವರ ಮೊಮ್ಮಗ, ಮೆಹತಾ ಅಂಡ್ ಮೆಹತಾ ಲಿಮಿಟೆಡ್ ಕಂಟ್ರಾಕ್ಟರ್ಸ್ ಕಂಪನಿಯ ಮಾಲಿಕರು. ಹೆಸರಾಂತ 'ಕ್ಷಣಜನ್ಮಾ' ಮಾಸಪತ್ರಿಕೆಯ ಸಂಪಾದಕರು ಹಾಗೂ ಶ್ರೇಷ್ಠಮಟ್ಟದ ಲೇಖಕರು-"

"ಮತ್ತೆ-"

"ಮತ್ತೆ ಇವರು ವನಬಿಹಾರಿ ಪಟ್ನನಾಯಕ. ಎಂ.ಆರ್.ಸಿ.ಎಸ್. ಲಿಜಿಯನ್ ಡಿಆನರ್ ಫೆಡೆರಲ್ ಇನ್ವೆಸ್ಟಿಗೇಷನ್ ಬ್ಯೂರೋ, ಪ್ರಸಿದ್ಧ ಗೂಢಾಚಾರ ಬ್ಲೇಕ್ ಅವರ ಆಪ್ತ ಸಹಾಯಕರು ಅಂದರೆ ಸೆಕ್ರೆಟರಿ."

ಎಲ್ಲರೂ ಹೋಹೋ ಅಂತ ಗಹಗಹಿಸಿ ನಕ್ಕರು. ಬಲಿದತ್ತ ಪೆಚ್ಚಾದ. ಪರಿಚಯವಿಲ್ಲದ ಇಬ್ಬರು ಮಹನೀಯರ ಪರಿಚಯವಾಗಿ ಆಶ್ಚರ್ಯದಿಂದ ಪರಿಚಯದ ನಗೆಯಲ್ಲೇ ತೇಲಿ ಹೋಗುತ್ತಿದ್ದಾನೆ. ಇದೇನು ನಿಜವೊ ಸುಳ್ಳೋ ?

ಯಾರು ಈ ಜನ ? ನಿಶಾಚರರೆ ? ಇವರನ್ನು ಎಲ್ಲೋ ನೋಡಿರುವ ನೆನಪಾಗುತ್ತದೆ ಬಲಿದತ್ತನಿಗೆ. ಅದೇ ಈಗ ತಾನೇ ಅನಂತ ಕುಲಕರ್ಣಿ ಚೌಪಟ್ ಅಂತ ಬನು ಪರಿಚಯ ಮಾಡಿಕೊಟ್ಟನಲ್ಲ. ಇವರು - ಹೌದು, ಇವರಂತೆಯ ಒಬ್ಬರು ಯಾವುದೋ ದೊಡ್ಡ ಸಭೆಯಲ್ಲಿ ಭಾಷಣ ಮಾಡುತ್ತಿದ್ದರು. ಇದೇ ರೀತಿಯ ಚೌಕಟ್ಟಾದ ಮುಖ, ಚೂಪಾದ ಗಲ್ಲ, ಆಳವಾದ ತೀಕ್ಷ್ಣ ದೃಷ್ಟಿ, ಬೀಗುತ್ತಿರುವ ಹಣೆ, ಹಾಗೆಯೇ ಹಣೆಯ ಮೇಲೆ ಹರಡಿಕೊಂಡಿರುವ ಮುಂಗುರುಳು. ಕುತ್ತಿಗೆಯಲ್ಲಿ ಹೂವಿನ ಹಾರ. ಮಾತಿನಲ್ಲಿ ಮುಂಬರುವ ಯಾವುದೋ ಚಿನ್ನದ ದಿನಗಳ ಥಳಕು. ಜನ ಮತ್ತೆ ಮತ್ತೆ ಜೋರಾಗಿ ಚಪ್ಪಾಳೆ ತಟ್ಟುತ್ತಿದ್ದರು. ಇವರು ಅವರೇನಾ ? ಜನರನ್ನು ಸಂತೋಷದಲ್ಲಿ ತೇಲಿಬಿಡುತ್ತಿದ್ದವರು. ಅಳಿಸುತ್ತಾ ನಗಿಸುತ್ತಾ ಇದ್ದವರು, ಮಾತಿನ ಘರ್ಷಣೆಯಲ್ಲಿ ಬಿಸಿಯಂಟು ಮಾಡುತ್ತಿದ್ದವರು ?

ಅದಾದ ಮೇಲೆ ಅನೇಕ ದಿನಗಳು ಉರುಳಿದ ಅನಂತರ ಅವರದೊಂದು ದೊಡ್ಡ ಚಿತ್ರ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಹಾಗೇ ಇದ್ದರು. ಅವರ ಮುಖ ಹಾಗೆಯೆ ಗಂಭೀರವಾಗಿತ್ತು. ಆಳವಾದ ಕಣ್ಣುಗಳು, ಆದರೆ ಅವು ರೋಗದಿಂದ ಬಳಲುತ್ತಿದ್ದ ಹಾಗಿದ್ದವು. ಪತ್ರಿಕೆಯಲ್ಲಿ ವರದಿಯಾಗಿತ್ತು - ಯಾರೂ ಹೋಗಲಾರದಂತಹ ಅರಣ್ಯ ಪ್ರದೇಶಕ್ಕೆ ಅವರು ಬೆಳಕು ನೀಡಿದ್ದರು, ಗುಲಾಮಗಿರಿಯ ಬೇಡಿಗಳನ್ನು ಕಿತ್ತೊಗೆದರು, ಜನ ಸಮುದಾಯಕ್ಕೆ ತಿಳಿವಳಿಕೆ ನೀಡಿದರು. ಆಮೇಲೆ ಸ್ವೇಚ್ಛಾ

ಜಾರಿಯಾದ ಆಡಳಿತಶಾಹಿಯು ಕೋಪಕ್ಕೆ ತುತ್ತಾದರು, - ಚರ್ಮದ ಮೇಲೆ ಬೊಬ್ಬೆಗಳಾದವು, ಸುಡಲಿಲ್ಲ, ಕೈಕಾಲುಗಳಿಗೆ ಬೇಡಿ ಬಿಗಿಸಿಕೊಂಡು ಚಾಟಿಯಿಂದ ಹೊಡೆತ ತಿನ್ನಬೇಕಾಯಿತು. ಗುದದ್ವಾರಕ್ಕೆ ಬೆತ್ತ ತುರುಕಿದರು, ಬಾಯಾರಿಕೆಯಾದಾಗ ಉಚ್ಚೆ ಕುಡಿಸಿದರು. ಬೆನ್ನಿನ ಮೇಲೆ ಕಾದ ಸಲಾಕಿಯಿಂದ ಬರೆ ಎಳೆದರು, ಮೂಗಿನ ಹೊಳ್ಳೆಗಳಿಗೆ ಮೆಣಸಿನ ಪುಡಿ ತುರುಕಿದರು, ಅಂಗೈಗೆ ಗೂಟ್ಟಳಿ ಮುಳ್ಳಿನಿಂದ ಚೆನ್ನಾಗಿ ಚುಚ್ಚಿದರು - ಅಬ್ಬಾ, ಇಡೀ ನಾಡೇ ದ್ವೇಷದಿಂದ ನಡುಗಿತು. ಕೋಪದಿಂದ ಉರಿಯಿತು, ಕೇವಲ ಅಲ್ಲ ಯಶಸ್ಸಿನ ಹಿಂದೆ ಬಿದ್ದಿದ್ದ ಬಲಿದತ್ತನೂ ಒಬ್ಬಂಟಿಗನಾಗಿ ತನ್ನ ಕೋಣೆಯಲ್ಲಿ ಸಣ್ಣ ಮುಷ್ಟಿ ಬಿಗಿದು ಕಾಣದ ಶತ್ರುವಿನ ವಿರುದ್ಧ ಕೈಮೇಲೆತ್ತಿದ್ದ. ಪತ್ರಿಕೆ ವರದಿ ಮಾಡಿತ್ತು - ಇವರೇ ? ಅದೇ ಮನುಷ್ಯರೆ ? ಇಂಥ ಕಗ್ಗತ್ತಲೆಯಲ್ಲೂ ಸೆರೆಯಾಳುಗಳಿಗೆ ಬಿಡುಗಡೆ ಖಂಡಿತ. ದಲಿತರಿಗೆ ಗೆಲುವು ಖಂಡಿತ, ವಿಮೋಚನೆಯ ಹಾಡನ್ನು ಹಾಡಿ ಎಂದೆಲ್ಲ ಸಂದೇಶ ಕಳುಹಿಸಿದ್ದರು.

ಮೈಕೈಯಲ್ಲೆಲ್ಲ ನೋವು, ಗುದದ್ವಾರದಲ್ಲಿ ಬೆತ್ತ, ಬಾಯಲ್ಲಿ ಉಚ್ಚೆ-

ಸಾವಿನ ಅಂಚಿನಲ್ಲಿದ್ದರೂ ವಿಜಯದ ಮೆರವಣಿಗೆ ಹಾಡನ್ನು ಹಾಡುತ್ತಿದ್ದರು - ಪತ್ರಿಕೆ ವರದಿಯಾಗಿತ್ತು.

ಇವರು ಆ ಮನುಷ್ಯ ಹೌದೆ ?

ಹೋಲಿಕೆಯೇನೊ ಇದೆ. ಆದರೆ ಇವರೇ ಅವರು ಅನ್ನುವ ನಂಬಿಕೆ ಬರುತ್ತಿಲ್ಲ. ಇವರು 'ಅನಂತ ಶಯ್ಯೆ'' ಚಿತ್ರದ ನಿರ್ದೇಶಕರು, ಅಥವಾ ಈ ಮೈ ಇದು ಆ ಜೀವದ ಇಂದಿನ ಅನಂತ ಶಯ್ಯೆಯಾಗಿರಬೇಕು. ಹೇಳುವುದಕ್ಕಾಗುವುದಿಲ್ಲ.

ಹಾಗೆಯೇ ಈ ಅಶೋಕ ಮೆಹತಾ ಅಂತ ಇವರ ಬಗ್ಗೆ ಬನು ಹೇಳಿದನಲ್ಲ - ದಾರಿಯಲ್ಲಿ ಅದೆಷ್ಟೋ ಸಾರಿ ಇವರಂತೆಯೆ ಇರುವ ಒಬ್ಬ ಮನುಷ್ಯ ಹಾಡಿಕೊಂಡು ಹೋಗುತ್ತಿರುವುದನ್ನು ನೋಡಿದ್ದಾನೆ. ಸಾಯಂಕಾಲದ ಜನಜಂಗುಳಿಯಲ್ಲಿ ಸಾಹಿತಿಗಳೊಡನೆ ಕೆಲವು ಸಾರಿ ಸುತ್ತಾಡುವುದನ್ನು ನೋಡಿದ್ದಾನೆ. ಕೇವಲ ಸಾಹಿತ್ಯ ಚರ್ಚೆ, ಬಲವಾದ ತರ್ಕಸರಣಿ, ಕೇಳುತ್ತಿದ್ದಂತೆಯೆ ಒಳಗಿನ ಪರಿಶುದ್ಧವಾದ ಮನಸ್ಸು ತೆರೆದಿಟ್ಟಂತೆ ಕಾಣುತ್ತದೆ. ಇವರ ಹಾಗೆ ಇರುವವರೊಬ್ಬರು ಸಭೆಯಲ್ಲಿ ಗುಂಪಿನ ಮಧ್ಯೆ ವೇದಿಕೆಯ ಮೇಲೆ ನಿಂತು ಭಾಷಣ ಮಾಡಿದ್ದಾರೆ. ಪಾಂಡಿತ್ಯಪೂರ್ಣ ಭಾಷೆಯಲ್ಲಿ ದರ್ಶನಶಾಸ್ತ್ರವನ್ನು ಸೇರಿಸಿ ಭಾಷಣ ಬಿಗಿದಿದ್ದಾರೆ. ಸ್ಫೂರ್ತಿಯ ಎಸಳುಗಳಂತಹ, ಕನಸಿನಲ್ಲಿ ಹೊಳೆಯುತ್ತಿರುವಂತಹ ಕಣ್ಣುಗಳು, ಹೀಗೆಯೇ. ಆದರೆ ಅವರು ಕಂಟ್ರಾಕ್ಟರ್ ಆಗಿರಲಿಲ್ಲ.

ಪರಿಚಯ- ಪರಿಚಯ-

ಹಾಡುತ್ತಿರುವ ಹಕ್ಕಿಯ ಪರಿಚಯ,. ಇಲ್ಲ ಇದಾದರೂ ಬೆನ್ನಿನಲ್ಲಿ ಕೊಕ್ಕು ಮರೆಸಿಕೊಂಡು ಕಣ್ಣುಮುಚ್ಚಿಕೊಂಡು ಮುದುರಿ ಕುಳಿತಿರುವ ಹಕ್ಕಿ, ಹಿಡಿತುಂಬ ರೆಕ್ಕೆಯ ರೆಕ್ಕೆ.

ಬದುಕಿರುವ ಮನುಷ್ಯನನ್ನು ಯಾರಾದರೂ ಕಡುಕಪ್ಪಾದ, ಕೆಸರು ಬಳಿದಿರುವ ಹೆಣವೆಂದು ಪರಿಚಯ ಮಾಡಿಕೊಡುತ್ತಾರೆಯೆ - ಅವನನ್ನು ಹಿಡಿಯುತ್ತಲೆ ಮೈಯೆಲ್ಲ ಕೆಸರು, ಥೂ, ಅಬ್ಬಾ, ಅದೆಷ್ಟು ಕೆಸರೆಂದರೆ - ಹಾಳಾದ್ದು -

ಯಾರ ಪರಿಚಯ, ಥೂ!

ಹೊರಗಡೆ ಕತ್ತಲು ತುಂಬಿದ ರಾತ್ರಿ, ತಲೆಯಲ್ಲಿ 'ಶೂನ್ಯ ಮಂದಿರದಲ್ಲಿ ಅಡ್ಡಾಡುವ' ಅದೇ ನಂದನ ಹಾಡು. ಒಳಗಡೆ ಒಬ್ಬೊಬ್ಬರಾಗಿ ಎಲ್ಲ ಕುಳಿತಿದ್ದಾರೆ, ಬನುವಿನ ಈ ಹುಚ್ಚು ಕೋಣೆಯಲ್ಲಿ ಯಾರಿಗಾದರೂ ಬರುವುದು ಈ ಭಾವನೆಯೆ. ಯಾವುದೋ ಹೆಣ ಅಥವಾ ಹೆಣದಂಥದು ನೆನಪಿಗೆ ಬರುತ್ತದೆ, ಮೈಯೆಲ್ಲ ನಡಗುತ್ತದೆ. ಬಲಿದತ್ತ ಹೋಗಲು ಬಯಸುತ್ತಾನೆ.

ಸಂಟೂದಾ ಮಾತಾಡಲು ಶುರು ಮಾಡಿದರು. ಅವರ ಮಾತು ಗಂಭೀರವಾಗಿತ್ತು. ಯಾವುದೋ ಆಳದಿಂದ ಬಂದಂತಿತ್ತು. ಯಾರೋ ಹೇಳುತ್ತಿರುವಂತೆ ತಮಗೆ ತಾವೇ ಮಾತಾಡಿಕೊಳ್ಳುತ್ತಿದ್ದರು.

"ಪರಿಚಯ ಕೇಳಬೇಕೆ ? ಇದರಿಂದ ನಿನಗೇನು ಗೊತ್ತಾಗುತ್ತೆ ಹೇಳು ? ಒಬ್ಬ ಲಿಂಕನ್, ಒಬ್ಬ ಕಂಟ್ರಾಕ್ಟರ್, ಒಂದು ಫೆಡೆರಲ್ ಇನ್ವೆಸ್ಟಿಗೇಷನ್. ಬಹುಶಃ ನನ್ನ ಪರಿಚಯ ಹೇಳೋದಾದರೆ ನಾನು ಈಗ ಟಿಬೆಟ್ಟಿನ ಒಬ್ಬ ಲಾಮಾ. ವಾಟ್ ಇಸ್ ಇನ್ ಎ ನೇಮ್ ?

"ಮೊದಲು ನಿನ್ನ ಸ್ವಂತ ಪರಿಚಯ ನೀನು ಮಾಡಿಕೊ. ಇದಕ್ಕಾಗಿಯೆ ಋಷಿ ಮುನಿಗಳು ಅನೇಕ ಯುಗಗಳನ್ನು ಕಳೆದಿದ್ದಾರೆ.

"ಅಂದಹಾಗೆ ಪರಿಚಯ ಹೇಗಿರಬೇಕು ? ಜನ ನಮ್ಮನ್ನು ಏನೇ ಕರೆಯಲಿ. ನಮ್ಮ ಬಗ್ಗೆ ಏನೇ ಯೋಚಿಸಲಿ. ಅದು ಒಂದು ಲೇಬಲ್ ಅಲ್ಲದೆ ಮತ್ತೇನು ? ಲೇಬಲ್ ಬದಲಾಯಿಸಬಹುದು, ಆದರೆ ವ್ಯಕ್ತಿಯ ಪದಾರ್ಥದ ಗುಣಗಳನ್ನು ಸ್ವಲ್ಪವಾದರೂ ಬದಲಾಯಿಸುವುದಕ್ಕಾಗುತ್ತದೆಯ ? ಮೇಲಿನ ಲೇಬಲ್ ಒಳಗಿನ ಪದಾರ್ಥದ ಗುಣಗಳನ್ನು ಕುರಿತು ಹೇಳುತ್ತದೆ ಅನ್ನೋದು ದೊಡ್ಡ ತಪ್ಪು. ಆದರೂ ಈ ಲೇಬಲ್ಲಿನ ಹಿಂದೆ ಬಿದ್ದು ದೊಡ್ಡದೊಡ್ಡವರೂ ಒದ್ದಾಡುತ್ತಿರುವುದನ್ನು ನೋಡುತ್ತೇವೆ. ಚೀಟಿ ಆರಿಸುತ್ತಾ ದೊಡ್ಡ ದೊಡ್ಡ ಹುಡುಗರು ಹೊಡೆದಾಡುವುದನ್ನೂ ನೋಡುತ್ತೇವೆ. ಲೇಬಲ್ ಆರಿಸುವುದರಲ್ಲೂ ಕಚ್ಚಾಟ."

"ನೋಡಪ್ಪಾ, ಮೊದಲು ನಿನ್ನ ಮನಸಿನ ಒಳಹೊಕ್ಕು ನೋಡು, ನಿನ್ನ ಅಗತ್ಯಗಳೇನು ? ನಿನ್ನ ಒಳಿತು ಯಾವುದರಲ್ಲಿದೆ ಅಂತ ? ವಾಟ್ ಡು ಯೂ ರಿಯಲಿ ನೀಡ್, ವಾಟ್ ಆರ್ ದಿ ಪರ್ಮನೆಂಟ್ ವ್ಯಾಲ್ಯೂಸ್ ಇನ್ ಲೈಫ್ ? ಅದು ಬರೀ ಲೇಬಲ್ ಅಲ್ಲ, ನಿನ್ನ ಬೇಕುಬೇಡಗಳು, ಬಯಕೆಗಳು ಎಲ್ಲಕ್ಕೂ ಅಮ್ಮನ ಹೊಟ್ಟೆಯಿಂದ ಹೊರಬರುತ್ತಿರುವಂತೆಯ ನಿನ್ನ ಮುಂದೆ ಒಂದು ಲೇಬಲ್ ಸಿದ್ಧವಾಗಿರುತ್ತೆ. ಅದಕ್ಕಾಗಿ ಹೊಡೆದಾಡಿ ಬಡಿದಾಡಿ ನೀನು ಪ್ರಾಣ ತೆರಬೇಕಾಗುತ್ತದೆ. ಪೇಟೆಯ ಔಷಧಗಳ ಜಾಹಿರಾತಿನಂತೆಯ ಪೇಟೆಂಟ್ ಅಡ್ವೈಸ್‌ಗಳ ಒಂದು ಗುಮ್ಮ ಪ್ರಪಂಚವನ್ನೆಲ್ಲ ಆವರಿಸಿದೆ. ಹಾಗಾಗಿ ಎಷ್ಟೇ ಪ್ರಯತ್ನಪಟ್ಟರೂ ಪ್ರಪಂಚ ಸಭ್ಯವಾಗೋದಿಲ್ಲ, ಯುದ್ಧ ಮತ್ತು ಗೋಳು ದೂರವಾಗೋದಿಲ್ಲ.

"-ನೋಡಪ್ಪಾ, ಒಂದು ವೇಳೆ ಇಷ್ಟು ಮಾಡೋದಕ್ಕೂ ಆಗದಿದ್ದರೆ ನೇರವಾದ ದಾರಿ ಹಿಡಿ - ಆಟೋ ಸಜೆಷನ್. ಅಂದರೆ ಲೇಬಲ್ ಬದಲಾಯಿಸು. ಹಣ ಜೋಡಿಸುವ ಅಗತ್ಯವಿಲ್ಲ. ಆ ದೊಡ್ಡ ಪರ್ವತ ಎದುರಿಗೇ ಕಾಣುತ್ತಾ ಇದೆ ನೋಡು, ಅದೆಲ್ಲ ನಿನ್ನದೇ, ಅದರ ಕೆಳಗೇ ನಿನ್ನ ಚಿನ್ನದ ಗಣಿ ಇರೋದು. ಸ್ವತಃ ಸಂಪಾದಿಸದೆ ಬ್ಯಾಂಕಿನಲ್ಲಿ ಜಮಾ ಆಗಿರುವ ಹಣವನ್ನು ಡ್ರಾ ಮಾಡಿಕೊಂಡು ಎನ್ನುತ್ತಾನಲ್ಲ, ಅದಕ್ಕೆ ಯಾವ ಅರ್ಥವೂ ಇಲ್ಲ. ಸುಮ್ಮನೆ ನೋಡಿಕೊಂಡಷ್ಟೆ ಸುಖ ಪಡಬೇಕು ಅವನು. ನಿನ್ನ ಪರಿಚಯ ಅಂದರೆ ಆ ಪರ್ವತ ನೋಡು, ಈ ಭೂಮಿಯ ನಿನ್ನದೆಂದು ತಿಳಿದುಕೊ. ಅಂದಮೇಲೆ ಯಾವ ದುಃಖವೂ ಇರೋದಿಲ್ಲ ನೋಡು, ಈ ಬನುಪಿನ ಮಂಚ ನನ್ನದು, ಏನಂತಿ ಬನು - ನಾನು ಮಲಗುತ್ತೇನೆ. ತಲೆಕೆಳಗೆ ಒಂದು ದಿಂಬುಕೊಡು ನೋಡೋಣ ಆಹಾ-"

ಅನಂತ ಮತ್ತು ಅಶೋಕ ಹಾಗೆಯೆ ಕುಳಿತಿದ್ದಾರೆ.

ಬಲಿದತ್ತನ ತಲೆ ದಿವ್ಸ್ ಅಂದಿತು. ನಂದನನ್ನು ಹಿಂಬಾಲಿಸಬೇಕೆಂದು ಮನಸ್ಸಾಯಿತು. ಗಡಿಯಾರ ಹತ್ತು ಗಂಟೆ ಬಾರಿಸಿತು. ರಾತ್ರಿ ಹತ್ತು ಗಂಟೆ ಹೊಡೆಯುತ್ತಲೆ ನೆನಪಾಯಿತು. - ರಾತ್ರಿ ಬರುತ್ತೇನೆಂದು ಬೆಳಗ್ಗೆ ಪತ್ತು ಗಂಟೆಗೆ ಅವನು ಹೆಡ್‌ಮಾಸ್ತರಿಗೆ ಹೇಳಿದ್ದ.

ಥೂ ಹಾಳಾದ್ದು - ಒಂದು ರಾತ್ರಿ ಕಳೆದೇ ಹೋಯಿತು.

ಬನುಪಿಗೆ ಮನೆಯಿಂದ ಹೊರಬಿದ್ದು ಓಣಿಯಾಚೆ ತಿರುಗುವವರೆಗೂ ಮನಸ್ಸಿನಲ್ಲಿ ಅದೇ ವಿಚಾರಗಳು ಕೆಲಸ ಮಾಡುತ್ತಿದ್ದವು. ಓಣಿ ದಾಟಿದ ಕೂಡಲೇ ಅಗಲವಾದ ರಸ್ತೆ, ವಿಶಾಲವಾಗಿದೆ. ಅಂಗಡಿ, ತೋಟ, ದೊಡ್ಡ ದೊಡ್ಡ ಕಟ್ಟಡಗಳು, ವಾಹನಗಳು ಮತ್ತು ಜನಸಂದಣಿ, ಬೆಳಕು ಕಣ್ಣು ಕೋರೈಸುತ್ತಿದೆ. ಸರ್ಕಲ್ ಬಳಿ ಅವನು ಬಂದು ನಿಂತುಕೊಂಡ, ಬೆನ್ನ ಹಿಂದೆ ಸುಳಿದಾಡುತ್ತಿದ್ದ ಮಾಯೆಯ ಪರದೆಯನ್ನು ಎಳೆದು ಹೊಸೆದು ಹಾಕಿ ತನಗೆ ತಾನೇ ಧೈರ್ಯ ತಂದುಕೊಳ್ಳುತ್ತಾ ಮಹಾಪಾತ್ರರ ಭಂಗಿಯನ್ನು ಅನುಕರಣೆ ಮಾಡುತ್ತಾ ಹೇಳಿಕೊಂಡ - "ಈಡಿಯಟ್ಸ್ - ಹುಚ್ಚರು - ಕೆಲಸಕ್ಕೆ ಬಾರದವರು-"

ಆಮೇಲೆ ವೇಗವಾಗಿ ಮುಂದೆ ಹೆಜ್ಜೆ ಹಾಕಿದ.

ಸರೋಜಿನಿ ಬಾಗಿಲಿನ ಅಗಳಿ ಹಾಕಿದಳು. ಅವಳಿಗೆ ಹೇಗೆ ಹೇಗೋ ಆಯಿತು. ಅವಳ ಮನದಾಸೆ ಮತ್ತು ಬಯಕೆಗೆ ದೂರವಾದ, ಜಗ್ಗದ ಪ್ರಭಾವ - ಪ್ರಕ್ರಿಯೆಗಳಿಂದೊಡಗೂಡಿದ ಹೊರಜಗತ್ತು ಇವೆರಡರ ನಡುವೆ ಈ ಬಾಗಿಲು ಇದೆ ಎಂದೆನಿಸಿತು - ಈಗ ಅವಳ ಪಾಲಿಗೆ ಏಕಾಂತವೂ ಏಕಾಂತ. ಅವಳು ಮುಖವಾಡ ಕಳಚಬಲ್ಲಳು, ಸೋಗು ಕಳಚಿ ತನ್ನೊಡನೆ ತಾನು ಆಡಬಲ್ಲಳು, ಅವಳ ಮನಸ್ಸಿನ ನಡೆವಳಿಕೆಯೂ ವಿಚಿತ್ರವಾಗಿದೆ. ಬಾಗಿಲು ಮುಂದೆ ಹಾಕುವುದು, ಗೋಡೆಗೆ ಡಿಕ್ಕಿ ಹೊಡೆದು ಪೊಸ್ಟಿಲಿನ ಮೇಲೆ ಎಡವುವುದು, ಗೊತ್ತಾಗಿಯೊ ಗೊತ್ತಿಲ್ಲದೆಯೊ ಹೀಗೆಯೆ ದೇಹವನ್ನು ದಂಡಿಸುವುದು. ಒಲೆಯಲ್ಲಿ ಸಣ್ಣ ಕಟ್ಟಿಗೆಯ ತುಂಡನ್ನು

ತುರುಕಿ ಅದು ಉರಿದು ಬೂದಿಯಾಗುವುದನ್ನು ಗಲ್ಲದ ಮೇಲೆ ಕೈಯಿಟ್ಟುಕೊಂಡು ಉದಾರ ಮನಸ್ಸಿನಿಂದ ನೋಡುತ್ತಾ ಕುಳಿತುಕೊಳ್ಳುವುದು - ಬಹುಶಃ ಒಳಮನಸ್ಸಿನ ಆಳದಲ್ಲಿ ಅದುಮಿಟ್ಟಿರುವಂತಹ ಯಾವುದೋ ಭಾವನೆ ಸಂಕೋಚದ ಹೊರಪದರದಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳುವುದೊ ಎಂಬಂತೆ - ಹೊರಗಿನ ಕೆಲಸವೆಲ್ಲ ಸಾಧಾರಣ ರೂಪಕದಂತೆ. ಅವಳ ಮನಸ್ಸು ಬೇಗುದಿಗೊಂಡಿದೆ. ಅದರಲ್ಲಿ ಬಯಕೆ ಅದುಮಿಟ್ಟಂತೆ ಅಂಡಲೆಯುತ್ತಿದೆ.

ಬಾಗಿಲು ಮುಚ್ಚಿದೆ. ಮನೆಯಲ್ಲಿ ಯಾರೂ ಇಲ್ಲ. ಅವಳು ಒಬ್ಬಂಟಿಗಳು.

ಯಾವ ಯೋಚನೆಯನ್ನೂ ಮಾಡದೆ ನಿತ್ಯದ ಕೆಲಸ ಕಾರ್ಯಗಳನ್ನು ಮಾಡುತ್ತಾ ಹೊರಟಳು - ದೀಪ ಹಚ್ಚುವುದು, ಮನೆ ಗುಡಿಸುವುದು, ಪದಾರ್ಥಗಳನ್ನು ಓರಣವಾಗಿಡುವುದು, ತರಕಾರಿ ಹೆಚ್ಚುತ್ತಾ ಒಲೆಯ ಮುಂದೆ ಕುಳಿತು ಊದುವುದು ಎಲ್ಲ ಸಾಗುತ್ತಿದ್ದವು. ಒಲೆಯಲ್ಲಿ ಧಗ್ ಧಗ್ ಅಂತ ಬೆಂಕಿ ಉರಿಯುತ್ತಿದೆ. ಅನ್ನಕ್ಕೆ ಇಟ್ಟಿದೆ, ಬೇಳೆ ಬೆಂದಿದೆ. ನಾಲ್ಕೂ ಕಡೆ ಕತ್ತಲು ಆವರಿಸಿದೆ.

ಮೆಲ್ಲನೆ ಮನಸ್ಸಿನಲ್ಲಿ ಗತಿಸಿಹೋದ ಘಟನೆ ಮತ್ತೆ ನುಸುಳುತ್ತದೆ. ಬಲಿದತ್ತ ಮನೆಗೆ ಹಿಂದಿರುಗಿದ್ದ. ಇದ್ದಕ್ಕಿದ್ದಂತೆಯೆ ಯಾವುದೋ ಮಾತಿಗೆ ಕಾಲು ಝಾಡಿಸಿದ. ಹುಚ್ಚನಂತೆ ಕೂಗಾಡಿದ. ಬಾಯಿಗೆ ಬಂದಂತೆ ಬೈಯ್ಯತೊಡಗಿದ. ಕಾಲು ಜಾಡಿಸುವುದು ಅದೇ ವಿಚಾರದ ಇರುವಿಕೆಯನ್ನು ಹೊರಗೆಡವುತ್ತದೆ - ಮನಸ್ಸಿನ ಆಳದ ಕತ್ತಲೆಯಲ್ಲಿ ಅದೇ ಭೂತ, ಚಡಪಡಿಸುತ್ತಿರುವ ಹರೆಯದ ಹೆಣ್ಣಿನ ಮನಸ್ಸಿನ ಬಯಕೆಗಳ ರೂಪ. ಬಲಿದತ್ತನ ಹಾವಭಾವಗಳಿಂದ, ಕೋಟು ಪ್ಯಾಂಟುಗಳಿಂದ ಅಥವಾ ಅವನ ಪ್ರಮೋಷನ್ನಿನ ಹೆಚ್ಚುಗಾರಿಕೆಯಿಂದ ಆ ಬಯಕೆಯೇನೂ ತಗ್ಗುವಂತಹದಲ್ಲ. ಹಣೆಯಲ್ಲಿ ಮಿನುಗುತ್ತಿರುವ ಕುಂಕುಮ, ಕೈಯಲ್ಲಿ ಬಳೆಗಳು, 'ಸುಮಂಗಲಿಯಾಗಿರು' ಅಂತ ಆಶೀರ್ವಾದ, ಹೆಗಲಿನ ಮೇಲೆ 'ಪತಿಯ ಪರಮಗುರು' ಬ್ರೋಚು - ಸರೋಜಿನಿ ಏಕೋ ಏನೋ ಗೊತ್ತಿಲ್ಲದಂತೆ ದುಃಖ ಉಮ್ಮಳಿಸಿಬಂದು ಬಿಕ್ಕಿದಳು.

ಒಲೆ ಊದಿದ್ದರಿಂದ ಉಂಟಾದ ಕಣ್ಣಿನ ಉರಿ ಉಪ್ಪು ನೀರಾಗಿ ಹೊರಗೆ ಹರಿಯತೊಡಗಿತು. ಆ ಕ್ಷಣದಲ್ಲಿ ಅವಳು ತನ್ನ ಬದುಕಿಗೆ ಧಿಕ್ಕಾರ ಅಂದುಕೊಂಡಳು. ಬದುಕು ಮತ್ತು ಹೊಗೆ ಎರಡು ಉರಿದು ಹೋಗುತ್ತಿವೆ - ಈ ಬಲೆಯ ಒಳಗಡೆ ಮನಸ್ಸಿನ ಉತ್ಸಾಹವೆಲ್ಲ ಒಂದು ದೀರ್ಘವಾದ ನಿಟ್ಟುಸಿರಾಗಿ ಉಳಿದುಹೋಗಿದೆ.

ಅಳಬೇಕೆನಿಸುತ್ತದೆ. ಆದರೆ ಮನಸ್ಸು ತಡೆಯುತ್ತದೆ. ಅಳಲು ಅವಕಾಶ ಕೊಡುವುದಿಲ್ಲ. ಅವಳಿಗೆ ತನ್ನ ಹಿಂದಿನ ಬದುಕು ನೆನಪಿಗೆ ಬರುತ್ತದೆ. ಅಜ್ಜಿ ಅವಳನ್ನು ಕಂಡರೆ ಅಷ್ಟು ಇಷ್ಟಪಡುತ್ತಿದ್ದಳು, ಮಡಿಲಲ್ಲಿ ಮಲಗಿಸಿಕೊಳ್ಳದೆ ಹೋದರೆ ನಿದ್ರೆಯೆ ಬರುತ್ತಿರಲಿಲ್ಲ. ಆದರೆ ಈಗ ಅವಳಿಲ್ಲ, ದೊಡ್ಡಪ್ಪ ಬೂಜ್ಜು ಹೊಟ್ಟೆಯ ಮೇಲೆ ಕೂಡಿಸಿಕೊಂಡು ಕುಣಿಸುತ್ತಿದ್ದರು. ಅವರಾದರೂ ಈಗೆಲ್ಲಿ? ಸಾವು - ಅಗಲಿಕೆ. ಅದಾದ ಮೇಲೆ ಈ ಏಟುಗಳು, ನೋವು, ಕೊರತೆ ಮತ್ತು ಅಪಾದನೆ, ಛೆ ಛೆ, ಅದೆಷ್ಟು ದುಃಖ ಅವಳಿಗೆ. ಅದೆಷ್ಟು ನತದೃಷ್ಟಳು.

ಈ ಪ್ರಪಂಚವೇ ದುಃಖದ ಕಡಲಿದ್ದಂತೆ. ಬೊಗಸೆ ತುಂಬಾ ದುಃಖವನ್ನು

ಹಿಡಿದುಕೊಂಡು ಮನಸ್ಸಿನ ಮೇಲೆ ಎರಚಿಕೊಂಡರೆ ಸಾಕು, ಕಣ್ಣಿನ ಹಾದಿಯು ಮೂಲಕ ಟಪ್‌ಟಪ್ ಅಂತ ತೊಟ್ಟು ತೊಟ್ಟಾಗಿ ಬೀಳುತ್ತದೆ.

ಸರೋಜನಿ ಅಳುತ್ತಿದ್ದಳು. ಈ ದೂರದ ಊರಿನಲ್ಲಿ ತವರು ಮನೆಯು ನೆನಪು ಕಾಡುತ್ತದೆ. ಇಲ್ಲಿ ಸುಖವಿಲ್ಲ, ಸ್ನೇಹವಿಲ್ಲ, ಸುಮ್ಮನೆ ಯಂತ್ರದಂತೆ ಕೆಲಸ ಮಾಡುತ್ತಾ ಹೋದರೆ ಸರಿ. ಬಹಳ ಹಿಂದೆಯೆ ಉಳಿದುಹೋದ ಗೆಳತಿಯರ, ಸಂಗಡಿಗರ ನೆರಳೂ ತಲೆಗೆ ಹತ್ತುವಂತಿಲ್ಲ. ಎಂತಹ ಬದುಕು. ಹಾಗೆಯೆ ಅದೆಷ್ಟೋ ಹೊತ್ತು ಬಿಕ್ಕುತ್ತಿದ್ದಳು. ಕ್ರಮೇಣ ಬಿಕ್ಕು ಕಡಮೆಯಾಯಿತು. ಬೇಗುದಿಗೊಂಡ ಮನಸ್ಸು, ಯಾವ ಚಡಪಡಿಕೆಯೂ ಇಲ್ಲ, ಸುಮ್ಮನೆ ತೂಗಾಡುತ್ತಿದೆ. ಮೆಲ್ಲಮೆಲ್ಲನೆ ಮನಸ್ಸಿನಲ್ಲಿ ಭುಗಿಲೆದ್ದ ಹಾಗಾಗುತ್ತದೆ. ಗಾಳಿ ಕುಡಿಯುವ ಹಾವಿನಂತೆ ಸಿಡುಗುಟ್ಟುತ್ತಿರುವ ಮುಖ, ಸೊಂಯ್ ಸೊಂಯ್ ಅನ್ನುತ್ತಿರುವ ನಿಟ್ಟುಸಿರು, ಕೆಂಪಾದ ಕಣ್ಣುಗಳು, ವಂಚನೆಗೊಳಗಾದ ಮನೋಭಾವನೆ ಶಿಥಿಲಗೊಂಡು ಒಳಗಿನಿಂದ ಹೊರಬಂದು ಕತ್ತಲೆಯಲ್ಲಿ ರೂಪತಳೆಯುತ್ತದೆ. ಇದೇ ರೀತಿಯಲ್ಲಿ ಬೆಳಗಿನ ಹೊತ್ತು ಅದು ಬರುತ್ತದೆ. ಮನಸ್ಸು ತಳಮಳಗೊಳ್ಳುತ್ತದೆ. ನೆಲೆಗಾಣದೆ ಹಾಗೆ ಹೀಗೆ ಒದ್ದಾಡುತ್ತದೆ - ಹೊರಗೆ, ಬಾಗಿಲಿನಲ್ಲಿ, ಒಳಗಡೆ ಕಿಟಕಿಯು ಮೂಲಕ ಅನ್ಯಮನಸ್ಕಳಾಗಿ ನೋಡುತ್ತಾಳೆ.

ಅಲ್ಲಿ ಯಾರು ? ರಸ್ತೆಯ ಆ ಕಡೆಯು ಕಿಟಕಿಯಲ್ಲಿ ಕಾಲೇಜು ಹುಡುಗ ಕಾಣಿಸುತ್ತಾನೆ. ಅವನು ಪುಸ್ತಕದಲ್ಲಿ ಕಣ್ಣಿಟ್ಟು ಪೆನ್ಸಿಲಿನ ತುದಿಯನ್ನು ಬಾಯಲ್ಲಿ ಕಚ್ಚುತ್ತಾ ಏನೋ ಯೋಚಿಸುತ್ತಿದ್ದಾನೆ.

ಏನೋ ಯೋಚಿಸುತ್ತಿದ್ದಾನೆ. ಅವಳ ಮನಸ್ಸು ಅತ್ತ ಕಡೆ ಹರಿಯತೊಡಗಿತು. ತಕ್ಷಣ ಕಿಟಕಿಯನ್ನು ಮುಚ್ಚಿದಳು. ಮತ್ತೆ ದಣಿದ ಮನಸ್ಸಿನ ಹಕ್ಕಿ ಇಳಿದುಬಂದು ತನ್ನ ಜಾಗಕ್ಕೇ ಮರಳಿತು.

ಪಾತ್ರೆಯಲ್ಲಿ ಅನ್ನ ಕುದಿಯುತ್ತಿದೆ.

ಬಿಸಿ ನೀರಿನಲ್ಲಿ ಲೆಕ್ಕವಿಲ್ಲದಷ್ಟು ಗುಳ್ಳೆಗಳು ಏಳುತ್ತವೆ - ಕೊತ್‌ಕೊತ - ಕೊತ್‌ಕೊತ. ಅದೆಷ್ಟು ಬಿಸಿ. ಎಂಥ ಶಬ್ದ. ಎಷ್ಟು ದೊಡ್ಡ ದೊಡ್ಡ ಗುಳ್ಳೆಗಳು. ಒಡೆದು ಒಂದಾಗುತ್ತವೆ. ಆದರೂ ಜಾಗ ಖಾಲಿಯಾಗುವುದಿಲ್ಲ. ಗುಂಪುಗುಂಪಾಗಿ ಕುಣಿಯುತ್ತವೆ. ನಿಜ. ಅದೆಷ್ಟು ಲೆಕ್ಕಕ್ಕೆ ಬಾರದ ಗುಳ್ಳೆಗಳು. ಯಾವಾಗ ನೋಡಿದರೂ ಉಬ್ಬಿರುತ್ತವೆ. ಪೂರ್ಣವಾಗಿರುತ್ತವೆ. ಪೂರ್ಣದಿಂದ ಪೂರ್ಣಕ್ಕೆ ಹೊರಟು ಹೋಗುತ್ತವೆ. ಆದರೂ ಪೂರ್ಣವೇ ಉಳಿದಿರುತ್ತದೆ. ಗುಳ್ಳೆಗಳ ಕುಣಿತ ಪ್ರತಿನಿತ್ಯ ಹೊಸ ಬೆಳಕನ್ನು ತೋರಿಸುತ್ತದೆ.

ಸರೋಜನಿ ಅನ್ನ ಮಾಡುತ್ತಿದ್ದಾಳೆ.

ಏನೂ ಇಲ್ಲ. ಒಬ್ಬ ಮನೆಯಾಕೆ ಕುಳಿತುಕೊಂಡು ಅನ್ನ ಮಾಡುತ್ತಿದ್ದಾಳೆ. ಬರೀ ಸಾಧಾರಣ ದೃಶ್ಯ ಅಷ್ಟೆ.

ರಾತ್ರಿ ಒಂಬತ್ತು ಗಂಟೆ.

ಈಗ ಅವರು ಬರುತ್ತಿರಬಹುದು, ಅವರಿಗೆ ಪ್ರಮೋಷನ್ ಸಿಕ್ಕಿದೆ. ಎರಡನೆಯ ಹೆಜ್ಜೆ, ದೊಡ್ಡ ಹೆಜ್ಜೆ, ಚಿಕ್ಕ ಮನೆಯಿಂದ ದೊಡ್ಡ ಮನೆಗೆ ಕಾಲಿಡುವುದು

ಹತ್ತಿರವಾಯಿತು. ಆದಾದ ಮೇಲೆ ಹಣ ಬರುತ್ತದೆ. ಸರೋಜಿನಿಗೆ ದುಡ್ಡೆಂದರೆ ತುಂಬ ಇಷ್ಟ. ಆ ಬದುಕು ಹೇಗಿರುತ್ತದೆ ? ಹಣವಂತರಾದ ಮೇಲೆ ಹೇಗಿರುತ್ತದೆ ? ಹುಡುಗತನದಿಂದ ಮೊದಲುಗೊಂಡು ಈಗಿನವರೆಗೆ ನೋಡಿದ ಕೇಳಿದ ಅನೇಕ ವಿಚಾರಗಳು ನೆನಪಿಗೆ ಬರುತ್ತವೆ. ಹತ್ತಿರದ ಹಳ್ಳಿಯಲ್ಲಿ ಮದುವೆಯ ನಿಶ್ಚಿತಾರ್ಥದ ಮಾತುಕತೆ ನಡೆಯುತ್ತಿತ್ತು ಯಜಮಾನ ಹೆಂಡತಿ ಹೇಳುತ್ತಿದ್ದಳು. ಅವರಿಗೆ ದೊಡ್ಡ ಮನೆಯಿದೆಯಂತೆ, ಧಾನ್ಯದ ಖಣಜಗಳಿವೆಯಂತೆ, ಮನೆಯಲ್ಲಿ ಆಳುಕಾಳು ಗಳಿದ್ದಾರಂತೆ. ಮನೆಗೆ ಹೋಗಿಬರುವ ಮಂದಿಯೂ ತುಂಬಾ ಜಾಸ್ತಿಯಂತೆ, ಮೋಜು ಕುಣಿತಗಳನ್ನು ಏರ್ಪಡಿಸುತ್ತಿರುತ್ತಾರಂತೆ, ನಾಳೆ ಅವರ ಮನೆಯಲ್ಲಿ ಓಲಗದ ಸದ್ದು ಕೇಳುತ್ತದೆ. ಜಾತಕ ಕೊಡಲಿಲ್ಲ. ಆದರೆ ಅದು ದೊಡ್ಡ ಮನುಷ್ಯನಾಗುವ ಕನಸಾಗಿತ್ತು. ಇದಾದ ಮೇಲೆ ದಾರಿಯಲ್ಲಿ ಏರಿಯ ಮೇಲೆ, ಯಾರದಾದರೂ ಮನೆಗೆ ಹೋದಳೆಂದರೆ ಬೆಲೆಬಾಳುವ ಸೀರೆ, ತಲೆಯಿಂದ ಕಾಲಿನವರೆಗೆ ತುಂಬಿಹೋಗಿರುವ ಒಡವೆಗಳು - ಇಲ್ಲ, ಎಲ್ಲ ಹಣವಂತರೂ ಹಾಗೆ ವೇಷ ಹಾಕಿಕೊಂಡು ಓಡಾಡುವುದಿಲ್ಲ. ದುಡ್ಡಿದೆ, ಇಷ್ಟು ಗೊತ್ತಾದರೆ ಬೇಕಾದಷ್ಟಾಯಿತು. ಕುದುರೆ ಗಾಡಿಗಳು, ಜಮೀನು, ಆಸ್ತಿಪಾಸ್ತಿ, ಹಣ ಇವೆಲ್ಲ ಇದ್ದರೆ ಮಾತ್ರ ಸಾಲದು, ಅದರ ಜೊತೆಗೆ ಕರ್ತವ್ಯದ ದುಡ್ಡಿನಿಂದ ಬರುವ ಅಧಿಕಾರದ, ಇನ್ನೊಬ್ಬರಿಂದ ಸೇವೆ ಮಾಡಿಸಿಕೊಳ್ಳುವುದರ ಅಭ್ಯಾಸ ಸಹ ಇರಬೇಕು. ಕೇವಲ ಇವೆಲ್ಲ ಇದ್ದರೆ ಮಾತ್ರ ಸಾಲದು, - ಹೌದು, ನಾಲ್ಕು ಜನ ಹೇಳುತ್ತಾ ತಿರುಗಬೇಕು - ಇವರ ಬಳಿ ಇದೆ ಇವರ ಬಳಿ ಇಲ್ಲ ಅಂತ. ಇಲ್ಲದವರು ಇರದಿದ್ದರೆ ಉಳ್ಳವರ ಬಳಿ ಏನು ಇದ್ದರೆ ತಾನೆ ಪ್ರಯೋಜನ. ತಿಂಗಳಿಗೆ ನೂರೈವತ್ತು ರೂಪಾಯಿ, ಇಷ್ಟೇಯೆ !- ಆದರೆ ಹೂಂ ಹೂಂ ಅನ್ನುತ್ತಲೆ ಗಂಡನ ಆಕಾಂಕ್ಷೆ ಪ್ರಯತ್ನಗಳು ಅವನ ಆಕಾರ ಮೈಕಟ್ಟುಗಳಿಗಿಂತಲೂ ಹೆಚ್ಚಾಗಿ ಬೆಳೆಯುತ್ತದೆ. ಅಂದಮೇಲೆ ಅವಳು ಶ್ರೀಮಂತಳಾಗುತ್ತಾಳೆ. ಆದರೆ ಇಷ್ಟು ದುಡ್ಡು ? ದುಡ್ಡನ್ನೇನು ಮೈಯಿಗೆ ಅಂಟಿಸಿಕೊಳ್ಳಬೇಕಾ ? ಮುಖ ಬದಲಾಯಿಸುತ್ತದೆಯೆ ? ಮನಸ್ಸಿನಲ್ಲಿ ಸುಖದ ಭಾವನೆಯುಂಟಾಗುತ್ತದೆಯೆ ? ಅವಳು ನಿಟ್ಟುಸಿರುಬಿಡುತ್ತಾಳೆ.

ಮುಚ್ಚಳ ತೆಗೆದು ಪಾತ್ರೆಯಲ್ಲಿ ತರಕಾರಿ ನೋಡುತ್ತಿದ್ದಳು. ನೀಳವಾಗಿ ಉಸಿರಾಡಿದ್ದರಿಂದ ದೀಪ ಆರಿಹೋಯಿತು. ಒಲೆಯಿಂದ ಒಂದು ಕಡ್ಡಿ ತೊಗೊಂಡು ದೀಪ ಹಚ್ಚುತ್ತಿದ್ದಂತೆಯೆ ಮತ್ತೆ ಹಳೆಯ ನೋವೆಲ್ಲ ಮನಸ್ಸಿನಲ್ಲಿ ಮರುಕಳಿಸಿತು. ಅವಳದು ಅದೇ ವ್ಯಕ್ತಿತ್ವ. ಸುಖವಿಲ್ಲ, ಶಾಂತಿಯಿಲ್ಲ ಎಂದು ಯೋಚಿಸುವ ವ್ಯಕ್ತಿತ್ವ. ಶಾಂತಿಯಿಲ್ಲ - ಅದು ಸ್ಥಿತಿಗೆ ಸಂಬಂಧಿಸಿದ ವಿಚಾರ, ಕರ್ಮದ ವಿಚಾರ. ಸಮಾಧಾನ ಮಾಡುವುದಕ್ಕೆ ದುಡ್ಡು ಅಲ್ಲಿಯವರೆಗೆ ಕೈಚಾಚಲಾರದು. ಮನಸ್ಸಿಗೆ ಸುಖವಿಲ್ಲ ಅಂದಮೇಲೆ ಪ್ರಪಂಚದಲ್ಲಿರುವ ಪದಾರ್ಥಗಳನ್ನೆಲ್ಲ ಮನೆಯಲ್ಲಿ ತುಂಬಿಕೊಂಡರೆ ಏನು ಪ್ರಯೋಜನ ? ಆದರೆ ಸುಖ - ಅದನ್ನು ಹಣದಿಂದ ಪಡೆಯಬಹುದು. ಕಡೇ ಪಕ್ಷ ನಕಲಿ ಸುಖವನ್ನಾದರೂ ಪಡೆಯಬಹುದು. ಅದೇ ಅಲ್ಲದಿದ್ದರೂ ಸರಿ, - ಬದಲಾಗಿ ಅದರಂತೆಯೆ ಇರುವ ಇನ್ನೊಂದು. ಪ್ರತಿಕ್ಷಣವೂ ಸೇಡುತೀರಿಸಿಕೊಳ್ಳಲು ಮನಸ್ಸು ಸಿದ್ಧವಾಗಿದೆ. ಅಂದರೆ ಸುಖದ ಮೇಲೆ ಸೇಡು - ಸುಖದಂತೆಯೆ ಇರುವ

ಇನ್ನೊಂದು. ಅದನ್ನು ಪಡೆದುಕೊಳ್ಳಲು ಅವಕಾಶ ನೀಡುತ್ತದೆ ಹಣ.

ಸುಖ ಬರಬಹುದು. ನೆನಪಿಗೆ ಬಂತು. ಅವರು ಹೇಳುತ್ತಿರುತ್ತಾರೆ - 'ಹೊರಗೇಕೆ ಬರುವುದಿಲ್ಲ, ಬಂದು ಒಂದು ಕೈನೋಡು, ವಿದ್ಯಾವಂತಳಾಗು, ನಾವುಗಳೂ ಈ ದೊಡ್ಡವರ ಜೊತೆಯಲ್ಲಿ ಸಾಮಾಜಿಕವಾಗಿ ಸಂಬಂಧ ಇಟ್ಟುಕೊಂಡರೆ ನಮ್ಮ ಅದೃಷ್ಟ ಹೇಗೆ ಖುಲಾಯಿಸುತ್ತದೆ ನೋಡು. ನೀನೋ ಕಲ್ಲು ಅಂದರೆ ಕಲ್ಲು.

ಹಾಗಾಗಿ ಹಣದಿಂದ ಎಲ್ಲ ಸ್ವಂತವಾಗಿಯೆ ಮಾಡಿಕೊಳ್ಳಬಹುದು. ಅದರಿಂದ ಅವರಿಗೂ ಸಂತೋಷ.

ಸರೋಜಿನಿ ತನ್ನ ಮುಂದೆ ಹೊಸ ಬದುಕನ್ನು ನೋಡುತ್ತಿದ್ದಾಳೆ. ಹಣೆಯ ಮೇಲೆ ಬೆವರಿನ ಹನಿಗಳು, ಮೂಗಿನ ಹೊಳ್ಳೆ ಉಬ್ಬಿದೆ, ಉಸಿರಿನಲ್ಲಿ ಬಿರುಗಾಳಿ, ರಕ್ತ ಬಿಸಿಯಾಗಿದೆ. ಮುಖ ಬಾಡಿದೆ, ಅನ್ಯಮನಸ್ಕಳಾಗಿ ಅದೇ ಬದುಕು ಅದೇ ಸುಖವನ್ನು ಕಾಣುತ್ತಿದ್ದಾಳೆ. ಅದನ್ನು ಈ ಪರಿಚಯವಿರುವ ಮನಸ್ಸಿನ ಮುಂದೆ ಮಾತಿನಲ್ಲಿ ಹೇಳಲು ಸಾಧ್ಯವಿಲ್ಲ. ಸುಮ್ಮನೆ, ಬರಿಯ ಅನುಭವ, ಕನಸು, ಅದರ ರೂಪರೇಖೆಗಳನ್ನು ಅಳೆಯಲು ಮನಸ್ಸು ಒಡಂಬಡುವುದಿಲ್ಲ. ಆದರೆ ಅದರ ತೇಜಸ್ಸು ತನ್ನ ಜ್ವಾಲೆಯಿಂದ ಒಳಮನಸ್ಸನ್ನು ವ್ಯಾಕುಲಗೊಳಿಸುತ್ತದೆ, ವ್ಯಗ್ರವನ್ನಾಗಿಸುತ್ತದೆ. ಕತ್ತಲಲ್ಲಿ ಯಾವ ಕಡೆಯಿಂದ ಬೆಳಕು ಹರಿದುಬರುತ್ತದೆಯೊ, ಅತ್ತ ಕಡೆಯ ಸೆಳೆತಕ್ಕೆ ಸಿಕ್ಕಿದ್ದಾಳೆ. ಅದರ ಅಸ್ಪಷ್ಟವಾದ ನೆರಳಲ್ಲಿ ತಾನೇ ಮುಚ್ಚಿಹೋಗಿದ್ದಾಳೆ.

ಯಾರೋ ಕರೆಯುತ್ತಿದ್ದಾರೆಯೇ ? ಕದ ತಟ್ಟಿದ ಸದ್ದು.

"ಬಾಗಿಲು, ಬಾಗಿಲು."

ಸರೋಜಿನಿ ಬಾಗಿಲು ತೆರೆದು ಹೊರಗೆ ನೋಡತೊಡಗಿದಳು, "ಯಾರು ?"

ತಣ್ಣನೆಯ ಸುಳಿಗಾಳಿ ಮುಖಕ್ಕೆ ಸೋಕಿತು. ಹೊರಗೆ ಕತ್ತಲೆ, ಕತ್ತಲೆಯ ಒಂದು ಮೂಲೆಯಲ್ಲಿ ಸಿಗರೇಟಿನ ತುದಿ ಉರಿಯುತ್ತಿದೆ, "ನಾನು ಮಹಾಪಾತ್ರ."

ಗಾಬರಿಯಿಂದ ಎರಡು ಹೆಜ್ಜೆ ಹಿಂದಿಟ್ಟವಳೆ ಧಡಾರ್ ಅಂತ ಬಾಗಿಲು ಹಾಕಿದಳು. ಆ ಕೂಡಲೇ "ಅಯ್ಯೋಯ್ಯೋ, ನನ್ನ ಕಾಲು, ನನ್ನ ಕಾಲು" ಅಂತ ಒರಲಾಟ ಕೇಳಿಸಿತು.

ಸರಿ, ಬಾಗಿಲಿನ ಸಂದಿಯಲ್ಲಿ ಅವರು ಯಾವಾಗ ಕಾಲಿಟ್ಟರೊ ಗೊತ್ತಿಲ್ಲ. ಅಯ್ಯೋ ಪಾಪ, ಬಗ್ಗಿ ಎರಡೂ ಕೈಗಳಿಂದ ಪಾದವನ್ನು ಒತ್ತುತ್ತಾ ಕುಳಿತಿದ್ದಾರೆ. ಎರಡು ಬಾರಿ ಅಯ್ಯೋ ಅಂತ ನರಳಿದರು.

ಪಾಪ, ನಾಲ್ಕು ಕಾಲಿನ ಪ್ರಾಣಿಯಂತಾಗಿತ್ತು ಅವರ ಸ್ಥಿತಿ. ಪ್ರಾಣಿ ಏನು ತಾನೆ ಮಾಡುತ್ತೆ ? ಯಾರನ್ನು ಕರೆಯುವುದು ? ಏನು ಮಾಡುವುದು ?

ಹಾಗೇ ಸಿಲ್ಲೋಣ ಅಂದರೂ ಆಗುತ್ತಿಲ್ಲ. ಅವರ ಹತ್ತಿರ ಬರಲೂ ಸಾಧ್ಯವಾಗುತ್ತಿಲ್ಲ. ಮೈಯೆಲ್ಲ ನಡುಗುತ್ತಿದೆ. ಅವಡುಗಚ್ಚಿ ಏದುಸಿರುಬಿಡುತ್ತಾ ಸರೋಜಿನಿ ಅವರ ಕಾಲನ್ನೇ ನೋಡುತ್ತಾ ನಿಂತುಬಿಟ್ಟಳು.

ಆದದ್ದಾದರೂ ಏನು ?

ಮಹಾಪಾತ್ರರು-ಮಹಾಪಾತ್ರರು ಪೆಟ್ಟು ತಿಂದಿದ್ದರು.

ಕೆಳಗಿನಿಂದ ತಲೆಯೆತ್ತಿ ಮಹಾಪಾತ್ರರಂದರು - "ಏನು ಬಲಿದತ್ತ ಬಾಬುಗಳು ಮನೆಯಲ್ಲಿದ್ದಾರೆಯ ?"

"ಇಲ್ಲ."

"ಹೌದಾ ! - ಹಾಗಾದರೆ-"

ಎರಡು ಕಣ್ಣುಗಳು ಹೇಗೆ ಉರಿಯುತ್ತಿವೆ. ಧ್ವನಿ ಎಷ್ಟು ಒಡೆದಿದೆ. ಚೆನ್ನಾಗಿ ಪೆಟ್ಟು ಬಿದ್ದಿರಬೇಕು. ಮಹಾಪಾತ್ರರು ನಿಂತರು. ಮನೆಯೊಳಕ್ಕೆ ಒಂದೆರಡು ಹೆಜ್ಜೆ ಮಾತ್ರ ಇಟ್ಟಿದ್ದರು. ಸರೋಜಿನಿಯನ್ನು ನೋಡುತ್ತಿದ್ದರು.

"ಅದಲ್ಲ ನೀವು ಹೆಚ್ಚಿಗೆ ಯೋಚನೆ ಮಾಡಬೇಡಿ. ತಪ್ಪು ನನ್ನದು. ಕಾಲು ಒಳಗೆ ಉಳಿದುಬಿಟ್ಟಿತ್ತು. ಅಂದಹಾಗೆ ಬಲಿದತ್ತ ಬಾಬುಗಳು ಇಲ್ಲವೆ ? ಸಾಕಷ್ಟು ಸುತ್ತಾಡಿಕೊಂಡ ಬಂದೆ - ಅವರಿದ್ದಿದ್ದರೆ ಒಂದು ಲೋಟ ಚಹಾನಾದರೂ ಗಿಟ್ಟಿಸುತ್ತಿದ್ದೆ - ಪ್ರಮೋಷನ್ ಸಿಕ್ಕಿದೆಯಲ್ಲ ಅಂತ. ಮನೇಲಿದ್ದಿದ್ದರೆ ಅವರೇನು ಒಂದು ಲೋಟ ಚಹಾ ಕೊಡುತ್ತಿರಲಿಲ್ಲವೆ ? ಈಗ ಅವರು ಆಫೀಸರ್. ನಮಗೆಲ್ಲ ಸರಿಸಮಾನರಾಗಿದ್ದಾರೆ ಇನ್ನೇನು ಯೋಚನೆ ?"

ಕತ್ತಲೆ, ಬರೀ ಕತ್ತಲೆ.

ಮನೆಯೊಳಗೆ ಮಿನುಗುತ್ತಿರುವ ದೀಪ. ಕತ್ತಲೆ ಅದನ್ನು ಗೇಲಿ ಮಾಡುತ್ತಿರುವಂತಿದೆ.

ಸರೋಜಿನಿ ತಲೆತಗ್ಗಿಸಿ ಸುಮ್ಮನೆ ನಿಂತಿದ್ದಾಳೆ. ಚಹಾ ಎಂಬ ಪದ ಕಿವಿಯ ಮೇಲೆ ಬಿದ್ದೊಡನೆ ಚಹಾ ಹಾಕುವ ಪಿಂಗಾಣಿ ಬಟ್ಟಲು ಗೋಡೆಯಲ್ಲಿರುವ ಗೂಡಿನಲ್ಲಿಟ್ಟಿರುವುದು ನೆನಪಾಯಿತು. ಸ್ವಲ್ಪ ಬಿಸಿ ನೀರು, ಡಬ್ಬಿಯ ಹಾಲು ಒಂದು ಚಮಚ, ಒಂದು ಚಿಟಿಕೆ ಚಹಾ ಎಲೆಗಳು, ಒಂದು ಚಮಚ ಸಕ್ಕರೆ. ಇದೇ ತಾನೇ - ಲೋಟದ ಭರ್ತಿ ಇರುವ ಚಹಾ ಅಂತ ಕರೆಸಿಕೊಳ್ಳುವ ಬಿಸಿ ನೀರು.

ಇಲ್ಲ ಅಂದುಬಿಡಲೆ ? 'ಅವರು' ಬರುತ್ತಿರಬಹುದು. ಏನೆಂದಾರು ಅವರು ?

"ಇಷ್ಟೂ ನಿನ್ನ ಕೈಲಿ ಆಗಲಿಲ್ಲವೆ ? ಬಾಯಿ ಬಿಟ್ಟು ಇಲ್ಲ ಅಂತಲೂ ಹೇಳಿಬಿಟ್ಟೆಯಾ. ಛೆ ಛೆ."

ಚಹಾ ಮಾಡುವ ಸಡಗರದಲ್ಲಿ ಪಾತ್ರೆ ತೆಗೆದುಕೊಳ್ಳಲು ಕೈ ಮುಂದೆ ಚಾಚಿದಳು. ಗೂಡು ಅವರ ತಲೆಯ ಮೇಲಿದೆ. ಚಹಾ ಪಾತ್ರೆಗಳನ್ನು ತೆಗೆದುಕೊಳ್ಳುತ್ತಿದ್ದಂತೆಯೆ ಅವಳ ಉದ್ದವಾದ ಕೈಗಳ ಮೇಲೆ ಅವರ ಚೂಪುದೃಷ್ಟಿ ನಾಟುತ್ತದೆ. ಇದರಿಂದ ಮೈಯೆಲ್ಲ ನಡುಗುತ್ತದೆ, ರೋಮರೋಮವೂ ಸೆಟೆದು ನಿಲ್ಲುತ್ತದೆ.

ಮಹಾಪಾತ್ರರು ಅವಳ ತೆರೆದ ತೋಳನ್ನೇ ನೋಡುತ್ತಿದ್ದಾರೆ. ಉಬ್ಬಿದ ನೇರವಾದ ರಬ್ಬರಿನ ನಳಿಕೆ, ಅಲ್ಲ, ಹಾವು ಬಳ್ಳಿ - ಬೆಳಗೆ ಮಿರುಗುತ್ತಿರುವ ಚರ್ಮ, ಅದರಡಿಯಲ್ಲಿ ಕಚ್ಚಾ ಮಾಂಸ - ಹಸಿ ಮಾಂಸ. ಅದರ ಬಳುಕಿನಲ್ಲಿ ಮಿಂಚು, ಗಾಳಿ ಮತ್ತು ಆಕಾಶದ ನಡುವ ಮೋಹಕ ಅಲೆಗಳನ್ನೆಬ್ಬಿಸುತ್ತದೆ. ಮಹಾಪಾತ್ರರು ಅವನ್ನೆಲ್ಲ ಒಟ್ಟುಗೂಡಿಸಿಕೊಳ್ಳುತ್ತಿದ್ದಾರೆ. ಪಿಂಗಾಣಿ ಬಟ್ಟಲುಗಳು ಲಯಬದ್ಧವಾಗಿ ಖಣ್ ಖಣ್ ಅಂತ ಸದ್ದುಮಾಡುತ್ತಾ ಜಾರಿಬೀಳುತ್ತವೆ. ಎದೆಯ ತಿದಿಯ ಓಟ ಶಬ್ದಗಳಿಗಿಂತಲೂ ಮಿಗಿಲಾಗುತ್ತದೆ. ಪರಿಚಯವಿರುವ ಸುವಾಸನೆ, ಪರಿಚಯವಿರುವ

ಬಣ್ಣ, ಪರಿಚಯವಿರುವ ಪರಿಸರ, ಸೊಂಪಾದ ಕೈಗಳ ಸ್ನೇಹಸ್ಪರ್ಶ, ಎಲ್ಲ ಮನೆಯ ವಾತಾವರಣ, ಮನೆಯದು ಅಂದರೆ ಅಪ್ಪಟ ಮನೆಯದೇ.

ಮೋಡಿಗೊಳಗಾದಂತೆ ಮಹಾಪಾತ್ರರು ನೋಡುತ್ತಿದ್ದಾರೆ. ಸರೋಜಿನಿ ಗಾಬರಿಗೊಂಡು ಪಿಂಗಾಣಿ ಪಾತ್ರೆಗಳನ್ನು ಎತ್ತುತ್ತಿದ್ದಾಳೆ. ಕೈಗಳು ನಿಧಾನವಾಗಿ ತೆಗೆಯುತ್ತಿದೆ. ತೆಗೆಯುತ್ತಿರುವಂತೆಯೆ ನಡುಗುತ್ತಿವೆ. ತಟ್ಟೆಯಿಂದ ಲೋಟವೂ ಜಾರುತ್ತದೆ. ಮೇಲೆತ್ತಿಕೊಳ್ಳುತ್ತಿದ್ದಂತೆಯೆ ಯಾವುದೋ ಕೈ ಮುಂದೆ ಬರುತ್ತದೆ. ಯಾರೋ ಕೈಹಿಡಿದುಕೊಂಡು ಮೆಲ್ಲನೆ ಅದುಮುತ್ತಾರೆ. ಅಯ್ಯೋ ದೇವರೇ, ಇಡೀ ಮೈಯೆಲ್ಲ ತರಗೆಲೆಯಂತೆ ಥರಥರ ಅಂತ ನಡುಗುತ್ತಿದೆ. ಭೂಮಿ ನಡುಗಿತು. ಕಣ್ಣುಗಳು ಹಾಗೆಯೆ ಮುಚ್ಚಿಕೊಳ್ಳುತ್ತಿವೆ. ಕಣ್ಣು ಬಿಡುವಷ್ಟರಲ್ಲಿಯೆ ಮೈಯೆಲ್ಲ ಬೆವರಿನಿಂದ ಒದ್ದೆ, ನಡುಗುತ್ತಲೆ ಬಿಡಿಸಿಕೊಳ್ಳುತ್ತಿದ್ದಾಳೆ. ಯಾರೋ ನಿಧಾನವಾಗಿ ಉಸಿರಾಡುತ್ತಿದ್ದಾರೆ - "ಜೋಪಾನ, ಮತ್ತೆ ತೂರಾಡಬೇಡಿ, ಬಿದ್ದೀರಿ ಜೋಕೆ." ಏನೂ ಒಡೆಯಲಿಲ್ಲ, ಏನೂ ಬೀಳಲಿಲ್ಲ. ಲೋಟ, ತಟ್ಟೆ, ಕೆಟಲುಗಳನ್ನು ಹಿಡಿದು ಸ್ವಲ್ಪ ಬಗ್ಗಿ ನೇರವಾಗಿ ಒಳಮನೆಗೆ ಓಡಿಹೋದಳು, ಬಿಸಿಯೆನಿಸುತ್ತದೆ, ಮೈಯಲ್ಲೆಲ್ಲ ಬಿಸಿ ಹರಡುತ್ತಿದೆ, ಅಬ್ಬಾ, ತಡೆಯಲಾರದಷ್ಟು ಬಿಸಿ, ತಲೆಯೊಳಗೆ ಬಿರುಗಾಳಿ ಬೀಸಿದಂತಾಗುತ್ತಿದೆ.

ಸೀದಾ ಒಲೆಯ ಬಳಿ ಬಂದಳು. ಅದೇ ಅವಳ ಕೋಟೆ, ಅವಳಿಗೆ ರಕ್ಷಣೆ, ಅವಳ ಒಳದನಿಗೆ ಓಗೊಡುವ ಏಕೈಕ ಒಡನಾಡಿ, ಭಾವುಕತೆಯ ಪ್ರತೀಕ, ಬದುಕಿನ ರೂಪ, ಇಲ್ಲಿ ಒಂದು ಸಂಸಾರ ಇದೆ ಅನ್ನುವುದಕ್ಕೆ ಸೂಚನೆ - ಬೆಂಕಿ.

ಒಲೆಯಲ್ಲಿ ಬೆಂಕಿ ಉರಿಯುತ್ತಿದೆ.

ಇನ್ನೂ ಸರಿಯಾಗಿ ಕುಳಿತು ಸಾವರಿಸಿಕೊಂಡಿಲ್ಲ. ಅಷ್ಟರಲ್ಲೇ ಹೊರಗಿನ ಕೋಣೆಯಿಂದ ಮಹಾಪಾತ್ರರು ಉಲ್ಲಾಸದಿಂದ ವ್ಯಂಗ್ಯ ತುಂಬಿದ ಮಾತುಗಳನ್ನಾಡುತ್ತಿರುವುದು ಕಿವಿಗೆ ಬಿತ್ತು.

"ಇನ್ನೊಂದು ಸ್ವಲ್ಪ ಆಗಿದ್ದರೆ ಬಲಿದತ್ತ ಬಾಬು, ನೀವು ಇಷ್ಟು ಶೋಕಿಯಾಗಿ ಇಟ್ಟುಕೊಂಡಿರುವ ಕಪ್ ಕೆಳಗೆ ಬೀಳುತ್ತಿತ್ತು - ಚೂರುಚೂರಾಗಿ ಹೋಗುತ್ತಿತ್ತು - ಹಂ ಹಂ - ಪಿಂಗಾಣಿ ಕೆಳಗೆ ಬಿದ್ದಿತೆಂದರೆ ಚೂರುಚೂರು, ಮತ್ತೆ ಸೇರಿಸೋದಕ್ಕಾಗೋದಿಲ್ಲ, ಹಂ ಹಂ ಹಂ-"

ಸರೋಜಿನಿಯ ಕಿವಿಗಳು ಅತ್ತ ಕಡೆಯೆ ಇದೆ.

ಪಿಂಗಾಣಿ ಕೆಳಗೆ ಬಿದ್ದಿತೆಂದರೆ ಚೂರು ಚೂರು - ಹಾಗಾದರೆ ಅದು ಬೀಳುತ್ತಿತ್ತೆ ? ಈ ಮಾತನ್ನು ಏಕೆ ಆಡಿದರು ? ಕಿವಿಯಲ್ಲೆಲ್ಲ ರಕ್ತ ನುಗ್ಗಿ ಕೆಂಪಾದಂತಾಯಿತು. ಚಹಾ ನೀರನ್ನು ಸುಮ್ಮನೆ ನೋಡುತ್ತಾ ನಿಂತಳು. ಕಳೆದ ವಿಷಯವನ್ನು ನೆನಪಿನಿಂದ ಕಿತ್ತೊಗೆದು ಮತ್ತೆ ಮೊದಲಿನಂತಾಗಲು ಪ್ರಯತ್ನಿಸುತ್ತಿದ್ದಾಳೆ. ತಲೆಯಲ್ಲಿ ದೂರ ದಿಂದ ಬಿರುಗಾಳಿ ರೊಂಯ್ ರೊಂಯ್ ಅಂತ ಬೀಸುತ್ತಿದೆ.

ಆಮೇಲೆ, ಯೋಚಿಸುತ್ತಲೆ ಹೆದರಿಕೆಯಾಗುತ್ತದೆ. ಸುಮ್ಮನೆ ಕಾಯಬೇಕಷ್ಟೆ. ನಿಜ ಹೇಳಬೇಕೆಂದರೆ ಒಂದು ಯುಗವೇ ಕಳೆದಂತಾಯಿತು. ಸ್ವಲ್ಪ ಹೊತ್ತಿನ ಮೇಲೆ ಹೊರಗಿನ ಕೋಣೆಯಲ್ಲಿ ಮಾತಾಡುತ್ತಿದ್ದುದು ಕೇಳಿಸಿದು - "ಅದೆ, ಬಲಿದತ್ತ

ಬಾಬು ? ಎಲ್ಲಿಗೆ ಹೋಗಿದ್ದಿರಿ ? ನಾನು ನಿಮಗೋಸ್ಕರವೆ ಕಾದು ಕುಳಿತಿದ್ದೆ."

"ನಮಸ್ಕಾರ ಸಾರ್, ನಮಸ್ಕಾರ ಸಾರ್, ಯಾವಾಗ ಬಂದಿರಿ ? ಎಲೆಯಡಿಕೆ-"

"ನನ್ನ ಬಗ್ಗೆ ಏನೂ ಯೋಚಿಸಬೇಡಿ. ಚಹಾ ಬರುತ್ತಿದೆ. ನಿಮಗೆ ಪ್ರಮೋಷನ್ ಸಿಕ್ಕಿದೆಯಲ್ಲ, ತುಂಬಾ ಸಂತೋಷ."

"ಅದೆಲ್ಲಾ ತಮ್ಮದೇ ದಯೆ ಸಾರ್."

"ಇಲ್ಲ, ಇಲ್ಲ, ನೋಡಿ. ಇದು ಕೇವಲ ಪ್ರಾರಂಭ ಅಷ್ಟೆ. ಇನ್ನೆಷ್ಟು ಬಾಕಿಯಿದೆಯೋ ನೋಡಬೇಕು. ನೀವೇ ಈ ಕಂಪನಿಗೆ ಒಂದು ದಿನ ದೊಡ್ಡ ಸಾಹೇಬರಾಗುತ್ತೀರಿ. ಕಾರೋಬಾರು ನಡೆಸುತ್ತೀರಿ. ಹೇಲ್ ಮ್ಯಾಕ್‌ಬೆತ್, ಹೇಲ್ ಕಡರ್, ಹೇಲ್ ಗ್ಲಾಮಿಸ್, ದಿ ಗ್ರೇಟೆಸ್ಟ್ ಇಸ್ ಟು ಕಮ್ - ಹಾ-ಹಾ."

"ಎಲ್ಲ ತಮ್ಮ ದಯೆ ಸಾರ್, ಇಲ್ಲದಿದ್ದರೆ ನಮ್ಮನ್ನು ಯಾರು ಕೇಳ್ತಾರೆ ?"

"ನಿಜ, ನಿಜ. ಬಲಿದತ್ತನಿಗೆ ಖಂಡಿತ ಅವಕಾಶ ಕೊಡಬೇಕು, ಅವರಂಥ ಒಳ್ಳೆಯ ಕೆಲಸಗಾರರು ಯಾರಿದ್ದಾರೆ ಅಂತ ನಾನು ಸಾಹೇಬರಿಗೆ ಹೇಳಿದ್ದೆ. ಆ ಮಾತು ಬಿಡಿ. ಮೊದಲು ಒಳಗೆ ಬನ್ನಿ."

"ಸಾರ್, ಅಮ್ಮಾವ್ರಿಗೆ ಹಲ್ಲು ನೋಯ್ತಾ ಇತ್ತಂತೆ, ಗೊತ್ತಾಯ್ತಾ ?"

"ಹಲ್ಲು ನೋವೆ ? ನನಗೆ ಗೊತ್ತೇ ಇಲ್ಲವಲ್ಲ"

"ಹೌದು, ಒಂದು ಹಲ್ಲಿನಲ್ಲಿ ನೋವಿತ್ತಂತೆ, ಆಳು ಹೇಳಿದ, ಡಾಕ್ಟರಿಗೆ ಹೇಳಿಬಂದಿದ್ದೇನೆ."

"ಹಾಗಾದರೆ ಡಾಕ್ಟರು ನೋಡಿರಬೇಕಲ್ಲವೆ. ಅವರಿಗೆ ಪಾಯೋರಿಯ ಇದೆಯಲ್ಲವೆ. ಮಧ್ಯೆ ಮಧ್ಯೆ ಹಾಗೆ ನೋವು ಬರುವುದುಂಟು. ನೀವು ಅವರನ್ನು ಚೆನ್ನಾಗಿ ನೋಡಿಕೊಳ್ತಾ ಇದ್ದೀರಿ. ನಾನೇ ನೋಡ್ತಾ ಇದ್ದೀನಲ್ಲ. ಅದು ಸರಿ ಬಲಿದತ್ತ ಬಾಬು, ನೀವೇನೋ ರಾತ್ರಿ ಹೊರಗಡೆ ಇದ್ದುಬಿಡ್ತೀರಿ. ಈ ಕಡೆ ಮನೇಲಿ ನಿಮ್ಮ ಮನೆಯಾಕೆ ಒಬ್ಬರೇ ಗಾಬರಿಯಾಗ್ತಾ ಇರ್ತಾರೆ. ನಾನು ಹೇಳೋದು ಏನೆಂದರೆ ಒಬ್ಬ ಸಣ್ಣ ಹುಡುಗನನ್ನು ಇಟ್ಟುಕೊಂಡರೆ ಒಳ್ಳೇದು."

ಬಲಿದತ್ತನ ಹೃದಯ ಕುಣಿಯುತ್ತದೆ. ನಗುನಗುತ್ತಲೆ ಜೋರಾಗಿ ಹೆಜ್ಜೆಯಿಡುತ್ತಾ ಒಳಗಡೆ ಹೊರಟ. ಸರೋಜಿನಿ ಕಿವಿಯನ್ನು ಅಲ್ಲೇ ನೆಟ್ಟಿದ್ದಳು. ಅವಳು ಈಗ ಹಸನ್ಮುಖಿಯಾಗಿದ್ದಳು. ಬೇಗ ಬೇಗ ಅವನ ಬೂಟಿನ ಲೇಸು ಬಿಚ್ಚಿದಳು, ಕೋಟು ತೆಗೆದಳು, ಗುಸು ಗುಸು ಅಂತ ಅವನ ಬಳಿ ಉಸುರಿದಳು - "ಏನಾಯ್ತು ಗೊತ್ತಾ, ನೀವು ಇರಲಿಲ್ಲ, ಯಾರೋ ಕರೆಯುತ್ತಿದ್ದರು. ಬಾಗಿಲು ತೆರೆದು ನೋಡಿದರೆ ಯಾರೋ ಗಂಡಸರು ನಿಂತಿದ್ದರು. ನನಗೆ ಕಸಿವಿಸಿಯಾಯಿತು. ನೀವು ಮನೇಲಿಲ್ಲವೆ ಅಂತ ಮಹಾಪಾತ್ರರು ಕೇಳಿದರು. ಸರಿ, ನಾನು ಕುಳಿತಿರುತ್ತೇನೆ, ಸ್ವಲ್ಪ ಚಹಾನಾದರೂ ಮಾಡಿಕೊಡ್ತೀರಾ ಹೇಗೆ ಅಂತ ಕೇಳಿದರು. ಬಾಯಿಬಿಟ್ಟು ಮನುಷ್ಯ ಚಹಾ ಕೇಳುತ್ತಿದ್ದಾರೆ. ಮನಸ್ಸಿನಲ್ಲೇ ಯೋಚಿಸಿದೆ. ಸರಿ, ಬಡವರ ಮನೆಯ ಆತಿಥ್ಯ, ಚಹಾ ತಯಾರಿಸಿದೆ. ಯಾರಪ್ಪಾ ಹೋಗಿ ಕೊಡುವವರು ಅಂತ ಯೋಚಿಸುತ್ತಿದ್ದೆ. ಇಲ್ಲದಿದ್ದರೆ ಮರೆಯಾಗಿ ಹೋಗಿ ಹೊಸಿಲಿನ ಹತ್ತಿರ ಇಟ್ಟುಬರುತ್ತಿದ್ದೆ. ಛೆ, ಏನು ಅಂದುಕೊಳ್ಳುತ್ತಿದ್ದರೋ ?"

"ಯಾಕೆ ಒಳಗಡೆ ಹೋಗಿ ಮೇಜಿನ ಮೇಲೆ ಇಟ್ಟುಬಂದಿದ್ದರೆ ಪಾಪ ಸುತ್ತುಕೊಳ್ಳುತ್ತಿತ್ತಾ? ಇದೇ ನಿನ್ನ ಪೆದ್ದುತನ ಅಂದರೆ. ಅವರು ಎಷ್ಟು ದೊಡ್ಡ ಮನುಷ್ಯರು ಗೊತ್ತಾ? ಅವರ ಪೆನ್ನಿನಿಂದಲೇ ನನಗೆ ಪ್ರಮೋಷನ್ ಸಿಕ್ಕಿರುವುದು. ತಾವೇ ಚಹಾ ಕೇಳಿದರಲ್ಲ. ಓಹೋ! ಅದೆಷ್ಟು ಸರಳವಾದ ನಡವಳಿಕೆ, ಮೊದಲಿನಿಂದಲೂ ಅವರು ಇದೇ ರೀತಿಯ ಮನುಷ್ಯರು. ಅವರ ಹೃದಯದಲ್ಲಿ ತುಂಬಾ ದಯೆಯಿದೆ, - ತುಂಬಾ ದಯೆಯಿದೆ. ಬರಿ ಚಹಾ ಕೊಡುತ್ತೀಯ? ಬೇಡ ಏನಾದರೂ ಮಾಡು. ಏನಾದರೂ ಸ್ವಲ್ಪ ತಿಂಡಿ."

"ಏನು ಮಾತಾಡುತ್ತಿದ್ದೀರಾ ಬಲಿದತ್ತ ಬಾಬು. ನಾನೂ ಒಳ್ಳೇ ಮನುಷ್ಯ, ರಾತ್ರಿ ಹೊತ್ತೇ ಬಂದಿದ್ದೀನಲ್ಲ. ಇರಲಿ ಬಿಡಿ. ಐ ಡೋಂಟ್ ಮೈಂಡ್ ಇಟ್. ನಾನು ಬರುತ್ತೇನೆ-"

"ಸಾರ್, ಸಾರ್, ಸ್ವಲ್ಪ ಸಾರ್, ಸ್ವಲ್ಪ-"

"ಸರಿ, ಸರಿ, ಹಾಗಾದರೆ ನಾನು ಹೋಗೊಲ್ಲ"

ಸ್ವಲ್ಪ ಹೊತ್ತಿನಲ್ಲೇ ಸರೋಜಿನಿ ಬಾಗಿಲ ಬಳಿ ಬಂದುನಿಂತಳು. ಕೈಯಲ್ಲಿ ಚಹಾ ಮತ್ತು ಸಿಹಿತಿಂಡಿ.

ಮೈ ಅರ್ಧ ಮಾತ್ರ ಕಾಣಿಸುತ್ತಿದೆ. ಅದೇ ಅರ್ಧದಲ್ಲಿ ಚಹಾ ಮತ್ತು ತಿಂಡಿ ಹಿಡಿದಿದ್ದಾಳೆ.

ಬಲಿದತ್ತ ತೆಗೆದುಕೊಂಡು ಬಂದ.

ಮಹಾಪಾತ್ರರು ಜೋರಾಗಿ ಹೇಳಿದರು - "ಹಾಗಾದರೆ ನಾನು ಇವತ್ತು ಮನೆಯಲ್ಲಿ ಊಟ ಮಾಡೋಹಾಗಿಲ್ಲ. ಇದೇನಿದು? ಇದ್ದಕ್ಕಿದ್ದ ಹಾಗೆ ಛೂಮಂತ್ರ ಅಂತ ಪ್ರತ್ಯಕ್ಷ?"

ಬಿಸಿಬಿಸಿ ತಿಂಡಿಯ ಮೇಲೆ ನಾಲ್ಕು ಬೆರಳುಗಳ ಗುರುತು ಸುಂದರವಾಗಿ ಮೂಡಿಬಂದಿದೆ. ಅದನ್ನು ನೋಡಿ ಮಹಾಪಾತ್ರರು ಅಂದರು - "ನೋಡಿ, ಅದೆಷ್ಟು ತುರುಕಿಬಿಟ್ಟಿದ್ದಾರೆ ತಟ್ಟೆಯಲ್ಲಿ. ನಿಮ್ಮ ಹೆಂಡತಿಯ ಬೆರಳುಗಳು ತುಂಬಾ ಸಣ್ಣವು ಅಂತ ಕಾಣುತ್ತೆ, ಅದರ ಮೇಲೆ ಇಷ್ಟು ಕೆಲಸ."

ಮಹಾಪಾತ್ರರು ನಕ್ಕರು. ಬಲಿದತ್ತ ಪೆಚ್ಚುಪೆಚ್ಚಾಗಿ ನಗುತ್ತಿದ್ದ. ಒಳಮನೆಯಿಂದಲೂ ತಡೆದು ತಡೆದು ನಗುತ್ತಿರುವುದು ಕೇಳಿಸುತ್ತಿದೆ. ತಾನೂ ನಗುತ್ತಿದ್ದೇನೆಂದು ಸರೋಜಿನಿ ಹೇಳುತ್ತಿದ್ದಾಳೆ.

"ಎಷ್ಟು ಸೊಗಸಾದ ಸಿಹಿ ತಿಂಡಿ. ನಿಜ ಹೇಳಬೇಕೆಂದರೆ ನಿಮ್ಮ ಹೆಂಡತಿ ಒಂದು ರತ್ನ ಅಂದರೆ ರತ್ನ. ನನಗೆ ಹೊಟ್ಟೆಕಿಚ್ಚು ಬರುತ್ತೆ - ಹೆಂ ಹೆಂ ಹೆಂ."

ಬೆಳಗ್ಗೆ ನೋಡಿದರೆ ಮನೆಯ ಮುಂದಿನ ಕೈತೋಟದ ಬಳಿ ರಾಮಬಾಬುವಿನ ಹೆಂಡತಿ.

"ಪರವಾಗಿಲ್ಲ, ನಿನ್ನ ವರಸೆ ಅಂದ್ರೆ ವರಸೆ."

"ಏನಂದ್ರಿ?"

"ನೀನೇ ಸರಿ, ಒಳ್ಳೇ ಕಿಲಾಡಿ."

"ಇದೇನ್ರೀ, ಹೀಗಂತಿದ್ದೀರಾ ?"

"ನಮ್ಮ ಹತ್ತಿರ ಯಾಕೆ ಮುಚ್ಚಿಡೋದು ? ಈಗ ದೊಡ್ಡ ಮನುಷ್ಯರಾಗಿದ್ದೀರಿ, ದೊಡ್ಡ ದೊಡ್ಡ ಮನುಷ್ಯರೆಲ್ಲ ಬರುತ್ತಿರುತ್ತಾರೆ. ನಮ್ಮಂತಹ ಬಡವರನ್ನು ಯಾಕಮ್ಮಾ ಕೇಳ್ತೀಯಾ ಈಗ. ಸರಿಬಿಡು, ಈ ಕಣ್ಣು ಎಷ್ಟು ನೋಡಿದೆಯೊ, ಇನ್ನೂ ಏನೇನು ನೋಡಬೇಕೊ. ದೇವರು ದೊಡ್ಡವನು, ಚೆನ್ನಾಗಿಟ್ಟಿರಲಿ ಅಷ್ಟೆ. ಅಯ್ಯೋ, ಇದೇನು ಮಾಡುತ್ತಿದ್ದಿ ? ಈ ಪರಂಗಿಕಾಯಿಗಳನ್ನು ಯಾಕೆ ಕೀಳ್ತಾ ಇದ್ದಿ ? ಮರದ ಮೇಲಿದ್ದರೆ ಹಣ್ಣಾಗೋದಿಲ್ಲವಾ ?"

"ತೊಗೊಳ್ಳಿ ಎರಡು, ನೀವು ಹುಳಿ ಮಾಡಿ."

"ಬಿಡು, ಅದನ್ನು ತೊಗೊಂಡು ಏನು ಮಾಡ್ಲಿ ? ಇರಲಿಬಿಡು, ಇರಲಿ, ಮಾಡಿದ್ರಾಯ್ತು."

"ಅಕ್ಕಯ್ಯ, ಇನ್ನೇನು ನಾವು ಹೊರಟುಹೋಗ್ತೀವಲ್ಲ."

"ಆಹಾ, ನಾನೂ ಅದೇ ಹೇಳ್ತಾ ಇರೋದು. ನಿಂಬೆ ಗಿಡದಲ್ಲಿ ಎಷ್ಟೊಂದು ಕಾಯಿ ತುಂಬಿಕೊಂಡಿತ್ತು. ಈಗ ನೋಡಿದ್ರೆ ಎಲ್ಲ ಬೋಡಾಗಿದೆ. ಎಲ್ಲ ಉದುರಿಸಿ ಬಿಟ್ಟೆಯೊ ? ನೀವು ತಿನ್ನದೇ ಇದ್ರೆ ಬೇರೆ ಯಾರಾದರೂ ತಿನ್ನುತ್ತಿದ್ದರು. ಹೂಂ, ಎಲ್ಲಾ ಹೋಯ್ತು, ಒಂದು ಗಾಡಿ ನಿಂಬೆಹಣ್ಣು ಬಿಡ್ತಾ ಇತ್ತು. ಈ ನಿಂಬೆಹಣ್ಣು ಎಷ್ಟು ತುಟ್ಟಿ ಅಂತ ಗೊತ್ತಾ ? ಆಣೆಗೆ ಒಂದೇ ಒಂದು, ಅದಿರಲಿ, ಈ ಪರಂಗಿಗಿಡ ಯಾಕೆ ಹಾಳುಮಾಡ್ತಾ ಇದ್ದಿ ?"

"ಅದರಿಂದ ನಿಮಗೇನು ಅಕ್ಕಯ್ಯ ?-" ಪರಂಗಿ ಗಿಡದಲ್ಲಿ ಇನ್ನೊಂದು ಕಡ್ಡಿ ತಿರುಚುತ್ತಾ ಸರೋಜಿನಿ ಕೇಳಿದಳು.

"ಇಲ್ಲ ಕಣೆ ಹಾಗಲ್ಲ."

"ಹಾಗಾದ್ರೆ ಸರಿ, ನೀವು ಒಳಗೆ ಹೋಗಿ."

"ಮನೆ ಒಳಗಲ್ಲದೆ ನಾನು ಹೊರಗಿದ್ದೀನಾ ? ಎಲ್ಲಾ ನೋಡುತ್ತಾ ಕೇಳುತ್ತಾ ಕಣ್ಣು ಮುಚ್ಚಿಕೊಂಡಿದ್ದೇನೆ. ಯಾಕೆ ? ಸರಿ, ನಡಿ, ಫಲ ಕೊಡೋ ಗಿಡಾನ ಕಡೀಬಾರದು ಕಣೆ."

ರಾಮಬಾಬುವಿನ ಹೆಂಡತಿ ಒಳಕ್ಕೆ ಹೋದಳು.

ಸರೋಜಿಗೆ ನಿಜವಾಗಿಯೂ ಗಿಡ ಕತ್ತರಿಸಿ ಹಾಕಬೇಕೆನಿಸಿತು.

ಹಳೆಯ ಮನೆಯನ್ನು ಬಿಡಬೇಕು. ತನ್ನ ಕೈಯಲ್ಲಿರುವ ಯಾವುದನ್ನೂ ಬಿಟ್ಟು ಹೋಗಬಾರದು. ಒಂದು ಹುಲ್ಲುಕಡ್ಡಿಯನ್ನೂ ಬಿಡಬಾರದು.

ಆದರೆ ಮನುಷ್ಯ ಅನೇಕ ವಿಷಯಗಳನ್ನು ತನ್ನ ಹಿಂದೆ ಬಿಟ್ಟುಹೋಗುತ್ತಾನೆ. ಸರೋಜಿನಿ ಮತ್ತು ಬಲಿದತ್ತರ ವಿಚಾರದಲ್ಲಿ ಅವರಿಗೆ ಇಷ್ಟವಿಲ್ಲದಿದ್ದರೂ ಅದು ಹಾಗೇ ಆಯಿತು. ಗಾಡಿ ಬಂದು ನಿಂತಾಗ, ಸಾಮಾನು ಸರಂಜಾಮುಗಳನ್ನೆಲ್ಲ ಕಟ್ಟಿಡುವುದು ಮುಗಿಯಿತು. ಇನ್ನು ಹಳೇಮನೆಯನ್ನು ಬಿಡಲೇಬೇಕು.

ಸುಮ್ಮನೆ ಬೇರೆ ಮನೆಗೆ ಬದಲಾಯಿಸುವುದಿಲ್ಲ - ವರ್ಗವಾಗಿದೆ ಅಂತ ಕಂಪನಿಯಿಂದ ಆರ್ಡರ್ ಬಂದಿತ್ತು. ಏತಕ್ಕೆಂದರೆ ಬಲಿದತ್ತನಿಗೆ ಪ್ರಮೋಷನ್ ಸಿಕ್ಕಿದೆ.

ಕಂಪನಿಯ ದೃಷ್ಟಿಯಲ್ಲಿ ಅವನು ಇನ್ನೂ ಹೆಚ್ಚು ಜವಾಬ್ದಾರಿ ಹೊರಲು ಸಮರ್ಥ. ಹಾಗಾಗಿ ಅವನು ದೂರ ಹೋಗಲೇಬೇಕು. ಸಂತೋಷ ಅವನ ಮನಸ್ಸಿನಲ್ಲಿ ಉಕ್ಕಿಬರುತ್ತದೆ, ಸಂಬಳ ಹೆಚ್ಚಿದೆ. ಅದರ ಜೊತೆಗೆ ತನ್ನ ಯೋಗ್ಯತೆಯನ್ನು ತೋರಿಸುವ ಅವಕಾಶವೂ ದೊರೆತಿದೆ. ಆ ದೂರದಲ್ಲೇ ಅವನಿಗೆ ಭವಿಷ್ಯ ಕಾಣಿಸುತ್ತಿದೆ. ಅದು ಅವನು ಹತ್ತಬಹುದಾದಂತಹ ಮೆಟ್ಟಿಲು. ಒಟ್ಟಿನಲ್ಲಿ ಏನೇ ಆಗಲಿ ಹೊರಡುವ ಸನ್ನಾಹದಲ್ಲಿದ್ದಾನೆ. ಗಾಡಿಯಲ್ಲಿ ಪೂರ್ತಿಯಾಗಿ ಸಾಮಾನು ತುಂಬಿ "ನಡಿ, ನಡಿ" ಅಂದ. ಆದರೆ ಕಡೆ ಗಳಿಗೆಯಲ್ಲಿ ಸಣ್ಣ ಸಣ್ಣ ವಿಚಾರಕ್ಕೂ ಮನಸ್ಸಿಲ್ಲದೆ ನಿಂತುಕೊಳ್ಳಬೇಕಾಗುತ್ತದೆ. ಮನುಷ್ಯನ ದೌರ್ಬಲ್ಯ ಅತಿಯಾಗಿ ಎದ್ದುಕಾಣುವುದು ಅಂತಹಗಳಲ್ಲೇ. ಅವನು ಎಷ್ಟೇ ಮುಂದೋಡುವವನಾಗಲಿ ಖಂಡಿತ ಹಿಂದಿರುಗಿ ನೋಡಿಯೆ ನೋಡುತ್ತಾನೆ. ಏಕೆಂದರೆ ತನ್ನ ಬದುಕಿನ ಸ್ವಲ್ಪ ಭಾಗ ಹಿಂದೆಯೆ ಉಳಿದಿರುತ್ತದೆ. ಅದನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗುವ ಹಾಗಿಲ್ಲ.

ಏಕೆಂದರೆ ಕೇವಲ ಆಕಾಶದಲ್ಲಿರುವ ಸೂರ್ಯ ಮತ್ತು ಮೇಜಿನ ಮೇಲಿರುವ ಲಾಟೀನು ಇವುಗಳಿಂದಲೇ ಬೆಳಕು ಬರುವುದಿಲ್ಲ. ಸಮಯ ಬಂದಾಗ ಮನುಷ್ಯ ತನ್ನ ಬೆಳಕನ್ನೂ ಬೀರುತ್ತಾನೆ. ತನ್ನ ಉಸಿರನ್ನು ಸುತ್ತಲೆಲ್ಲಾ ಹರಡುತ್ತಾ ಮುಂದುವರಿಯು ತ್ತಾನೆ. ತಾನು ಅನುಭವ ಪಡೆದುಕೊಂಡು ಸ್ಪರ್ಶದ, ನೆನಪಿನ ಅನುಭವವನ್ನು ಬಿಟ್ಟುಹೋಗುತ್ತಾನೆ. ಹಾಗೆ ಕೊಡುತ್ತಲೆ ಒಂದು ದಿನ ಅವನು ಮಂಜಾಗಿ ತಣ್ಣಗಾಗಿ ಹೋಗುತ್ತಾನೆ, ಕತ್ತಲೆಯಾಗುತ್ತದೆ. ಆದರೆ ಈ ಪಕ್ವತೆ ಒಂದೇ ಕ್ಷಣದಲ್ಲಿ ಬರುವಂತಹದಲ್ಲ. ಅದೊಂದು ಕ್ರಮ, ಹುಟ್ಟಿನಿಂದ ಸಾವಿನವರೆಗೂ. ಈ ಮನೆ ಅವನ ನೆಲೆದಾಣವಾಗಿತ್ತು. ಇಲ್ಲಿ ಅವನು ತನ್ನ ಸ್ವಲ್ಪ ಭಾಗವನ್ನು ಬಿಟ್ಟು ಹೋಗುತ್ತಾನೆ.

ಇಷ್ಟು ದಿನ ಬೆಳಗಾಗುತ್ತಿದ್ದಂತೆಯೆ ಇದೇ ನೋಟ ಕಂಡುಬರುತ್ತಿತ್ತು. ಮನೆ ಅಂದರೆ ಇದೇ ಚಿತ್ರ ಕಣ್ಣ ಮುಂದೆ ಮೂಡುತ್ತಿತ್ತು. ಮನೆಯಲ್ಲಿ ಕುಳಿತುಕೊಂಡು ಆಕಾಶ ಅಂದಾಗ ಇಲ್ಲಿಂದ ಕಾಣುವ ಆಕಾಶವೆ ನೆನಪಿಗೆ ಬರುತ್ತಿತ್ತು. ಇದೇ ನೆಲ ಕಣ್ಣಿಗೆ ಕಟ್ಟುತ್ತಿತ್ತು. ಪ್ರತಿದಿನ ಇದೇ ಜಾಗದಲ್ಲಿ ಹಲ್ಲುಜ್ಜಿದ್ದೇನೆ, ಸ್ನಾನ ಮಾಡಿದ್ದೂ ಇಲ್ಲಿಯೆ. ದೇಹದ ಕ್ರಿಯೆಗಳು ಮನಸ್ಸಿನ ಕ್ರಿಯೆಗಳಿಗಾಗಿ ತನ್ನ ವ್ಯಕ್ತಿತ್ವದ ಮೇಲೆ ಸರಿಯಾಗಿ ಅಳತೆ ಮಾಡಿ ಚರ್ಮದಂತೆ ಹೊಚ್ಚಿರುವ ಹಾಗಿದೆ ಈ ಮನೆ. ಈ ವಾತಾವರಣ ಮನಸ್ಸಿನ ಎಲ್ಲ ವಿಚಾರಗಳಿಗೆ ಚೆನ್ನಾಗಿ ಹೊಂದಿದೆ. ಅದನ್ನು ಇವತ್ತು ಬಿಟ್ಟುಹೋಗಬೇಕು.

ಕಂಪನಿಯ ಕೆಲಸಕ್ಕೆ ಸೇರಿದ್ದೇನೆ ಅಂದ ಮೇಲೆ ಅದೆಷ್ಟು ಮನೆಗಳು ಅದೆಷ್ಟು ಊರುಗಳು. ಗಂಗಾ ನದಿಯ ದಡದಲ್ಲಿ ಅಪ್ಪನನ್ನು ಬೂದಿ ಮಾಡಿದ್ದು, ಗೋದಾವರಿ ನದಿಯ ದಡದಲ್ಲಿ ಅಮ್ಮನ ಮೂಳೆಗಳು, ವಿಂಧ್ಯಾಚಲದ ಬುಡದಲ್ಲಿ ಯಾವುದೋ ಬಾಡಿಗೆ ಮನೆಯಲ್ಲಿ ಮದುವೆ. ಆಮೇಲೆ ಸಮುದ್ರದ ದಡದಲ್ಲಿ ತನ್ನ ಸಮಾಧಿ. ಚಾಕರಿಗೆ ಸೇರಿರುವವರು ಅಂದಮೇಲೆ ಹಾರುವ ಹಕ್ಕಿಗಳಂತೆ, ಆದರೆ ಹಾರುವುದು ಕಂಪನಿಯ ಆಜ್ಞೆಯ ಮೇರೆಗೆ. ಹಾದಿಯ ಉದ್ದಕ್ಕೆ ಪಯಣಿಗ ಮುನ್ನಡೆದಿರುತ್ತಾನೆ.

ಮನೆ ಅಲ್ಲೇ ಉಳಿದಿರುತ್ತದೆ. ಆದರ ಚಿಂತೆ ಯಾತಕ್ಕೆ?

ಹಳೆಯ ಯೋಚನೆಗಳ ಜೇಡರ ಬಲೆಯನ್ನು ಹರಿದೊಗೆದು ಬಲಿದತ್ತ ಕೂಗಿ ಹೇಳಿದ - "ನಡಿ, ನಡಿ ಹೊತ್ತಾಯಿತು."

ಸರೋಜಿನಿ ಹೊರಡುವ ಮೊದಲು ಯಾರಿಗೋ ತಲೆಬಗ್ಗಿಸಿ ನಮಸ್ಕಾರ ಮಾಡಿದಳು. ಹೊರಡುವುದಕ್ಕೆ ಸಿದ್ಧಳಾಗಿದ್ದಾಳೆ. ಬಣ್ಣ ಬಣ್ಣದ ಸೀರೆ, ನುಣುಪಾದ ಬೈತಲೆಯಲ್ಲಿ ಕುಂಕುಮದ ಗೆರೆ, ಮುಖಕ್ಕೆ ಸ್ನೋ, ಕಾಲಿಗೆ ಮುತ್ತೈದೆ ಹೆಂಗಸರು ಹಚ್ಚುವ ಬಣ್ಣ.

ಇವಳೇ ಅವನ ಹೆಂಡತಿ.

ಹೊರಡುತ್ತಲೆ ಮನಸ್ಸು ತೀವವಾಗ ತೊಡಗಿತು. ಆದರೂ ಆ ನೋಟವನ್ನು ನೋಡಿ ಬಲಿದತ್ತನಲ್ಲಿ ಉತ್ಸಾಹ ಉಕ್ಕಿತು. "ನಡಿ, ನಡಿ" ಅನ್ನುತ್ತಾ ಅವನು ಮತ್ತೊಂದು ಸಾರಿ ಬಲಗಡೆ ಹೋಗಿ ನೋಡಿಕೊಂಡುಬಂದ. - ಏನನ್ನೂ ಬಿಟ್ಟಿಲ್ಲವಲ್ಲ? ಏನೂ ಇಲ್ಲ. ಊಬು ಹೋಗಿರುವ ಪೊರಕೆಯನ್ನೂ ಸೇರಿದಂತೆ ಎಲ್ಲವನ್ನೂ ಕಟ್ಟಿಕಟ್ಟಿ ಗಾಡಿಯಲ್ಲಿ ಸೇರಿಸಿದ್ದ. ತೋಟವಿದ್ದ ಕಡೆ ಮುರಿದ ಕಡ್ಡಿಗಳ, ಕೊಂಬೆಗಳ ರಾಶಿ, ಬಾಗಿಲಲ್ಲಿ ಕಸಕಡ್ಡಿ ಹರಡಿದೆ.

ಹಿಂದಿನ ಬಾಗಿಲಿನಿಂದ ಕಸ ಗುಡಿಸುವವಳು ಬಂದು ಕಾಯುತ್ತಿದ್ದಾಳೆ, ಏನಾದರೂ ಗಿಟ್ಟುತ್ತದೊ ಅಂತ? ಗೆದ್ದಲು ಹಿಡಿದ, ಕೆಸರಿನಿಂದ ಮುಚ್ಚಿರುವ, ದೇವದಾರು ಮರದಿಂದ ಮಾಡಿರುವ ಮೂರು ಮರದ ಹಲಗೆಗಳು ಬಾಗಿಲಿನಿಂದ ಹೊರಗೆ ಬಿದ್ದಿವೆ. ಒಡೆದು ನುಗ್ಗಾಗಿರುವ ಒಂದು ಕೆಲಸಕ್ಕೆ ಬಾರದ ಪಾತ್ರೆ, ನಾಲ್ಕಾರು ಬಿದಿರಿನ ಚೂರುಗಳು. ಆ ಕಡೆಗೆ ಕೈ ತೋರಿಸಿ ತುಂಬ ಉದಾರ ಮನಸ್ಸಿನಿಂದ ಹೇಳಿದ - "ತೊಗೊಂಡು ಹೋಗು, ಹಿತ್ತಲಲ್ಲಿ ನೋಡು, ಸ್ವಲ್ಪ ಚಕ್ಕೆ ಬಿದ್ದಿರಬೇಕು, ಒಲೆಗೆ ಹಾಕಿಕೊ."

ತಲೆಬಗ್ಗಿಸಿ ಹೊರಬಾಗಿಲಿನತ್ತ ನಡೆದ. ಅಕ್ಕಪಕ್ಕದ ಹೆಂಗಸರು ಸರೋಜಿನಿಯ ಸುತ್ತ ಮುತ್ತಿಕೊಂಡು ಬೀಳ್ಕೊಡುಗೆ ಮಾತುಗಳನ್ನು ಹೇಳುತ್ತಿದ್ದರು. "ಬರ್ತೀನಕ್ಕಾ?" "ಹೋಗಿಬಿಟ್ಟು ಬರ್ತೀಯ?" "ಬಯ್ದುಕೊಳ್ಳಲ್ಲ ತಾನೆ"? "ಕಾಗದ ಹಾಕಬೇಕು ನೋಡು." ಗೆಳತಿಯರಿಂದ, ನೆರೆಯ ಹೆಣ್ಣು ಮಕ್ಕಳಿಂದ ಅದೆಷ್ಟೊ "ನಮಸ್ಕಾರ - ನಮಸ್ಕಾರ - ನಮಸ್ಕಾರ."

ಇದ್ದಕ್ಕಿದ್ದ ಹಾಗೆ ಈ ಹೊರಡುವ ಹೊತ್ತಿನಲ್ಲಿ ನೆನಪಿಗೆ ಬರುತ್ತದೆ - ನಿಜ, ನಮ್ಮವರು ಅನಿಸಿಕೊಂಡವರು ಅದೆಷ್ಟು ಜನ ಇದ್ದರು. ಇವರನ್ನೆಲ್ಲ ಮತ್ತೆ ನೋಡಲು ಸಾಧ್ಯವಾಗುತ್ತೋ ಇಲ್ಲವೊ.

ಐದು ವರ್ಷಗಳಿಂದ ಬಳಕೆಯಾದ ಈ ನೋಟ. ಓದಿ ಮುಗಿಸಿದ ಕಾದಂಬರಿಯಂತೆ. ಅದು ಈ ಕಣ್ಣುಗಳ ಮುಂದೆ ಮತ್ತೆ ಮರಳಿ ಬರುವುದಿಲ್ಲ. ಕಾದಂಬರಿಯ ಪಾತ್ರಗಳಂತೆ ಅನೇಕರು ನೆನಪಿನಿಂದ ಜಾರಿಹೋಗುತ್ತಾರೆ. ಅವರನ್ನು ಕುರಿತಂತೆ ಕೆಲವು ವಿಶೇಷವಾದ ಸಂಗತಿಗಳಷ್ಟೆ ನೆನಪಿನಲ್ಲಿ ಉಳಿಯುತ್ತದೆ. ನಗು, ಕೋಪ, ಗುಸುಗುಸು, ಹೊಟ್ಟೆಕಿಚ್ಚು, ಸ್ನೇಹ ಇ ಎಷ್ಟೆಲ್ಲ ಅನುಭವಗಳು. ಒಂದು ದಿನದ ತನ್ನ ಕಪಾಟಿನಲ್ಲಿ ಓರಣವಾಗಿ ಜೋಡಿಸಿಟ್ಟ ಪದಾರ್ಥಗಳು. ಮನೆ-ಮಠ,

ಇವನು ಮರೆತುಬಿಡುತ್ತಾನೆ. ಇವರ ಹೆಸರುಗಳನ್ನು - ಆ ಊರು ಮರೆತುಬಿಡುತ್ತದೆ. ಹಾಗೇ ಅಂಡಲೆಯುತ್ತಾ ಹತ್ತಾರು ವರ್ಷಗಳಾದ ಮೇಲೆ ಭೇಟಿಯಾದಾಗ ಬಹುಶಃ ಇವರನ್ನು ಎಲ್ಲೋ ನೋಡಿದ್ದೇನಲ್ಲ ಅಂತ ಯೋಚಿಸುವ ಹಾಗಾಗುತ್ತದೆ.

ಒಗ್ಗಿಹೋಗಿರುವ ದೃಶ್ಯಗಳು ನಮ್ಮದಲ್ಲವಾಗಿ ಹೋಗುತ್ತವೆ.

"ಸರಿ, ನಾನಿನ್ನು ಬರ್ತೇನೆ, ನಮಸ್ಕಾರ."

ಎತ್ತಿನ ಗಾಡಿ ಗಡಗಡ ಅಂತ ಮುಂದೆ ಹೋಯಿತು. ಬಲಿದತ್ತ ಎತ್ತಿನ ಗಾಡಿಯನ್ನೇ ತಂದಿದ್ದಾನೆ. ವ್ಯರ್ಥವಾಗಿ ಹಣ ಉಡಾಯಿಸುವುದು ಅಂದರೆ ಅವನಿಗೆ ಸರಿಹೋಗುವುದಿಲ್ಲ.

ಸರೋಜಿನಿ ಹಿಂದೆ ತಿರುಗಿನೋಡುತ್ತಿದ್ದಾಳೆ. ಕಾಲೇಜು ಹುಡುಗನೂ ನೋಡುತ್ತಿದ್ದಾನೆ. ದೂರ ಆಕಾಶದಲ್ಲಿ ಹಾರುತ್ತಿರುವ ಗಾಳಿಪಟದ ಮೇಲೆ ಅವನ ಶೂನ್ಯದೃಷ್ಟಿ ನೆಟ್ಟಿದೆ. ಕಣ್ಣಿಗೆ ಭಾಷೆ ಎಂಬುದಿಲ್ಲ. ಸರೋಜಿನಿ ಅವನನ್ನು ದೂರದಿಂದ ನೋಡಿ ನಕ್ಕಳು. ಹಾಗೆ ನೋಡಿದರೆ ಅವಳ ದೃಷ್ಟಿ ಮೂಗನ ನೋಟದಂತಿದೆ, ಚೈತನ್ಯವಿಲ್ಲದ್ದು.

ಗಾಳಿಪಟ ಹಾರುತ್ತಿದೆ, - ಕೆಳಗೆ ಬರುತ್ತಿದೆ, - ಗಾಳಿಪಟಗಳ ಏರಾಟ ಇಳಿದಾಟ ನಡೆಯುತ್ತಲೆ ಇದೆ - ಗಾಳಿಪಟದ ದಾರ ಕಡಿಯುತ್ತಿದೆ - ಆದರೂ ಅದು ಹಾರುತ್ತಲೆ ಇದೆ - ಗಾಳಿಪಟ ಹಾರುತ್ತಿದೆ.

ಇನ್ನೆಂದಿಗೂ ಭೇಟಿಯಾಗಲು ಸಾಧ್ಯವಿಲ್ಲ - ಸರೋಜಿನಿ ಯೋಚಿಸಿದಳು.

ಹಾಗೆ ದೂರ ಸಾಗುತ್ತಿದ್ದಂತೆ ಅವನು ಪೆಚ್ಚಾಗಿ ನಿಂತು ನೋಡುತ್ತಿರುವುದು ಕಾಣಿಸಿತು. ದೂರವಾದದ್ದರಿಂದ ಅವನ ಮುಖ ಚಿಕ್ಕದಾಗಿ ಕಾಣತೊಡಗಿತು. ಅದೆಷ್ಟು ಚಿಕ್ಕದು, ಮಸುಕು ಮಸುಕಾಗುತ್ತಿದೆ. ದುರ್ಬಲವಾಗುತ್ತಿದೆ. ಅವನು ವ್ಯಾಯಾಮ ಮಾಡುತ್ತಾನೆ, ಕೊಳಲೂದುತ್ತಾನೆ, ಷೇಕ್ಸ್‌ಪಿಯರನನ್ನು ಜೋರಾಗಿ ಓದುತ್ತಿರುತ್ತಾನೆ- ಒಂದೂ ನೆನಪಿಗೆ ಬರುತ್ತಿಲ್ಲ. ಅವನು ದುರ್ಬಲ. ದಿಙ್ಮೂಢನಾಗಿದ್ದಾನೆ, ಭಾಷೆ ಮರೆತಿದ್ದಾನೆ.

ಏಕೆ ?

ಒದ್ದೆ ಕಣ್ಣುಗಳಿಂದ ದೂರದಲ್ಲಿ ನೋಡುತ್ತಿದ್ದ ಸರೋಜಿನಿಯ ಮನಸ್ಸಿಗೆ ಬಂತು - ಅವನನ್ನು ಮುದ್ದಿಸಬೇಕು, ಎರಡೂ ಕೈಗಳಿಂದ ಅವನ ಚಿಕ್ಕ ಮುಖವನ್ನು ಎತ್ತಿ ಶಕ್ತಿಗುಂದುತ್ತಿರುವ ಅವನಿಗೆ ಒತ್ತಾಸೆ ನೀಡಬೇಕು.

ಎದೆತುಂಬಿ ಬಂತು, ಎದೆಯಾಳದ ಇಳಿಜಾರಿನಲ್ಲಿ ಆ ಗಾಳಿಪಟ-ಬೀಳುತ್ತಾ ಬೀಳುತ್ತಾ ಇನ್ನೇನು ಬಿತ್ತು ಅನ್ನುವ ಹಾಗಾಗುತ್ತದೆ, ಮತ್ತೆ ಮೇಲೇರುತ್ತದೆ. ಅಪ್ರಯತ್ನಪೂರ್ವಕವಾಗಿಯೇ ಕಣ್ಣಿಂದ ಎರಡು ಹನಿ ಮುತ್ತುಗಳು ಉದುರಿದವು. ಇದೋ ನೋಡಿ - ಗಾಡಿ ತಿರುಗಿತು.

"ಅದೋ ನೋಡು, ಮಹಾಪಾತ್ರರ ಮನೆ."

ಸರೋಜಿನಿ ಕತ್ತು ತಿರುಗಿಸಿ ನೋಡಿದಳು. ಯಾರೂ ಇಲ್ಲ, ಆದರೂ ತಲೆಯ ಮೇಲೆ ಸೆರಗು ಎಳೆದುಕೊಂಡಳು. ಮುಖವೆಲ್ಲ ಉರಿಯುತ್ತಿದೆಯೇನೋ ಅನಿಸಿತು, ಅಲ್ಲೂ ಗಾಳಿಪಟದ ದಾರ ಕಡಿದಿದೆ, ಸರಿ, ಸುಮ್ಮನೆ ಆಳವಾದ ನಿಟ್ಟುಸಿರು.

"ಇದೋ ನೋಡಿಲ್ಲಿ, ಇದೇ ನಮ್ಮ ಕಚೇರಿ - ನಮ್ಮ ಆಫೀಸು - ನಾನು ಎಲ್ಲಿ ಕುಳಿತುಕೊಳ್ಳುತ್ತಿದ್ದೆ ಗೊತ್ತಾ? ನೋಡು, ಆ ಕರಿಪಟ್ಟಿ ನೇತಾಡುತ್ತಿದೆಯಲ್ಲ, ಅದಕ್ಕಿಂತ ಸ್ವಲ್ಪ ಹಿಂದೆ-"

ಪಾರಿವಾಳಗಳ ಪೆಟ್ಟಿಗೆ, ಪಿಜನ್ ಹೋಲ್.

ಮನಸ್ಸಿನಲ್ಲಿ ಪಾರಿವಾಳಗಳ ರೆಕ್ಕೆ ಬಡಿಯುತ್ತದೆ.

"ಮತ್ತೆ ಇಲ್ಲಿಗೆ ಬಂದರೆ ಆ ಕಡೆ ಕೋಣೆಯಲ್ಲಿ ಕುಳಿತುಕೊಳ್ಳಬೇಕು, ನೋಡು."

ಸರೋಜಿನಿ ಕೇಳಿಯೂ ಕೇಳದವಳಂತಿದ್ದಳು. ಓರೆ ನೋಟದಿಂದ ನೋಡುತ್ತಿದ್ದಾಳೆ, ಕಂಪೆನಿಯ ಕಚೇರಿ ಅಲ್ಲವೆ, ಹಗೇವಿನ ಮೇಲಿರುವ ಪಾರಿವಾಳಗಳು ನೆನಪಿಗೆ ಬರುತ್ತವೆ. ಬಗ್‌ಬಗುಂಕುಂ - ಬಗ್ ಬಗುಂಕುಂ - ಎತ್ತಿನ ಗಾಡಿ ಗಡಗಡ ಅಂತ ಮುಂದೆ ಹೋಗುತ್ತದೆ. ಆದರ ಗಡಗಡ ಕಿಂಯ್ ಕಿಂಯ್ ಸದ್ದು ಒಮ್ಮೊಮ್ಮೆ ಯಾರೋ ಅಳುತ್ತಿರುವಂತೆ ಕೇಳಿಸುತ್ತದೆ. ನಿಜವಾಗಿ ಹೇಳುವುದಾದರೆ ಮನುಷ್ಯನ ನಾಲಿಗೆಯೆಂದರೆ ಅವನಿಗೆ ಆಪತ್ತು, ಆಪಾದನೆ, ಅಳುವ ಧ್ವನಿ ಎಲ್ಲವೂ ತಡಬಡಾಯಿಸಿತ್ತು, ಬೀಳುತ್ತ, ಏಳುತ್ತ, ಎಳೆದಾಡುತ್ತ ಅವನು ಹೋಗುತ್ತಲೆ ಇರುತ್ತಾನೆ, ಯಾವ ಕಡೆಗೂ ನೋಡುವುದಿಲ್ಲ. ರಸ್ತೆ, ಅದೆಷ್ಟು ದೂರ, ಅದೆಷ್ಟು ದೂರ.

ನೇಸರು ಮೂಡಿತು.

ಹೊಸ ಜಾಗ.

ರೈಲ್ವೇ ಸ್ಟೇಷನ್ನಿನಿಂದ ಹೊರಗೆ ಬರುವ ವೇಳೆಗೆ ನಡುಪ್ರಾಯದ ಎತ್ತರದ ಮನುಷ್ಯನೊಬ್ಬ ನಿಂತುಕೊಂಡು ಅರೆಬೋಳುತಲೆಗೆ ಪೇಟ ಸುತ್ತುವುದರಲ್ಲಿ ತೊಡಗಿದ್ದ. ಗಾಬರಿಗೊಂಡು ತಲೆಬಗ್ಗಿಸಿ ಹೇಳಿದ, "ಅಡ್ಡಬಿದ್ದೆ ತಾಯಿ, ಅಡ್ಡಬಿದ್ದೆ ಬುದ್ಧಿ, ನಾನೇ ಬುದ್ಧ್ಯೋರ ಆಳು, ಗಾಡಿ ನಿಂತಿದೆ."

ಬಲಿದತ್ತ ಸ್ವಲ್ಪ ಮುಖ ಗಂಟಿಕ್ಕಿ ಎರಡು ಬಾರಿ ಅವನೆಡೆಗೆ ಗಂಭೀರವಾಗಿ ನೋಡಿದ. ಸರೋಜಿನಿ ನಕ್ಕು ಕೇಳಿದಳು - "ಅದು ಸರಿ, ನಿನ್ನ ಹೆಸರು."

"ಅಮ್ಮಾವ್ರು, ಬುದ್ಧ್ಯೋರೆಲ್ಲ ನನ್ನನ್ನು 'ಸಿತಾ' ಅಂತ ಕರೀತಾರೆ."

ಅವನ ಬಿಳಿಯ ಪೈಜಾಮಾ, ಮಡಚಿದ ಕೊಳಕಾದ ಬಿಳಿಯ ಕೋಟು, ಅದರ ಮೇಲೆ ಅಗಲವಾದ ಪಟ್ಟಿ, ಪಟ್ಟೆಯ ಮೇಲಿದ್ದ ಹಿತ್ತಾಳೆಯ ಬಿಲ್ಲೆಯ ಮೇಲೆ ಕಂಪೆನಿಯ ಹೆಸರು ಥಳಥಳಿಸುತ್ತಿತ್ತು. ಬಲಿದತ್ತನ ಮುಖ, ಸರೋಜಿನಿಯ ಮುಖ ಎರಡನ್ನೂ ಮತ್ತೆ ಮತ್ತೆ ನೋಡುತ್ತಾ ಆಳು ಸಿತಾ ಗದ್ಗದ ಕಂಠದಿಂದ ಹೇಳಿದ. "ನಂಗೆ, ಅಪ್ಪಅವ್ವ ಯಾರೂ ಇಲ್ಲ, ನೀವೇ ನಂಗೆ ಎಲ್ಲ. ನಿಮ್ಮ ಪಾದದಡೀಲೆ ಬಿದ್ದಿರ್ತೇನ."

ಸರೋಜಿನಿ ಮತ್ತೆ ನಕ್ಕಳು. ಬದುಕಿನಲ್ಲಿ ಮೊದಲ ಬಾರಿಗೆ ಯಾರೋ ಒಬ್ಬರು ತನ್ನನ್ನು ತಾನೇ ಅವಳ ಪಾದದಡಿಗೆ ಒಪ್ಪಿಸಿಕೊಂಡಿದ್ದ. ಅನುಭವವಿಲ್ಲದ ತಾಯ್ತನದ ಭಾವನೆಯಿಂದ ಮನಸ್ಸು ತುಂಬಿಬಂತು, ಮುಖದಲ್ಲಿ ಕಳೆ ಮೂಡಿತು. ಅವಳು

ನೋಡಿದಳು - ಅವನ ಮೂಳೆ ಎದ್ದಿದ್ದ ಮುಖ, ನೀರ್ಗರೆಯುತ್ತಿದ್ದ ಕಣ್ಣುಗಳು, ಸುಟ್ಟತುಟಿಗಳು, ಬಿಳಿಗೂದಲು, ಹರಕಲು ಗಡ್ಡ, ಚರ್ಮ ಇಳಿಬಿದ್ದಿದ್ದ ಕೆನ್ನೆಗಳು, ಅದರ ಮೇಲೆ ಅಲ್ಲಲ್ಲೇ ಏನೋ ಮೆತ್ತಿಕೊಂಡಿತ್ತು, ಕಾಲುಗಳು ನಡುಗುತ್ತಿದ್ದವು. ಸರೋಜನಿಗೆ ಅವನೊಡನೆ ಮಾತನಾಡಬೇಕೆನಿಸುತ್ತದೆ - "ನಿತಾ, ನೀನು ಯಾವ ಜಾತಿಯವನು ? ಮನೆ ಎಲ್ಲಿ ? ಎಷ್ಟು ಮಕ್ಕಳು ?" ಬಲಿದತ್ತ ಸ್ವಲ್ಪ ದೂರನಿಂತು ಏನೂ ಮಾಡಲು ಗೊತ್ತಾಗದೆ ಕಾಲಿನಿಂದ ನೆಲ ಕುಟ್ಟುತ್ತಿದ್ದ. ಅರಚಿದ, "ನಿತಾಯ್, ಸ್ವಲ್ಪ ಬಾ ಇಲ್ಲಿ" ಮತ್ತೆ ಗಟ್ಟಿಯಾಗಿ ಕೂಗಿದ.

"ನಿತಾಯ್ - ಬಾ ಇಲ್ಲಿ."

"ಬುದ್ಧಿ" - ನಿತಾಯಿ ಹತ್ತಿರ ಬೆದರಿ ಓಡಿದ.

"ನೀನು ಆಳಾ ?"

"ಅಪ್ಪಣೆ ಬುದ್ಧಿ."

"ಎಷ್ಟು ದಿನದಿಂದ ಕೆಲಸ ಮಾಡ್ತಿದ್ದಿ ?"

"ಇಪ್ಪತ್ತು ವರ್ಷ ಆಯ್ತು ಬುದ್ಧಿ."

"ಇಪ್ಪತ್ತು ವರ್ಷ." ಬಲಿದತ್ತ ಮನಸ್ಸಿನಲ್ಲಿ ಕೂಡಿಟ್ಟಿದ್ದ ಕೋಪವನ್ನೆಲ್ಲ ಒಂದೇ ಏಟಿಗೆ ಹೊರಗೆ ಕಾರಿದ,"ಇಪ್ಪತ್ತು ವರ್ಷ. ಇಷ್ಟಾದರೂ ನಿನಗೆ ಸ್ವಲ್ಪವೂ ಬುದ್ಧಿಬರಲಿಲ್ಲವಲ್ಲ ಮುದಿ ಮುಂಡೇದೆ. ರೈಲು ಬಂದರೂ ನೀನು ಹಾಗೇ ಹೊರಗೆ ನಿಂತಿದ್ದೀಯಲ್ಲ, ಸಾಮಾನು ಇಳಿಸೋದು ಬಿಟ್ಟು ಇಲ್ಲಿ ಹೊರಗೆ ನಿಂತುಕೊಂಡು ಹರಟೆ ಹೊಡೀತಿದ್ದೀಯ, ತಲೆ ಹರಟೆ-"

ಇದೇ ಮೊದಲನೇ ಬಾರಿಗೆ. ಅವರೂ ಸಹ ಇದೇ ರೀತಿ ಮಾತಾಡುತ್ತಾರೆಂದು ನೆನಪಿಗೆ ಬಂತು. ಆ ಬೆಂಕಿಯ ಮಕ್ಕಳು - ಅವರ ಹಾಗೆ ಆಗಬೇಕೆಂದು ತಾನೆ ಅವನು ಮೊದಲಿನಿಂದ ಕನಸು ಕಾಣುತ್ತಿರುವುದು.

ಯಾವುದಾದರೂ ಒಬ್ಬ ಮನುಷ್ಯನನ್ನು ತರಾಟೆಗೆ ತೆಗೆದುಕೊಂಡಾಗ, ಅವನು ಸುಮ್ಮನೆ ಬಾಯಿ ಮುಚ್ಚಿಕೊಂಡು ನಿಂತುಕೊಂಡು ಏಟು ತಿಂದವನಂತೆ ತಳಮಳಿ ಸುತ್ತಿರುವಾಗ ತರಾಟೆಗೆ ತಗೆದುಕೊಳ್ಳುವುದರಲ್ಲಿ ಅದೆಂಥ ಮಜಾ ಇರುತ್ತದೆ. ಬಾಯಿಂದ ಬೈಗಳ ಮಳೆಯೆ ಸುರಿಯುತ್ತದೆ. ಲಾವಾರಸ ಹರಿದಂತೆ ಶಬ್ದವಾಗುತ್ತದೆ. ಬಾಯಿಗೆ ಕೆಲಸ ಸಾಕು ಮಾಡಿ ಕೈಗೆ ಕೆಲಸ ಕೊಡೋಣ ಅಂತ ಮನಸ್ಸು ಹಾತೊರೆಯುತ್ತದೆ. ಇನ್ನೂ ಒಂದು ಕೈ, ನೋಡಲೆಂದೇ ಬಲಿದತ್ತನ ಒಳಗಡೆಯಿದ್ದ ದೊಡ್ಡ ಮನುಷ್ಯ ಮೇಲೆದ್ದಿದ್ದ, ಇನ್ನೂ ದೊಡ್ಡವನಾಗಿ ಊದುತ್ತಿದ್ದ.

"ಹೋಗುತ್ತೀಯೊ ಇಲ್ಲವೋ ? ಕೆಲಸ ಕಲಿತಿಲ್ಲದಿದ್ದರೆ ಇನ್ನುಮೇಲೆ ಕಲೀಬೇಕಾಗುತ್ತದೆ. ಮೈಗಳ್ಳತನ, ಯಾಕೆ ? ಹೀಗೆ ಮಾಡಿದರೆ ಕಂಪನಿ ಉದ್ಧಾರವಾದ ಹಾಗೇ. ನೋಡು, ಈಗಲೇ ಹೇಳ್ತಾ ಇದ್ದೇನೆ. ಒಂದು ಗೆರೆ ಎಳೆದರೆ ಸಾಕು, ನಿನ್ನ ಹೊಟ್ಟೆ ಪಾಡಿಗೆ ಸೊನ್ನೆ ಬೀಳುತ್ತೆ, ನಾನು ಯಾರಂತ ತಿಳಿದಿದ್ದಿ ?"

ನಿತಾಯಿ ತತ್ತರಿಸಿಹೋದ. ಅವನ ಮೈಯೆಲ್ಲ ಗಡಗಡ ಅಂತ ನಡುಗಿತು. ಅವನು ಆಸರೆ ಪಡೆಯಲು ಹೋದ ಗುಡಿಸಿಲಿನ ಛಾವಣಿಯ ಅಲುಗಾಡಿ ಮೇಲೆ ಬೀಳಲು ಬರುತ್ತಿದೆ. ಹೊಟ್ಟೆಪಾಡಿಗೆ ಎಲ್ಲಿ ಸೊನ್ನೆ ಬೀಳುತ್ತೋ ಅನ್ನುವ ಹೆದರಿಕೆಯಿಂದಲೇ

ಅವನು ನಡುಗುತ್ತಾ ಕೆಲಸ ಮಾಡಲು ಹೊರಟಿದ್ದಾನೆ. ಏನು ಮಾಡುತ್ತಿದ್ದೇನೆ ಎಂಬುದರ ಅರಿವೇ ಇಲ್ಲ ಅವನಿಗೆ. ಒಂದೊಂದು ಕಾಲು ಒಂದೊಂದು ಕಡೆ ಹೋಗುತ್ತಿದೆ, ಕೈಗಳು ಇನ್ನೆಲ್ಲೋ ಎಳೆದುಕೊಂಡು ಹೊರಟಿವೆ. ವಿವಿಧ ಭಂಗಿಗಳಲ್ಲಿ ತಡಬಡಾಯಿಸುತ್ತಾ ಏಳುತ್ತಾ ಬೀಳುತ್ತಾ ಕೆಲಸ ಮಾಡುತ್ತಿದ್ದಾನೆ. ಅವನ ಮೋರೆ ಎತ್ತಿನಗಾಡಿಯ ಕಡೆಗಿದೆ. ಗಾಡಿಯವನು ಎಲೆಗೆ ಹೊಗೆಸೊಪ್ಪು ತುಂಬುತ್ತಿದ್ದಾನೆ. ನಿತಾಯಿ ವಿಕಾರವಾಗಿ ಮುಖ ಮಾಡಿಕೊಂಡು ತನ್ನ ಧಣಿಯಿಂಧ ಗಿಟ್ಟಿಸಿಕೊಂಡ ಬೈಗಳನ್ನು ಅಸಲು ಬಡ್ಡಿ ಸೇರಿಸಿ ಗಾಡಿಯವನ ಮೇಲೆ ಒದರುತ್ತಿದ್ದಾನೆ, "ಥೂ ನಿನ್ನನ ಹಾಳಾಗ-"

ಗಾಡಿಯವನೂ ಹಾಗೇ ಆರಾಮವಾಗಿ ಕುಳಿತಿದ್ದ. ಯುದ್ಧದ ಕಹಳೆ ಊದಿದಂತಾಗಿ ಅವನು ಕಚ್ಚೆಕಟ್ಟಿ ಸಿದ್ಧನಾದ, "ಏಯ್? ಇನ್ನೂ ಬಾಡಿಗೇನೆ ಮಾತಾಡಿಲ್ಲ, ಒಂದು ಕಿಲುಬುಗಾಸೂ ಕೊಟ್ಟಿಲ್ಲ, ಸುಮ್ಮನೆ ಬಾಯಿ ಮಾಡ್ತೀಯಾ? ಸ್ವಲ್ಪ ಬಾಯಿ ಮುಚ್ಚಿಕೊಂಡು ಕೂತ್ಕೊ. ನಾನೇನೂ ನೀನಿಟ್ಟಿರೋ ಆಳಲ್ಲ, ಬಂದುಬಿಟ್ಟ ದೊಡ್ಡ ಮನುಷ್ಯ ಬಯ್ಯೋದಕ್ಕೆ? ಥೂ ನಿನ್ನ-"

ಬಾಯಿ ಬಾಯಿ ಮಿಲಾಯಿಸಿತು. ನಿತಾಯಿ ಎರಡು ಕೈಗಳನ್ನು ಚಕ್ರದಂತೆ ತಿರುಗಿಸುತ್ತಿದ್ದಾನೆ. ಎರಡೂ ಕಡೆಯಿಂದ ಬೈಗಳ ಭರ್ಜರಿ ಮಳೆಯು ಸುರಿಯುತ್ತಿದೆ. ಜನ ಜಮಾಯಿಸಿದರು. ಆಕಡೆ ಬಲಿದತ್ತ ತಾನೇ ಸಾಮಾನುಗಳನ್ನು ಎಳೆದೆಳೆದು ಒಂದು ಕಡೆ ಸೇರಿಸಿಡುತ್ತಿದ್ದಾನೆ. ಸರೋಜಿನಿ ಹಾಗೇ ಅಡ್ಡಾಡುತ್ತಿದ್ದಾಳೆ. ಕೂಲಿಯವರು ಬಲಿದತ್ತನನ್ನು ಮುತ್ತಿಕೊಂಡು ಚೌಕಾಸಿ ವ್ಯವಹಾರ ನಡೆಸಿದ್ದಾರೆ. ಗಾಡಿಯವನು ಜಗಳ ಮುಗಿಸಿ ಹಾಗೇ ಗೊಣಗುಟ್ಟುತ್ತಾ ಗಾಡಿ ಹೊಡೆದುಕೊಂಡು ಹೊರಟ."ಸಾಹೇಬ್ರು, ಸಾಹೇಬ್ರು, ನಾನೇನು ಸಾಹೇಬರುಗಳನ್ನು ನೋಡೇ ಇಲ್ಲವಾ, ಬಹಳ ಜನ ಸಾಹೇಬ್ರನ್ನ ಕಂಡುಬಿಟ್ಟಿದ್ದೀನಿ-"

ನಿತಾಯಿ ಹಾಗೇ ಬೈಯುತ್ತಲೆ ಹಿಂದಿರುಗಿದ, ಮೈಯೆಲ್ಲ ಬೆವರಿನಿಂದ ಒದ್ದೆಯಾಗಿದೆ.

ಬಲಿದತ್ತ ಬಿಸಿಯಾದ. ತಾನೇ ಮುಂದೆ ಹೋದ. ಸ್ವಲ್ಪ ದೂರದಲ್ಲಿ ಇನ್ನೊಂದು ಎತ್ತಿನಗಾಡಿ ನಿಂತಿತ್ತು. ಗಾಡಿಯವನು ಗಿರಾಕಿಗಾಗಿ ಕಾಯುತ್ತಾ ನಿಂತಿದ್ದ. ಬೇರೆ ಗಾಡಿಯಿರಲಿಲ್ಲ.

"ಎಷ್ಟು ದುಡ್ಡು ಕೊಡಬೇಕಯ್ಯ?"

"ಮೂರು ರೂಪಾಯಿ ಬುದ್ಧಿ."

"ಎರಡು ರೂಪಾಯಿ?"

"ಇಲ್ಲ"

"ಸರಿ ನಡಿ, ಲೋ, ಈ ಸಾಮಾನೆಲ್ಲ ಗಾಡಿಗೆ ತುಂಬೊ."

"ಸರಿ ಬುದ್ಧಿ" ನಿತಾಯಿ ಸಾಮಾನಿಗೆ ಕೈಹಾಕಿದ.

"ಮನೆ ಚೆನ್ನಾಗಿದೆಯಾ?"

"ಪಸಂದಾಗಿದೆ ಬುದ್ಧಿ."

ಇನ್ನೂ ಹೊಸದಾಗಿ ಬೆಳಗಾಗುತ್ತಲೆ ಹೊಸ ಸಾಹೇಬ ತನ್ನ ರೂಪವನ್ನು ತೋರಿಸಿದ್ದ.

ಆಳಿಗೆ ಅರ್ಥವಾಗಿತ್ತು.

ಸರೋಜಿನಿ ನೋಡುತ್ತಿದ್ದಾಳೆ. ಇದು ಅವಳ ಹೊಸ ಮನೆ, - ಮುಂದುಗಡೆ ತೋಟ, ಹಿಂದೆ ಹಿತ್ತಲು, ದೊಡ್ಡ ಕಾಂಪೌಂಡು, ಸಿಜ, ಮನೆ ತುಂಬ ದೊಡ್ಡದು,

ದೊಡ್ಡ ಮನೆ- ಹಳೆಯದು ಹೋಯಿತು, ಹೊಸದು ಬಂತು. ಗಾಡಿಯಿಂದ ಇಳಿದು ನಾಲ್ಕು ಕಡೆ ಓಡಾಡಿ ಸಾಮಾನುಗಳನ್ನು ಇಳಿಸಿ ಮಧ್ಯದಲ್ಲಿರಿಸಿದ ಈ ಕ್ಷಣದಿಂದಲೆ ಈ ಮನೆ ತನ್ನದು. ಎಷ್ಟು ಬೇಗ ಕಣ್ಣಾಡಿಸುತ್ತಲೆ ಇದು ಬಂದವರಿಗೆ ಕೂಡಲು ಕೋಣೆ, ಇದು ಮಲಗುವ ಕೋಣೆ, ಇದು ಉಗ್ರಾಣ, ಆಕಡೆ ಅಡುಗೆ ಮನೆ - ಮೊದಲಾಗಿ ಎಲ್ಲವನ್ನೂ ಮನಸ್ಸಿನಲ್ಲೇ ಯೋಚಿಸಿದ.

"ಮನೆ ಕೆಲಸಕ್ಕೆ ಆಳನ್ನು ನೋಡಿಟ್ಟಿದ್ದೀನಿ ಅಮ್ಮಾವ್ರೆ! ಒಳ್ಳೆ ಜಾತಿಯವನು, ಹೇಳಿದರೆ ಕರಕೊಂಡು ಬರ್ತೀನಿ."

"ಹೇಳೋದೇನು ?" ಬಲಿದತ್ತ ಅಂದ. "ಕರಕೊಂಡು ಬಾ, ಏನು ಕೊಡಬೇಕಂತೆ ?"

"ಬುದ್ಧ್ಯೋರು ಕೈಯೆತ್ತಿ ಎಷ್ಟು ಕೊಟ್ಟರೂ ಸಾಕು."

ಬಲಿದತ್ತನೂ ಖುಷಿಯಾಗಿದ್ದಾನೆ. ತಮಾಷೆಯ ಲಹರಿಯಲ್ಲಿ ಹೇಳಿದ, "ಅಯ್ಯೋ ಪೆದ್ದು, ಜನ ಹೇಳೋದಿಲ್ಲವೆ - ಹಸು ಕಪ್ಪಾಗಿದ್ದರೇನಂತೆ, ಬಾಲ ಹೇಗಿದ್ದರೇನಂತೆ, ಸ್ವಲ್ಪ ಹುಲ್ಲು ತಿಂದು ಜಾಸ್ತಿ ಹಾಲು ಕೊಟ್ಟರೆ ಸಾಕು."

"ಆಹಾ! ಬುದ್ಧ್ಯೋರ ಮಾತಲ್ಲವೆ! ಎಂಥಾ ಮಾತು ಅಮ್ಮಾವ್ರ," ನಿತಾಯಿ ಅಂದ. ಹಾಗೆಯೆ ಅಮ್ಮಾವರ ಕಿವಿಯ ಹತ್ತಿರ ಹೋಗಿ ಬಲಿದತ್ತನಿಗೂ ಕೇಳಿಸುವಂತೆ ಹೇಳಿದ - "ಒಬ್ಬರೇ ಆದರೇನಂತೆ, ಕೆಲಸದಲ್ಲಿ ಬುದ್ಧ್ಯೋರು ತುಂಬ ನಿಸ್ಸೀಮರು. ಇವರಿಗೆ ಕೆಲಸ ಗೊತ್ತು, ಚೆನ್ನಾಗಿ ಕೆಲಸ ಮಾಡಿಸ್ತಾರೆ, ಮೊದಲಿದ್ದ ಸಾಹೇಬರುಗಳಂತೆ ಅಲ್ಲ. ಪಟ್ಟು ಹಿಡಿದು ಕೆಲಸ ಮಾಡಿಸ್ತಾರೆ, ಮಾಡ್ತಾರೆ, ದೊಡ್ಡ ಸಾಹೇಬರಿಗೆ ತುಂಬ ಬೇಕಾದವರಾಗ್ತಾರೆ."

"ಸ್ವಲ್ಪ ನನ್ನ ಬಟ್ಟೆ ಬರೆ ತೆಗಿ ಮೊದಲು,ಹಾಗೇ ಹೋಗಿ ಸಾಹೇಬರನ್ನ ನೋಡಿಕೊಂಡು ಬರ್ತೀನಿ."

"ಸ್ನಾನ-ಗೀನ ?"

"ನೀನು ಮೊದಲು ಕೊಡು. ಅರ್ಥವಾಗಲ್ಲವ ? ಮೊದಲೇ ಹೊಸಜಾಗ ಬೇರೆ."

ಸರೋಜಿನಿ ಬಟ್ಟೆ ತೆಗೆದುಕೊಟ್ಟಳು. ಆ ಕಡೆ ಕೋಣೆಯಲ್ಲಿ ಬಲಿದತ್ತ ಬಟ್ಟೆ ಬದಲಾಯಿಸುತ್ತಿರಬೇಕಾದರೆ ಈ ಕಡೆ ನಿತಾಯಿ ಹೇಳಿದ, "ಆಳನ್ನು ಕರೆಯಲೆ ಅಮ್ಮಾವ್ರೆ ?"

"ಆಳು !"

ಮೊದಲು ಯಾರು ಈ ಮಾತನ್ನು ಹೇಳಿದ್ದರು. ನೆನಪಿಗೆ ಬರುತ್ತಿದೆ. ಮನಸ್ಸಿಗೆ ಕಸಿವಿಸಿಯಾಯಿತು. ಒಂದು ಒಡೆದ ನೆನಪು. ಮೈಮುಟ್ಟುತ್ತಲೆ ದೂರ ಸರಿಯಿತು, ನಿಟ್ಟುಸಿರುಬಿಡುತ್ತಾಳೆ.

"ಬೇಡ ಬಿಡು, ಆಳು ಯಾಕೆ ? ನಾವಿರೋದು ಇಬ್ಬರೇ. ನಿತಾಯಿ, ನಾನೇ ಮನೆ ಕೆಲಸ ಮಾಡಿಕೊಳ್ತೀನಿ. ನೀನು ಇರ್ತೀಯಲ್ಲ, ಹಾಗೇ ಸ್ವಲ್ಪ ಕೈಹಾಕುತ್ತಿರು."

"ಜನ ಏನಾಂತರೆ ಅಮ್ಮಾವ್ರೆ, ಆಡಿಕೊಳ್ತಾರೆ, ಬುದ್ಧ್ಯೋರ ಮನೇಲಿ ಕೆಲಸದಾಳಿಲ್ಲ, ಹೆಣ್ಣಾಳಿಲ್ಲ ಅಂತ ಮೂಗೆಳೀತಾರೆ. ಬುದ್ಧ್ಯೋರಿಗೆ ಏನು ಕಡಮೆ. ಸಾಹೇಬರು ಅವ್ರು, ಬೆಳಗಾಗೋಹೊತ್ತಿಗೆ ಹತ್ತಾರು ಜನ ಮನೆಗೆ ಹೋಗೋದು ಬರೋದು ಇರ್ದೇ ಇರುತ್ತೆ. ನಾನಿರೋವರೆಗೆ ಯಾರಾದ್ರೂ ಬುದ್ಧ್ಯೋರ ವಿಚಾರದಲ್ಲಿ ಬೆರಳು ಮಾಡೋಣ ಅಂದ್ರೇನು ? ಇಲ್ಲ ಅಂದ್ರೆ ಇವೆಲ್ಲ ಏನು ಮಹಾ ಕೆಲಸ ? ನನಗೆ ಸ್ವಲ್ಪ ಮೈಕೈ ಹಿಡಿದುಕೊಳ್ಳುತ್ತೆ, ವಯಸ್ಸಾಯ್ತಲ್ಲ, ರಾತ್ರಿ ಆದರೆ ಜ್ವರ ಬರುತ್ತೆ. ಏನೋ, ನಿಮ್ಮ ದಯೆ, ಅದೆಷ್ಟು ಜನ ಬುದ್ಧ್ಯೋರ ಸೇವೆ ಮಾಡಿದ್ದೀನೆ, ಇದೇ ಕೈಯಿಂದ ಅಡಿಗೆ ಮಾಡಿದ್ದೀನಿ, ಕಸ ಗುಡಿಸಿದ್ದೀನಿ, ಸೌದೆ ಒಡೆದಿದ್ದೀನಿ. ಈಚೆಗೆ ಏನೋ ಮೈ ಚೆನ್ನಾಗಿಲ್ಲ, ಮೈ ಸ್ವಲ್ಪ ಸರಿಹೋಗಲಿ, ನನ್ನ ಕೆಲಸ ಹೇಗಿರುತ್ತೆ ಅಂತ ನೀವೇ ನೋಡಿ. ಅಷ್ಟೆ ಅಲ್ಲ, ಹೊಟ್ಟೆ ನೋವೂ ಬರುತ್ತೆ. ಆದರೆ ಅದು ಯಾವಾಗಲೂ ಇರಲ್ಲ."

"ಈ ಮನೇಲಿ ಯಾರು ಯಾರು ಇದ್ದರು ನಿತಾಯಿ ?"

"ಹದಿನೆಂಟು ಜನ ಬುದ್ಧ್ಯೋರ ಸೇವೆ ಮಾಡಿದ್ದೀನಿ ಅಮ್ಮಾವ್ರೆ, ಇಲ್ಲೇ, ಈ ಮನೇಲೆ ನಾಲ್ಕು ಜನ ಬುದ್ಧ್ಯೋರು ಸತ್ತುಹೋಗವ್ರೆ."

"ಇಲ್ಲೇ ಸತ್ತುಹೋದರ ?"

"ಹೌದು ಅಮ್ಮಾವ್ರೆ. ಸಾಯೋದು-ಬದುಕೋದು ಯಾರ ಕೈಲಿದೆ ಹೇಳಿ. ಹುಟ್ಟೋದು-ಸಾಯೋದು ಇರ್ದೇ ಇರುತ್ತೆ. ಏನೋ ನಿಮ್ಮ ದಯೆಯಿಂದ ಒಂದುದಿವಸ ಈ ಬುದ್ಧ್ಯೋರು ಅಮ್ಮಾವ್ರ ಪಾದದಡೀಲೇ ಪ್ರಾಣ ಹೋಗಲಿ. ಇಷ್ಟೆ ನಾನು ದೇವರಲ್ಲಿ ಕೇಳೋದು. ಆಗ ನಂಗೆ ಸ್ವರ್ಗ ಸಿಗುತ್ತೆ. ಬದುಕಿರೋವರೆಗೆ ಸಾಹೇಬರುಗಳ ಸೇವೆ ಮಾಡ್ದೆ, ಸಾಯೋ ಹೊತ್ತಿಗೆ ಸಾಹೇಬ್ರನ್ನ ನೋಡ್ದೆ ಹೇಗೆ ಸಾಯೋದು ? ಹೌದು ಅಮ್ಮಾವ್ರೆ, ನಾಲ್ಕು ಜನ ಈ ಮನೇಲಿ ಸತ್ತರು. ನಾನೇ ಗಾಡೀಲಿ ಹೋಗಿ ಅವರ ಸಂಸಾರ, ಮಕ್ಕಳು ಮರೀನ ಬಿಟ್ಟುಬಂದಿದ್ದೇನೆ. ಅಷ್ಟೇ ಅಲ್ಲ, ಈ ಮನೇಲಿ ಇಬ್ಬರು ಬುದ್ಧ್ಯೋರ ಸೊಸೆಯರು ಸತ್ತಿದ್ದಾರೆ, ಒಬ್ಬರ ಹೆಂಡತಿ ಸತ್ತಿದ್ದಾರೆ, ನಾಲ್ಕಾರು ಮಕ್ಕಳು ಸತ್ತಿವೆ. ಅವರಿಗೆಲ್ಲ ನಾನೇ ಮುಂದೆ ನಿಂತು ಕೆಲಸ ಮಾಡಿದ್ದೇನೆ. ಕೆಲಸ ಅಂದ್ರೆ ನಾನು ಯಾವತ್ತೂ ಹಿಂದೆ ಬಿದ್ದಿಲ್ಲ. ಬುದ್ಧ್ಯೋರು ಬರಕೊಟ್ಟ ಶಿಫಾರಸು ಕಾಗದಗಳನ್ನೆಲ್ಲ ಇಟ್ಟುಕೊಂಡಿದ್ದೇನೆ ಅಮ್ಮಾವ್ರೆ, ತೋರಿಸಲಾ ?"

"ಬಾಡಿಗೆ ಮನೆ ಸಿಗೋದಿಲ್ಲವೆ ?"

"ಬಾಡಿಗೆ ಮನೇಲಿ ಏನಿರುತ್ತೆ ? ಇದೇ ಸರಿಯಾಗಿದೆ, ಎಲ್ಲಾ ಅನುಕೂಲವಾಗಿದೆ. ಬಾಡಿಗೇನೂ ಇಲ್ಲ, ಆಫೀಸು, ಪೇಟೆ ಎಲ್ಲಾದಕ್ಕೂ ಹತ್ತಿರವಾಗಿದೆ."

"ಆದರೆ ಈ ಮನೇಲಿ ಇಷ್ಟೊಂದು ಜನ ಸತ್ತಿದ್ದಾರೆ ಅಂತೀಯಲ್ಲ."

"ಹಾಗಾದ್ರೆ ಯಾರೂ ಸಾಯೋದಿಲ್ವೆ ಅಮ್ಮಾವ್ರೆ, ಹಣೇಲಿ ಬರೆದಿದ್ದು ಯಾರು ತಪ್ಪಿಸೋದಕ್ಕೆ ಆಗುತ್ತೆ ? ಹಾಗಂತ ಮನೆ ಬಿಟ್ಟು ಯಾರು ಹೋಗ್ತಾರೆ ? ಇದೇ ಈ ನಾವು ಕೂತಿರೋ ಮಣ್ಣಿದೆಯಲ್ಲ ಅಮ್ಮಾವ್ರೆ, ಯಾರಿಗೆ ಗೊತ್ತು ಇಲ್ಲಿ ಏನಿದೆ ಅಂತ ?-"

"ಏನಂದಿ ?"

ಸರೋಜಿನಿ ಬೆಚ್ಚಿ ನಾಲ್ಕೂ ಕಡೆ ಕಣ್ಣರಳಿಸಿ ನೋಡಿದಳು. ಏನು ಹೇಳುತ್ತಿದ್ದಾನೆ ಈ ಮನುಷ್ಯ! ಮೈಯಲ್ಲಿ ನಡುಕ ಹುಟ್ಟಿತು.

"ಇಲ್ಲ ಅಮ್ಮಾವ್ರೆ, ನಾನು ಏನು ಹೇಳ್ತಾ ಇದ್ದೆ ಅಂದ್ರೆ, ಇಲ್ಲಿ ಇಷ್ಟು ಜನ ಸಾಯ್ತಾರಲ್ಲ, ಇವರೆಲ್ಲ ಎಲ್ಲಿಗೆ ಹೋಗ್ತಾರೆ ಅಂತ ? ಈ ಮಣ್ಣಿನಲ್ಲೇ ಸೇರಬೇಕಲ್ಲ ? ಈ ಪ್ರಪಂಚವೇ ಒಂದು ಮಸಾಣ ಇದ್ದ ಹಾಗೆ. ಈ ಮಣ್ಣಿನಲ್ಲೇ ಎಲ್ಲರ ಮೂಳೆ-ಮಾಂಸಗಳು ಸೇರಿ ಹೋಗೋದಿಲ್ಲವೆ. ಆ ಜನರೆಲ್ಲ ಎಲ್ಲಿಗೆ ಹೋದರು ? ಈ ಮಣ್ಣಲ್ಲೇ ಸೇರಿರಬೇಕಲ್ಲ ? ಹಾಗೇ ನೋಡಿ, ಈ ಭೂಮಿ - ತಿಳಿದೋರು ಹೇಳ್ತಾರೆ - ಇದು ರಾಕ್ಷಸನ ಮೂಳೆಯಂತೆ, ಈ ಮೂಳೆಯ ಮೇಲೆ ನಾವು ಮನೆ ಕಟ್ತೀವೆ, ಆ ಮೂಳೆಗಳ ರಸವನ್ನೇ ಹೀರಿ ಹೂವು ಹಣ್ಣುಗಳು ತರಕಾರಿಗಳು ಎಲ್ಲ ಬಿಡ್ತವೆ. ನಾವು ಅವನ್ನೇ ತಿನ್ನೋದು, ನಾವು ಕುಡಿಯೋದಲ್ಲ-"

"ಬೇಡ, ಬೇಡ ನಿತಾಯಿ, ಅದೆಲ್ಲ ಹೇಳಬೇಡ-"

"ಏನೂ ಇಲ್ಲ ಅಮ್ಮಾವ್ರೆ! ನಾವು ತಿನ್ನೋ ಅಕ್ಕಿ, ಬೇಳೆ, ಗೋಧಿ, ತರಕಾರಿಗಳು ಎಲ್ಲ ಗಿಡಗಳೂ ಈ ರಕ್ತಮಾಂಸದ ಗೊಬ್ಬರವನ್ನುಂಡೇ ಬೆಳೀತಾವೆ ಅಂತಿದ್ದೆ. ಆ ರಸವೇ ಮತ್ತೆ ಮೇಲೇಳುತ್ತೆ, ಫಲ ಕೊಡುತ್ತೆ, ಅದೇ ಸತ್ತುಹೋದವರ ರಕ್ತ ಮಾಂಸಗಳು-"

"ಬಿಡು! ಮತ್ತೇನೂ ಹೇಳಬೇಡ. ಇದೆಲ್ಲ ಕೇಳಿದರೆ ಏನು ತಿನ್ನೋದಕ್ಕೆ ಮನಸ್ಸು ಬರಲ್ಲ-"

"ಅಮ್ಮಾವ್ರೆ, ನನಗೂ ಮನಸ್ಸಾಗಲ್ಲ, ಅದಕ್ಕೆ ಸ್ವಲ್ಪ ತಿಂತೀನಿ. ಇದೇ ಒಂದು ತರಹ ಆಸೆ ಅಂತ ಕಾಣುತ್ತೆ. ಇದು ಬೇರೆಯವರ ರಕ್ತ - ಏನು ಮಾಡೋದು, ದೇವರು ಹೀಗೆ ಮಾಡಿಬಿಟ್ಟಿದ್ದಾನೆ. ಇಲ್ಲಿ ಬೇರೆಯವರ ರಕ್ತ ಮಾಂಸ ತಿನ್ನದಿದ್ದರೆ ಮನುಷ್ಯ ಬದುಕೋದಕ್ಕಾಗೋದಿಲ್ಲ."

"ಅಮ್ಮಮ್ಮ ಬೇಡ ನಿತಾಯಿ-"

ಸರೋಜಿನಿ ಸುತ್ತಲೂ ನೋಡಿದಳು. ನಾಲ್ಕೂ ಕಡೆ ರಕ್ತಮಾಂಸಗಳೇ ಕಾಣತೊಡಗಿದವು. ದೋಷವಿಲ್ಲದ ಮಣ್ಣಿನ ಮುಖ ಬೀಭತ್ಸವಾಗಿ ಕಾಣುತ್ತಿತ್ತು. ನಿತಾಯಿಗೆ ಅವಳ ಮುಖ ನೋಡಿ ಖುಷಿಯಾಗುತ್ತಿತ್ತು. ನಿರಾಳವಾಗಿ ಎರಡು ನಿಮಿಷ ಇರೋಣ ಅಂದರೆ ಅವಳಿಗೆ ಸಾಧ್ಯವಾಗುತ್ತಿಲ್ಲ. ಅಮ್ಮಾವರ ಪೊರೆ ಕಳಚಿ ಕೇವಲ ಒಬ್ಬ ಹೆಣ್ಣಾಗಿ ಮಾತ್ರ ಅವನಿಗೆ ಅವಳು ಕಂಡಳು. ಬೆದರಿದ್ದಾಳೆ. ನಿತಾಯಿ ಮುಂದುವರಿಸಿದ - "ಇದೇ ಬ್ರಹ್ಮಜ್ಞಾನ ಅಮ್ಮಾವ್ರೆ, ಪ್ರಪಂಚ ಅಂದ್ರೆ ಬರೀ ಹೋಗೋದು ಬರೋದು ಅಷ್ಟೆ, ಇದೆಲ್ಲ ಯೋಚನೆ ಮಾಡಿದರೇನೇ ಮಾಯೆ ಅನ್ನೋದು ದೂರವಾಗೋದು. ಇರಲಿ ಬಿಡಿ, ಅದೆಲ್ಲ ಯಾಕೆ ಯೋಚಿಸ್ತೀರ, ಏನೋ ದೇವರು ಮಾಡಿಸಿದ್ದು, ನಾವೇನು ಮಾಡೋಕಾಗುತ್ತೆ ಹೇಳಿ. ಆಳನ್ನು ಕರಕೊಂಡು ಬರಲೆ ಹೇಳಿ ?"

"ಹೌದು ನಿತಾಯಿ, ಕರಕೊಂಡು ಬಾ, ಯಾರೂ ಇಲ್ಲ, ಬಿಕೋ ಅನ್ನುತ್ತೆ-"

"ನಂಗೆ ಅನ್ನಿಸುತ್ತೆ. ಒಬ್ಬ ಹೆಣ್ಣಾಳನ್ನು ಇಟ್ಟುಕೊಂಡರೂ ಸರಿಹೋಗುತ್ತೆ ಅಂತ.

ಇಷ್ಟು ದೊಡ್ಡ ಮನೆ, ಮನೇಲಿ ಜನರಿದ್ದರೇ ಚೆನ್ನ, ಬುದ್ಧೋರು ನಾನೂ ಟೂರಿನ ಮೇಲೆ ಹೊರಟು ಬಿಡ್ತೇವೆ. ಮನೇಲಿ ಒಂದಿಬ್ಬರು ಜನಾನಾದ್ರೂ ಇರಬೇಕಲ್ಲ. ಯಾರನ್ನಾದರೂ ಕರಕೊಂಡು ಬರ್ತೀನಿ. ಊಟ ತಿಂಡಿ ಕೊಟ್ಟ ಮೇಲೆ ಎರಡು ಮೂರು ರೂಪಾಯಿ ಕೊಟ್ಟರಾಯ್ತು-"

"ಇಬ್ಬಿಬ್ಬರು - ಸಂಬಳ ಎಷ್ಟೊಂದಾಗುತ್ತೆ ?"

"ಸಂಬಳ ನಂಗೆ ಬಿಟ್ಟುಬಿಡಿ. ಈ ಮನೇಲಿ ಚಿನ್ನ ಹುಟ್ಟುತ್ತೆ. ಬುದ್ಧೋರಿಗೆ ಗೊತ್ತಿದ್ದರೂ ಗೊತ್ತಿಲ್ಲದಂತೆ ಇರ್ತಾರೆ. ಎಲ್ಲ ನಾನೇ ಮಾಡೋದು. ಅದೆಷ್ಟು ಜನ ಬುದ್ಧೋರುಗಳು ಬಂದರು ಹೋದರು ? ಅದೆಷ್ಟು ತಿಂದು ಕುಡಿದು ಮಾಡಿದರು ? ಅದೇನೇನು ತಗೊಂಡರು ? ಇಲ್ಲಿ ರೂಪಾಯಿಗಳನ್ನು ಬಳ್ಳದಲ್ಲಿ ತುಂಬಿ ಲೆಕ್ಕ ಹಾಕ್ತಾರೆ, ಅದೆಲ್ಲ ನಾನು ನೋಡಿಕೊಳ್ತೀನಿ. ನಿಮಗೆ ಯಾವ ಯೋಚನೇನೂ ಬೇಡ. ಬೇರೆ ಮನೆಗಳಿಂದ ಅಮ್ಮಾವ್ರುಗಳು ಎಲ್ಲೋ ತಿಂಗಳಿಗೆ ಒಂದೆರಡು ಸಾರಿ ನಿಮ್ಮ ಮನೆಗೆ ಬರಬಹುದು. ಹಾಗೆ ಬಂದಾಗ ನಂಗೆ ಮುಖ ಒಣಗಿಸಿಕೊಂಡು ಹೇಳಿ - ನಿತಾ, ಮನೇಲಿ ಇವತ್ತು ಅಕ್ಕಿ ಇಲ್ಲ, ಎಲ್ಲಾದರೂ ಸ್ವಲ್ಪ ಅಕ್ಕಿ ಸಾಲ ತಗೊಂಡು ಬಂದಿಟ್ಟಿರೋದಕ್ಕೆ ಏನಾಗಿತ್ತು ನಿಂಗೆ ? ಬಾಗಿಲ ಹತ್ತಿರ ಬಂದು ಜೋರಾಗಿ ಪಿಸುಗುಟ್ಟುವಂತೆ ಹೇಳಬೇಕು, ಅದು ಅವರಿಗೆ ಕೇಳಿಸಬೇಕು, ಹಾಗೆಯೆ, ಬುದ್ಧೋರು ಸಹ ಪ್ರತಿ ತಿಂಗಳು ಯಾರಾದರೂ ಆಫೀಸಿನ ಸ್ನೇಹಿತರ ಹತ್ತಿರ ಒಂದು ಹತ್ತಿಪ್ಪತ್ತು ಸಾಲತರ್ತಾ ಇರ್ಬೇಕು."

"ಏನು, ಸಾಲ ಮಾಡಿ ಆಳುಕಾಳು ಇಟ್ಟುಕೊಳ್ಳಬೇಕಾ ?"

"ಇಲ್ಲ ಅಮ್ಮಾವ್ರೆ, ಅದು ಹಾಗಲ್ಲ, ಸುಮ್ಮನೆ ನಾಲ್ಕು ಜನರ ಕಣ್ಣಿಗೆ ಬೀಳಬಾರದು. ಅದಕ್ಕೇ. ಸುಮ್ಮನೆ ಪ್ರಪಂಚದ ಎದುರಿಗೆ ಸೋಗು ಹಾಕಬೇಕು. ನೀವು ಸಾಲ ತಗೊಂಡೇ ಸಂಸಾರ ನಡಿಸ್ತೀರಿ ಅಂತ ಜನ ತಿಳಿದುಕೊಳ್ಳಲಿ. ಜನಗಳಿಗೆ ಹೊಟ್ಟೆಕಿಚ್ಚು ಜಾಸ್ತಿ. ಅವರ ಕಣ್ಣಿಗೆ ಮಣ್ಣೆರಚದೆ ಇದ್ದರೆ ರೂಪಾಯಿ ಹುಟ್ಟೋದಿಲ್ಲ. ಇಲ್ಲದಿದ್ರೆ ಅವರು ಸುಮ್ಮನೆ ಕೈಕಟ್ಟಿಕೊಂಡು ಕೂತಿರ್ತಾರಾ ?"

ಸರೋಜಿನಿ ಏನೂ ಹೇಳಲಿಲ್ಲ. ಇದು ಹೊಟ್ಟೆಪಾಡಿನ ಹೊಸ ವ್ಯಾಕರಣ, ಅವಳ ಮನಸ್ಸಿನಲ್ಲಿ ಅನೇಕ ವಿಚಾರಗಳು ಏಳುತ್ತಿವೆ. ಇವನು ನಿತಾಯಿ, ಇವನ ಕೈಬಾಯಲ್ಲಿ ತುಂಬಿರುವುದು ಪಾಪ ಅಂತ ಯೋಚಿಸುತ್ತಾಳೆ.

ಮಿಸ್ಟರ್ 'ಶ'.

'ಶ' ಎಂಬ ಪದ ಯುಗಯುಗಗಳಿಂದಲೂ ಸ್ನೇಹ ತುಂಬಿದ ಮಧುರವಾದ ಸಂಬಂಧವನ್ನೇ ಸೂಚಿಸುತ್ತಾ ಬಂದಿದೆ. ಭಾಷೆಯಲ್ಲಿ ಅದಕ್ಕೊಂದು ವಿಶೇಷವಾದ ಸ್ಥಾನವಿದೆ. ಹೆಚ್ಚು ಪ್ರಯೋಗ ಮಾಡಿದಾಗ ಅದು ನಾಲಗೆಯ ಮುಂಭಾಗಕ್ಕೆ ಬರುತ್ತಿದ್ದಂತೆ 'ಹಃ' ಸಹ ಆಗುತ್ತದೆ. ಮಾತಿನ ಕೊನೆಯಲ್ಲಿ ಮನಸ್ಸಿನೊಳಗಡೆಯೆ ಅದನ್ನು ಉಚ್ಚರಿಸಿದಾಗ ಒಂದು ರೀತಿಯ ಉತ್ಸಾಹ ಉಕ್ಕಿಬರುತ್ತದೆ.

ಹಾಗೆಯೆ 'ಶ' ಎಂಬುದರಲ್ಲಿ ಒಂದು ರೀತಿಯ ವ್ಯಾಪಕವಾದ ಜನಪ್ರಿಯತೆಯೂ

ಇದೆ. ಕಲ್ಲುಕುಟಿಗ ಕಲ್ಲುಕುಟ್ಟುವಾಗ, ರೈತ ಎತ್ತನ್ನು ಓಡಿಸುವಾಗ, ಕೂಲಿಯವನು ತನ್ನ ಮಡದಿಯನ್ನು ಸಂಬೋಧಿಸುವಾಗ ಎಲ್ಲರಿಗೂ ಇದು ಪ್ರಿಯವಾದ ಮಾತಾಗಿರುತ್ತದೆ.

ಆದರೆ 'ಶ' ಅವರ ವ್ಯಕ್ತಿತ್ವದಲ್ಲಿ ಸ್ನೇಹದ ಬಗ್ಗೆ ಕೇಳುವಂತೆಯೇ ಇಲ್ಲ. ಕರಿಯ ಮೈ, ಟೊಣಪನ ಮೈಕಟ್ಟು, ಜಬರುದಸ್ತಾದ ಮನುಷ್ಯ, ಗುದ್ದಲಿಯಂತೆ ಚೌಕಟ್ಟಾಗಿರುವ ಮುಖ, ಗಂಭೀರ, ನೀರಸ ಮತ್ತು ನಿಷ್ಠುರವಾದುದು. ಕದಂಬದ ಹೂವಿನಂತೆ ಸಣ್ಣಸಣ್ಣಗೆ ಕತ್ತರಿಸಿದ ಕೂದಲು, ಗಾಜಿನಂತಹ ಕಣ್ಣುಗಳು. ದಪ್ಪ ತುಟಿಗಳ ಮೇಲೆ ಸ್ವಲ್ಪ ಬಾಗು ಇರುವುದರಿಂದ ಎಡಗಡೆ ಕೆನ್ನೆ ಯಾವಾಗಲೂ ನೇತಾಡುತ್ತಿದಯೇನೋ ಎಂಬಂತೆ ಕಾಣುತ್ತದೆ. ಅಸಹಜವೆನ್ನುವಷ್ಟರ ಮಟ್ಟಿಗೆ ಇರುವ ದಪ್ಪ ಕುತ್ತಿಗೆ, ಅದು ಇದ್ದಕ್ಕಿದ್ದಂತೆ ತಿರುಗಿದಾಗ ಒಂದು ಭಂಗಿಯಲ್ಲಿ ಮುದುಡಿಕೊಂಡಿರುವಂತೆ ಕಾಣುತ್ತದೆ. ಒರಟಾದ ಕೈ ಯಾವುದೋ ಪ್ರಾಣಿಯ ಪಂಜಾಗಳಂತಿದೆ. ಮಡಕೆಯಂತಹ ಹೊಟ್ಟೆ, ಯಾವಾಗಲೂ ದುರುಗುಟ್ಟಿ ನೋಡುತ್ತಿರುವ ಮುಖಭಾವ, ಇನ್ನೇನು ಮೈಮೇಲೆ ಎಗರಿದ ಅನ್ನುವಂತಹ ಭಂಗಿ. ಒಟ್ಟಿನಲ್ಲಿ ನೋಡಿದರೆ ಕುಸ್ತಿ ಆಖಾಡದ ಪೈಲ್ವಾನನ ನೆನಪು ಬರುತ್ತದೆ.

ಆದರೆ ಈ ಕುಸ್ತಿ ಪೈಲ್ವಾನನಲ್ಲಿ ಹರಯವಿಲ್ಲ, ಪ್ರೌಢತೆ ಇದೆ.

ಮಾನಮರ್ಯಾದೆ ಹೆಚ್ಚುಹೆಚ್ಚಾದಂತೆ ಅಹಂಭಾವ ಜಾಸ್ತಿಯಾಗುತ್ತದೆ. ಆ ಕಡೆ ಮನೆ ತಾಪತ್ರಯ ಹೆಚ್ಚುತ್ತಾ ಹೋದಂತೆ ದಿನೇ ದಿನೇ ಮೈಪರಚಿ ಕೊಳ್ಳುವಂತಾಗುತ್ತಿರುತ್ತದೆ. ಹೊಟ್ಟೆಪಾಡಿಗಾಗಿ ಮಾಡುವ ನೌಕರಿಯಲ್ಲಿ ಬಡ್ತಿ ಸಂಪಾದಿಸಲು ಹಲವಾರು ಭಾಗಗಳಲ್ಲಿ ಖೋತಾ ಮಾಡಿಕೊಂಡು ಕ್ರಮೇಣ ತ್ಯಾಗಮಾಡಿದ ತ್ಯಾಗ ಮಾಡಿದ ಅಂತ ಯೋಚಿಸುತ್ತಲೆ ಮನಸ್ಸು ಧಗ್‌ಧಗ್ ಅಂತ ಉರಿಯತೊಡಗುತ್ತದೆ.

ಇಂಥ ಮನುಷ್ಯ ಸ್ನೇಹಮಯನಾಗಿರುವುದಿಲ್ಲ. ಜನಗಳ ಮನಸ್ಸನ್ನು ಗೆಲ್ಲುವುದಕ್ಕೂ ಹಕ್ಕುದಾರನಾಗಿರುವುದಿಲ್ಲ. ಅವನ ನಡಿಗೆಯಿಂದ ಭೂಮಿ ಸಹ ನಡುಗುತ್ತದೆ, ಅವನ ಧ್ವನಿ ಕೇಳಿ ಮರದ ಮೇಲಿರುವ ಹಕ್ಕಿಗಳು ಪುರ್ ಅಂತ ಹಾರಿಹೋಗುತ್ತವೆ. ಅವನ ಸಿಟ್ಟಿನಿಂದ ಜನರೆಲ್ಲ ತ್ರಾಹಿತ್ರಾಹಿ ಅಂತ ತೊಳಲಾಡುತ್ತಾರೆ. ಅವನು ಸಾರ್ವಜನಿಕ ವ್ಯಕ್ತಿಯಲ್ಲ, ಸ್ವತಂತ್ರ ವ್ಯಕ್ತಿ, ಅಕ್ಕಪಕ್ಕದ ಜನರ ಮೇಲೆ ಎಂದಾದರೂ ಕಣ್ಣು ಹರಿಸಿದ ಅಂದರೆ ಅವರೊಡನೆ ವಿಶ್ವಾಸದಿಂದ ಸೇರುವುದಕ್ಕಲ್ಲ, ಅವರಿಂದ ಹಣ ವಸೂಲು ಮಾಡುವುದಕ್ಕಾಗಿ. ಮನುಷ್ಯರನ್ನು ನೋಡುವ ಒಲವು ಅವನಲ್ಲಿಲ್ಲ. ಅವನಿಗೆ ಕಾಣುವುದು ಕೇವಲ ಜೀವವಿಲ್ಲದ ಬೊಂಬೆಗಳು, ಅವನ ಪ್ರಪಂಚ ಕೇವಲ ಕೈಬೊಂಬೆಗಳ ಪ್ರಪಂಚ. ಮನಸ್ಸಿನಾಳದ ವಿಕಾರಗಳು ಬಯಕೆಯಾಗಿ ರೂಪಾಂತರಗೊಂಡ ಒತ್ತಡದಿಂದ ಈ ಕೈಗೊಂಬೆಗಳ ಜಾತ್ರೆಯಲ್ಲಿ ಕುದುರೆಸವಾರಿ ಮಾಡಲು ಮನಸ್ಸಾಗುತ್ತದೆ. ಯಾವ ಬೊಂಬೆಯ ತಲೆ ಯಾವ ಬೊಂಬೆಯ ಹೊಟ್ಟೆಗೆ ಹೊಡೆದು ಚೂರಾಗುತ್ತದೆ ಅಂತ ನೋಡುವ ತವಕ. ಬೊಂಬೆಗಳ ಪ್ರಪಂಚದಲ್ಲಿ ಕೋಲಾಹಲವೆಬ್ಬಿಸಿ ಅವನು ಅವುಗಳ ಪಾಡನ್ನು ನೋಡಬಯಸುತ್ತಾನೆ - ಯಾವುದು ಚಿತ್ತಾಗಿದೆ, ಯಾವುದು ತಲೆಕೆಳಗಾಗಿದೆ,

ತುಂಡುತುಂಡಾಗಿರುವುದು ಯಾವುದು. ಈ ದೃಶ್ಯಗಳನ್ನೆಲ್ಲ ನೋಡಿ ಅವನು ಖುಷಿಪಡುತ್ತಾನೆ, ಜನ ಅವನನ್ನು ಸ್ಯಾಡಿಸ್ಟ್ ಅಥವಾ ಇನ್ನೇನು ಬೇಕಾದರೂ ಕರೆಯಲಿ, ಅವನಿಗೆ ಅದರ ಪರಿವೆಯಿಲ್ಲ.

ಹಾಗಾಗಿ ಅವನು 'ಶ' ಆಗಿದ್ದಾನೆ. ಏಕೆಂದರೆ 'ಸಾಹೂ' ಪದ ಅಲ್ಲಿ 'ಶ' ಎಂದಾಗಿದೆ. ಅವರಲ್ಲಿ ಸಾಹೇಬರಿಗೆ ಲಾಯಕ್ಕಾದ ದೌಲತ್ತಿದೆ - ಹೊರಗಡೆ ಅವನು ಸೂಟು ಧರಿಸಿರುತ್ತಾನೆ, ತಲೆ ಮೇಲೆ ಹ್ಯಾಟು, ಬಾಯಲ್ಲಿ ಚುಟ್ಟಾ ಕಚ್ಚಿರುತ್ತಾನೆ, ಕೈಯಲ್ಲಿ ಛಡಿ ಹಿಡಿದಿರುತ್ತಾನೆ. 'ವಂದ್ಯೋಪಾಧ್ಯಾಯ' ಎಂಬುದಕ್ಕೆ ಬದಲಾಗಿ 'ಬ್ಯಾನರ್ಜಿ' ಆದಹಾಗೆ ತಲೆಮಾರಿನಿಂದ ಬಂದ 'ಸಾಹೂ' ಪದ ಇಂಗ್ಲಿಷ್ ರೂಪವನ್ನು ತಳೆದು ತಾಲವ್ಯ 'ಶ' ಎಂಬುವುದು ಕೇಳುವುದಕ್ಕೆ ಖುಷಿ ತರುತ್ತದೆ.

ಮಿಸ್ಟರ್ 'ಶ' ಒಬ್ಬ ಉದ್ಯೋಗಿ, ಸಾಧಾರಣ ಉದ್ಯೋಗಿಯಲ್ಲ - ಕಂಪೆನಿಯ ಸಾಹೇಬರು.

ಭೂಪತಿಯಂತೆ ಮಿಸ್ಟರ್ 'ಶ' ಕುಳಿತಿದ್ದಾರೆ. ಎರಡೂ ಕಡೆಗಳಲ್ಲಿರುವ ಮರದ ರ್‍ಯಾಕುಗಳಲ್ಲಿ ರಾಶಿರಾಶಿ ಕಾಗದಗಳು, ಅವುಗಳಲ್ಲಿ ಭಾರಿಭಾರಿ ಸಮಸ್ಯೆಗಳಿವೆ. ದೊಡ್ಡ ಕೊಠಡಿ, ಕಿಟಕಿ ಮತ್ತು ಬಾಗಿಲುಗಳಿಗೆ ದಪ್ಪ ಪರದೆಗಳನ್ನು ಇಳಿಬಿಟ್ಟಿದೆ. ಹೊರಗಿನ ಬೆಳಕಿನ ಜಾಗದಲ್ಲಿ ಈ ಕೊಠಡಿಯಲ್ಲಿ ಮೇಜಿನ ಮೇಲೆ ವಿದ್ಯುತ್ ದೀಪ ಬೆಳಗುತ್ತಿದೆ. ಮೇಜಿನ ಆ ಕಡೆಯಲ್ಲಿ ಆಗಂತುಕರಿಗಾಗಿ ಒಂದು ಕುರ್ಚಿ, ಕೈಗಳಿರುವ ಮತ್ತೊಂದು ಕುರ್ಚಿ - ಸ್ವಲ್ಪ ಹಳೆಯದು, ಅದಕ್ಕೆ ಒಂದು ಕೈಯಿಲ್ಲ, ಹಾಕಿದ್ದಾರೆ, ಒಂದು ಸ್ಟೂಲಿದೆ. ಆಗಂತುಕ ಕುಳಿತುಕೊಳ್ಳಬೇಕೆಂದು ಹಟ ಹಿಡಿದರೆ ಅವನ ಸ್ಥಾನಮಾನಗಳನ್ನು ನೋಡಿ ಆ ಮೂರು ಆಸನಗಳಲ್ಲಿ ಯಾವುದು ಯೋಗ್ಯವೆಂದು 'ಶ'ಗೆ ಅನಿಸುತ್ತದೊ ಆ ಆಸನ ಆತನಿಗೆ ದೊರೆಯುತ್ತದೆ. 'ಶ'ಗೆ ಯೋಚಿಸಲು ಪುರುಸೊತ್ತು ಬೇಕು, ಅಲ್ಲಿಯವರೆಗೆ ಆಗಂತುಕ ನಿಂತಿರಬೇಕು.

ಕೊಠಡಿಯ ಒಳಗಡೆ ಒಂದು ಮರದ ಸ್ಕ್ರೀನ್ ಹಾಕಿ ಅದಕ್ಕೆ ಎತ್ತರವಾದ ಪರದೆ ಹಾಕಿದ್ದಾರೆ. ಅದರ ಆಚೆ ಕಡೆಯಲ್ಲಿರುವುದೇ 'ಶ' ಅವರ ಟಾಯ್ಲೆಟ್. ಇವೆಲ್ಲ ಸಾಹೇಬರಾಗಿರುವವರಿಗೆ ಇರಬೇಕಾದ ಲಕ್ಷಣಗಳು. ಕೊಠಡಿಯ ದುರ್ವಾಸನೆಯಲ್ಲಿ ಉಚ್ಚೆಯ ಕಟುವಾಸನೆಯೂ ಸ್ಪಷ್ಟವಾಗಿ ಗೊತ್ತಾಗುತ್ತದೆ. ಅದೇ ಕೋಣೆಯ ಇನ್ನೊಂದು ಬದಿಯಲ್ಲಿ ಪರದೆಯ ಮರೆಯಲ್ಲಿ ತಿಂಡಿ ತಟ್ಟೆಗಳು, ಲೋಟಗಳು, ಊಟ, ಫ್ಲಾಸ್ಕಿನಲ್ಲಿ ಚಹಾ, ಅಲ್ಲಿಯೆ ಸ್ಟ್ಯಾಂಡಿನ ಮೇಲೊಂದು ಟವಲು, ಊಟ ಮಾಡುವುದಕ್ಕೆ ಒಂದು ಮೇಜು, ಅಲ್ಲಿ ಯಾವಾಗಬೇಕೆಂದರೆ ಆಗ ಮುಖ ತೊಳೆದುಕೊಂಡು ತಾಜಾ ಆಗುವುದಕ್ಕಾಗಿ ಒಂದು ಕನ್ನಡಿ.

ಮಿಸ್ಟರ್ 'ಶ' - ಕುಳಿತು ಬರೆಯುತ್ತಿದ್ದಾರೆ. ಕಾಗದದ ಜೊತೆಯಲ್ಲಿ ಕಸರತ್ತು ಮಾಡುವವರಂತೆ ಲೇಖನಿಯನ್ನು ಬಲವಾಗಿ ಊರಿ ಬರೆಯುತ್ತಿದ್ದಾರೆ. ಮುಖದ ಮೇಲಿನ ಮಾಂಸಖಂಡಗಳೆಲ್ಲ ಸೆಟೆದುಕೊಳ್ಳುತ್ತಾ ಸ್ಪಷ್ಟವಾಗಿ ಮುಖಭಾವವನ್ನು ತೋರಿಸುತ್ತಿದೆ. ಕೆಲವೊಮ್ಮೆ ಹಿಂಸೆಯ, ಕೆಲವೊಮ್ಮೆ ಸಿಟ್ಟಿನ, ಮತ್ತು ಕೆಲವೊಮ್ಮೆ ತರ್ಕದ ಹಾಗೂ ಇನ್ನು ಕೆಲವು ವೇಳೆ ಕುಟಿಲವಾದ ಭಾವನೆಗಳು.

ಮೇಜಿನ ಮೇಲಿರುವ ಕರೆಗಂಟೆಯ ಮೇಲೆಕೈಯೂರಿತು. ಗಂಟೆ ಕರ್‌ಕರ್ ಅಂತು.

ಅತ್ತ ತೂಕಡಿಸುತ್ತಾ ಗೋಡೆಗೆ ಒರಗಿ ಕುಳಿತಿದ್ದ ಜವಾನ ಗಡಿಬಿಡಿಗೊಂಡು ಮೇಲೇಳುತ್ತಾನೆ, ಸೊಂಟ ಬಗ್ಗಿಸಿ ಸಲಾಮು ಹೊಡೆದು "ಬುದ್ಧಿ" ಅನ್ನುತ್ತಾನೆ.

"ಕರಿ"

"ಸರಿ ಬುದ್ಧಿ"

ಅದೇ ತರಾತುರಿಯಲ್ಲಿ ಬಾಣದಂತೆ ಆಳು ಹೊರಗೋಡುತ್ತಾನೆ. ಆ ಕಡೆ ಈ ಕಡೆ ನೋಡುತ್ತಾನೆ ? ಸಾಲುಸಾಲಾಗಿ ಗುಮಾಸ್ತರುಗಳು ಕುಳಿತು ಬರೆಯುತ್ತಿದ್ದಾರೆ. ಅಲ್ಲದೆ ಸಣ್ಣಸಣ್ಣ ಕೊಠಡಿಗಳಲ್ಲಿ ಸಣ್ಣಸಣ್ಣ ಸಾಹೇಬರುಗಳು, ಕಚೇರಿಯ ಹೆಡ್‌ಗುಮಾಸ್ತರು. ಸಾಹೇಬರು ಹೇಳಿದ್ದಾರೆ ಅಂದಮೇಲೆ ಕರೆಯಲೇ ಬೇಕು. ಯಾರನ್ನು ? ಬುದ್ಧಿ ಓಡಿಸಿ ಆಳು ಹೆಡ್‌ಗುಮಾಸ್ತರ ಹತ್ತಿರ ಓಡಿದ, ಅವರೇ ಸರಿಯಾದ ಗಾಣದೆತ್ತು, ಯಾವ ಆಪತ್ತು ಎದುರಾದರೂ ಮೊದಲು ನಿಭಾಯಿಸುವುದರಲ್ಲಿ ನಿಸ್ಸೀಮರೆಂದರೆ ಅವರೇ.

"ಸಾಹೇಬ್ರು ಕರೀತಾರೆ ಬುದ್ಧಿ."

ಹೆಡ್‌ಗುಮಾಸ್ತರು ಎದ್ದೆನೊ ಬಿದ್ದೆನೊ ಅಂತ ಕೊಠಡಿಯ ಕಡೆ ಓಡಿದರು. ಓಡುತ್ತಿರುವಂತೆಯೆ ಅಭ್ಯಾಸಬಲದಿಂದ ಕೋಟಿನ ಗುಂಡಿಗಳನ್ನು ಹಾಕಿಕೊಂಡರು. ಸಾಹೇಬರು ಬರೆಯುತ್ತಿದ್ದಾರೆ, ಹಾಗಾಗಿ ಸುಮ್ಮನೆ ನಿಲ್ಲಬೇಕಾಯಿತು, ತಲೆ ಮೇಲೆತ್ತದೆ ಸುಮ್ಮನೆ ಕಣ್ಣುಗಳನ್ನು ಮೇಲೆ ಮಾಡಿ ಸಾಹೇಬರು ಕೇಳಿದರು-

"ಕೆಲಸ ಆಯ್ತಾ ?"

"ಯಾವ ಕೆಲಸ ?" ಬಾಯಿಂದ ಮಾತು ಜಾರಿತು.

ಸಾಹೇಬರು ಗರ್ಜಿಸಿದರು - "ಯಾವ ಕೆಲಸ ? ಎಷ್ಟು ಸಾರಿ ಹೇಳಬೇಕು ? ಇದನ್ನು ಸೇರಿಸಿ ಹದಿನಾರು ಸಾರಿ ಹೇಳಿದ್ದಾಯಿತು. ಹೇಳಿ ಆಯ್ತೋ ಇಲ್ಲವೊ ?"

ಅವಸರದಲ್ಲಿ ಹೆಡ್‌ಗುಮಾಸ್ತರು ಹೇಳಲೇಬೇಕಾಯಿತು. "ಆಗ್ತಾ ಇದೆ, ಆಗ್ತಾ ಇದೆ, ಇನ್ನೇನು ಮುಗಿಯೋದರಲ್ಲಿದೆ, ನೆನ್ನೆ ರಾತ್ರಿಯೆಲ್ಲ ಅದೇ ಕೆಲಸ ಹಿಡೀತು."

"ಸರಿ, ನಡೀರಿ, - ಇನ್ನೂ ಮುಗೀಲಿಲ್ಲವಂತೆ ? ಕೆಲಸಕ್ಕೆ ಬಾರದ ಜನ." ತಲೆಬಗ್ಗಿಸಿಕೊಂಡು ಹೆಡ್‌ಗುಮಾಸ್ತರು ಹೊರಗೆ ನಡೆದರು. ಹೊರಗೆ ಬಂದು ಸಮಾಧಾನದ ಉಸಿರೆಳೆದರು. ಯಾವ ಕೆಲಸ ಅಂತ ಅವರಿಗೆ ಗೊತ್ತಾಗಲಿಲ್ಲ, ನೂರಾರು ಕೆಲಸಗಳಿರುತ್ತದೆ. ಪೂರ್ತಿ ಮುಗಿದಿದೆ ಅಂತ ಹೇಳದೆ ಬಾಕಿ ಉಳಿದಿದೆ ಅಂತ ಹೇಳಿ ತಪ್ಪು ಮಾಡಿದೆನಲ್ಲ ಅಂತ ಕೈಕೈಹಿಸುಕಿಕೊಂಡರು.

ತಾವು ಏನು ಉತ್ತರ ಕೊಟ್ಟಿದ್ದಾರೆ, ಯಾವ ಕೆಲಸದ ಬಗ್ಗೆ ಅವರಿಗೆ ಗೊತ್ತಿಲ್ಲ. ಆದರೂ ಪ್ರಶ್ನೆ ಹಾಕಿದ ಮೇಲೆ ಉತ್ತರ ಕೊಡಲೇಬೇಕಲ್ಲ. ಹೊರಗಿನಿಂದಲೂ ಪ್ರಶ್ನೆಗಳು ಬರುತ್ತಿರುತ್ತವೆ. ರಾತ್ರಿ ಹೊತ್ತಿನಲ್ಲಿ ಟೆಲಿಗ್ರಾಂ - ನಿಮ್ಮ ಬೇರೆಬೇರೆ ಡಿಪೋಗಳಲ್ಲಿ ಎಷ್ಟೆಷ್ಟು ಎತ್ತುಗಳಿವೆ, ಟೆಲಿಗ್ರಾಂ ಮೂಲಕ ತಿಳಿಸಿ, ಈ ಸಾಲಿನಲ್ಲಿ ಎಷ್ಟು ಎಕರೆ ಜಮೀನಿನಲ್ಲಿ ಹೊಗೆಸೊಪ್ಪು ಹಾಕಿದೆ ಟೆಲಿಗ್ರಾಂ ಮೂಲಕ ತಿಳಿಸಿ.

ಟೆಲಿಗ್ರಾಂ ಮೂಲಕವೇ ಉತ್ತರ ಕೊಡಬೇಕಾಗುತ್ತದೆ. ಹುಡುಕಿ ಸರಿಯಾದ ಅಂಕಿ ಸಂಖ್ಯೆಗಳನ್ನು ಕೊಡುವವರೆಗೂ ಏನಾದರೂ ಉತ್ತರ ಕೊಟ್ಟುಕೊಂಡು ಹೋಗದೆ ಇದ್ದಿದ್ದರೆ ಅವರು ಹೆಡ್‌ಗುಮಾಸ್ತೆ ಜಾಗದಲ್ಲಿ ಬಹಳ ದಿನ ಇರುವುದಕ್ಕಾಗುತ್ತಿರಲಿಲ್ಲ.

ಹೆಡ್‌ಗುಮಾಸ್ತರು ಹೋದರು, ಕೊಠಡಿಯಲ್ಲಿ ಸಾಹೇಬರು ಒಬ್ಬರೇ ಇದ್ದಾರೆ. ಕಾಗದದ ಮೇಲೆ ಲೇಖನಿ ಜೋರಾಗಿ ಓಡುತ್ತಿದೆ.

ಹೊರಗಡೆ ಮದುವೆ ಮೆರವಣಿಗೆಯ ವಾದ್ಯಗಳ ಸದ್ದು ಕೇಳಿಸುತ್ತದೆ. ಶಹನಾಯಿ ಮೊಳಗುವ ಇಂಪಾದ ಧ್ವನಿ ಹೊರಡುತ್ತದೆ. ಒಂದು ಅಲೆ ಮನಸ್ಸನ್ನು ಹಿಂದಿನ ನೆನಪುಗಳತ್ತ ಸೆಳೆದುಕೊಂಡು ಹೋಗುತ್ತದೆ.

ಸಾಹೇಬರು ಸಿಟ್ಟಿಗೇಳುತ್ತಾರೆ - ಥೂ! ಜನ ಹುಟ್ಟುತ್ತಾರೆ, ಮದುವೆಯಾಗುತ್ತಾರೆ, ಮನೆ ಕಟ್ಟುತ್ತಾರೆ, ಸಾಯುತ್ತಾರೆ, ಬದುಕಿನಲ್ಲಿ ಸಾಧಾರಣವೆನಿಸುವ ಇವೇ ವಿಚಾರಗಳು ಮನಸ್ಸಿಗೆ ಎಷ್ಟು ಮುಜುಗರ ಉಂಟುಮಾಡುತ್ತವೆ. ಹೊರಗಡೆ ಅದೇ ಅಂಗಡಿ ಬೀದಿಯಲ್ಲಿರುವಂತೆ ಗುಜುಗುಜು ಬಟ್ಟೆಯ ಮರೆಯಲ್ಲಿ ಸ್ವಾರ್ಥವನ್ನು ಅಡಗಿಸಿಕೊಂಡು ತಮ್ಮ ತಮ್ಮ ಉದ್ದೇಶವನ್ನು ನೆರವೇರಿಸಿಕೊಳ್ಳಲು ಜನ ಬರುತ್ತಾರೆ - ಹೋಗುತ್ತಾರೆ, ಅದೇ ಛಲ, ಅದೇ ತಾಪತ್ರಯಗಳು, ಅದೇ ಸುಖ, ಅದೇ ಗೋಳು.

ದೂರದಲ್ಲಿ ಮದುವೆ ಮೆರವಣಿಗೆ ಮುಂದೆ ಸಾಗುತ್ತಿದೆ. ಏನೋ ಗಿಜಿಗಿಜಿ, ಗಲಾಟೆ, ಶಹನಾಯಿ ವಾದ್ಯ ಕೇಳಿಬರುತ್ತಿದೆ.

ಬಾಟಲು ಭರ್ತಿ ಹೆಂಡ ಕುಡಿದಿದ್ದಾರೆ.

ಅದೇ ವಿಚಾರ, ಅದೇ ವಿಚಾರ, ವಿಶ್ರಾಂತಿಯಿಲ್ಲ. ಸಾಲುಸಾಲಾಗಿ ಹೋಗುತ್ತಿರುವ ಎತ್ತಿನ ಬಂಡಿಗಳ ಅದೇ ಗಡಗಡ ಸದ್ದು ಒಂದಾಗಿ ರಸ್ತೆಯಲ್ಲಿ ಹೋಗುತ್ತಿರುವಂತಿದೆ.

ಮೋಡಗಳು ಮುಸುಕಿದ್ದರೂ ಧಗೆ ತುಂಬಿರುವಂತಹ ಬದುಕು. ಜನ ಹಂದಿಯಂತೆ ಕೆಸರಲ್ಲಿ ಹೊರಳಾಡುತ್ತಿದ್ದರೂ ಬದುಕನ್ನು ಅನುಭವಿಸುವುದಲ್ಲಿ ಮಗ್ನರಾಗಿದ್ದಾರೆ.

ಇದೇ ಬದುಕು.

ದೂರದಲ್ಲಿ ಶಹನಾಯಿಯ ಇಂಪಾದ ಧ್ವನಿ ಕೇಳಿಸುತ್ತಿದೆ. ಮನಸ್ಸು ಸ್ಥಿರವಾಗಿರುವುದು ಸಾಧ್ಯವಾಗುತ್ತಿಲ್ಲ.

ಹಾಳಾದ ಈ ಬದುಕು. ಕಾಗದದ ಮೇಲೆ ಲೇಖನಿ ಬಲವಾಗಿ ಊರಿತು, ಕುತ್ತಿಗೆ ಬಗ್ಗಿತು. ಮುಖದ ಮೇಲೆ ಒಂದು ರೀತಿಯ ಕ್ರೂರವಾದ ಅರೆನಗೆ ತೇಲುತ್ತಿದೆ. ಅರ್ಧ ಚೇತನಾವಸ್ಥೆಯಲ್ಲಿ ಹೂವಿನ ಪೊದೆಯಂತೆ ಯಾವುದೋ ನೆನಪು ಪುಟಿದೇಳುತ್ತಿದೆ, ಕೆಂಪು, ನೀಲಿ, ಬೂದಾ, ಹಳದಿ ನಾನಾ ಪ್ರಕಾರದವು. ಪರಿಚಿತವಾದ ಮನಸ್ಸು ಜೋರುಜೋರಾಗಿ ಚೀರಾಡುತ್ತದೆ - ಎಂಥ ದೂಬ್ಬು. ಇದು ದೌರ್ಬಲ್ಯ, ಇದು ಸುಳ್ಳು, ಬರೀ ಕೆಲಸಕ್ಕೆ ಬಾರದ್ದು. ಇದು ಸಾಧಾರಣ ಮನುಷ್ಯರಿಗೆ ಲಾಯಕ್ಕಾದ ಮನೋಭಾವನೆ.

ಅವರೇ ಸ್ವತಃ - ಈ ಆಫೀಸಿನ ಆವರಣದಲ್ಲಿ ಡಿಕ್ಟೇಟರ್.

ಡಿಕ್ಟೇಟರ್. ಒಂದೇ ಏಟಿಗೆ ಹಾರಿಸಬಲ್ಲರು - ಅನೇಕ ಮಂದಿಯ ಭಾಗ್ಯ, ಹೊಟ್ಟೆಪಾಡಿನ ಆಸರೆಯನ್ನು ಕಿತ್ತುಕೊಳ್ಳಬಲ್ಲರು. ಬಾಯಿನ ತುತ್ತನ್ನು ಕಿತ್ತುಕೊಂಡಿತು ಅಂದರೆ ಸಾಕು, ಅಭಿಮಾನದಿಂದ ಎತ್ತರಿಸಿದ ತಲೆ ತನಗೆ ತಾನೆ ಬಾಗುತ್ತದೆ. ಮನುಷ್ಯ ಗೊಳೋ ಅಂತ ಅಳತೊಡಗುತ್ತಾನೆ. ಸಾವಿರ ಸ್ನೇಹವಿರಲಿ,

ಮಧ್ಯದಲ್ಲಿ ಯಾರದಾದರೂ ಎಲೆಯಿಂದ ಏನಾದರೂ ಕಿತ್ತುಕೊಂಡು ಬೇರೆ ಕಡೆಗೆ ಎಸೆದುನೋಡಿ, ಹತ್ತು ಜನ ಅದಕ್ಕಾಗಿ ಹಾತೊರೆಯುತ್ತಾರೆ. ಅನೇಕ ರೀತಿಯಲ್ಲಿ ಎಳೆದಾಡುವ, ಕಚ್ಚಾಡುವ ಪ್ರಯತ್ನ ನಡೆಸುತ್ತಾರೆ. ಸ್ನೇಹಸಂಬಂಧಗಳು ನೆಂಟಸ್ತಿಕೆ ಎಲ್ಲ ಗಾಳಿಯಲ್ಲಿ ತೂರಿಹೋಗುತ್ತದೆ. ಸ್ವಲ್ಪ ಆಶ್ವಾಸನೆ ಕೊಟ್ಟು, ಉಬ್ಬಿಸಿ ಜಗಳ ತಂದುಹಾಕುವುದು ಬಹಳ ಸುಲಭ. ಅದಾದ ಮೇಲೆ ನೋಡಿ, ಮನುಷ್ಯ ರೂಪದ ಪಶುಗಳು ಹೊಡೆದಾಡುತ್ತಿರುತ್ತವೆ, ಕೈಕೈ ಮಿಲಾಯಿಸಿ, ಜುಟ್ಟುಹಿಡಿದು, ಪರಚಿ ಓಸುಕಿ ಬಗೆಬಗೆಯ ರೀತಿಯಲ್ಲಿ ಕಚ್ಚಾಡುತ್ತವೆ. ಗರ್ಜನೆಯಿಂದ ಆಕಾಶ ಒಡೆಯುತ್ತದೆ, - ಎಷ್ಟು ದುಷ್ಟರು, ನಿಜ ಹೇಳಬೇಕೆಂದರೆ ಬೀದಿ ನಾಯಿಗಳ ಕಚ್ಚಾಟದಂತೆ ಇರುತ್ತದೆ.

ಮುಖ ಮತ್ತು ಕೆನ್ನೆಯನ್ನು ಕುಣಿಸುತ್ತಾ ತುಂಟ ಹುಡುಗರು ಬಂದು ಸೇರುತ್ತಾರೆ. ಕಣ್ಣಿನಲ್ಲಿ ಎಲ್ಲವನ್ನೂ ಗೆಲ್ಲುವ ಹಿರಿಯಾಸೆ, ಕೆಲಸದಲ್ಲಿ ತುಂಬ ಖುಷಿಯ ಸಿಳ್ಳೆ, ನಡಿಗೆಯಲ್ಲಿ ಲಯಬದ್ಧತೆ, ಮಾಂಸಖಂಡಗಳು ಕುಣಿಯುತ್ತಿರುತ್ತದೆ. ನಾಲ್ಕಾರು ದಿನ ಗಾಣದ ಎತ್ತಿನಂತೆ ದುಡಿಯುತ್ತಾರೆ, ಮತ್ತೆ ನಾಲ್ಕಾರು ದಿನ ಹೊಟ್ಟೆಪಾಡಿನ ಅದೇ ಬವಣೆ ಮುಂದುವರಿಯುತ್ತದೆ. ಆದಾದಮೇಲೆ ಹೂವು ಮುದುಡುತ್ತದೆ. ಹರಯ ಮುದಿತನದೆದುರಿಗೆ ತಲೆಬಾಗುತ್ತದೆ. ಕೆನ್ನೆ ಮೂಳೆ ಹೊರಗೆ ಕಾಣಿಸುತ್ತದೆ, ಚರ್ಮ ಸುಕ್ಕುಗಟ್ಟಿ ಇಳಿಬೀಳುತ್ತದೆ. ಕಂದಿದ ಕಳೆಗುಂದಿದ ಕಣ್ಣುಗಳು - ಅವು ಯಾರ ನ್ನಾದರೂ ಎದುರಿಗೆ ನೋಡಲು ಹೆದರುತ್ತವೆ, ಹರಯದ ಹರಿದ ಬಾವುಟವನ್ನು ಮನಸ್ಸಿನೊಳಗಡೆಯೆ ಮುಚ್ಚಿಟ್ಟುಕೊಂಡಿರುತ್ತದೆ. ಅದಾದ ಮೇಲೆ ಮನುಷ್ಯ ಯಂತ್ರದಂತಾಗುತ್ತಾನೆ. ಸೂರ್ಯ ಹುಟ್ಟುವ ಮುಳುಗುವ ಸೊಬಗನ್ನು ನೋಡಲು ಕಣ್ಣುಗಳು ಚಡಪಡಿಸುವುದಿಲ್ಲ. ಆಟ ಆಡುವುದೇ ಆಗಲಿ ನೋಡುವುದೇ ಆಗಲಿ ಅವನಿಗೆ ಎಂದೂ ನೆನಪಿಗೆ ಬರುವುದಿಲ್ಲ. ಪುಸ್ತಕ ಓದಿ ರಸಾನುಭವ ಪಡೆಯುವ, ಸ್ನೇಹಿತರ ಜೊತೆ ಸೇರಿ ಅಲೆದಾಡುತ್ತಾ ಹರಟೆ ಹೊಡೆಯುವ ಮನಸ್ಸು ಸತ್ತೇ ಹೋಗಿರುತ್ತದೆ, ಕೇವಲ ಯಂತ್ರದಂತೆ, ಕೂತುಕೊ ಅಂದರೆ ಕೂತುಕೊಳ್ಳುತ್ತಾನೆ, ಏಳು ಅಂದರೆ ಏಳುತ್ತಾನೆ, ಸಲಾಮು ಹೊಡೆಯುತ್ತಾನೆ, ಪೊಳ್ಳು ಧ್ವನಿಯ ಕೋರಸ್ಸಿನಲ್ಲಿ ಹೊಗಳುವ ಭಟ್ಟಂಗಿಯ ಕೆಲಸ ಮಾಡುತ್ತಾನೆ. ಅದಕ್ಕಿರುವುದು ಈಗ ಒಂದೇ ಮನಸ್ಸು. ಅನುಕೂಲವಾದರೆ ಮುಂದುವರಿದು ಹೊಟ್ಟೆಪಾಡಿನ ಬವಣೆಯನ್ನು ಸ್ವಲ್ಪ ಕಡಮೆ ಮಾಡಿಕೊಳ್ಳುವುದು - "ಇನ್ನೊಂದು ಓಡಿ ಸಾರ್, ಇನ್ನೊಂದು ಓಡಿ, ದೇವರೇ, ಇನ್ನೊಂದು ಓಡಿ ಕೈ ತುಂಬ."

ಆ ಕಡೆ ಏನು ನಡೆಯುತ್ತಿದೆ ಎಂಬುದನ್ನು ಅಂದಾಜು ಮಾಡಬಹುದು. ಅವನ ಮಡದಿ, ಸೊಗಸಾಗಿ ಸಿಂಗರಿಸಿಕೊಂಡು ಬಣ್ಣದ ಉಡುಗೆಯುಟ್ಟು ದೇವತೆಯಂತೆ ಬಂದಿದ್ದವಳು - ವಿಷ ತುಂಬಿದ ಉಸಿರಿನಲ್ಲಿ ಗರ್ಜಿಸುತ್ತಿರುವ ಅಸ್ಥಿಪಂಜರ ವಾಗಿರುತ್ತಾಳೆ, ಬಿಗಿಮುಷ್ಟಿ ಬಿಗಿದಿರುತ್ತಾಳೆ, ಕ್ರೂರತೆಯ ಅವತಾರ ವೆತ್ತಿರುವಂತೆ ಮನುಷ್ಯನದೆಂದು ಹೇಳಬಹುದಾದ ಮಕ್ಕಳ ಹಿಂಡು, ಎಲ್ಲ ಒಟ್ಟುಗೂಡಿ ಅಶಾಂತಿ ಮತ್ತು ಹಿಂಸೆಯಿಂದ ಕೂಡಿದ್ದು ಮೃತ್ಯುದೇವತೆಗೆ ಆಹ್ವಾನ ನೀಡುವಂತಿದೆ, - "ಮೃತ್ಯುವಿಗೆ ತಲೆಬಾಗು, ಬದುಕಬೇಕೆಂಬುದಿಲ್ಲ, ಸಾವೇ ಲೇಸು, ಬಾ, ಎಲೈ ಸಾವೆ,

ಈ ಚಿಂತೆಗಳಿಗೆಲ್ಲ ಮಾಯೆಯ ಬಲೆಯನ್ನು ಹರಡಿ ಹೋಗು, ಬೇಗ ಬಾ. "ಮನೆಯಾಕೆ ಕಿರಿಚಾಡುತ್ತಾಳೆ" ಸಾಯಿರಿ, ಸಾಯಿರಿ, ಎಲ್ಲಾದರೂ ಹಾಳಾಗಿರಿ." ಮಕ್ಕಳ ಗುಂಪು ಬಗೆಬಗೆಯಾಗಿ ಕುಣಿಯುತ್ತದೆ. ಸುತ್ತಲೂ ಚಪ್ಪಾಳೆ ಹೊಡೆಯುತ್ತಾ ಕುಣಿಯುತ್ತವೆ.

ಹ್ಹ ಹ್ಹ ಹ್ಹ ಹ್ಹ - ಡಿಕ್ಟೇಟರ್, - ಹೋ ಹೋ ಹೋ ಹ್ಹ ಹ್ಹ - ಮತ್ತೆ ಮತ್ತೆ ಸಿಡಿಲೆರಗಿದಂತಾಗುತ್ತದೆ, - ಬದುಕು, ಎಂಥ ಸೇಡು ? ಸಾಯಿ ಸಾಯಿ ಸಾಯಿ ಸಾಯಿ.

ಮದುವೆ ಮೆರವಣಿಗೆ ದೂರ ಸಾಗಿದೆ. ದೂರದಿಂದಲೇ ಶಹನಾಯಿಯ ಧ್ವನಿ ಎಲ್ಲೋ ಸ್ವಲ್ಪ ಕೇಳಿಯೂ ಕೇಳಿಸದಂತೆ ಕೇಳಿಬರುತ್ತಿದೆ. ಒಮ್ಮೊಮ್ಮೆ ಕೇಳಿಸುವುದೇ ಇಲ್ಲ.

ಆ ಕಡೆಯಿಂದ ಅಲೆಯಂತೆ ಒಮ್ಮೊಮ್ಮೆ ಹರಿದುಬರುತ್ತದೆ.

ಆಡಂಬರದಿಂದ ಕೂಡಿದ ಉದ್ದವಾದ ಮೆರವಣಿಗೆಯಲ್ಲ ಅದು. ವಿದೇಶಿ ಬ್ಯಾಂಡ್ ಬಾರಿಸುತ್ತಾ ಸಾಗುತ್ತಿರುವ ಮಂದಿಯೂ ಅಲ್ಲ. ಕಿವಿ ಕಿವುಡಾಗಿಸುತ್ತಾ ನೆಲವನ್ನು ಬೂಟಿನಿಂದ ಟಕ್ ಟಕ್ ಅಂತ ಅಲುಗಾಡಿಸುತ್ತಾ ಗಾಳಿಯ ಮೇಲೆ ವ್ಯಾಪಕವಾದ ಆಕ್ರಮಣ ನಡೆಸುವುದಿಲ್ಲ, ಅದನ್ನೆಲ್ಲ ನಿಗಿನಿಗಿ ಅಂತ ಹೊಳೆಯುವಂತೆ ಮಾಡಿ ಜನಗಳನ್ನು ಮೆಚ್ಚಿಸುವ ಆಸೆಯೂ ಇಲ್ಲ.

ದೂರದಲ್ಲಿ ಸುಮ್ಮನೆ ಶಹನಾಯಿ ಕೇಳಿಸುತ್ತಿದೆ. ಅಜ್ಜ ಮುತ್ತಜ್ಜಂದಿರ ಕಾಲದಿಂದಲೂ ಹಳ್ಳಿಗಾಡುಗಳಲ್ಲಿ ಬೆಳೆದುಬಂದ ಹಳೆಯ ಪದ್ಧತಿ. ಕೈಗೆಟುಕುವಷ್ಟು ಹತ್ತಿರ ಬರುತ್ತದೆ, ಮತ್ತೆ ದೂರ ಸರಿದುಹೋಗುತ್ತದೆ. ನಿಂತು ನಿಂತು ಮತ್ತೆ ಮತ್ತೆ ಕೇಳಿಬರುತ್ತದೆ.

ತೋಳುಗಳ ತೆಕ್ಕೆಗೆ ಸಿಲುಕುವುದಿಲ್ಲ. ನಿಲ್ಲುವುದಕ್ಕೆ ಸ್ವಲ್ಪವೂ ಪ್ರಯತ್ನ ಪಡುವುದಿಲ್ಲ. ಸುಮ್ಮನೆ ಮುಟ್ಟಿ ಓಡಿಹೋಗುವ ಹಾಗಿದೆ, ಸುಮ್ಮನೆ ಮುಟ್ಟಿ ಅಷ್ಟೆ. ತೋಟದಲ್ಲಿ ಅರಚುತ್ತಾ ಗಿಡಗಳ ಮರೆಯಲ್ಲಿ ಅಡಗಿಕೊಳ್ಳುವ ಸಡಗರ, ನೋಡಿ ದೂರ ಸರಿಯುತ್ತಾ ಸಾಗುತ್ತಿರುವಂತಿದೆ.

ಆದಾದರೂ ಸಿಕ್ಕುಸಿಕ್ಕಾಗಿರುವ..... ಕೈಗೆ ನಿಲುಕದಿರುವ....

ಆದರೂ ಮನಸ್ಸು ಓಡುತ್ತಾ ಓಡುತ್ತಾ ಹಿಂದೆ ಬೀಳುತ್ತಿದೆ. ದೂರದಿಂದ ಅದರ ಒಡೆದ ಅಲೆಗಳನ್ನು ಗ್ರಹಿಸಲು ಮನಸ್ಸು ಕಿವಿನಿಮಿರಿಸಿ ನಿಂತಿದೆ.

ಎಲ್ಲಿ, ಅದು ಯಾವ ಕಾಲದ ಮಾತು - ಇನ್ನೂ ನೆನ್ನೆಯ ಮಾತಿನಂತೆ ಇದೆ. ದೂರವಾಗುತ್ತಿರುವ ಶಹನಾಯಿಯ ಸದ್ದಿನ ಜೊತೆಯಲ್ಲೇ ಆ ತುಂಬಿದ ಮಾವಿನ ತೋಪು ಕಣ್ಣ ಮುಂದೆ ಮೂಡುತ್ತದೆ. ಮಾವಿನ ಮರದಲ್ಲಿ ಹೀಚು ಬಿಟ್ಟಿದೆ. ದೂರದಿಂದಲೇ ದೃಷ್ಟಿಹಾಯಿಸಿದರೆ ಕಂಡುಬರುತ್ತದೆ, ಬಿಸಿಲಿನಲ್ಲಿ ಅದರದೇ ಡೊಂಕುಡೊಂಕಾದ ಪಡಿನೆಳಲು, ಕಣ್ಣಿದ್ದಕ್ಕೂ ಕಾಣುತ್ತಿರುವ ಹೊಲಗಳ ಮಣ್ಣು, ಹೊಲದಲ್ಲಿ ತೆನೆ ಕತ್ತರಿಸಿದ ಬೇರುಗಳು, ಕಾಯನ್ನು ಹಣ್ಣು ಮಾಡಲು ಹಾಕಿರುವೆಡೆಯಲ್ಲಿ ಮಧ್ಯೆ ಮಧ್ಯೆ ಎದ್ದುಕಾಣುವ ಸಣ್ಣಸಣ್ಣ ಹಳದಿ ಹೂವುಗಳು, ವಠಾರದಲ್ಲೆಲ್ಲ ಹೊಸ ಹೊಸ ಭಾವನೆ ಹೊಮ್ಮಿರುವ ಮನೆಗಳು. ಎಲ್ಲೆಲ್ಲೂ ಹಳದಿ, ಅದೇ ಒಂದು ಸೊಬಗು.

ನಗರದ ಪುಸ್ತಕದ ಪ್ರಪಂಚವನ್ನು ಸ್ವಲ್ಪ ಬದಿಗಿಟ್ಟು ಇಲ್ಲಿ ನೋಡಿದರೆ ಅದೆಂಥ ಶಾಂತಿಯಿದೆ. ಮರ ಗಿಡಗಳ ಸಾಲು, ಚಪ್ಪರ ಹಾಕಿರುವ ಮನೆ, ಕಾಲಪುರುಷನ ಕೊನೆಯಿಲ್ಲದ ಚಪ್ಪರದ ಆಸರೆಯಲ್ಲಿ ಕೇಳಿಬರುತ್ತಿರುವ ಹಾಡು ನೀರವವಾಗಿದ್ದರೂ ಖಚಿತವಾಗಿದೆ.

ಇಲ್ಲಿ ಬದುಕು ಅನಿಶ್ಚಿತತೆಯಿಂದ ಕೂಡಿಲ್ಲ, ಸರಳವಾಗಿದೆ, ಸ್ವಚ್ಛವಾಗಿದೆ.

"ಸಾಹೂ, ಮನೆಯಲ್ಲಿದ್ದೀಯಾ ?"

"ಮಿಸ್ಟರ್ 'ಶ' ಅಲ್ಲ, ಸಾಹೂ"

"ಕೂತುಕೊ, ಎಲೆಯಡಿಕೆ ಹಾಕಿಕೊ, ಲೋ, - ಎಲೆಯಡಿಕೆ ತಟ್ಟೆ ಕೊಡಿಲ್ಲಿ !"

ಕುಳಿತುಕೊಂಡು ಆರಾಮವಾಗಿ ಹರಟೆ ಹೊಡೆಯುವುದು, ನೆಮ್ಮದಿಯಿಂದ ಕುಳಿತು ವೀಳೆಯದೆಲೆಗೆ ಸುಣ್ಣಹಚ್ಚಿ, ಮೆಲ್ಲಗೆ ಅಡಕತ್ತರಿಯಿಂದ ಅಡಕೆ ಚೂರು ಮಾಡುವುದು, ಎಲೆ ಮಡಚಿ ಬಾಯಿಗೆ ತುರುಕಿಕೊಳ್ಳುವುದು, ಒಂದು ಮುಗಿದ ಮೇಲೆ ಇನ್ನೊಂದು ಹಾಕಿಕೊಳ್ಳುವುದು.

ಆತ್ಮೀಯವಾದ ದೃಷ್ಟಿಯಿಂದ ನೋಡುತ್ತಿರುವುದು ಹಳ್ಳಿಗರ ಸ್ವಭಾವ. ನಮ್ಮ ನಾಡಿನ ಪ್ರಾಚೀನ ಬದುಕಿನ ನಾಡಿ ಮಿಡಿಯುತ್ತಿರುವುದು ಹಳ್ಳಿಯವರು ತಮ್ಮ ಕೆಲಸಕಾರ್ಯಗಳಲ್ಲಿ ತೋರಿಸುವ ಈ ಸ್ನೇಹ ತುಂಬಿದ ನಡವಳಿಕೆಯಲ್ಲೇ. ಅದೇ ರೀತಿಯ ಸ್ನೇಹ ವಿಶ್ವಾಸಗಳು ಎಡೆಬಿಡದೆ ಶತಮಾನಗಳಿಂದ ಹರಿದುಬರುತ್ತಿದೆ. ಅಲ್ಲಿ ಯಾವುದೇ ಅವಸರವಿಲ್ಲ. ಧೂಳೆಬ್ಬಿಸಿ ಭೂತದಂತೆ ಹಾರುತ್ತಾ ಹೋಗುವ ಕಾರುಗಳ ಭರಾಟೆಯಿಲ್ಲ. ರೈಲು ಬರುವ ವೇಳೆಗೆ ಸರಿಯಾಗಿ ಗಡಿಬಿಡಿ ಮಾಡಿಕೊಂಡು ಏದುಸಿರುಬಿಡುತ್ತಾ ಓಡಿಹೋಗುವುದು, ಎಡವಿಬೀಳುವುದು, ಮತ್ತೆ ಏಳುವುದು ಯಾರ ತಂಟೆಯೂ ಇಲ್ಲ.

ಸುಮ್ಮನೆ ನೋಡುವುದು, ಅರ್ಥ ಮಾಡಿಕೊಳ್ಳುವುದು, ಹೃದಯದಲ್ಲೇ ಅನುಭವಿಸುವುದು, ಅದೇ ಹೃದಯದ ಮಿಡಿತ - ಪುಸ್ತಕದಲ್ಲಿ ಅದನ್ನು ಬರೆದಿರುವುದಿಲ್ಲ. ಜನರ ರಕ್ತದಲ್ಲೇ ಬರೆದಿರುತ್ತದೆ.

ಸುಮ್ಮನೆ ಕೇಳುವುದು, ಭಾವನೆಗಳ ಲಹರಿಯಲ್ಲಿ ಮುಳುಗಿರುವುದು, ಕನಸಿನ ಕಣ್ಣುಗಳಿಂದ ದೂರದೂರ ನೋಡುತ್ತಿರುವುದು. ಬೆಳಗ್ಗೆ ನೇಸರು ಮೂಡುವುದರಿಂದ ಶುರುವಾಗುತ್ತದೆ. ಅದು ನಿಧಾನವಾಗಿ, ಲಯಬದ್ಧವಾಗಿ ಪಸರಿಸಿಕೊಳ್ಳುತ್ತದೆ. ಕಾಳಿನಿಂದ ಗಂಜಿ ಬಸಿಯುವುದು, ಸಂಡಿಗೆ ಮಾಡುವುದು, ಹೂಗೆಸೊಪ್ಪು ಕಟ್ಟುವುದು, ರಂಗೋಲಿ ಹಾಕುವುದು, ಕೆರೆ ಏರಿಯ ಮೇಲೆ ಹಳ್ಳಿಯ ಹೆಂಗಳೆಯರ ಹರಟೆ ಮಾತುಗಳು, ದಿನನಿತ್ಯದ ಕೆಲಸ ಕಾರ್ಯಗಳು, ಹಾಗೆಯೆ ಎಲ್ಲ ಮನೆಗಳಲ್ಲೂ ಒಲೆಯಲ್ಲಿ ಪುರುಳೆಯ ಉರಿ, ತರಗೆಲೆಗಳನ್ನೇ ಹಚ್ಚುವುದೂ ಉಂಟು, ಅದೂ ಧಗ್‌ಧಗ್ ಅಂತ ಉರಿಯುತ್ತದೆ, ಫುಸ್ ಫುಸ್ ಅಂತಲ್ಲ. ಗುಡಿಸಿಲಿನ ಮೂಲೆಯಲ್ಲಿ ಹುಳಿ ಅಂಬಲಿಯನ್ನಿಟ್ಟಿದೆ. ಆ ಸರಳವಾದ ಬದುಕಿನ ಮೆಲುನಡೆಯ ನೀಳ್ಗತೆಯನ್ನು ಅದೂ ಸಾರಿ ಹೇಳುತ್ತದೆ. ಮನೆಮನೆಗಳಲ್ಲಿ ಹತ್ತು ವರ್ಷ ಹದಿನೈದು ವರ್ಷಗಳಷ್ಟು ಹಳೆಯ ಹುಳಿಯಂಬಲಿಯನ್ನು ಜೋಪಾನವಾಗಿ ತೆಗೆದಿಟ್ಟಿರುವುದುಂಟು. ಕಾಲಕಾಲಾಂತರದಿಂದ ಕಟ್ಟಿದ ಧೂಳು, ತಾತಾ

ಮುತ್ತಾತಂದಿರ ಕಾಲದ ಉಪ್ಪಿನ ಕಾಯಿ ಜಾಡಿ, - ಅಂತಹ ಹಳೆಯದಲ್ಲವನ್ನೂ ಜೋಪಾನವಾಗಿ ಕಾಪಾಡಿಕೊಂಡು ಬಂದಿರುತ್ತಾರೆ.

"ಲೋ ಸಾಹೂ, ಆಡ್ತಾಡೋದಕ್ಕೆ ಬರೋದಿಲ್ಲವೇನೋ ?"

ಧಗಧಗ ಸುಡುಬಿಸಿಲಿನಲ್ಲಿ ಪಸುವಿನ ಮುಂದ ತುಂಬಿರುವ ಕೊಟ್ಟಿಗೆಯಲ್ಲಿ ಗೂಳಿ ಕುಣಿಯುತ್ತಿರುತ್ತದೆ. ನೋಡುತ್ತಿದ್ದರೆ ಹೊತ್ತು ಕಳೆಯುವುದೇ ಗೊತ್ತಾಗುವುದಿಲ್ಲ. ಮರದಿಂದ ಕಾಗ ಹುಲ್ಲುಕಡ್ಡಿ ಹಿಡಿದು ಹಾರಿಹೋಗುತ್ತದೆ, ಅಲ್ಲೂ ನೋಡುವ - ತಿಳಿದುಕೊಳ್ಳುವ ಉತ್ಸಾಹವಿದೆ, ಚಿಟ್ಟೆ ಹಾರುತ್ತಿದೆ, ಮಕ್ಕಳು ಅದನ್ನು ಹಿಡಿಯಲು ಹಿಂದೆ ಬಿದ್ದಿದ್ದಾರೆ.

ಜನ ಹಿಂದಿರುಗುತ್ತಿದ್ದಾರೆ. ಯಾರೋ ನೆಂಟರು ಮನೆಗೆ ಬರುತ್ತಿದ್ದಾರೆ, ಅವರ ಸಾಮಾನು ಸರಂಜಾಮು, ಇರೋದರಲ್ಲಿ ಒಳ್ಳೆಯ ಬಟ್ಟೆ ಹಾಕಿಕೊಂಡು ಬಂದಿರುವ ಅವರ ಹೆಂಗಸರು ಮಕ್ಕಳು.

ಎಲ್ಲರೂ ಒಂದೇ ಸಮಾನರು, ಜಗಳ ಕದನಗಳಿಲ್ಲ, ಊಟ ಸಹ ಸಾಧಾರಣ, ಯಾವುದೇ ಅತಿಯಾಸೆ ಆಮಿಷಗಳಿಲ್ಲ.

ಇದು ಅದೇ ಕಳೆದ ದಿನಗಳ ನೆನಪು, ಅಲ್ಲೇ 'ಶ' ಅವರ ಮೂಲ ಇರುವುದು. ಅಲ್ಲೇ ಈ ಹಿಂದುಳಿದ ದಿನಗಳ ಮನುಷ್ಯತ್ವ ಮೆಲ್ಲಮೆಲ್ಲನೆ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ.

ಮಿಸ್ಟರ್ 'ಶ' ಬೆಚ್ಚಿದರು. ಬಡಬಡಿಸುತ್ತಲೇ ಕೂಗಿಕೊಂಡರು, "ಡ್ಯಾಮ್, ಸೆಂಟಿಮೆಂಟಲ್, ರಬಿಷ್, ಈಡಿಯಟ್" ಕ್ರೂರವಾಗಿ ನೋಟ ಬೀರಿ ಅವಡುಗಚ್ಚಿದರು, ಕಣ್ಣುಗಳು ಯಾರೋ ಶತ್ರುವನ್ನು ನೋಡುವಂತೆ ನೋಟ ಬೀರಿದವು. ಹೌದು ಶತ್ರು, ಪ್ರಪಂಚವೇ ಒಂದು ನಂಬಿಕೆಗೆ ಯೋಗ್ಯವಲ್ಲದ ಶತ್ರು. ಮೈಯಲ್ಲೆಲ್ಲ ಯಾವುದೋ ವಿಷ ವ್ಯಾಪಿಸಿದಂತಿದೆ. ಅವರು ಕೆಲಸ ಮಾಡುತ್ತಲೆ ಮೈ ತೇದು, ಸವೆಸಿ ಸಾಯಲು ಬಯಸುತ್ತಾರೆ, ಹಳ್ಳಿಯ ಶಾಂತಿ ಅವರಿಗೆ ಬೇಡ.

ಓದು ಮುಗಿಯಿತು. ಬಹಳ ದೊಡ್ಡ ವಿದ್ವಾಂಸರೆನಿಸಿಕೊಂಡರು. ಆಮೇಲೆ ಮದುವೆ, ಅನಂತರ ಉದ್ಯೋಗ, ಬಳುಕುವ ನಡುವುಳ್ಳ ಚೆಂದವಾದ ಮಡದಿ - ಆದರೆ ಸುಲೇಖ ಎಲ್ಲ ಸರಿ, ಆದರೆ ಅವಳಿಗೆ ವಿದ್ಯೆಯ ಬೆಲೆಯೆ ಗೊತ್ತಿಲ್ಲ. ಮೆದುವಾಗಿ ಮೈದಡವುದನ್ನೇ ಬಯಸುತ್ತಾಳೆ. ಪೌರುಷದ ಹೆಚ್ಚುಗಾರಿಕೆ ಅವಳಿಗ ಬೇಡ. ಸಂಸಾರದ ಕಷ್ಟಸುಖಗಳಿಗೆ ತನ್ನನ್ನೇ ಒಪ್ಪಿಸಿಕೊಳ್ಳುವುದು ಅವಳಿಗೆ ತುಂಬ ಇಷ್ಟ. ಸಂಗೀತ ಅಂದರೆ ಅತೀವ ಆಸಕ್ತಿ, ಕವಿತೆ ಓದುತ್ತಾಳೆ, ತನ್ನ ಸುಸಂಸ್ಕೃತವಾದ ಮನಸ್ಸಿನಾಳದಿಂದ ಹೊಮ್ಮುವ ಅಲೆಗಳನ್ನು ದೂರ ಹರಿಯಬಿಡುತ್ತಾಳೆ. ಕಾಡಿನ ಹಕ್ಕಿ, ಸುಂದರವಾದುದೇನೋ ನಿಜ, - ಆದರೆ ಮನಸ್ಸಿಗೆ ಹೊಡೆತ ತಿಂದು ಸಾಕಿದ ಹಕ್ಕಿಯೆನಿಸಿಕೊಳ್ಳುವುದು ಅವಳಿಗೆ ಇಷ್ಟವಿಲ್ಲ. ಪುಷ್ಟವಾದ ತೋಳನ್ನು ಬಲವಾಗಿ ಹಿಡಿದೊಡನೆ ಅವಳ ವ್ಯಕ್ತಿತ್ವ ತಿರಸ್ಕಾರದಿಂದ ಸಿಟ್ಟಿಗೇಳುತ್ತದೆ. ಹಾಗೆಯೇ ಬಿಟ್ಟಿದ್ದರೆ ಅವಳು ಮನಸ್ಸು ಬಿಚ್ಚಿ ನಗುತ್ತಿರುತ್ತಾಳೆ.

ಇದಾದಮೇಲೆ ಹೋರಾಟದ ಬದುಕು, ಹೊಟ್ಟೆಕಿಚ್ಚು, ಅನುಮಾನ, ಹತಾಶ ಮನಸ್ಸಿನ ಪ್ರಯತ್ನಗಳು.

ಅಪನಂಬಿಕೆಯ ಗೋಡೆ ಮೇಲೇಳುತ್ತಾ ಹೋಗುತ್ತದೆ. ಸುಲೇಖಳ ನಗೆ ಬಾಡತೊಡಗುತ್ತದೆ. ಬರಬರುತ್ತಾ ಅವಳು ತನ್ನಲ್ಲೇ ಒದ್ದಾಡುತ್ತಾ ಬೇಯತೊಡಗಿದ್ದಾಳೆ. ಮಾಂಸಖಂಡಗಳನ್ನೇ ಹೀರುವಂಥ ಬರ್ಬರ ಪಾಶವಿಕತೆ ಮಿಸ್ಟರ್ 'ಶ'ಗೆ ರಕ್ಷಾ ಕವಚದಂತಿದೆ.

ಅಂದಿನಿಂದ ಆ ಮಾರ್ಗವನ್ನೇ ಬಳಕೆ ಮಾಡಲಾರಂಭಿಸಿದ್ದಾರೆ.

ಸುಲೇಖ ಏಟು ತಿನ್ನುತ್ತಾಳೆ.

ಸುಲೇಖಳಿಗೆ ಹಿಂಸೆ ಕೊಟ್ಟರೆ ಮನಸ್ಸು ಒಂದು ರೀತಿಯಲ್ಲಿ ಉತ್ತೇಜನ ಗೊಳ್ಳುತ್ತದೆ.

ಒಂದು ವಿಧದ ನಿರಾಳವಾದ ಆನಂದ ಮನಸ್ಸಿನಲ್ಲಿ ಪುಟಿದೇಳುತ್ತದೆ.

ದನಗಳ ಜಾತಿಗೆ ಸೇರಿದ ಗಂಡ ತೃಪ್ತಿಗಾಗಿ ಸುಲೇಖಳನ್ನು ಚೆನ್ನಾಗಿ ಹೊಡೆದುಬಡಿದು ಮಾಡುತ್ತಾನೆ.

ಯಾರಾದರೂ ಅಕ್ಕಪಕ್ಕದವರು, ಹಿತೈಷಿಗಳು ಕೇಳಿದಾಗ ಸುಲೇಖ ಹೊಸ ಹೊಸ ನೆಪಗಳನ್ನು ಹೇಳಲು ತಡಕಾಡುತ್ತಾಳೆ, ಸೋದರತ್ತೆ ಸತ್ತು ಹೋದಳು - ಚಿಕ್ಕಮ್ಮ ಸತ್ತು ಹೋದಳು.

ಸೋದರತ್ತೆ, ಚಿಕ್ಕಮ್ಮಗಳ ಲೆಕ್ಕವಲ್ಲ ಮುಗಿದುಹೋದರೂ, ಸುಲೇಖಳ ಗೋಳು ತಪ್ಪುವಂತಿಲ್ಲ. ಆದರೆ ದನದ ಜಾತಿಯ ಗಂಡನಿಗೆ ಗೆಲುವಂತೂ ಇಲ್ಲ. ಸಿಗುವುದು ಕಹಿ ಅನುಭವ ಮಾತ್ರ. ಕೆಲಸದಲ್ಲಿ ಸಿಗುವ ಬತ್ತಿ ಆ ಕಹಿಯನ್ನು ಹೆಚ್ಚಿಸಲು ಉರುವಲಿನ ಕೆಲಸ ಮಾಡುತ್ತದೆ. ಅನೇಕ ಬಾರಿ ಯೋಚಿಸುತ್ತಾಳೆ - ಅಯ್ಯೋ, ಹೀಗಿರದಿದ್ದರೆ! ಬೇರೆ ರೀತಿಯ ಇದ್ದಿದ್ದರೆ ಚೆನ್ನಾಗಿರುತ್ತಿತ್ತು! ಅಯ್ಯೋ ದೇವರೆ, ಇದೇನು ಹಣೆ ಬರಹವಪ್ಪ!

ಇವತ್ತು ಬದುಕಿನಲ್ಲಿ ಜೀವಾಳವಿಲ್ಲ. ಆದರೆ ಆರದಗಾಯಗಳು, ಮರೆಯಲಾಗದ ಕಹಿ ನೆನಪುಗಳು ಲೆಕ್ಕವಿಲ್ಲದಷ್ಟಿವೆ. ಸುಲೇಖ ಮಕ್ಕಳ ತಾಯಿ, ಮಕ್ಕಳ ಮುಖ ನೋಡಿಕೊಂಡು ಎಲುಬು-ಮಾಂಸಗಳ ಬೊಂಬೆಯಂತಿರುವ ಸುಲೇಖ ಬದುಕನ್ನು ತಳ್ಳುತ್ತಾ ಹೆಜ್ಜೆ ಹಾಕುತ್ತಿದ್ದಾಳೆ. ಅವಳ ಬದುಕಿನಲ್ಲಿ ಈಗ ಯಾವ ಸ್ವಾರಸ್ಯವೂ ಇಲ್ಲ. ಮಿಸ್ಟರ್ 'ಶ' ಫೈಲುಗಳ ರಾಶಿಯಲ್ಲಿ ಆಸರೆ ಹುಡುಕಿದ್ದಾರೆ. ಕೆಲಸಗಳ ಹೊರೆ ತಲೆಮೇಲೆ ಹೊತ್ತುಕುಳಿತಿರುತ್ತಾರೆ. ಕೈಕೆಳಗಿರುವ ಎಲ್ಲ ನೌಕರರೂ ಸುಲೇಖಳ ಪ್ರತೀಕದಂತೆಯ ಇದ್ದಾರೆ. ಇವತ್ತು ಬಡಬಗ್ಗರ ಕೈಲಾಗದವರ ಮೇಲೆ ದಬ್ಬಾಳಿಕೆ ನಡಸಿ ಇಳಿಮುಖವಾಗುತ್ತಿರುವ ತಮ್ಮ ಹರೆಯದ ಬಿಸಿಯನ್ನು ಒಂದಲ್ಲ ಒಂದು ರೀತಿಯಲ್ಲಿ ಇಳಿಸಿಕೊಳ್ಳುತ್ತಾರೆ. ಡಿಕ್ಟೇಟರ್ ಆಗಿ ಆತ್ಮವಿಶ್ವಾಸಕ್ಕಾಗಿ ಅರಸುತ್ತಾರೆ. ಪ್ರಪಂಚದ ಕಡೆ ಹುಬ್ಬೇರಿಸಿ ನೋಡಿ ಅದನ್ನು ತೋರುಬೆರಳಿನಿಂದ ಉಜ್ಜುತ್ತಲೆ ಬದುಕಿನ ಮೇಲೆ ಸೇಡು ತೀರಿಸಿಕೊಳ್ಳುತ್ತಾರೆ.

ಏಟು ತಿಂದ ಮನುಷ್ಯ ಸಂದೇಹಕ್ಕೊಳಗಾದ ಮನುಷ್ಯ, ಅಶಾಂತಿಗೆ ಸಿಲುಕಿದ ಮನುಷ್ಯ.

ಆರ್ತನಾದ ತುಂಬಿದ ಒಂದು ಹಾಹಾಕಾರವೇ ಅವತಾರವೆತ್ತಿಬಂದಂತಿದೆ.

ಹೊರಗಡೆ ಅವರ ಸ್ವರೂಪ ತುಂಬ ಭಯಂಕರ, ಕಂಪನಿಯ ಅಧಿಕಾರಿಗಳ ಬಗ್ಗೆ

ಅವರು ತುಂಬ ಕಾರ್ಯಕುಶಲರು, ಸಗ್ಗದವರು, ಸ್ಟೀಮ್ ರೋಲರ್, - ಏನನ್ನು ಬೇಕಾದರೂ ಮಾಡಬಲ್ಲರು.

ಮನಸ್ಸಿನಾಳಕ್ಕೆ ಕಲ್ಲು ಬೀರಿದಂತಾದಾಗ ಮಿಸ್ಟರ್ 'ಶ' ಇದ್ದಕ್ಕಿದ್ದಂತೆ ವಿಚಲಿತರಾಗುತ್ತಾರೆ. ತುಂಬ ಹೊಣೆಗಾರಿಕೆಯ ಸಮಸ್ಯೆಯೊಂದು ನೆನಪಾಗುತ್ತದೆ. ಈಗ ಸಿಗರೇಟು ಸೇದಬೇಕು, ಮಿಸ್ಟರ್ 'ಶ' ಅವರಿಗೆ ಬೀಡಿ ಸೇದುವುದು ಅಭ್ಯಾಸ. ಗಂಟೆಗೆ ಒಂದು ಕಟ್ಟು ಖಾಲಿ, ಕೆಳಗಿಟ್ಟಿರುವ ಬೂದಿ ಬಟ್ಟಲಿನಲ್ಲಿ ಬೀಡಿ ತುಂಡುಗಳು ರಾಶಿಯಾಗಿ ಬಿದ್ದಿರುತ್ತವೆ. ಬೀಡಿ ಎಳೆಯಲಾರಂಭಿಸಿದರು. ಪರದೆಯ ಸಂದಿಯಿಂದ ಅವರನ್ನು ನೋಡಿದ ಕೆಲವು ಮಂದಿ ಚಟ್ಟೆಗಾರ ಅಭ್ಯಾಗತರು ಹಿಂದಕ್ಕೆ ಬಂದರು. ಸಾಹೇಬರು ಬೀಡಿ ಸೇದುತ್ತಿರಬೇಕಾದರೆ ಮಧ್ಯೆ ತಲೆಹಾಕುವುದು ಧರ್ಮವಿರುದ್ಧ. ಏಕೆಂದರೆ ಬೀಡಿಯ ಹೊಗೆಯಿಂದ ಬ್ರಹ್ಮರಂಧ್ರ ಶುದ್ಧಿಯಾಗುತ್ತಿರುವಂತೆಯೆ ಸಾಹೇಬರು ಬುದ್ಧಿಯೋಡಿಸುತ್ತಾ ಕೆಲಸದಲ್ಲಿ ತೊಡಗಿರುತ್ತಾರೆ. ದೊಡ್ಡ ದೊಡ್ಡ ಸಮಸ್ಯೆಗಳಿಗೆ ಪರಿಹಾರ ಆಗಲೇ ಸಿಕ್ಕುವುದು ಅಂತ ಎಲ್ಲರಿಗೂ ಗೊತ್ತು.

ಹೊರಗಡೆ ಜವಾನನ ಕೈಗೆ ಬಲಿದತ್ತ ತನ್ನ ಹೆಸರಿನ ಚೀಟಿ ಬರೆದುಕೊಟ್ಟ.

"ಸ್ವಲ್ಪ ತಡೀರಿ, ಗೊತ್ತಾಗಲ್ವ, ಸಾಹೇಬರು ಬೀಡಿ ಸೇದುತ್ತಿದ್ದಾರೆ, ಈಗ ಯೋಚನೆಯಲ್ಲಿದ್ದಾರೆ, ಯಾರನ್ನೂ ಒಳಗೆ ಬಿಡೋಹಾಗಿಲ್ಲ-"

ಜವಾನ ಸ್ಟೂಲಿನ ಮೇಲೆ ಕುಳಿತು ಬೀಡಿ ಕಚ್ಚಿದ್ದಾನೆ, ತನ್ನ ಅಧಿಕಾರ ತೋರಿಸುವುದಕ್ಕಾಗಿ ಪೇಟವನ್ನು ಪಕ್ಕದಲ್ಲೆ ಇಟ್ಟುಕೊಂಡಿದ್ದಾನೆ. ಹಾಗೆಯೆ ಒಮ್ಮೊಮ್ಮೆ ಅವಹೇಳನ ಮಾಡುವ ಮತ್ತು ಅಸಡ್ಡೆಯ ದೃಷ್ಟಿಯಿಂದ ಅವನು ಅಡ್ಡಾಡುತ್ತಿರುವ ಬಲಿದತ್ತನನ್ನು ನೋಡುತ್ತಾನೆ. ಈ ನಡುವೆ ಆಗಾಗ ಕೊಠಡಿಯ ಒಳಗಿನಿಂದ ಯಾವುದೋ ಪ್ರಾಣಿ ಗಂಭೀರವಾಗಿ ಗರ್ಜಿಸಿದಂತೆ ಸದ್ದು ಕೇಳಿಸುತ್ತದೆ. ಆ ರೀತಿಯ ಗರ್ಜನೆ ಮೆಲ್ಲಮೆಲ್ಲಗಿದ್ದರೂ ಬಹಳ ಭಯ ಹುಟ್ಟಿಸುವಂತಿದೆ. ಜವಾನ ಬೆಚ್ಚಿಬಿದ್ದು ಗಡಿಬಿಡಿಯಲ್ಲಿ ಪೇಟವನ್ನು ಅರ್ಧತಲೆಗೆ ಸಿಕ್ಕಿಸಿಕೊಂಡು, ಪೇಟದ ಜಾಗದಲ್ಲಿ ಬೆಂಚಿನ ಮೇಲೆ ತುಂಡು ಬೀಡಿ ಇಟ್ಟು ಪರದೆಯ ಹತ್ತಿರ ಹೋಗುತ್ತಾನೆ, ಮತ್ತೆ ತನ್ನ ಜಾಗಕ್ಕೆ ಮರಳಿ ಬರುತ್ತಾನೆ. ಬಲಿದತ್ತ ಜವಾನನ ಕಡೆ ಹೊಟ್ಟೆಕಿಚ್ಚಿನಿಂದ ನೋಡಿ ಮತ್ತೆ ಅಡ್ಡಾಡತೊಡಗಿದ, ಇರಲೂ ಆಗುತ್ತಿಲ್ಲ, ಹಾಗೆಯೆ ಹೋಗಲೂ ಆಗುತ್ತಿಲ್ಲ.

ಅರ್ಧ ಗಂಟೆ, ಒಂದು ಗಂಟೆ ಪೂರ್ತಿ, ಒಂದೂವರೆ ಗಂಟೆಯೂ ಆಗಿ ಹೋಯಿತು. ಹೊಸ ಆಫೀಸರ್ ಲಾಳಿ ಹೊಡೆಯುತ್ತಿದ್ದಾರೆ. ಮತ್ತೆ ಮತ್ತೆ ಷರ್ಟಿನ ತೋಳನ್ನು ಮೇಲೆ ಸರಿಸಿ ಗಡಿಯಾರದ ಕಡೆ ನೋಡುತ್ತಾನೆ. ಪ್ರತಿಬಾರಿ ನೋಡಿದಾಗಲೂ ಏನನ್ನೋ ಕಂಡುಹಿಡಿದಂತೆ ಅವನಿಗೆ ಅನಿಸುತ್ತದೆ. ಬಹಳವಾಗಿ ಬೇಸರಗೊಂಡು ಸಮಯ ಅದೆಷ್ಟು ಅಡೆತಡೆಯಿಲ್ಲದೆ ಮುಂದೋಡುತ್ತದೆ ಅಂತ ಕಂಡುಕೊಂಡಿದ್ದಾನೆ. ನೋಡಿದ ಕಾಲಃಗಚ್ಛತಿ ಗಚ್ಛತ್ಯಾಯುಃ ಕಳೆದುಹೋದ ಕ್ಷಣಗಳನ್ನು ಮತ್ತೆ ಹಿಂದಕ್ಕೆ ಪಡೆಯುವುದು ಅಸಾಧ್ಯ.

ತುಂಬ ಉದ್ವಿಗ್ನನಾಗಿದ್ದಾನೆ ನಿಜ, ಆದರ ನಿರಾಶನಾಗಿಲ್ಲ, ಕಾಯುವುದನ್ನು ಅವನು ಬಲ್ಲ. ಇಲ್ಲದಿದ್ದರೆ ಫಲ ದೊರೆಯುವುದು ಅಸಂಭವ. ಅವರನ್ನು ನೋಡುವುದಕ್ಕಾಗಿ ಸಾಹೇಬರಂತೆ ಉಡುಗೆ ತೊಟ್ಟಿರುವ ಮಹನೀಯರೊಬ್ಬರು ಸಹ ಬಂದು ಕಾದಿದ್ದಾರೆ. ಅವರು ಕೂಡ ಜವಾನನ ಕೈಯಲ್ಲಿ ತಮ್ಮ ಹೆಸರು ಬರೆದ ಕಾಗದದ ತುಂಡನ್ನು ತುರುಕಿ ತಲೆಬಗ್ಗಿಸಿ ಅಳತೆ ಮಾಡಿದಂತೆ ಹೆಜ್ಜೆ ಹಾಕುತ್ತಾ ಅಡ್ಡಾಡುತ್ತಿದ್ದಾರೆ. ಬಲಿದತ್ತ ಹೆಜ್ಜೆ ಹಾಕುತ್ತಾ ಇರುವ ವಿರುದ್ಧ ದಿಕ್ಕಿನಲ್ಲಿ ಅವರು ಹೆಜ್ಜೆಯಿಡುತ್ತಿದ್ದಾರೆ.

ಸರಿಯೆ, ಇಬ್ಬರೂ ಎರಡು ಕಡೆ ಮುಖ ಮಾಡಿಕೊಂಡು ಹೆಜ್ಜೆ ಹಾಕುತ್ತಿದ್ದಾರೆ ಜವಾನನಿಗೆ ಇದು ಬಹಳ ಮೋಜೆನಿಸಿತು. ಅವನು ಎಲೆಯಡಿಕೆ ಚೀಲ ಬಿಚ್ಚಿ ಎಲೆಯಡಿಕೆ ಜಗಿಯಲಾರಂಭಿಸಿದ. ಒಮ್ಮೊಮ್ಮೆ ಇಬ್ಬರು ಮಹನೀಯರನ್ನು ನೋಡುತ್ತಾನೆ. ಯಾರಾದರೂ ಉಸಿರೆತ್ತಿದರೆ ಸಾಕು, ತನ್ನ ಗಂಟಾಗಿರುವ ಕೈಯನ್ನೆತ್ತಿ 'ಶ' ಅಂತ ಎಚ್ಚರಿಸುತ್ತಾನೆ. ವರಾಂಡದಲ್ಲಿ ಟ್ರಾಫಿಕ್ ಸರಕ್ಕನೆ ಬಂದಾಗುತ್ತದೆ. ಹಾವಿಗೆ ಗರುಡ ಮಚ್ಚೆ ತೋರಿಸುವಂತೆ ಸುಮ್ಮನೆ ಕೊಠಡಿಯ ಕಡೆ ಬೆರಳು ತೋರಿಸುತ್ತಾನೆ. ಇಷ್ಟೇ ಸಾಕು, ಮತ್ತೆ ಎಲೆಯಡಿಕೆ ಜಗಿಯಲಾರಂಭಿಸುತ್ತಾನೆ. ಸಾಹೇಬರನ್ನು ಭೇಟಿ ಮಾಡಲು ಬಂದ ಜನರ ಬವಣೆ ನೋಡುತ್ತಾ ಮೋಜು ಮಾಡುತ್ತಿದ್ದಾನೆ.

ಆ ಜನ ಅಡ್ಡಾಡಲಿ, ಹಳೆಯ ಕಾಲದ ದಫೇದಾರನಂತೆ ಅದರಿಂದ ಇವನ ಪ್ರತಿಷ್ಠೆ ಹೆಚ್ಚುತ್ತದೆ. ಮುದುಕ, ರೆಪ್ಪೆಗಳೆಲ್ಲ ನರೆತುಹೋಗಿವೆ, ಗಾಜಿನಂತಹ ಕಣ್ಣುಗಳು, ಮುಳ್ಳಿನಂತೆ ಸೆಟೆದು ನಿಂತಿರುವ ಬಿಳಿಮೀಸೆ, ತಲೆಯನ್ನು ಮುಚ್ಚಿರುವ ದೊಡ್ಡ ಪೇಟ - ಕೆಂಪು - ಹಳದಿ - ಬಿಳಿ, ಮೈಮೇಲೆ ನಾಟಕದ ಕಂಪೆನಿಯವರಂತೆ ಉದ್ದವಾದ ಕೋಟು, ಅದರ ಮೇಲೆ ಅಡ್ಡಡ್ಡಲಾಗಿರುವ ಅಗಲವಾದ ಎರಡು ಮಡಿಕೆಯ ಪಟ್ಟಿ, ಅದರ ಮೇಲೆ ಹಿತ್ತಾಳೆಯ ದೊಡ್ಡ ಬಿಲ್ಲೆ, ಹೊಳೆಯುತ್ತಿದೆ. ಕಂಪೆನಿಯ ಹೆಸರು ಬರೆದಿದೆ. ಒಳಗಡೆ ಸಾಹೇಬರು, ಹೊರಗಡೆ ಸಂದರ್ಶಕರ ಸಾಲು, - ಈ ಮಧ್ಯೆ ವಾತಾವರಣ ಸ್ತಬ್ಧವಾಗಿದೆ.

ಬಲಿದತ್ತ ಮತ್ತೆ ಅವನ ಬಳಿಗೆ ಹೋಗಿ ಸ್ವಲ್ಪ ಮೊಲೀಷು ಮಾಡುತ್ತಾನೆ - "ಸ್ವಲ್ಪ ಹೋಗಿ ನೋಡಣ್ಣ"

"ಹೂಂ."

"ಹೋಗು ಮತ್ತೆ, ತುಂಬ ಅರ್ಜೆಂಟು, ಆ ಕಡೆ ಕಂಪೆನಿಯ ಕೆಲಸ ಹಾಳಾಗುತ್ತಿದೆ, ನಾನು ಇಲ್ಲಿ ನಿಂತುಬಿಟ್ಟಿದ್ದೇನೆ. ಸಾಹೇಬರಿಗೆ ಗೊತ್ತಾದ್ರೆ ತರಾಟೆಗೆ ತೊಗೋತಾರೆ."

ಅವನ ಭೋಳೆತನ ನೋಡಿ ಜವಾನನಿಗೆ ಒಂದು ಕ್ಷಣ ನಗಬೇಕೆನಿಸಿತು. ತುಟಿಯಂಚಿನಲ್ಲಿ ಮುಗುಳುನಗೆ ಮೂಡಿ ಮತ್ತೆ ಮರೆಯಾಯಿತು. ಅವನು ತನ್ನ ಜಬರದಸ್ತು ಬಿಟ್ಟು ಪೂಳ್ಳು ಅಂತ ಅನಿಸಿಕೊಳ್ಳುತ್ತಾನಾ ? ಗಂಭೀರವಾಗಿ ತಲೆಯಾಡಿಸಿ ಹೇಳಿದ - "ಗೊತ್ತಿಲ್ವಾ ಸ್ವಾಮಿ, ಅವರು ಹುಲಿ ಅಂದ್ರೆ ಹುಲಿ."

ಬಲಿದತ್ತನ ಮೈಯಲ್ಲಿ ರಕ್ತ ಒಣಗಿದಂತಾಯಿತು. ಮುಖ ಸಪ್ಪೆಯಾಯಿತು. ಮೈಬೆವರಿತು. ನೋಡಲು ಬಂದವರನ್ನು ನಿರುತ್ಸಾಹಗೊಳಿಸಲೆಂದೇ ಅಷ್ಟೆಲ್ಲ ಏರ್ಪಾಟೇನೋ ಅಂತ ಅನಿಸಿತು. ಒಳಗೆ ನುಗ್ಗೋಣ ಅಂತ ಯೋಚಿಸುವಷ್ಟರಲ್ಲಿಯ

ಗಂಟೆ ಸದ್ದು, ಒಳಗಡೆಯಿಂದ ಜೋರಾಗಿ ಗುಟುರು ಹಾಕಿದಂತಾಯಿತು, "ಯಾರದು ಹೊರ್ಗೆ! ಯಾರದು ಹೊರ್ಗೆ!"

ಎದ್ದೆನೊ ಬಿದ್ದೆನೋ ಅಂತ ದೌಡಾಯಿಸಿದ ಜವಾನ, ಅವನ ಒಣಗಿದ ಗಂಟಲಿನ ಧ್ವನಿ ಒಳಗಡೆಯಿಂದ ಕೇಳಿಸಿತು-

"ಬುದ್ಧಿ"

ಬಲಿದತ್ತನ ಎದೆ ಡಗ್‌ಡಗ್ ಅನ್ನತೊಡಗಿತು. ಯೋಚಿಸಿದ - ಇದೇ ಸಮಯ! ಇದೇ ಸಮಯ! ಆ ಗುಟುರು ಅಲೆಯಲೆಯಾಗಿ ತಲೆಯಲ್ಲೆಲ್ಲಾ ಹರಡಿಕೊಳ್ಳುತ್ತದೆ - "ಯಾರ್ ಹೊರ್ಗೆ ?" ಹೊರಗಡೆ ಯಾರಿದ್ದಾರೆ ಅಂತ ಅಲ್ಲವೆ ಆ ಗುಟುರಿಕಿನ ಅರ್ಥ. ಹಾಗಯೆ 'ಬುದ್ಧಿ' - ಆ ಮಾತಿಗೆ ಥಟಕ್ಕನೆ ಮಿಂಚಿನಂತ ಪ್ರತ್ಯುತ್ತರ. ಮುಖದಲ್ಲಿ ನೀರೊಡೆಯಿತು. ಗೋಡೆಗೊರಗಿ ನಿಂತುಕೊಂಡ.

ಮನಸ್ಸಿನೊಳಗಡೆ ಗೊತ್ತಿಲ್ಲದ ಯಾವುದೋ ಧ್ವನಿ ಸಾರಿಹೇಳುತ್ತದೆ. ಈಗ ಅವನ ಸರದಿ ಬರುತ್ತದೆ. ಮನಸ್ಸಿನಲ್ಲಿದ್ದ ವಿಚಾರವೆಲ್ಲ ಪರುಪೇರಾಗುತ್ತಿರುವಂತೆ ಅನಿಸಿತು, ಗೊತ್ತಿಲ್ಲದ ಭಯ ಮೈಯಲ್ಲೆಲ್ಲ ಆವರಿಸಿ ನಡುಕ ಹುಟ್ಟಿಸಿತು. ಒಳಗಡೆ ಸಾಹೇಬರು - ಅವನ ಹಣೆಬರಹವನ್ನು ತಿದ್ದುವ ಅಧಿಕಾರಿ, ಲೇಖನಿಯ ಒಂದು ಗೆರೆಯಿಂದ ಅವನ ಹೊಟ್ಟೆಪಾಡನ್ನು ಕಸಿದುಕೊಳ್ಳಬಲ್ಲರು, ಉಳಿಸಬಲ್ಲರು - ಹೊಟ್ಟೆಪಾಡು! ಅಬ್ಬಾ! ಎಷ್ಟು ಗತಿಗೆಟ್ಟದ್ದು. ಅವನು ಗತಿಯಿಲ್ಲದವನು. ಹೊಟ್ಟೆಪಾಡು - ಮಾಂಸಾಹಾರಿ ಬಳ್ಳಿಯೊಂದರ ಕರಿಬಣ್ಣದ ಗಂಟುಗಂಟಾಗಿರುವ ತೋಳುಗಳಂತೆ. ಕೆಳಗಿನಿಂದ ಹಿಡಿದೆಳೆಯುತ್ತಾ ಮೈಯಲ್ಲೆಲ್ಲಾ ಹಬ್ಬಿಕೊಳ್ಳುತ್ತಿರುವಂತೆ ಕಾಣುತ್ತದೆ.

ಕುತ್ತಿಗೆ ಹಿಡಿದಂತಾಗುತ್ತದೆ, ಗಂಟಲು ಒಣಗುತ್ತದೆ - ಕರ್ಚೀಫು ತೊಗೊಂಡು ಮುಖ ಉಜ್ಜಿದ, ಒರೆಸಿಕೊಂಡ. ಎಷ್ಟು ಸಾಧ್ಯವೊ ಅಷ್ಟು ಚೆನ್ನಾಗಿ ಕಾಣಬೇಕಲ್ಲ. ಆದರೂ ಅವನಿಗೆ ತಾನು ಬಲಿಪಶು ಎಂದೇ ಅನಿಸುತ್ತದೆ. ಈ ಬಾರಿ ಜವಾನ ನಿಜವಾಗಿಯೂ ಹೊರಗೆ ಬಂದು ಹೇಳುತ್ತಾನೆ - ನೋಡಿ ನಿಮ್ಮನ್ನು ಕರೀತಾ ಇದಾರೆ.

ಬಿರುಗಾಳಿಯಲ್ಲಿ ಹೊಡೆದುಕೊಂಡು ಹೋದವನಂತೆ ಪರದೆಯನ್ನು ಸರಿಸಿ ಒಳಹೊಕ್ಕ, ಬಾಗಿಲುದಾಟಿ ದೂರದಿಂದಲೇ ಮೈಬಗ್ಗಿಸಿ ವಿನಂತಿಸಿಕೊಂಡ.

"ಗುಡ್ - ಮಾರ್ನಿಂಗ್ - ಸರ್ ಯುವರ್ ಆನರ್-"

ದೂರದಿಂದ ಉತ್ತರ ಬಂತು - "ಸಿಟ್ ಡೌನ್, ಸಿಟ್ ಡೌನ್ -" ಕೂತುಕೊ. ಆಶ್ಚರ್ಯದಿಂದ ದೂರ ನೋಡಿದ. ಕುಳಿತುಕೊಳ್ಳಬೇಕಾದರೆ ಹತ್ತಿರ ಹೋಗಲೇಬೇಕು. ಹೋಗುವುದ? ಸಾಹೇಬರ ತಲೆ ಬಗ್ಗಿದ, ಫೈಲಿನಲ್ಲಿ ದೃಷ್ಟಿ ನೆಟ್ಟಿದ್ದಾರೆ.

"ಸಿಟ್ ಡೌನ್ - ಯೂ ಹಿಯರ್-"

ಅಪ್ಪಣೆಯ ಬಿರುಸು ಅವನ ಭುಜದ ಮೇಲೆ ಕೈಯಿಟ್ಟು ಒತ್ತಿದಂತಾಗುತ್ತದೆ. ಕೋಟು ಪ್ಯಾಂಟು ಹಾಕಿದ ಬಲಿದತ್ತ ಸಿಟ್ ಡೌನ್ ಅನ್ನುವ ಬಿರುಗಾಳಿಗೆ ಸಿಕ್ಕಿ ಅಲ್ಲೇ ನೆಲದ ಮೇಲೆ ಮುದುರಿ ಕುಳಿತುಬಿಟ್ಟ.

"ಈಡಿಯೆಟ್" - ಸಾಹೇಬರು ಘರ್ಜಿಸಿದರು - "ಕಮ್ ಹಿಯರ್"

ಥರಥರ ಅಂತ ನಡುಗುತ್ತಾ ಬಲಿಪಶು ಹೆಜ್ಜೆ ಮುಂದಿಟ್ಟಿತು, ಕಿವಿಯಲ್ಲಿ ಗುಂಯ್

ಅನ್ನುತ್ತಿದೆ. ಸಾಹೇಬರು ಅವನ ಹೆಸರು ಬರೆದ ಚೀಟಿಯನ್ನು ಮೇಲೆತ್ತಿಕೊಂಡು ಕಾಗದದ ಕಟ್ಟನಿಂದ ಅವನ ಕಾಗದವನ್ನು ತೆಗೆದುಕೊಂಡು ನೋಡುವ ಭಂಗಿಯಲ್ಲಿ, ಮತ್ತೆ ಮತ್ತೆ ಅದನ್ನು ಮೇಲಿನಿಂದ ಕೆಳಗಿನವರೆಗೆ ನೋಡಿದರು.

ನಡುಗಿದ ಬಲಿದತ್ತ, ಮೈಯೆಲ್ಲ ಥರಥರ ಅನ್ನತೊಡಗಿತು. ನಡುಗುತ್ತಾ ವ್ಯಾಕರಣ ಮರೆತು ತಪ್ಪು ತಪ್ಪಾದ ಇಂಗ್ಲಿಷಿನಲ್ಲಿ ತನ್ನ ಹರಿಕಥೆ ಶುರು ಮಾಡಿದ, ಈಗ ತಾನೆ ಬಂದಿದ್ದಾನೆ, ಕೆಲಸಕ್ಕೆ ರಿಪೋರ್ಟ್ ಮಾಡಿಕೊಂಡಿದ್ದಾನೆ, ಕಷ್ಟಪಟ್ಟು ಶ್ರದ್ಧೆಯಿಂದ ಕೆಲಸ ಮಾಡುತ್ತಾನೆ, ಏನಾದರೂ ತಪ್ಪಾದರೆ ಅದನ್ನು ಸಾಹೇಬರು ಕ್ಷಮಿಸಲಿ, ಹೀಗೆಯೆ ಎಷ್ಟೋ ಮಾತುಗಳು.

ಐದು ನಿಮಿಷ, ಸಾಹೇಬರು ಕೇಳುತ್ತಾ ಹೋದರು. ಆಮೇಲೆ ಅಂದರು - "ಯಸ್."

'ಯಸ್' ಅಂದರೆ ಹೌದು ಅನ್ನುವ ಅರ್ಥ ಅವನಿಗೆ ಗೊತ್ತು. ಆದರೆ ಸಾಹೇಬರು 'ಯಸ್' ಅಂದಾಗ ಅಲ್ಲಿಂದ ಜಾಗ ಖಾಲಿ ಮಾಡಬೇಕೆಂದು ಅವನಿಗೆ ಗೊತ್ತಾಗಲಿಲ್ಲ. ಹಾಗೆಯೆ ನಿಂತಿದ್ದ.

ಸಾಹೇಬರು ಗಂಭೀರವಾಗಿ ಇಂಗ್ಲಿಷಿನಲ್ಲಿ ಕೇಳಿದರು - "ಏನು ಬಂದಿದ್ದಿರಿ ?"

"ಸಾಹೇಬರ ದರ್ಶನ ಮಾಡೋಣ ಅಂತ."

"ನೋಡಾಯಿತಲ್ಲ, ಇನ್ನೇನಾದರೂ ?"

"ಇನ್ನೇನಿಲ್ಲ ಸಾರ್."

"ಸರಿ, ಹಾಗಾದ್ರೆ, ಹೊರಡು ಇಲ್ಲಿಂದ, ಹೋಗಿ ಕೆಲಸ ಮಾಡು, ಒಳ್ಳೆ ಬೇಕೂಫನಂತೆ ಏನು ನೋಡ್ತಾ ನಿಂತುಬಿಟ್ಟೆ, ನಡಿ. "ಇದ್ದಕ್ಕಿದ್ದಂತೆ ಅವನು ಗಲಿಬಿಲಿಗೊಂಡ. ಬಾಯಿಂದ ಹೊರಬಂತು, "ಸರ್" -

"ಗೆಟ್ ಔಟ್, ಮ್ಯಾನ್!"

ಗೆಟ್ ಔಟಿನ ಒದೆತದಿಂದ ಅವನು ತಳ್ಳಿಸಿಕೊಂಡವನಂತೆ ಹೊರಬಂದ. ತಲೆತಗ್ಗಿಸಿ ತನ್ನ ಜುಟ್ಟನ್ನು ಅಲ್ಲಿಯೆ ಒಪ್ಪಿಸಿ ಹ್ಯಾಪಲು ಮೋರೆ ಹಾಕಿಕೊಂಡು ಹೊರಬಂದ. ಹೊರಗಡೆ ಕಾದು ನಿಂತಿದ್ದ ಜವಾನ ಕೈಚಾಚಿದ - "ಬಕ್ಷೀಸು ?"

ವ್ಯಕ್ತಿತ್ವ ನೆಗದುಬಿದ್ದಿತ್ತು. ಹೊರಗಡೆಯ ತೆರೆದ ಬಯಲಿನಲ್ಲಿ ಹೊಸಗಾಳಿ ಕುಡಿದು ಅವನು ಎಲ್ಲವನ್ನೂ ಮರೆಯುತ್ತಾನೆ. ತಾನೊಬ್ಬ ಆಫೀಸರ್, ಸಾಧಾರಣನಲ್ಲ ಅಂತ ಮತ್ತೆಮತ್ತೆ ತನ್ನಲ್ಲೇ ಅಂದುಕೊಂಡು ಸಮಾಧಾನ ಪಟ್ಟುಕೊಳ್ಳುತ್ತಾನೆ. ಅವನಲ್ಲಿ ಯೋಗ್ಯತೆಯಿದೆ, ಸ್ವಂತಿಕೆಯಿದೆ. ಸಾಲುಸಾಲಾಗಿ ಕುಳಿತು ಜನ ಕೆಲಸ ಮಾಡುತ್ತಿದ್ದಾರೆ. ಎಷ್ಟು ಮುಖಗಳು, ಅದಷ್ಟೆ ಬಗೆಯ ವೇಷ! ಅವನು ಇವರೆಲ್ಲರಿಗಿಂತ ಮೇಲಿನವನು. ಯಾವಾಗ ಯಾವ ಪರಿಸ್ಥಿತಿಯಲ್ಲಿ ಅವನ ಲೇಖನಿ ಅವರಲ್ಲಿ ಯಾರ ಅನ್ನ ಕಿತ್ತುಕೊಳ್ಳಬಲ್ಲುದೂ ಯಾವ ಸುವರ್ಣಗಳಿಗೆಯಲ್ಲಿ ಅವನು ಯಾರ ಭಾಗ್ಯವಿಧಾತನಾಗುತ್ತಾನೊ ಯಾರು ಬಲ್ಲರು ?

ಅವನು-

ತಲೆಯೆತ್ತಿ ಅವರೆಲ್ಲ ನೋಡುತ್ತಿದ್ದಾರೆ, ಕುತೂಹಲ ತುಂಬಿದ ಕಣ್ಣುಗಳು, ಅವರು ಅವನ ಕಡೆಗೇ ನೋಡುತ್ತಿದ್ದಾರೆ.

ಇನ್ನೊಂದು ಗಂಟೆಯಷ್ಟೆ. ಅಷ್ಟರಲ್ಲಿ ನಾಲ್ಕೂ ಕಡೆ ಅವನ ಹೆಸರು ಹರಡಿಹೋಗುತ್ತದೆ. ಕೇವಲ ಈ ಕಚೇರಿಯಲ್ಲಿ ಮಾತ್ರವೆ ಅಲ್ಲ, ಹೊರಗಡೆ ಕೂಡ, ಆ ಊರಿಗೆ ಬರುವ ಹಳ್ಳಿಯ ಮಂದಿಯ ಬಾಯಿ ಮಾತಾಗಿ ದೂರದೂರದವರೆಗೂ ಹರಡುತ್ತದೆ. ಈ ಪ್ರದೇಶದಲ್ಲಿ ಕಂಪೆನಿ ತುಂಬ ಹೆಸರುವಾಸಿಯಾಗಿದೆ. ದುಡ್ಡಿನಲ್ಲಿ, ಪ್ರಚಾರದಲ್ಲಿ, ಸಾಧನೆಯಲ್ಲಿ, ಉದ್ಯಮದಲ್ಲಿ, ಯೋಗ್ಯತೆಯಲ್ಲಿ - ಎಲ್ಲದರಲ್ಲೂ ಮುಂದಾಗಿದೆ. ಅದರ ಹೆಸರು ಇದಕ್ಕಿಂತ ಹೊರಗೇನೂ ಇಲ್ಲ, ಈ ವಲಯದಲ್ಲಿದೆ ಅಷ್ಟೆ.

ಏಕಾಂತವಾದ ಕೊಠಡಿಯಲ್ಲಿ ಪರದೆಯ ಮರೆಯಲ್ಲಿ ಘರ್ಷಣೆ, - ಕಂಪೆನಿಯ ಅಗಲವಾದ ಪ್ರಾಕಾರದಲ್ಲಿ ಬೂಟುಗಳನ್ನು ಖಟಖಟ ಸದ್ದುಮಾಡುತ್ತಾ ನಡೆಯುತ್ತಿರಬೇಕಾದರೆ ಘರ್ಷಣೆಯ ಭಾವನೆ ನಿಧಾನವಾಗಿ ದೂರ ದೂರ ಸಾಗುತ್ತದೆ. ಘಟನೆಗಳ ಮೇಲೆ ವೈಚಾರಿಕತೆಯ ಒತ್ತುಬಿದ್ದು ಮನದಾಳದಲ್ಲಿ ಅರ್ಥಮಾಡಿಕೊಂಡು ಅವನು ಆ ಗುಹೆಯಿಂದ ಮೇಲೆದ್ದು ಪ್ರಶಸ್ತವಾದ ಮುಕ್ತ ವಿಚಾರಗಳ ತೆರೆದ ಕ್ಷೇತ್ರದಲ್ಲಿ ಹೆಜ್ಜೆಯಿಡುತ್ತಾನೆ. ಅಲ್ಲಿ ಮನಸ್ಸಿನ ಭಾವನೆಗಳಿಗೆ ಎಡೆಯಿಲ್ಲ. ಕೇವಲ ಕಾರಣಗಳನ್ನು ಆಧರಿಸಿ ಒಟ್ಟಾರೆಯಾಗಿ ಇದರ ಪರಿಣಾಮ ಹೀಗೆ ಅಂತ ನಿರ್ಧರಿಸಲಾಗುತ್ತದೆ, ಅದು ಮನಸ್ಸನ್ನು ಮುಟ್ಟುವುದಿಲ್ಲ.

ಆ ವೈಚಾರಿಕತೆಯ ಅಳತೆಗೋಲಿಂದಲೆ ಘರ್ಷಣೆಯನ್ನು ಅಳೆಯುತ್ತಾ ಬಲಿದತ್ತ ಯೋಚಿಸುತ್ತಿದ್ದಾನೆ. ಇದೇನೂ ಅಲ್ಲ, ಏನೂ ಆಗಲಿಲ್ಲ. ಅಂದಹಾಗೆ ಆಗಿರುವುದಾದರೂ ಏನು. ಕಚೇರಿ ತಾಪೇದಾರಿಯಲ್ಲಿ ಸಾಹೇಬರುಗಳ ಹಿಂದೆ ಹಿಂದೆ ಸುತ್ತುತ್ತಾ ಅವನು ಇಂತಹ ಬಹಳಷ್ಟನ್ನು ನೋಡಿಬಿಟ್ಟಿದ್ದಾನೆ. ದಪ್ಪ ಪರದೆಯ ಮರೆಯಲ್ಲಿ ಏಕಾಂತವಾದ ಕೊಠಡಿಯಲ್ಲಿ ಎಂಥ ದೊಡ್ಡ ದೊಡ್ಡ ಜನರಿಗೆ ಎಂಥೆಂಥ ಸತ್ಕಾರ ಸಿಗುತ್ತದೆ ಅನ್ನುವುದನ್ನು ಅವನು ಬಲ್ಲ. ಸಾಹೇಬರ ಬಾಯಲ್ಲಿ ಕೋಪದ ಗರ್ಜನೆ, ಹುಬ್ಬು ಗಂಟಿಕ್ಕುವುದು, ಅದಕ್ಕೆ ಕೊನೆಯಿಲ್ಲ, ಹೇಳಲಾಗದ, ನೋಡಲಾಗದ ಕಿರುಕುಳಗಳು - ಹೊಲಸು ಭಾಷೆಯ ತಾಂಡವನೃತ್ಯ. ಇವೆಲ್ಲವನ್ನೂ ಕಾಗದದ ಮೇಲೆ ಬರೆಯಲಾಗುವುದಿಲ್ಲ. ಇವು ಯಾವುವೂ ಪರದೆ ದಾಟಿ ಹೊರಗೆ ಬರುವುದಿಲ್ಲ. ಅವಮಾನ, ತಿಕ್ಕಾಟ ಎಲ್ಲವನ್ನೂ ಗಟಗಟನೆ ಕುಡಿದು ಹಂಸದಂತೆ ರೆಕ್ಕೆ ಬಡಿಯುತ್ತಾ ಹೊರಗೆ ಬಂದು ದೊಡ್ಡ ದೊಡ್ಡ ಮನುಷ್ಯರೂ ಸಂಕೋಚವಿಲ್ಲದ ನಾಚಿಕೆಯಿಲ್ಲದೆ ಹೇಳಬಲ್ಲರು - ಸಾಹೇಬರು ಸೊಗಸಾಗಿ ಮಾತಾಡಿದರು, ಕಷ್ಟ ಸುಖ ವಿಚಾರಿಸಿಕೊಂಡರು, ಅದೆಷ್ಟು ವಿಶ್ವಾಸ, ಎಂಥ ಸಹಾನುಭೂತಿ.

ಜನ ಕೇಳಿ ಬೆನ್ನುತಟ್ಟಿ ಹೊಗಳುತ್ತಾರೆ. ಸುಮ್ಮನೆ ಬೈಯ್ಗುಳನ್ನೆಲ್ಲ ಕೊಡವಿಕೊಂಡು ಹೊರಗೆ ಬಂದು ಸಾಹೇಬರು ಹಾಗೆ ನೋಡಿಕೊಂಡರು, ಸಾಹೇಬರು ಹೀಗೆ ನೋಡಿಹೋದರು ಅಂತೆಲ್ಲ ಬೊಗಳೆ ಹೊಡೆದು ಬೇರೆಯವರ ದೃಷ್ಟಿಯಲ್ಲಿ ಗೌರವ ಸಂಪಾದಿಸಿಕೊಳ್ಳುತ್ತಾರೆ. ವ್ಯಾಪಾರಿಗಳು ಬರಿಗೈ ಆಗಿದ್ದರೂ ಬಾಯಲ್ಲಿ ಸಾವಿರ-ಲಕ್ಷ ರೂಪಾಯಿಗಳ ಮಾತನಾಡಿ ಬೇರೆಯವರಿಗೆ ನಂಬಿಕೆ ಹುಟ್ಟಿಸಿ ಅವರಿಂದ ದುಡ್ಡು

ಹೊಡೆಯುತ್ತಾರಲ್ಲ, ಹಾಗೆಯೆ ಇದು. ಅದೇ ಟ್ರ್ಯಾಕ್ಟ್ - ಯಶಸ್ಸಿನ ನೀತಿಶಾಸ್ತ್ರ ಗುಟ್ಟು, ಸೋತರೂ ಸೋಲೊಪ್ಪಿಕೊಳ್ಳುವ ಮನುಷ್ಯ ಮೆಲ್ಲಮೆಲ್ಲನೆ ಕೆಳಗೆ ಹೋಗುತ್ತಿರುತ್ತಾನೆ. ಅವನಿಗೆ ಯಶಸ್ವಿಯಾಗುವ ನಂಬಿಕೆಯೆ ಇರುವುದಿಲ್ಲ. ಆದರೆ ಸೋಲನ್ನು ಗೆಲುವೆಂದು ಭಾವಿಸಿ ನಡೆದಾಗ ಹತ್ತು ಜನರ ಎದುರಿಗೆ ಮರ್ಯಾದೆ ಸಿಕ್ಕಿದೆಯೆಂದು ಹೇಳಿ ಔತಣ ನೀಡಬಹುದು. ಅದು ಅಂದರೆ ಭರ್ಜರಿ ವರಸೆ! ಅವನು ಹಾಗೆ ಮಾಡಲಾರನಾ? ಕೇವಲ ಮಳೆಗೆ ಛತ್ರಿ ತೋರಿಸಿ ಬೆನ್ನನ್ನು ಕಲ್ಲಾಗಿಸಿಕೊಳ್ಳುವುದು ಸಹ ಗೆಲುವಿನ ಅಮೋಘವಾದ ಒಂದು ಗುಟ್ಟು. ಇಷ್ಟರ ಮೇಲೆ ಮೇಲಿನ ಸಾಹೇಬರುಗಳಿಗೂ ಒಂದು ವೇಳೆ ಬೈಯಲು ಸಾಧ್ಯವಾಗಬಾರದು ಅಂದರೆ ಆ ತಾಕತ್ತಿರುವುದಾದರೂ ಯಾರಿಗೆ? ಇನ್ನಾರಿಗೆ ತಾನೆ ಹಾಗೆ ಬೈಯುವ ತಾಕತ್ತಿದೆ?

ಹೀಗೆ ಯೋಚಿಸುತ್ತಾ ಬಲಿದತ್ತನ ಮುಖದ ಮೇಲೆ ಅವನ ನೌಕರಿಯ ಯಶಸ್ಸಿನ ಎಂದಿನ ಆ ಕಿರುನಗೆ ಮೂಡಿತು, ನಗೆಯಲ್ಲದಿದ್ದರೇನಂತೆ, - ನೋಡುವುದಕ್ಕೆ ನಗೆಯಂತಿದೆ.

ಹಾಗೆಯೆ ಯಾವಾಗಲೂ ಗಾಣದೆತ್ತಿನಂತೆ ದುಡಿಯುತ್ತಿರುವ ಹೆಡ್ ಗುಮಾಸ್ತರ ಹತ್ತಿರ ಹೋಗುತ್ತಿದ್ದಂತೆಯೆ ಅವನಲ್ಲಿ ಪೂರ್ತಿಯಾಗಿ ಆತ್ಮವಿಶ್ವಾಸ ಮೂಡಿತು - ಅವನು ತನ್ನ ನೀತಿಯ ಬಗ್ಗೆ ದೃಢವಾಗಿರುತ್ತಾನೆ. ಬೇಗ ತನ್ನ ಈ ನೀತಿಯ ಬಲದ ಮೇಲೆ ತುತ್ತೂರಿ ಊದಿ ಅವನು ಕರಡಿ ಕುಣಿಸಬಲ್ಲ, ಆ ಕರಡಿ ಎಷ್ಟೇ ದೊಡ್ಡದಿರಲಿ ಕುಣಿಸಬಲ್ಲ.

ಹೆಡ್ ಗುಮಾಸ್ತರೇನೂ ಆಫೀಸರುಗಳ ಗುಂಪಿಗೆ ಸೇರಿದವರಲ್ಲ. ಇರೋದರಲ್ಲಿ ದೊಡ್ಡ ಹುದ್ದೆಯಲ್ಲಿದ್ದರೂ ಅವರು ಗುಮಾಸ್ತರ ಗುಂಪಿಗೇ ಸೇರುತ್ತಾರಲ್ಲವೆ. ತಮ್ಮ ದರ್ಜೆಯವರಲ್ಲವಲ್ಲ ಅಂತ ಕಂಪೆನಿಯ ಅನೇಕ ಮಂದಿ ಆಫೀಸರುಗಳು ಅವರನ್ನು ಕೆಳಮಟ್ಟದ ದೃಷ್ಟಿಯಿಂದ ನೋಡುತ್ತಾರೆ, ಅವರ ಹಿರಿತನದ ಬಗ್ಗೆ ನಗೆಯಾಡುತ್ತಾರೆ. ಅವರ ದೃಷ್ಟಿಯಲ್ಲಿ ಹೆಡ್ ಗುಮಾಸ್ತರು ಬೇರೆ ಜಾತಿಗೆ ಸೇರಿದವರು, ಅಂಥವರ ಜೊತೆ ಸೇರಿದರೆ ತಮ್ಮ ಮಾನಮರ್ಯಾದೆಗೆ ಧಕ್ಕೆ ಬರುತ್ತದೆಂದು ಹೆದರುತ್ತಾರೆ. ಆದರೆ ಯಶಸ್ಸನ್ನು ಬಯಸುವ ಬಲಿದತ್ತ ತನ್ನ ಕಳೆದ ಬದುಕಿನಿಂದ ಬೇರೆಯದೆ ರೀತಿಯ ಅನುಭವ ಸಂಪಾದಿಸಿಕೊಂಡಿದ್ದಾನೆ. ಹೊಸ ವಿಚಾರಗಳನ್ನು ಕಂಡುಕೊಂಡಿದ್ದಾನೆ. ಅವನಿಗೆ ಗೊತ್ತು - ಗುಮಾಸ್ತನೂ ನಗಬಲ್ಲ, ಹೆಡ್‌ಗುಮಾಸ್ತೆಯ ನಗು ಮೊನಚಾಗಿರುತ್ತದೆ. ಅದರ ಚೂಪು ವಾಸ್ತವವಾಗಿ ಪೊಳ್ಳಲ್ಲ ಅಂತ. ನಿಜ ಹೇಳಬೇಕೆಂದರೆ ಗುಮಾಸ್ತೆಯ ಕಂಪೆನಿಯಿದ್ದಂತೆ. ಯಾವುದೇ ಕೆಲಸವನ್ನು ವಾಸ್ತವವಾಗಿ ಕಾರ್ಯತಃ ಮಾಡುವವನು ಅವನೇ - ಅವನೇ ಅರೆಹೊಟ್ಟೆ ತುಂಬಿಕೊಂಡು ಕೆಲಸ ಮಾಡುವ ನುಜ್ಜುಗುಜ್ಜಾದ ಪ್ರಾಣಿ. ಬೆಳಗಿನಿಂದ ರಾತ್ರಿಯವರೆಗೂ ದುಡಿಮೆಗೆ ತಲೆಕೊಟ್ಟು ಮೈಸವೆಸುತ್ತಿರುತ್ತಾನೆ, ಅನಂತರವೂ ಅಂಬಾರಿಯೆತ್ತರದ ರಾಶಿ ಫೈಲುಗಳನ್ನು ಮನೆಗೆ ಹೊತ್ತುತಂದು ಮಿಣಮಿಣ ಅನ್ನುತ್ತಿರುವ ಲಾಟೀನು ಬೆಳಕಿನಲ್ಲಿ ಚಾಪೆಯ ಮೇಲೆ ಕುಳಿತು ಕೆಲಸ ಮಾಡುತ್ತಿರುತ್ತಾನ, ಸಂಬಳ ಹದಿನೈದು ದಿನಗಳಿಗೂ ಸಾಲುವುದಿಲ್ಲ. ಫೈಲುಗಳನ್ನು

ದಾಟಿ ಅವನ ದೃಷ್ಟಿ ಅತ್ತ-ಇತ್ತ ಸರಿಯುವುದಕ್ಕೆ ಅವಕಾಶವೇ ಇಲ್ಲ. ಸಂಸಾರ ತಾಪತ್ರಯದಲ್ಲಿ ಹೆಂಡತಿಯ ನಡು ಎಷ್ಟು ಬಗ್ಗಿಹೋಗಿವೆ. ಅವಳು ಅದೆಷ್ಟು ರಕ್ತ ಬಸಿದಿದ್ದಾಳೆ ಅಂತ ನೋಡುವುದಕ್ಕೂ ಪುರುಸೊತ್ತಿಲ್ಲ. ಮಕ್ಕಳು ಯಾವುದರಲ್ಲಿ ಹೆಚ್ಚುಗಾರಿಕೆ ಸಂಪಾದಿಸಿದ್ದಾರೆ - ಓದುವುದರಲ್ಲೇ ಅಥವಾ ಗಾಳಿಪಟ ಹಾರಿಸುವುದರಲ್ಲೇ ಊಹೂಂ, ಒಂದಕ್ಕೂ ಪುರುಸೊತ್ತಿಲ್ಲ. ಅದೇ ಬಡಪ್ರಾಣಿ, ಕುತ್ತಿಗೆಯ ಮೇಲಿರುವ ನೊಗವನ್ನು ಬದಿಗಿಟ್ಟು ಬಂದಾಗಲೂ ಬದುಕನ್ನು ತನ್ನ ಕಚೇರಿಯ ಸಂಗಾತಿಯಾದ ಮೇಜಿಗೊಪ್ಪಿಸಿ ಮನೆಗೆ ಬರುತ್ತಾನೆ. ಇದರ ಪರಿಣಾಮವಾಗಿ ಕಂಪೆನಿ ಮುದಿ ವಯಸ್ಸಿನಲ್ಲಿ ಕೊಡುವ ಪುಕ್ಕಟೆ ಪೆನ್ಷನ್ ತಿನ್ನುವುದಕ್ಕೆ ಅವನು ಹೆಚ್ಚುಕಾಲ ಬದುಕಿರುವುದೇ ಇಲ್ಲ. ಗುಮಾಸ್ತನೇ ಎಲ್ಲ ಕೆಲಸಗಳಿಗೂ ಕರ್ತನಿದ್ದಂತೆ, ಕೆಂಪು ಪಟ್ಟಿಯ ಬ್ರಹ್ಮ ಸಾಹೇಬರುಗಳು ಸಹಿ ಹಾಕುವುದಕ್ಕೆ ಮಾಡುವುದು.

ಹೆಡ್ ಗುಮಾಸ್ತರ ಜೊತೆ ಚೆನ್ನಾಗಿದ್ದರೆ ಸಾಹೇಬರ ಕೃಪಾಕಟಾಕ್ಷ ಬೀಳುವುದಕ್ಕೆ ಹೊತ್ತೇನೂ ಹಿಡಿಯುವುದಿಲ್ಲ. ಅವರನ್ನು ಸರಿಯಾಗಿ ಇಟ್ಟುಕೊಳ್ಳದಿದ್ದರಂತೂ ಏನು ಹೋಗಿ ಏನಾಗುವುದೊ, ಎಷ್ಟೋ ಕತ್ತರಿಗಳು ಕಚೇರಿಯ ಬೆರಳಚ್ಚು ಯಂತ್ರದಿಂದ ಹೊರಗೆ ಧುಮುಕಿ ಹೊಟ್ಟೆಯ ಮೇಲೆ ಹೊಡೆಯಲು ಸಿದ್ಧವಾಗುತ್ತವೆ. ಅವುಗಳ ಮೇಲೂ ಸಾಹೇಬರ ಸಹಿ ಬೀಳುತ್ತದೆ.

ಆದ್ದರಿಂದಲೇ - "ನಮಸ್ಕಾರ ಸ್ವಾಮಿ, ಏನು, ಸೌಖ್ಯವೇ ? ನಾನು ಇವತ್ತು ತಾನೆ ಬಂದೆ. ಮೊದಲು ತಮ್ಮನ್ನು ನೋಡೋಣ ಅಂತಲೇ ಯೋಚಿಸಿದೆ." ಅರೆ... ಅರೆ... ಹೆಡ್‌ಗುಮಾಸ್ತರು ಎದ್ದುನಿಂತರು ... ಅರೆ "ಸ್ವಾಮಿ, ತಾವು.... ಬನ್ನಿ ಬನ್ನಿ ಕೂತ್ಕೊಳ್ಳಿ, ಲೋ, ಕುರ್ಚಿ ತಗೊಂಡು ಬಾರೋ. ತಾವು ಕೂತ್ಕೊಳ್ಳಿ ಸಾರ್ ಮೊದಲು, ನಿಂತೇಬಿಟ್ರಲ್ಲ-"

"ಅಯ್ಯೋ ಬಿಡಿ, ನಿಂತಿದ್ದರೇನಂತೆ, ಇದು ಮನೆ ತರಹ ಅಲ್ಲವೆ.... ಅಬ್ಬಾ, ಅದೆಷ್ಟು ಫೈಲುಗಳು ! ಅದೆಷ್ಟು ಕೆಲಸ ! ನೀವು ಅದೆಷ್ಟು ಕೆಲಸ ಮಾಡ್ತೀರಿ ಸ್ವಾಮಿ ! ತೊಗೊಳ್ಳಿ-" ಎಲೆಯಡಿಕೆ ಡಬ್ಬಿ ಮುಂದೊಡ್ಡಿದ.

"ಕೆಲಸದ ಬಗ್ಗೆ ಮಾತಾಡ್ತಾ ಇದ್ದೀರಲ್ಲ ಸಾರ್ ತಾವು! ಅದನ್ನು ಯಾರು ನೋಡ್ಬೇಕು. ನನ್ನ ಚಾರ್ಜಿನಲ್ಲಿ ಒಟ್ಟು ಒಂಬತ್ತು ಡಿಪಾರ್ಟುಮೆಂಟುಗಳಿವೆ. ಸಾಹೇಬರು ಯಾವಾಗಲೂ 'ಅರ್ಜೆಂಟ್, ಅರ್ಜೆಂಟ್' ಅಂತ ಬರೀತಾನೆ ಇರ್ತಾರೆ. ನಾನು ಕೈಯಾರೆ ಬರೆಯೋವರೆಗೂ ಎಲ್ಲ ಹೇಗೆ ತಾನೆ ನಡೀಬೇಕು ? ಎಷ್ಟು ಸಮಜಾಯಿಷಿ ಮಾಡಿದರೂ ಈ ಜನ ಏನಾದ್ರೂ ತಪ್ಪು ಹಿಡೀತಾರೆ, ಏನಾದ್ರೂ ಸರಿಯಾಗಿ ನೋಡಿ ಕಳಿಸ್ಲಿಲ್ಲ ಅಂದ್ರೆ ತೊಗೊಳ್ಳಿ ಬಂತು ಗ್ರಹಚಾರ."

"ನನಗೆ ಗೊತ್ತು ಸ್ವಾಮಿ ಅದು, ನಿಮ್ಮ ಬಗ್ಗೆ ನಾನು ಕೇಳಿದ್ದೇನೆ, ಒಬ್ಬರೇ ಇಷ್ಟು ದೊಡ್ಡ ಜವಾಬ್ದಾರಿ ಹೊತ್ತಿದ್ದೀರಿ ಅಂತ. ಮೇಲಿನವರು ಬರೀ ಸಹಿ ಗುಜರಾಯಿಸೋದು ತಾನೆ, ಇನ್ನೇನು ಮಾಡ್ತಾರೆ ?"

ವಸಂತ ಬಾಬು ನಕ್ಕರು, ಸ್ವಲ್ಪ ವಿನಯದಿಂದ ಹೇಳಿದರು, "ಅದು ಹೇಗೆ ಆಗುತ್ತೆ ಸ್ವಾಮಿ, ನಾವು ಎಷ್ಟಾದರೂ ಗುಮಾಸ್ತರುಗಳಲ್ಲವೆ. ಸಾಹೇಬರು ಹೇಗೆ ಹೇಳ್ತಾರೊ

ಹಾಗೆ ತಾನ ನಾವು ಮಾಡೋದು, ನಮ್ಮ ಸ್ವಂತದ್ದೇನಿದ ಹೇಳಿ, ಬುದ್ಧಿ ಓಡಿಸೋದು ಏನಿದ್ರೂ ತಾವುಗಳೆ ತಾನೆ."

"ನೀವು ಇಷ್ಟು ನಯವಾಗಿ ಮಾತಾಡೋದನ್ನ ನೋಡಿದ್ರೇ ಅರ್ಥವಾಗತ್ತೆ ನೀವೆಷ್ಟು ತಿಳಿದುಕೊಂಡಿದ್ದೀರಿ ಅಂತ. ಆದರೆ ನನ್ನ ಹತ್ರ ಮುಚ್ಚಿಡೋದೇನಿಲ್ಲ. ನೋಡಿ ಸಾರ್, ನಾನೂ ಗುಮಾಸ್ತನಾಗಿದ್ದೆ, ಚೆನ್ನಾಗಿ ಗೊತ್ತಿದೆ, ಯಾರೋ ಮೈಮುರಿದು ಕಷ್ಟಪಡೋದು, ಹೆಸರು ನೋಡಿದ್ರೆ ಯಾರದ್ದೊ? ಈ ದುಡಿಮೆಯ ಬೆಲೆ ಯಾರು ನೋಡ್ತಾರ?"

ಕಾಗದದ ಕಟ್ಟಿನಿಂದ ತಡಕಾಡಿ ಒಂದು ಬರವಣಿಗೆ ಕೈಗೆತ್ತಿಕೊಂಡ - "ಈ ನೋಟ್ ಯಾರು ಬರೆದಿರೋದು ವಸಂತಬಾಬುಗಳೆ? ನೀವೆ ತಾನೆ? ಖಂಡಿತ. ಬರವಣಿಗೆಯ ಧಾಟಿ ನೋಡಿದರೇನೆ ನಿಮ್ಮದೂಂತ ಹೇಳಬಹುದು. ಆಹಾ, ಎಷ್ಟು ಸೊಗಸಾಗಿದೆ, ಎಂಥ ಕುಶಲತೆ. ಈ ಕಡೆಯಿಂದ ನೋಡಿದರೆ 'ಹೌದು' ಅಂತ ಅರ್ಥ ಬರುತ್ತೆ, ಆ ಕಡೆಯಿಂದ ನೋಡಿದರೆ 'ಇಲ್ಲ' ಅಂತ - ಮೂರು ಮೂರು ಅರ್ಥ. ಈ ಇಂಗ್ಲಿಷ್ ಭಾಷೆಯ ಗಮ್ಮತ್ತು ಅಂದ್ರೆ ನೋಡಿ, ಅದೆಷ್ಟು ಚೊಕ್ಕವಾಗಿ ಕಾಂಪಾಕ್ಟ್ ಆಗಿದೆ, ಬೊಗಳೆಯೇನಲ್ಲ, ಫ್ಯಾಕ್ಟ್ಸ್ ಅಂಡ್ ಫಿಗರ್ಸ್ ಎಷ್ಟೊಂದು ತುಂಬಿವೆ. ಸಾಹೇಬರು ಕಣ್ಣುಮುಚ್ಚಿ ಸಹಿಹಾಕುತ್ತಿರಬೇಕಲ್ಲವೆ. ನೋಡಿ, ನಿಮ್ಮಿಂದ ನಾನು ಕಲಿಯೋದು ಬೇಕಾದಷ್ಟಿದೆ. ನೀವೇನೂ ಬೇಜಾರು ಮಾಡಿಕೊಳ್ಳದ ಇದ್ದರೆ ಮತ್ತೆ ಮತ್ತೆ ನಿಮಗ ತೊಂದರೆ ಕೊಡ್ತಾ ಇರ್ತೇನೆ. ಎಂಥ ಸೊಗಸಾದ ನೋಟಿಂಗ್ ಬರೀತೀರಿ ಅಂತಾ ನೋಡ್ತಾ ಇರ್ತೇನೆ-"

ವಸಂತ ಬಾಬು ಮುಗುಳ್ನಗೆ ನಗುತ್ತಾರೆ.

ಈ ಫೈಲಿನಲ್ಲಿರುವ ಬಿಸಿನೆಸ್ ಕಾಗದದಲ್ಲಿ ಅವರು ತೋರಿಸಿರುವ ಜಾಣತನವನ್ನು ಅದೆಷ್ಟು ಮಂದಿ ಅರ್ಥ ಮಾಡಿಕೊಳ್ಳಬಲ್ಲರು? ಎಷ್ಟು ಜನ ತಾನೆ ಅದನ್ನು ಓದುತ್ತಾರೆ? ಕಾಗದದ ಮೇಲೆ ಬರೆಯುವ ನೋಟಿಂಗ್ ಅಷ್ಟೆ ಏಕೆ, ಅವರು ಜಾಗ್ರತಾವಸ್ಥೆಯಲ್ಲಿ ತಮಗಿರುವ ಎಲ್ಲ ಬುದ್ಧಿಶಕ್ತಿ ಎಲ್ಲ ಕಲ್ಪನೆಯನ್ನು ಧಾರೆಯೆರೆದು ಟಿಪ್ಪಣಿ ಬರೆಯುತ್ತಾರೆ. ಅದೆಷ್ಟು ಲೆಕ್ಕಾಚಾರಗಳ ಚಕ್ರವ್ಯೂಹ. ಇದೊಂದು ಕಲೆ, ಇದರ ಅಭಿವ್ಯಕ್ತಿಗೆ ತುಂಬ ಸಾಧನೆ ಆವಶ್ಯಕ. ಹಳೆಯ ಫೈಲುಗಳನ್ನೆಲ್ಲ ತಡಕಾಡಿ ಹಿಂದಿನ ಬರವಣಿಗೆಗಳ ಮಾದರಿಯನ್ನು ಗಮನವಿಟ್ಟು ನೋಡಿ ಕಷ್ಟಪಟ್ಟು ಅವರು ಬರವಣಿಗೆ ಕಲಿತಿದ್ದರು. ಕಂಪೆನಿಯ ಕೆಲಸಕ್ಕಾಗಿ ಎಷ್ಟು ಪುಸ್ತಕಗಳನ್ನು ಉರು ಹೊಡೆದು ಡಿಪಾರ್ಟ್‌ಮೆಂಟಿನ ಎಷ್ಟು ನಿಯಮ-ಕಾನೂನುಗಳ ಅರ್ಥವನ್ನು ಶಬ್ದಕೋಶ ನೋಡಿ ಹುಡುಕಿ ಎಷ್ಟೋ ಬಾರಿ ಕಾಪಿ ಮಾಡಿ ಬೇಕಾದ ತಿಳಿವಳಿಕೆಯನ್ನು ಅವರು ಸಂಪಾದಿಸಿಕೊಂಡಿದ್ದಾರೆ. ದೊಡ್ಡ ದೊಡ್ಡ ಮಾಹಿತಿಗಳನ್ನು ಹರಿದು ತಮ್ಮ ಕೈಯಾರೆ ಗೋಂದು ಹಚ್ಚಿ ಆಗಾಗ್ಗೆ ಬರುವ ತಿದ್ದುಪಡಿಗಳ ಸಮೇತ ಪುಸ್ತಕಕ್ಕೆ ಅಂಟಿಸಿಕೊಂಡು ಈ ತಾಪೇದಾರಿಯ ನಿಯಮಾವಳಿಯನ್ನು ಅಪ್ ಟು ಡೇಟ್ ಮಾಡಿಕೊಂಡಿದ್ದಾರೆ. ಹಾಗೆಯೆ ಪ್ರತಿಯೊಂದು ಟಿಪ್ಪಣಿ, ಪ್ರತಿಯೊಂದು ಕಾಗದ ಬರೆಯಬೇಕಾದರೆ ಎಷ್ಟು ಅಧ್ಯಯನ ನಡೆಸುತ್ತಾರೆ, ಬಲ್ಲವರೆ ಅದನ್ನು ಬಲ್ಲರು.

ಆದರೆ ಯಾರಿಗೆ ಗೊತ್ತಾಗಬೇಕು, "ಕಾಗದ, ಬರಿ ಕಾಗದ," ಕೇವಲ ಅಷ್ಟೆ.

ವರ್ಷಾಂತರಗಳ ಮೇಲೆ ಅರ್ಥ ಮಾಡಿಕೊಳ್ಳುವ ಒಬ್ಬ ಮನುಷ್ಯ ಸಿಕ್ಕಿದ್ದಾನೆ.

ವಸಂತ ಬಾಬುಗಳ ಮನಸ್ಸು ತನಗೆ ತಾನೆ ಮೆದುವಾಗಿತ್ತು. ವಿನಯ ಪೂರ್ವಕವಾಗಿ ನಗುತ್ತಾ ಹೇಳಿದರು, - "ಸಾಹೇಬರು ನಾನು ಏನು ಬರೆದರೂ ಪಾಸ್ ಮಾಡ್ತಾರೆ. ಅನೇಕ ವೇಳೆ ಆದರ ಮೇಲೆ ತಮ್ಮ ಶಾಬಾಸುಗಿರಿ ಬರೆದಿರುತ್ತಾರೆ, - ಚೆನ್ನಾಗಿದೆ, ಸೊಗಸಾಗಿದೆ, ವಂದನೆಗಳು ಅಂತ ನಿಮಗೂ ಒಂದಿಷ್ಟು ತೋರಿಸಲೆ ?"

"ನಿಜವಾಗಿಯೂ ಹಾಗೆ ಬರೆದಿದ್ದಾರಾ ? ನೀವು ಖಂಡಿತವಾಗಿಯೂ ಅದ್ಭುತ ವ್ಯಕ್ತಿಗಳು ಸ್ವಾಮಿ-"

ವಸಂತಬಾಬು ಹೇಳಿದರು - "ಈ ಸಾಹೇಬರು ಕೆಲಸ ಹೇಗೆ ಅಂತ ಗುರುತಿಸಬಲ್ಲರು."

ಬಲಿದತ್ತ ದಾಸ ಇದಕ್ಕೇ ಕಾಯುತ್ತಿದ್ದ, ಸಾಹೇಬರ ಬಗ್ಗೆ ಸ್ವಲ್ಪ ಹೊಗಳಿಕೆ ಮಾತುಗಳು ಬರಲಿ ಅಂತ ನೋಡುತ್ತಿದ್ದ. ಪ್ರತಿಯೊಬ್ಬ ಮೇಲ್ಮಟ್ಟದವರಲ್ಲೂ ಕೆಲವು ದೊಡ್ಡ ದೊಡ್ಡ ಗುಣಗಳನ್ನು ಹುಡುಕಿ ಕಂಡುಕೊಂಡು ಅವುಗಳನ್ನು ಹಾಡಿ ಹೊಗಳುತ್ತಿದ್ದರೆ ಉದ್ಯೋಗಿ ತುಂಬ ಚತುರನೆನಿಸಿಕೊಳ್ಳುತ್ತಾನೆ ಅಂತ ಅವನ ಭಾವನೆ. ಹಾಗೆ ಮಾಡಿದರೆ ಹತ್ತು ಮಂದಿಗೆ ಅವನು ಸಾಹೇಬರಿಗೆ ಹತ್ತಿರದ ಮನುಷ್ಯ ಅಂತ ಭಾವನೆ ಮೂಡುವುದು. ಮರ್ಯಾದೆ ಕೊಡುತ್ತಾರೆ, ಚಾಡಿಯ ಪೊಳ್ಳುಮಾತುಗಳಂತೂ ದೂರ, ಮೆಲ್ಲಮೆಲ್ಲಗೆ ಮೇಲಿನವರ ಕಿವಿಗೂ ಬೀಳಬಹುದು - ಮನಸ್ಸಿದ್ದರೆ ಅಂಥ ಅನೇಕ ಗುಣಗಳನ್ನು ತಡಕಾಡಿ ಹುಡುಕಿಕೊಳ್ಳಬಹುದು - ಸುಂದರವಾದ ಮುಖ, ಸೊಗಸಾದ ಉಡುಗೆ ತೊಡುಗೆಗಳು, ಓದು, ಓದಿಲ್ಲದಿದ್ದರೆ ಜಾಣತನ, ಹೀಗೆಯೆ ಅನೇಕ ವಿಚಾರಗಳು.

ಆದರೆ ಆಕಾರ ಪ್ರಕಾರಗಳಲ್ಲಿ ಒಂದು ಮರದ ಕಂಬದಂತೆ ಇರುವಾತ, ಮಾತಿನಲ್ಲಿ ಸಿಡಿಲ ಮರಿ. ಆತನ ಬಗ್ಗೆ ಹೊಗಳಿಕೆಯ ಮಾತಾದರೂ ಏನಿರುತ್ತೆ ?

"ಆ ಸಾಹೇಬ ಕೆಲಸ ಹೇಗಿದೆ ಅಂತ ಗುರುತಿಸಬಲ್ಲ" - ಸಿಟ್‌ಡೌನ್‌ನಿಂದ ಗೆಟ್ ಔಟ್ ಅನ್ನುವವರೆಗೆ, ಆ ಕೊಠಡಿಯಲ್ಲಿ ಎಲ್ಲ ಕಂಡುಬರುತ್ತದೆ. ಇಲ್ಲ, ಅವನು ತನ್ನನ್ನು ದೌರ್ಬಲ್ಯಕ್ಕೆ ಒಳಗಾಗಿಸಿಕೊಳ್ಳುವುದಿಲ್ಲ, ಒಮ್ಮೆ ತಪ್ಪು ಮಾಡಿದರೂ ಅಂಥವನಿಗೆ ಕ್ಷಮೆ ಇಲ್ಲ. ಮುಖದ ಮೇಲೆ ಅಪಾರ ಆನಂದ ತುಂಬಿಕೊಂಡವನಂತೆ ಗದ್ಗದ ಕಂಠದಿಂದ ಬಲಿದತ್ತ ಹೇಳಿದ-

"ಕೆಲಸ ಗುರುತಿಸಬಲ್ಲರಾ ? ಆಹಾ, ತುಂಬ ಅಪರೂಪದ ಗುಣ. ನಾನೂ ಹಾಗೆಯೇ ಅಂದುಕೊಂಡೆ. ಇವತ್ತು ಮೊದಲ ಬಾರಿಗೆ ಭೇಟಿಯಾದೆ. ಮುಂಚೆ ನೋಡಿಯೆ ಇರಲಿಲ್ಲ. ಆಹಾ, ಅದೆಷ್ಟು ಮರ್ಯಾದೆಯಿಂದ ನೋಡುತ್ತಾರೆ. ಇನ್ನೇನು ತಾನೆ ಹೇಳಲಿ," ಕೇವಲ ನಾಲ್ಕಾರು ಮಾತುಗಳಲ್ಲೇ ಹೇಳುತ್ತಾನೆ "ಆಹಾ ! ಬುದ್ಧಿವಂತರು, ಒಳ್ಳೆಯವರು, ನಮಗೆ ಇಂಥ ಸಾಹೇಬರೆ ಬೇಕು, ಗೊತ್ತಾಯ್ತಲ್ಲವೆ, ಕೆಲಸ ಹೇಗೆ ಅಂತ ಗುರುತಿಸಬಲ್ಲವರು-"

ವಸಂತ ಬಾಬು ಬಾಯಿ ತೆರೆದವರು ಹಾಗೆಯೆ ನಿಂತುಕೊಂಡರು. ಅವರು

ಕಕ್ಕಾಬಿಕ್ಕಿಯಾಗಿದ್ದಾರೆ. ಈ ಮನುಷ್ಯನಿಗೆ ಹುಚ್ಚು ಹಿಡಿದಿದೆಯೆ? ಮಿ. 'ಶ' ಮರ್ಯಾದೆ ಮಾಡಿದರೆ?

ಆದರೆ ಬಲಿದತ್ತನ ಬೊಗಳೆ ಹಾಗೆಯೆ ಮುಂದುವರೆದಿದೆ, "ನೀವೇ ಹೇಳಿ, ನಾನು ಹೊಸಬ, ಅನೇಕ ವಿಚಾರಗಳನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ತಡವಾಗುತ್ತದೆ. ಅವರು ಏನು ಹೇಳಿದರು ಗೊತ್ತಾ? "ನಿಮಗೇನಾದರೂ ಅನಾನುಕೂಲವಾದರೆ ನಮ್ಮ ಹೆಡ್‌ಗುಮಾಸ್ತರಾದ ವಸಂತ ಬಾಬುಗಳ ಹತ್ತಿರ ನೀದಾ ಹೋಗಿ. ಅವರೇ ಸರಿಯಾದ ಮನುಷ್ಯರು' ಅಂದರು. ಕೇವಲ ಕೆಲಸ ಚೆನ್ನಾಗಿ ಮಾಡೋದನ್ನ ಗುರುತಿಸ್ತಾರೆ ಅಂದುಕೊಂಡಿದ್ದೆ, ಅಷ್ಟೇ ಅಲ್ಲ ಅವರ ಅಭಿಪ್ರಾಯಗಳೂ ಚೆನ್ನಾಗಿವೆ, ತುಂಬಾ ಚೆನ್ನಾಗಿವೆ."

ಈ ಬಾರಿ ವಸಂತಬಾಬುಗಳ ಬಾಯಿ ಕಟ್ಟಿತು. ಇಲ್ಲಿಯವರೆಗೆ ಏಕೆ ಗೊತ್ತಾಗಲಿಲ್ಲ? ಬಲಿದತ್ತ ಅವರನ್ನು ಏನು ಅಂತ ತಿಳಿದುಕೊಂಡಿದ್ದಾನೆ? ಅಂಥ ಪೆದ್ದ ಶಿಖಾಮಣಿಯೆ ಅವರು? ಅವರಿಗೇನು ಮಾತಾಡುವುದಕ್ಕೆ ಬರೋದಿಲ್ಲವೆ?

ಅವರು ಸಹ ಸಾಹೇಬರನ್ನು ಹೊಗಳುವುದಕ್ಕೆ ಶುರು ಮಾಡಿದರು - "ತಮಗೇ ಗೊತ್ತಲ್ಲ ಸ್ವಾಮಿ, ಸಾವಿರಕ್ಕೊಬ್ಬರು ಇಂಥ ಸಾಹೇಬರು ಸಿಕ್ಕೋದು ತುಂಬ ಕಷ್ಟ. ಸ್ವಲ್ಪ ಬಾಯಿ ಒರಟು ಅಷ್ಟೆ. ಆದರೆ ಬಾಯಲ್ಲಿ ಸಿಹಿಯಾಗಿ ಮಾತಾಡಿ ಹೊಟ್ಟೆ ಮೇಲೆ ಹೊಡೆಯೋ ಜನ ಎಷ್ಟು ಮಂದಿ ಇಲ್ಲ. ಆದರೆ ನಮ್ಮ ಸಾಹೇಬರು ಕರುಣೆಯ ಸಾಕ್ಷಾತ್ ಅವತಾರದಂತಿದ್ದಾರೆ. ಹೊಟ್ಟೆ ಮೇಲೆ ಹೊಡೆಯೋರಲ್ಲ. ಅದೆಷ್ಟು ತಿಳಿದುಕೊಂಡಿದ್ದಾರೆ. ಎಷ್ಟು ದೃಢವಾಗಿದ್ದಾರೆ. ಅದ್ಭುತ, ಬಹಳ ಅದ್ಭುತ ವ್ಯಕ್ತಿ ಅವರು."

ಮಾತು ಹೀಗೆಯೆ ಸಾಗುತ್ತದೆ.

ಒಮ್ಮೆ ಬಲಿದತ್ತ ಮತ್ತೊಮ್ಮೆ ವಸಂತಬಾಬು, ಒಮ್ಮೊಮ್ಮೆ ಇಬ್ಬರೂ ಒಟ್ಟಿಗೆ - ಸಾಹೇಬರ ಗುಣಗಾನ ಮಾಡುತ್ತಿದ್ದಾರೆ. ತಮ್ಮನ್ನು ಕಳೆಪೆಯಾಗಿಸಿಕೊಂಡು ಸಾಹೇಬರನ್ನು ಶ್ರೇಷ್ಠರು, ಎಣೆಯಿಲ್ಲದವರು ಅಂತೆಲ್ಲ ಹೇಳಹೊರಟಿದ್ದಾರೆ. ಐದು ನಿಮಿಷದ ಮಾತುಕತೆ ಹತ್ತು ನಿಮಿಷಗಳವರೆಗೆ ಸಾಗಿತು. ಅವರು ಜ್ಞಾನಿಗಳು, ಬುದ್ಧಿವಂತರು, ದಯಾಪರರು, ಶಕ್ತಿಶಾಲಿಗಳು, ಅವರ ಮಕ್ಕಳು ಮೇಧಾವಿಗಳು, ಅವರ ಹೆಂಡತಿ ಗೃಹಲಕ್ಷ್ಮಿ, ಅವರ ನಾಯಿ ಅಂದರೆ ಶ್ವಾನ ಜಾತಿಯಲ್ಲೆಲ್ಲ ಶ್ರೇಷ್ಠವಾದುದು. ಅವರ ಹಸು ಅಂದರೆ ಕಾಮಧೇನು.

ಇಬ್ಬರೂ ಹೊಗಳುಭಟ್ಟರಂತೆ ಸಾಹೇಬರ ಪ್ರಶಸ್ತಿಯನ್ನು ಒಂದೇ ಮಟ್ಟಿನಲ್ಲಿ ಹಾಡುತ್ತಲೆ ಇದ್ದಾರೆ.

ಅಥವಾ ಎರಡು ನರಿಗಳು - ಪಕ್ಕಪಕ್ಕದಲ್ಲಿ ಬಾಯಿ ಕಿಸಿದು ಹಾಡುತ್ತಿರುವಂತಿದೆ.

ಈ ಪ್ರಶಸ್ತಿ, - ದೇವರಲ್ಲಿ ಹುಟ್ಟಿದ ನೆಲಕ್ಕೆ ಸಂಬಂಧಪಟ್ಟದಲ್ಲ, ಪ್ರಕೃತಿ ಕವಿ ಸೌಂದರ್ಯವನ್ನು ನೋಡಿ ಮನದುಂಬಿ ಹಾಡಿದ ಕಾವ್ಯವಲ್ಲ, ಬೆತ್ತಲೆ ಸನ್ಯಾಸಿಯ ಖಂಜರದ ಧ್ವನಿಯಲ್ಲ, ಇಂಥ ಯಾವುದೂ ಅಲ್ಲ - ಕೇವಲ ಮೇಲಿನವರ ಗುಣಗಾನ. ಇಬ್ಬರಲ್ಲೂ ಸ್ಪರ್ಧೆ ಮುಂದುವರೆದಿದೆ. ಯಾರು ಹೆಚ್ಚಿಗೆ ಪಾಯಿಂಟ್ ಹಿಡಿಯುತ್ತಾರೆ, ಯಾರು ಹೆಚ್ಚು ಗುಣಗಾನ ಮಾಡಬಲ್ಲರು.

ಹೀಗೇ ನಡೆಯುತ್ತಿದೆ.

ಐತಿಹಾಸಿಕವಾಗಿ, ಯುಗಯುಗಾಂತರಗಳಿಂದ ನಡೆಯುತ್ತಾ ಬಂದಿದೆ.

ಮಧ್ಯಾಹ್ನದ ಸಮಯ. ಬೇರೆಯವರ ಹೊಲದಲ್ಲಿ ಹಸುಗಳ ಹಿಂಡು ಮೇಯುತ್ತಿದೆ.

ರಸ್ತೆಯಲ್ಲಿ ದಾರಿಹೋಕರು, ಕೆಲಸಗಾರರು, ಬೇಸಾಯಗಾರರು ಹೋಗುತ್ತಿದ್ದಾರೆ.

ತಲೆಯ ಮೇಲೆ ಕಪ್ಪಾಗಿರುವ ದೊಡ್ಡ ಟೋಪಿ ಹಾಕಿಕೊಂಡು ವೇಷ ಹಾಕಿಕೊಂಡು ಡೋಲು ಹೊಡೆಯುತ್ತಾ ಕುಣಿಯುತ್ತಾ ಜೋಕರುಗಳು ಹೋಗುತ್ತಿದ್ದಾರೆ. ಎದುರಿಗೆ ಒಂದು ದೊಡ್ಡ ಬೋರ್ಡಿನ ಮೇಲೆ ಒಂದು ಜಾಹಿರಾತಿನ ಚಿತ್ರವಿದೆ.

ನಾಲ್ಕೂ ಕಡೆ ಹೊಟ್ಟೆಪಾಡಿಗಾಗಿ ಬವಣೆ ಎದ್ದುಕಾಣುತ್ತಿದೆ.

ಅಲ್ಲೆಲ್ಲ ಕೇವಲ ಭಯ ಮತ್ತು ಅನುಮಾನಗಳಿಂದ ಕೂಡಿದ ಕಲ್ಪನೆಗಳಿದ್ದರೂ, ಬೇರು ಸ್ವಾರ್ಥದ್ದೇ.

ಹೆಡ್ ಗುಮಾಸ್ತರ ಜೊತೆ ಮಾತುಕತೆ ಮುಗಿಸಿದ ಮೇಲೆ ಇಲ್ಲೊಬ್ಬ ಆತ್ಮೀಯ ಸಿಕ್ಕಿದ್ದಾನೆ. ಯಾವತ್ತಾದರೂ ಕೆಲಸಕ್ಕೆ ಬರುತ್ತಾನೆ ಅಂತ ಬಲಿದತ್ತ ಯೋಚಿಸಿದ.

ಅವನು ಹೊರಟುಹೋದ ಮೇಲೆ ಹೆಡ್ ಗುಮಾಸ್ತರು ಮುಗುಳ್ನಗೆ ನಕ್ಕರು. ಅವರ ವಂದಿಮಾಗಧರಲ್ಲೊಬ್ಬರಾದ ದೀನಬಾಬುಗಳು ಹಲ್ಲು ಕಿಸಿದು ಕೇಳಿದರು, "ಏನ್ಸಾರ್, ಏನು ಸಮಾಚಾರ ?"

"ನಿಧಾನವಾಗಿ ಅರ್ಥವಾಗುತ್ತೆ," ವಸಂತಬಾಬು ಹೇಳಿದರು, "ಇವನನ್ನು ಸರಿಯಾಗಿ ಗುರುತಿಟ್ಟುಕೊ. ಬಹಳ ದೂರ ಹೋಗ್ತಾನೆ ನೋಡು, ತುಂಬ ದೂರ ಹಾರೋ ಹವಣಿಕೆಯಲ್ಲಿದ್ದಾನೆ. "ಇಷ್ಟೇ ಅಲ್ಲದೆ ಬೇರೆ ದೊಡ್ಡ ದೊಡ್ಡ ಉದ್ಯೋಗಿಗಳು. ಯಾರಾದರೂ ಒಬ್ಬರು ಹೊಸದಾಗಿ ಪರಿಚಯವಾದರೆ, ಶಿಷ್ಟಾಚಾರಕ್ಕಾಗಿ ಒಮ್ಮೆ ನೋಡಿದರೆ ಸಾಕು. ಬಲಿದತ್ತ ಮನೆಯ ಕಡೆ ಹೆಜ್ಜೆ ಹಾಕಿದ್ದಾನೆ. ಮನಸ್ಸಿನ ಸೆಳೆದಾಟಗಳ ನಡುವೆಯೆ ಸಮತೋಲನ ತಂದುಕೊಂಡಾಗ ತುಂಬಾ ಖುಷಿಯಾಗುತ್ತದೆ. ಹೊಟ್ಟೆಕಿಚ್ಚು ಬರುತ್ತದೆ, ತಾನು ಮುಂಚೆಯೆ ಏಕೆ ಬರಲಿಲ್ಲ.

ಹಳೆಯ ಆಲದ ಮರದ ನೆರಳಿನಲ್ಲಿ ಕಂಪೆನಿಯ ದೊಡ್ಡ ಕಚೇರಿಯಿದೆ. ಕೆಲಸದ ಭರಾಟೆ ಸಾಗಿರುತ್ತದೆ. ಸಾಲುಸಾಲು ಕಟ್ಟಡಗಳು - ದೊಡ್ಡ ದೊಡ್ಡ ಕೊಠಡಿಗಳು, ಬೇಕಾದಷ್ಟು ಜನ. ಅಲ್ಲಿ ಬರೀ ಬಿಜಿನೆಸ್ - ಗಿಜಿಗಿಜಿ ಅಂತಿರುತ್ತದೆ. ದೊಡ್ಡ ದೊಡ್ಡ ಚಿಮನಿಗಳು, ಅದರಿಂದ ಹೊಗೆಯೇಳುತ್ತಿರುತ್ತದೆ, - ಭಾರಿಭಾರಿಯಾದ ಯಂತ್ರೋಪಕರಣಗಳು, ನಿಜವಾಗಿಯೂ ಯಾವುದೋ ದೈತ್ಯ ಸೃಷ್ಟಿಯಂತಿದೆ. ಕಚ್ಚಾ ವಸ್ತುಗಳನ್ನು ರೆಡಿ ಮಾಡುವ ಸಾವಿರಾರು ಮಂದಿ ಕೂಲಿಗಾರರು - ಯಂತ್ರೋಪಕರಣಗಳನ್ನು ನಡೆಸುವವರು - ಅವರೆಲ್ಲ ಈ ಕಚೇರಿ ಪ್ರದೇಶದಿಂದ ತುಂಬ ದೂರ ಇದ್ದಾರೆ. ಇಲ್ಲಿರುವುದು ಕೇವಲ ಕರ್ತೃತ್ವದ ಯಂತ್ರೋಪಕರಣಗಳು - ಕಚೇರಿ, ಕಾಗದ ಪತ್ರಗಳ ಓಡಾಟ, ಬುದ್ಧಿಯ ಕೆಲಸ ತೀರ್ಮಾನಗಳು, ಯೋಜನೆಗಳು, ಅನೇಕ ಸ್ಥಳಗಳಲ್ಲಿ ಇದೇ ರೀತಿಯ ಕಚೇರಿಗಳು ಈ ಸಹಸ್ರಪಾದಿ ಕಂಪೆನಿಯ ಹೃದಯದಂತಿದೆ.

ಮನುಷ್ಯ ಇಲ್ಲಿ ಹೊಟ್ಟೆಪಾಡಿನ ವಿಚಾರ ನೋಡುತ್ತಾನೆ. ಹೊಟ್ಟೆಪಾಡಿಗಾಗಿ ಸಂಪಾದನೆ ಮಾಡುತ್ತಾನೆ, ಇನ್ನೊಬ್ಬರ ಹೊಟ್ಟೆ ಮೇಲೆ ಹೊಡೆಯುತ್ತಾನೆ, ಬೇರೆಯವರ ಹೊಟ್ಟೆಗೆ ಹಾಕುತ್ತಾನೆ. ಬೆಲೆಗಳು ತಾವಾಗಿಯೇ ಏರುತ್ತವೆ, ಇಳಿಯುತ್ತವೆ, ಏರಿದ ಬೆಲೆಗಳಿಂದ ಬೇರೊಬ್ಬರ ಆಹಾರ ಕಿತ್ತುಕೊಂಡ ಹಾಗಾಗುತ್ತದೆ - ಮನೆಯಲ್ಲಿ ಅದೇ ಅನ್ನದ ತಟ್ಟೆ ಸಿದ್ಧವಾಗಿಟ್ಟಿದೆ, ಅದೇ ರೀತಿಯಲ್ಲೊಂದು ಲೋಟ, ಒಂದು ಮಣೆ, ಹಾಗಾಗಿ ಬೆಲೆಗಳು ಏರಿದಾಗ ಅನ್ನದ ತಪ್ಪಲೆ ಮುಂದ ಬರುವುದು ನಿಂತುಹೋಗುತ್ತದೆ. ಅನ್ನದ ತಟ್ಟೆಯಿಂದ ಅನ್ನ ಕಣ್ಮರೆಯಾಗುವುದನ್ನು ಮನೆಯಾತ ಯಾರು ತೆಗೆದುಕೊಂಡರು, ಹೇಗೆ ತೆಗೆದುಕೊಂಡರು ಅಂತ ಕಣ್ಣರಳಿಸಿ ನೋಡುತ್ತಲೆ ಇರುತ್ತಾನೆ. ಅವನ ಹೆಸರು ಏನೇ ಇರಲಿ, - ತಿನ್ನುವ ಬಾಯಿಗಳು ಎಷ್ಟೇ ಇರಲಿ, ಅವಕ್ಕೆಲ್ಲ ಬೆಲೆ ಏರಿಹೋಗಿದೆ ಎಂಬುದಷ್ಟೆ ಗೊತ್ತು. ಮೈಮುರಿದು ದುಡಿಯುವುದರಲ್ಲೇನೂ ಕಡಮೆಯಾಗುವಂತಿಲ್ಲ, ಅಷ್ಟೇ ಕೆಲಸ ಮಾಡಬೇಕು, ಆದರೆ ಅಷ್ಟೇ ಬೆವರು ಸುರಿಸುವುದರಿಂದ ಎಂಟು ಸೇರು ಅಕ್ಕಿ ಬರುತ್ತಿದ್ದ ಕಡೆ ಇವತ್ತು ಒಂದೂವರೆ ಸೇರಷ್ಟೆ ಬರುವುದು. ತಲೆ ಬಗ್ಗಿಸಿ ಕೈಜೋಡಿಸಿ ಅವನು ದೇವರನ್ನು ನೆನೆಸಿಕೊಳ್ಳುತ್ತಾನೆ, ಮತ್ತೆ ಮತ್ತೆ ದೇವರಲ್ಲಿ ಮೊರೆಯಿಡುತ್ತಾನೆ. ಯಾವಾಗಪ್ಪಾ ಈ ಕಷ್ಟ ಕಳೆಯೋದು ಅಂತ.

ಅದೇ ಅರ್ಥ ನೀತಿಯ ಕತ್ತಲೆ ತುಂಬಿದ ಕೊರತೆಯ ಸ್ವಲ್ಪ ಭಾಗ ಈ ಕಚೇರಿಯಲ್ಲಿ ಬೇರುಬಿಟ್ಟಿದೆ - ಇನ್ನಷ್ಟು ಬೇರೆಲ್ಲೊ.

ಮೂಲದ ಪರಿಕರಗಳು ಒಂದೇ.

ಯುದ್ಧೋತ್ಸಾಹದಲ್ಲಿರುವ ಕಳಿಂಗಕ್ಕೆ ಯುದ್ಧದ ವೇಷ ಹಾಕಿದೆ. ಸಾಮ್ರಾಜ್ಯವಾದಿ ಜಾತೀಯವಾದಿ ಜನತೆ ಹೋರಾಟಕ್ಕೆ ಸಿದ್ಧವಾಗುತ್ತಿದೆ. ಆಮೇಲೆ ಅಹಿಂಸಾಧರ್ಮಕ್ಕೆ ಬದ್ಧವಾದ ಜಾತಿ, ಅಶೋಕನ ಶಿಲಾಶಾಸನ, ಚೈತನ್ಯದ ಕೀರ್ತನೆಗಳು.

ಆಲದ ಮರ ಬೆಳೆಯುತ್ತಾ ಹೋಗುತ್ತಿದೆ.

ಅವನು ಇವತ್ತು ಕಂಪೆನಿಯ ಕಚೇರಿಯನ್ನು ನೋಡುತ್ತಿದ್ದಾನೆ, ನೌಕರಿಗಾಗಿ ಬದುಕು, ಹೊಟ್ಟೆಪಾಡಿಗಾಗಿ ಸಮಾಜದ ಒಂದು ಸೋಗು. ಸೇರು ಬಟ್ಟು ತಕ್ಕಡಿಗಳಿಂದ ಬದುಕಿನ ಅರ್ಥದ ಅಳತೆ. ಆಲದ ಮರ ಬಲಿದತ್ತನ ಕಡೆ ನೋಡುತ್ತಿದೆ. ಆಕಾರದಲ್ಲಿ ಅವನು ಕುಳ್ಳ. ನಾಲ್ಕು ಅಡಿ ಒಂಬತ್ತು ಅಂಗುಲ. ಅವನಿಗೆ ಧರ್ಮ, ಅರ್ಥ, ಕಾಮ, ಮೋಕ್ಷ ಯಾವುದೂ ಬೇಡ. ನಿವಾರಣ ಅವನಿಗೆ ಬೇಡಿ. ಅವನೇನು ಸಮಾಧಿ ಯೋಗವನ್ನಾಗಲಿ, ಪರಲೋಕವನ್ನಾಗಲಿ ಬಯಸುತ್ತಿಲ್ಲ.

ಬಲಿದತ್ತ ದಾಸನಿಗೆ ಬೇಕಾದುದು ಬರೀ ಪ್ರಮೋಷನ್ನು, ಹಣಬೇಕು, ಕೀರ್ತಿಬೇಕು, ಇವತ್ತು ಚಾಲ್ತಿಯಲ್ಲಿರುವಂತೆ ಮೇಲಿನವರಿಂದ ಮತ್ತು ಕೆಳಗಿನವರಿಂದ ಮನ್ನಣೆ ಬೇಕು. ಈ ಉದ್ದೇಶಕ್ಕಾಗಿ ಎಲ್ಲಿಯವರೆಗೆ ಬದುಕು ಸಹಾಯಕ ವೆನಿಸುವುದೊ, ಅಲ್ಲಿಯವರೆಗೆ ಮಾತ್ರ ಬದುಕು ಅವನಿಗೆ ಸಾಕು, ಅದೇ ಅವನ ಬದುಕಾಗುತ್ತದೆ, ಸುಂದರವಾದ ಬದುಕೆನಿಸುತ್ತದೆ.

ಆಸೆ - ಅವನ ಆಸೆ ಎಂಥದು. ತನ್ನ ದರ್ಜೆಯ ಸಹೋದ್ಯೋಗಿಗಳನ್ನು ಹುಡುಕಿ ಕೊಂಡು ಅವನು ಹಳೆಯ ಆಲದ ಮರದ ಕೆಳಗೆ ಹೊರಟಿದ್ದಾನೆ. ಆಗ ಅವನಿಗೆ

ಸರೋಜಿನಿಯ ನೆನಪಿಲ್ಲ. ಮನೆಮಠಗಳ ಬಗ್ಗೆ ಮನಸ್ಸಿನಲ್ಲಿ ಯಾವ ಭಾವನೆಯೂ ಇಲ್ಲ. ಈ ಜನಸಮುದ್ರ ಒಂದು ಕತ್ತಲೆಯ ಕಾಡಿದ್ದಂತೆ. ಅದರಲ್ಲಿ ಅವನು ತನ್ನ ಮಟ್ಟಿಗೆ ತಾನು ಒಂದು ಮಿಣಮಿಣ ಅನ್ನುತ್ತಿರುವ ಮಿಂಚು ಹುಳುವಿನಂತೆ ಮೇಲಕ್ಕೆ ಹಾರುತ್ತಿರುವಂತೆ ಕಾಣುತ್ತಾನೆ.

ಎದುರಿಗೆ ಸಾಲಾಗಿ ಕನ್ನಡಿಗಳನ್ನು ಜೋಡಿಸಿದ್ದಾರೆ. ಕೆಲವು ತುಂಬ ಹತ್ತಿರದಲ್ಲಿವೆ, ಕೆಲವು ತುಂಬ ದೂರದಲ್ಲಿವೆ. ದೂರ ಅನ್ನುವುದು ವಯಸ್ಸಿನ ಆಳತೆಯಿದ್ದಂತೆ. ಆದರೆ ಬೆಳವಣಿಗೆಯ ಮೇಲೆ ಕೇವಲ ಕಾಲದ ಅಧಿಕಾರ ಮಾತ್ರ ಇರುವುದಿಲ್ಲ. ಮನಸ್ಸಿನ ಬೆಳವಣಿಗೆಯೂ ಇರುತ್ತದೆ. ಬೆಳವಣಿಗೆಯ ಜೊತೆಯಲ್ಲೇ ಬದಲಾವಣೆಯೂ ಆಗುತ್ತದೆ. ಬೇರೆ ಬೇರೆ ದೂರಗಳಿಂದ ಮನಸ್ಸಿನ ಬದಲಾವಣೆಯನ್ನು ತೋರಿಸುವುದಕ್ಕಾಗಿ ಕನ್ನಡಿಗಳನ್ನು ಒಂದೇ ಸಮನಾಗಿ ಮಾಡಿಲ್ಲ. ಹಾಗಾಗಿ ಪ್ರತಿಬಿಂಬದಲ್ಲೂ ಏರುಪೇರು ಕಂಡುಬರುತ್ತದೆ. ಕಂಪೆನಿಯ ಕಚೇರಿಯಲ್ಲಿ ಸಮಾನ ದರ್ಜೆಯ ಉದ್ಯೋಗಿಗಳು ಕನ್ನಡಿಗಳಂತಿರುವರಲ್ಲದೆ ಬೇರೆ ಬೇರೆ ಚಿತ್ರಗಳೂ ಇವೆ. ಬಲಿದತ್ತ ಒಂದಾದ ಮೇಲೊಂದು ನೋಡಿದ. ಎಲ್ಲ ತನ್ನ ಚಿತ್ರಗಳೇ. ಅವೆಲ್ಲವೂ ಅವನ ಭವಿಷ್ಯದ ಚಿತ್ರಗಳು, ಅವನದೇ ಬೇರೆ ಬೇರೆ ಸ್ಥಿತಿಗಳು. ಚಿಕ್ಕಂದಿನಲ್ಲಿ ಒಮ್ಮೆ ಆರುಕಾಸಿನ ಟಿಕೇಟುಕೊಂಡು ಮ್ಯಾಜಿಕ್ ನೋಡಲು ಹೋದದ್ದು ನೆನಪಿಗೆ ಬರುತ್ತದೆ. ಬೊಂಬಿನ ತಡಿಕೆ ಕಟ್ಟಿ ಮ್ಯಾಜಿಕ್ ತೋರಿಸಲು ಜಾಗ ಮಾಡಿದ್ದರು. ಅದರೊಳಗೆ ಸಣ್ಣದೊಂದು ಮ್ಯಾಜಿಕ್ ಕೋಣೆ. ಎಲ್ಲಿ ನೋಡಿದರೂ ತನ್ನದೇ ಚಿತ್ರ. ಆದರೆ ಅವೆಲ್ಲ ತನ್ನವೇ? ಒಂದು ಅದ್ಭುತ ವಿಧಾನದಿಂದ ತನ್ನ ಬೇರೆ ಬೇರೆ ಅಂಗಾಂಗಗಳನ್ನು ಚಿಕ್ಕದು ದೊಡ್ಡದು ಮಾಡಿ ತೋರಿಸಿದಂತಿದೆ. ತನ್ನ ಮೈಯಿನ ಬೆಳಕು ಕನ್ನಡಿಯಲ್ಲಿ ಪ್ರತಿಬಿಂಬಗೊಂಡು ಮತ್ತೆ ತನ್ನ ಕಡೆಗೇ ಹಿಂದಿರುಗಿಬರುತ್ತದೆ. ತನ್ನ ರೂಪವನ್ನು ಬಗೆಬಗೆಯಾಗಿ ವಿಕಾರಗೊಳಿಸಿ ತೋರಿಸುತ್ತದೆ. ಕುತೂಹಲದಿಂದ ಅವನೂ ಒಳನುಗ್ಗಿದ. ನೋಡಿದಾಗ ಭಯ ಹುಟ್ಟಿತ್ತು. ವಾಪಸ್ಸು ಬಂದಾಗ ಮುಖ ಗಾಬರಿಯಿಂದ ಕೂಡಿತ್ತು.

ಇವತ್ತು ಮನಸ್ಸನ್ನು ಆಳಕ್ಕೆ ನೂಕಿ ಅದೇ ಮರೆತ ನೆನಪು ಮತ್ತೆ ಅಡರುತ್ತದೆ. ಪರಿಸ್ಥಿತಿ ಸ್ವಲ್ಪ ಬೇರೆಯಾದರೂ ಈ ಮನೆಗಳಲ್ಲೆಲ್ಲ ಕಂಪೆನಿಯ ಅಧಿಕಾರಿಗಳಿದ್ದಾರೆ, ಕೆಲವರು ಒಂದೆರಡು ವರ್ಷಗಳಿಂದಿದ್ದರೆ ಕೆಲವರು ಹತ್ತಿಪ್ಪತ್ತು ವರ್ಷಗಳಿಂದ. ಹೊಸದಾಗಿ ಬಂದು ಸೇರಿದ ಕಾರಣದಿಂದಾಗಿ ಅವನು ಅವುಗಳಲ್ಲಿ ತನ್ನನ್ನೇ ಕಾಣುತ್ತಾ ಕೂಡಲಾಗುತ್ತಿಲ್ಲ. ಬಲಿದತ್ತನಿಗೆ ಒಂದು ರೀತಿಯಲ್ಲಿ ಲಯತಪ್ಪಿದ ಅನುಭವ ವಾಗುತ್ತಿದೆ. ಅವನು ಕಳವಳಗೊಳ್ಳುತ್ತಾನೆ.

ಆಮೇಲೆ ಚೆನ್ನಾಗಿ ಹಿಂದೆ ಮುಂದೆ ಯೋಚನೆ ಮಾಡಿದಾಗ ಆತ್ಮವಿಶ್ವಾಸ ಹಿಂದಿರುಗಿ ಬರುತ್ತದೆ. ಯಾವುದರಲ್ಲೋ ಸ್ವಲ್ಪ ಭಾಗವನ್ನು ಅವನು ಕತ್ತರಿಸಿ ಹಾಕುತ್ತಾನೆ. ಇನ್ನಾವುದನ್ನೊ ತೆಗೆದು ಬೇರೆಡೆ ಇಡುತ್ತಾನೆ. ಇದೇ ನೋಡಿ ಎಷ್ಟು ಬಗೆಬಗೆಯ ಸೆಳೆತಗಳು, ವಿನ್ಯಾಸಗಳು - ಇವೆಲ್ಲ ಅವನಿಗೂ ಭವಿಷ್ಯದಲ್ಲಿ ಸಿಗುತ್ತವೆ.

ಆದರೆ ಅವನಿಗೆ ಇವಲ್ಲ ಇಷ್ಟವಿಲ್ಲ. ಬೇರೆ ಬೇರೆ ರೂಪಗಳ ಪೈಕಿ ಕೆಲವನ್ನು ಮಾತ್ರ ಆದರ್ಶವೆಂದು ಅವನು ಒಪ್ಪಿಕೊಳ್ಳಬಲ್ಲ. ಕೆಲವದರಿಂದ ಕೆಲವು ಗುಣಗಳನ್ನು ತೆಗೆದುಕೊಂಡರೆ ಸಾಕು. ಹಾಗೆಯೆ ಅದೆಷ್ಟು ಜನ - ಅದೃಷ್ಟ ಕೂಡಿಬಂದು ಆಫೀಸರುಗಳಾಗಿ ಹೋದರು. ಅವರನ್ನೆಲ್ಲ ಅವನು ತನ್ನ ಲೆಕ್ಕಾಚಾರದ ಪುಸ್ತಕದಲ್ಲಿ ಲೆಕ್ಕಕ್ಕೆ ಸೇರಿಸುವುದಿಲ್ಲ. ಯಾರು ಏನೇ ಆಗಿರಲಿ, ಎಷ್ಟೇ ಮೇಲಿರಲಿ - ಬಲಿದತ್ತ ಯೋಚಿಸುತ್ತಾನೆ - ಪೆದ್ದುತನ ಅನ್ನೋದು ಎಲ್ಲರಲ್ಲೂ ಇದೆ. ಬದುಕಿನ ಪ್ರತಿಯೊಂದು ಹಂತದಲ್ಲೂ ಇನ್ನೂ ಮೇಲೇರುವ ಅನುಕೂಲತೆಗಳಿರುತ್ತದೆ - ಅನುಕೂಲಗಳಿದ್ದರೂ ಅನೇಕ ಮಂದಿ ಹಾಗೆಯೆ ಉಳಿದುಬಿಡುತ್ತಾರೆ, ತಮ್ಮ ಪೆದ್ದುತನದಿಂದಾಗಿ ಮೇಲೇಳುವ ಬದಲು ಇನ್ನೂ ಕೆಳಗೆ ಕುಸಿಯುತ್ತಿರುತ್ತಾರೆ.

ಯಶಸ್ಸುಗಳಿಸುವ ಅವನ ಯೋಜನೆಯಲ್ಲಿ ಅವರು ಮಹಡಿ ಹತ್ತುವ ಮೆಟ್ಟಲುಗಳಂತಿದ್ದಾರೆ. ಅವರನ್ನು ಕಾಲ ಕೆಳಗೆ ಹಾಕಿ ತುಳಿಯುತ್ತಾ ಅವನು ಮೇಲೇರುತ್ತಾ ಹೋಗುವನು. ಹಿಂದಿರುಗಿ ನೋಡುವುದಿಲ್ಲ.

ಆದರೆ ತಲೆ ಮೇಲೆ ಕಾಲಿಡುವ ಮೊದಲು ಭುಜದ ಮೇಲೆ ಕೈಯಿಡುವುದು ತುಂಬ ಅಗತ್ಯ. ಹಾಗಾಗಿ ಮನಸ್ಸಿನಲ್ಲಿ ಆಸೆ ಮಹತ್ವಾಕಾಂಕ್ಷೆ ಪುಟಿಯುತ್ತಿದ್ದರೂ ಬಾಯಲ್ಲಿ ಅವನು ತುಂಬ ಸಾಧಾರಣ ಮನುಷ್ಯ. ಕೇವಲ ನುಡಿಯಲ್ಲಿ ಮಾತ್ರವಲ್ಲ, ನಡೆಯಲ್ಲೂ ವಶೀಕರಣ ತುಂಬ ಅಗತ್ಯ. ಎಲ್ಲೆಡೆಯಲ್ಲೂ ಅವನು ಶಿಷ್ಯತ್ವವನ್ನೇ ವಹಿಸುತ್ತಾನೆ. ಮಾರ್ಜಾರ ಜರದ್ಗವನಿಗೆ ಶಿಷ್ಯನಾಗಿತ್ತು ತಾನೆ. ಹಳೆಯ ಆಲದ ಮರದ ಬುಡದಲ್ಲಿ ಈ ಕೋಣೆಯಿಂದ ಆ ಕೋಣೆಗೆ ಓಡಾಡಬೇಕಾದರೆ ಅವನಿಗೆ ಹಿತೋಪದೇಶದಲ್ಲಿ ಬರುವ ಬುರ್ಲಳ್ಳಿ ಮರ ನೆನಪಿಗೆ ಬರುತ್ತದೆ. ಆ ಕಥೆ ಕಣ್ಣಮುಂದೆ ಮೂಡುತ್ತದೆ. ನಡೆನುಡಿಗಳನ್ನು ಅವಲಂಬಿಸಿ ಏಳಿಗೆ ಪಡೆಯುವ ಸೂತ್ರ ಕೇವಲ ಇಂಗ್ಲಿಷ್ ಪುಸ್ತಕಗಳ ಏಕಮಾತ್ರ ಸೊತ್ತಲ್ಲ. ಬಲಿದತ್ತ ಯೋಚಿಸುತ್ತಿದ್ದ - ಅದೂ ಸುಲಭಗ್ರಾಹ್ಯವಾದ ಚಾಣಕ್ಯ ನೀತಿಯಲ್ಲಿ, ಹಿತೋಪದೇಶದ ಕಥೆಯಲ್ಲಿ, ಹಳೆಯ ಗಾದೆಮಾತುಗಳಲ್ಲಿ ಯುಗಯುಗಗಳಿಂದ ಮಾನವ ಕುಲದ ಆಳವಾದ ಅನುಭವ ಕಂಡುಬರುತ್ತದೆ - ಯಶಸ್ಸನ್ನು ಪಡೆಯುವವರಿಗೆ ಅಮೋಘವಾದ ನೀತಿಯೆಂದರೆ ಇದೇ. ಪ್ರಪಂಚದಲ್ಲಿ ಇಷ್ಟೊಂದು ಜನರಿದ್ದಾರೆ. ಆದರೂ ಕೆಲವರು ಕಟ್ಟಿಗೆಗಳಾದರೆ ಮತ್ತೆ ಕೆಲವರು ಬೆಂಕಿಯಾಗುತ್ತಾರೆ. ಕೆಲವರು ಪದ್ದುಗಳಾದರೆ ಇನ್ನೂ ಕೆಲವರು ಪೊನಫ್ಯಾ (ಬಫೆರೆ) ಆಗುತ್ತಾರೆ. ಕೆಲವರು ಸತ್ತು ಸುಣ್ಣವಾಗಿ ದುಡಿದು ಎರಡು ಕಾಸು ಸಂಪಾದಿಸಿದರೆ ಮತ್ತೆ ಕೆಲವರು ಆರಾಮವಾಗಿ ಕೂತು ಕುಡಿದ ನೀರು ಅಳ್ಳಾಡದ ಹಾಗೆ ತಿಂದು ತೇಗುತ್ತಿರುತ್ತಾರೆ. ಅವರು ತಮ್ಮ ತೋಳ್ಬಲದ ಬಗ್ಗೆ ಬೊಕಳೆ ಹೊಡೆಯುವುದಿಲ್ಲ. ಏದುಸಿರು ಬಿಡುವುದಿಲ್ಲ. ಅವರೇನೂ ಬುದ್ಧಿ ಜೀವಿಗಳು. ಆದರೆ ಅವರಲ್ಲಿ ಅನೇಕರಿಗೆ ನೀತಿಯ ಬಗೆಗೆ ತಿಳಿವಳಿಕೆಯಿಲ್ಲ. ಕಾರಣವನ್ನು ಸರಿಯಾಗಿ ತಿಳಿದುಕೊಳ್ಳದೇ ಏನಾದರೂ ಮಾಡಿಬಿಡುತ್ತಾರೆ. ಹಾಗಾಗಿ ಎಷ್ಟು ಲಾಭ ದೊರೆತರೂ ನೀರಿಗೆ ಬಿಟ್ಟಂತಾಗುತ್ತದೆ. ಅವರ ಬುದ್ಧಿ ಕೇವಲ ಅನಿಶ್ಚಿತವಾದ ಅದೃಷ್ಟದ ತೆಕ್ಕೆಗೆ ಬಿದ್ದಿರುತ್ತದೆ. ಆದರೆ ಅವನು ಹಾಗಲ್ಲ, ಅವರು ಯೋಚಿಸುವುದಿಲ್ಲವಾದರೆ ಅವನು ಯೋಚನೆ ಮಾಡುತ್ತಾನೆ.

ಲಕ್ಷಾಂತರ ಮಂದಿ ಬೇರೆಯವರಲ್ಲಿ ಇಲ್ಲದ ಪ್ರತಿಭೆಯನ್ನು ಅವನು ತನ್ನಲ್ಲಿ ಕಂಡುಕೊಳ್ಳುತ್ತಾನೆ. ಅವನು ತನ್ನನ್ನು ತಾನು ಅರ್ಥಮಾಡಿಕೊಳ್ಳಬಲ್ಲ.

ಅವನಲ್ಲಿ ಇಬ್ಬಂದಿ ಮನಸ್ಸಿಲ್ಲ. ಇಬ್ಬಂದಿಗೆ ಸಿಕ್ಕಿದರೆ ಎರಡು ರೆಕ್ಕೆಗಳು ಎರಡು ಕಡೆ ಹಾರಿಸಿಕೊಂಡು ಹೋದಂತಾಗಿ ಒಟ್ಟಿನಲ್ಲಿ ಕೈಗೆ ಏನೂ ದಕ್ಕುವುದಿಲ್ಲ. ಉದ್ದೇಶದ ಕಡೆ ನಿಗಾ ಇಟ್ಟುಕೊಂಡು ಕೆಲಸ ಮಾಡಬೇಕಾದರೆ, ಯಾವ ರೀತಿಯಲ್ಲಿ ಕೆಲಸ ಮಾಡುತ್ತೇವೆಯೊ ಅದರ ಒಳಿತು ಕೆಡಕುಗಳನ್ನು ಮರೆಯಬೇಕಾಗುತ್ತದೆ ಅಂತ ಅವನು ಯೋಚಿಸುತ್ತಾನೆ. ರೀತಿ! ಅವನಿಗೆ ನಗುಬರುತ್ತದೆ. ಮಾಂಸ ತಿನ್ನುವ ಪ್ರಾಣಿ ಕೊಲ್ಲಲು ಹಿಂಜರಿಯುತ್ತದೆಯೆ? ಜನಕ್ಕೆ ಒಳ್ಳೆಯಊಟ, ಒಳ್ಳೆಯ ಬಟ್ಟೆ, ಬೆಲೆಬಾಳುವ ಕಾರು, ಜಮೀನು, ಆಸ್ತಿಪಾಸ್ತಿ ಎಲ್ಲ ಬೇಕು, ಆದರೆ ಅವುಗಳನ್ನು ಪಡೆಯಲು ದಾರಿಕಾಣದೆ ಹಿಂದೇಟು ಹಾಕುತ್ತಾರೆ. ಬೇರೆಯವರನ್ನು ನೋಡಿ ಅಯ್ಯೋ, ನಮಗೆ ಅದು ಇಲ್ಲವಲ್ಲ ಅಂತ ಕರುಬುತ್ತಾ ಕೊರಗುತ್ತಾ ದಿನ ದೂಡುತ್ತಾರೆ. ಇದೇ ರೀತಿಯಲ್ಲಿ ಅಯ್ಯೋ ಅಂತ ಕೊರಗುವ ಗುಂಪುಗಳು ಒಮ್ಮೊಮ್ಮೆ ಒಂದೆಡೆ ಸೇರಿ ಪ್ರಪಂಚದ ನಡೆಯನ್ನು ಬದಲಾಯಿಸುವ ಪ್ರತಿಜ್ಞೆ ಮಾಡುತ್ತವೆ. ಅಂಥವರ ಬಗ್ಗೆ ಅವನಿಗೆ ಸಹಾನುಭೂತಿ ಇಲ್ಲ. ಹೊಟ್ಟೆ ಹಸಿವಾಗುತ್ತಿದ್ದರೂ ಮುಖದಲ್ಲಿ ನಾಚಿಕೆಯನ್ನು ತೋರಿಸುವವರನ್ನು ಕಂಡರೆ ಅವನಿಗಾಗದು. ಮನುಷ್ಯನಿಗೆ ಎಂದಾದರು ತನ್ನ ಬಯಕೆಗಳೇನು, ತನ್ನ ಉದ್ದೇಶವೇನು ಎನ್ನುವುದು ಅರ್ಥವಾಗುತ್ತದೆ. ಎಷ್ಟು ಬೇಗ ಅರ್ಥ ಮಾಡಿಕೊಂಡು ತನ್ನ ದಾರಿ ಸರಿ ಮಾಡಿಕೊಳ್ಳುತ್ತಾನೋ ಅಷ್ಟು ಬೇಗ ಒಳ್ಳೆಯದು. ಉದ್ದೇಶವನ್ನು ಈಡೇರಿಸಿಕೊಳ್ಳುವುದಕ್ಕೆ ಯಾವ ದಾರಿ ತುಂಬ ಬೇಗ ಫಲ ಕೊಡುತ್ತದೊ, ಅದೇ ಎಲ್ಲಕ್ಕಿಂತ ಒಳ್ಳೆಯದು. ಅದರಲ್ಲಿರುವ ಒಳಿತುಕೆಡಕುಗಳನ್ನು ನೋಡಿ, ಅಯ್ಯೋ, ಅಂತ ತೊಳಲಾಡಿ ಹುಡುಕಾಡುತ್ತಾ ಇದ್ದರೆ, ಅದರ ಮೇಲೆ ಪುಸ್ತಕ ಬರೆದರೆ ಏನು ಸಿಗುತ್ತೆ ಮಣ್ಣು. ಅವನು ಬಲಿದತ್ತ ದಾಸ್, ಹುಟ್ಟಿರುವುದೇ ಭೋಗಪಡುವುದಕ್ಕಾಗಿ, ಕೆಲಸಕ್ಕೆ ಸೇರಿರುವುದು ಸಂಪಾದಿಸುವುದಕ್ಕಾಗಿ ಯಾರು ಏನು ಬೇಕಾದರೂ ತಿಳಿದುಕೊಳ್ಳಲಿ-

ಸ್ವಲ್ಪ ಎಚ್ಚರಿಕೆಯಿಂದ ಗಮನಿಸಿದರೆ ಮೇಲ್ಮಟ್ಟದ ಅಧಿಕಾರಿಗಳಲ್ಲೂ ಇದೇ ಕತೆ. ಯಾವ ಹಾದಿ ಹಿಡಿಯಬೇಕೆಂದು ಯೋಚಿಸುತ್ತಾ ಕುಳಿತರೆ ಕಂಪನಿ ಕಂಪೆನಿಯಾಗಿ ಉಳಿಯುವುದಿಲ್ಲ. ರಾಜಕೀಯದಲ್ಲಿ ಅಷ್ಟೊಂದು ಬುದ್ಧಿ ಖರ್ಚು ಮಾಡಬೇಕಾಗಿಲ್ಲ.

ವ್ಯಕ್ತಿ ತಾನು ಹಿಡಿಯುವ ಹಾದಿಯಲ್ಲಿ ತೋರ್ಪಡಿಸುವ ಧರ್ಮಭಾವನೆ ಕೇವಲ ಪ್ರಪಂಚದ ಕಣ್ಣಿಗೆ ಮಣ್ಣೆರಚಿ ಆತ್ಮ ರಕ್ಷಣೆ ಮಾಡಿಕೊಳ್ಳುವ ಉಪಾಯ ಅಷ್ಟೆ. ಇವತ್ತು ಇಲ್ಲಿರುವ ಹಲವಾರು ದರ್ಜೆಯ ಆಫೀಸರುಗಳ ಪೈಕಿ ಅವನು ತನ್ನನ್ನು ತಾನು ಸ್ಪಷ್ಟವಾಗಿ ನೋಡಿಕೊಳ್ಳಬಲ್ಲ. ನಾಲಗೆಯ ಮೇಲೆ ಶಿಷ್ಯತ್ವಭಾವ, ನಡೆಯಲ್ಲಿ ದಾಸ್ಯಭಾವ ಚೆನ್ನಾಗಿ ತೋರಿಸಿದರೂ ಮನಸ್ಸಿಗೆ ಏನೋ ಹೆಚ್ಚುಗಾರಿಕೆ ಸಿಕ್ಕ ಅನುಭವವಾಗುತ್ತದೆ. ಕಣ್ಣಮುಂದೆ ತನ್ನ ಕಳೆದ ದಿನಗಳ ದೈನ್ಯಭಾವನೆ ಮೂಡುತ್ತದೆ. ಅವನು ಕ್ರಮೇಣ ಅದನ್ನು ಸರಿಪಡಿಸಿಕೊಳ್ಳುತ್ತಾನೆ.

ಬಲಿದತ್ತ ದಾಸ್ ಹೆಜ್ಜೆ ಹಾಕುತ್ತಿದ್ದಾನೆ. ಇದು ಜಗತ್ ಬಾಬುಗಳ ಕೋಣೆ.

"ನಮಸ್ಕಾರ ಸಾರ್, ನನ್ನ ಹೆಸರು ಬಲಿದತ್ತ ದಾಸ್"- ಪರಿಚಯ ಮಾಡಿಕೊಳ್ಳುತ್ತಾನೆ. "ಈಗತಾನೆ ಜಾಯಿನ್ ಆದೆ, ತಮ್ಮನ್ನು ನೋಡಿಕೊಂಡು ಹೋಗೋಣ ಅಂತ ಬಂದೆ." ಜಗತ್ ಬಾಬು ವಯಸ್ಸಾದವರು, ಅವರೂ ಆಫೀಸರರು. ಅವನು ಅವರನ್ನು ಮೇಲೆ ಹತ್ತಿಸಿದಂತೆ, ಅವರು ಸುಮ್ಮನೆ ಮಿಕಿಮಿಕಿ ನೋಡುತ್ತಾ ನಿಂತರು.

"ಇನ್ನೇನು, ನೀವು ಬಂದಿದ್ದೀರಿ, ನಾನು ಹೊರಡುವ ಸಿದ್ಧತೆಯಲ್ಲಿದ್ದೇನೆ" ಜಗತ್ ಬಾಬು ಹೇಳಿದರು, "ಮುಂದಿನ ತಿಂಗಳೇ ಪೆನ್‌ಷನ್ ಆಗುತ್ತೆ. ಮೂವತ್ತು ವರ್ಷದ ಸರ್ವಿಸ್ ಆಯಿತು. ವಿಲ್ಸನ್ ಸಾಹೇಬರ ಕಾಲದಲ್ಲಿ ಸ್ವಾಮಿ ಕೆಲಸಕ್ಕೆ ಸೇರಿದ್ದು. ಅವರು ಬಣ್ಣ ತಯಾರಿಸುವ ಕಾರ್ಖಾನೆ ಶುರು ಮಾಡಿದ್ದರು. ನೀವಂತೂ ಹುಡುಗರು ಇನ್ನೂ. ನನ್ನ ಮೊಮ್ಮಗನಂತಿದ್ದೀರಿ. ಈಗ ನಮ್ಮ ಕಂಪನಿ ಏನೋ ದಯೆ ತೋರಿ ಪೆನ್‌ಷನ್ ಮತ್ತು ಸ್ವಲ್ಪ ಬೋನಸ್ ಕೊಡುತ್ತೆ ಅಂತ ಅಂದುಕೊಂಡಿದ್ದೀನಿ. ಅಬ್ಬಾ, ಅದೆಷ್ಟು ಬೇಗ ದಿನಗಳು ಕಳೆದು ಹೋದವು. ಇನ್ನೂ ನೆನ್ನೆಯಂತೆ ಕಾಣುತ್ತೆ ನೋಡಿ ಎಲ್ಲ. ನೋಡುತ್ತಿದ್ದ ಹಾಗೆಯೆ ದಿನಗಳು ಉರುಳಿ ಹೋದವು. ಏನು ಮಾಡಿದೆ, ಅಂದಹಾಗೆ ಮಾಡುವುದಕ್ಕೆ ಆದುದಾದರೂ ಏನು! ಹಿರಿಯರು ಕಟ್ಟಿದ ಮನೆ ಹಾಳು ಮಾಡಿದೆ. ಹೊಲ ಮಾರಿಬಿಟ್ಟೆ. ಕೆಲಸಕ್ಕೆ ಸೇರಿದ ಮೊದಲ ದಿನಗಳಲ್ಲಿ - ಆಗ ಕಾಲ ತುಂಬ ಅಗ್ಗವಾಗಿತ್ತು. ಊರಿನಲ್ಲಿ ಒಂದೆರಡು ಎಕರೆ ಜಮೀನು ಮತ್ತು ಒಂದು ಮನೆ ಮಾಡಿದೆ. ಈಗ ಇಪ್ಪತ್ತರಷ್ಟು ಬೆಲೆಬಾಳುತ್ತೆ. ಬರೀ ಅಷ್ಟೇ ನೋಡಿ ಬಂಡವಾಳ. ಹೆಂ ಹೆಂ ಹಂ-"

ಬೊಚ್ಚುಬಾಯಿ ತೆರೆದು ಜಗತ್ ಬಾಬುಗಳು ನಕ್ಕರು, - ಹೆಂ ಹೆಂ ಪೆ - ಸಣ್ಣ ಹುಡುಗನಂತೆ. ಆ ನಗುವಿನ ಸೆಳೆತಕ್ಕೆ ಸಿಗದೆ ಬಲಿದತ್ತನಿಗೆ ಬೇರೆ ದಾರಿಯೇ ಇರಲಿಲ್ಲ. ಇಷ್ಟರ ಮೇಲೆ ಇವರ ಹತ್ತಿರ ಯಾವ ಭಿನ್ನಾಭಿಪ್ರಾಯವೂ ಇಲ್ಲವಲ್ಲ.

ಬಲಿದತ್ತ ನೋಡಿದ - ವಿಶಾಲವಾದ ಮೈಕಟ್ಟಿನ ಮುದಿ ಮನುಷ್ಯ, ಅಗಲವಾದ ಎದೆ. ಈಗಲೂ ಬಲಶಾಲಿಯಾಗಿದ್ದಾನೆ. ಕಣ್ಣಿಗೆ, ಕನ್ನಡಕ, ಅಗಲವಾದ ಹಣೆ, ಮುಖದಲ್ಲಿ ಶಾಂತಿ ನೆಲೆಸಿದೆ. ಕೂದಲು ಪೂರ್ತಿ ನರೆತಿಲ್ಲ. ಸೊಂಟವೂ ಬಗ್ಗಿಲ್ಲ. ಮುದಿತನ ಇಲ್ಲಿ ಹರಿಯದ ಹೊಸ ವೇಷ ತೊಟ್ಟಂತಿದೆ.

ಗುಂಡು ಮುಖದ ಮುದುಕ, ಸಾಕಷ್ಟು ಉದ್ದುದ್ದದ ಮೀಸೆ ಬಿಟ್ಟಿದ್ದಾನೆ. ಮೂಗಿನ ತುದಿಯ ಮೇಲೆ ದೃಷ್ಟಿ ನೆಟ್ಟು ಅವರ ಕನ್ನಡಕದ ಒಳಗಿರುವ ಕಣ್ಣುಗಳನ್ನು ನೋಡಿ ಹೇಳಿದ - "ನೀವೇನೂ ಸಂಪಾದಿಸಿಲ್ಲವಾ ಸಾರ್, ನೀವು ಧರ್ಮದ ಬಲವನ್ನು ಸಂಪಾದಿಸಿದ್ದೀರಿ. ಕುಟುಂಬ ನೆಮ್ಮದಿಯಿಂದಿದೆ. ಹೆಣ್ಣು ಮಕ್ಕಳಿಗೆಲ್ಲ ಒಳ್ಳೆಯ ಗಂಡಂದಿರು ಸಿಕ್ಕಿದ್ದಾರೆ, ಗಂಡು ಹುಡುಗರು ಒಬ್ಬರಿಗಿಂತ ಒಬ್ಬರು ನಿಸ್ಸೀಮ ರೆನಿಸಿಕೊಂಡಿದ್ದಾರೆ. ನೋಡಿದೋರೆಲ್ಲಾ ಎಂಥ ಒಳ್ಳೆ ಹುಡುಗರು ಅಂತಾರೆ. ಧರ್ಮವೇ ದೊಡ್ಡಸ್ತಿಕೆಯ ಗುರುತಲ್ಲವೆ ?"

ಜಗತ್ ಬಾಬು ಹೇಳಿದರು - "ಇಷ್ಟೊಂದು ಧಾರ್ಮಿಕ ಮನುಷ್ಯ ಅಂತ ಹೇಳಿ ನನ್ನನ್ನು ಅಟ್ಟಕ್ಕೆ ಹತ್ತಿಸಬೇಡಿ. ನಾವೇನು ಸಾಧುಗಳೆ, ಮಹಾತ್ಮರೆ, ಏನೋ ಒಂದಿಷ್ಟು ಕೆಲಸ ಅಂತ ಮಾಡಿಕೊಂಡು ಹೋಗ್ತಾ ಇರ್ತೀವಿ. ಕೆಲಸಕ್ಕೆ ಸೇರಿದಾಗ ದೇವರ

ಹೆಸರು ಹೇಳಿಕೊಂಡು ಸೇರಿದ್ದೆವು. ಇವತ್ತು ಎಲ್ಲ ಬಿಟ್ಟು ಅವನ ಹೆಸರು ಹೇಳಿಕೊಂಡೆ ಮನೆಗೆ ಹೋಗ್ತೇವೆ. ಅವನೇ ಎಲ್ಲ ನೋಡಿಕೋಬೇಕು."

ಬಲಿದತ್ತ ಹೇಳಿದ - "ಏನು ಸಾರ್ ಹೀಗೆ ಹೇಳ್ತೀರಾ ? ನಿಮ್ಮ ವಿಚಾರ ಯಾರಿಗೆ ತಾನೆ ಗೊತ್ತಿಲ್ಲ ? ಜನ ಕೆಲಸದಲ್ಲಿ ಉಳಿದಿರೋವರಗೆ ದೊಡ್ಡ ಮನುಷ್ಯರು ಅಂತ ಅನಿಸಿಕೊಳ್ತಾರೆ. ನಿಮ್ಮಂಥವರು ಕೆಲಸದಿಂದ ರಿಟೈರ್ ಆದಮೇಲೂ ಜನ ಜಯಜಯಕಾರ ಮಾಡ್ತಾರೆ. ಧರ್ಮಬಲ, ಪುಣ್ಯಬಲ ಎಲ್ಲ ಎಲ್ಲಿ ಹೋಗುತ್ತೆ ಹೇಳಿ"-

"ಹಾಗಾದರೆ ನೀನು ಈ ಎಳೆವಯಸ್ಸಿನಲ್ಲಿ ಧರ್ಮಕರ್ಮ ಅಂತ ಇರ್ತೀಯಾ ? ಏನೂ ತಪ್ಪು ತಿಳಿದುಕೋಬೇಡಿ. 'ನೀನು' ಅಂತ ಅಂದುಬಿಟ್ಟೆ"-

"ಹಾಗಂದ್ರೇನು ಸಾರ್, ನೀವು ಹಾಗೆ ಕರೆದರೆ ನನಗೆ ತುಂಬ ಸಂತೋಷ - ಹಂ ಹಂ ಹಂ ಹಂ"

ಬಲಿದತ್ತನ ಬೆನ್ನು ತಟ್ಟಿ ಜಗತ್‌ಬಾಬು ಹೇಳಿದರು - "ದೇವರು ನಿನಗೆ ತುಂಬ ಆಯಸ್ಸು ಕೊಡಲಿ. ಯೋಗ್ಯನಾದ ಹುಡುಗ, ಬೇಗ ನಿನ್ನಷ್ಟಕ್ಕೆ ನೀನೇ ಮೇಲೆ ಬರುತ್ತಿ. ಇಷ್ಟು ಚಿಕ್ಕ ವಯಸ್ಸಿನಲ್ಲಿ ನೀನು ಕಲಿತಿರೋ ಅಷ್ಟು ವಿಷಯಗಳನ್ನು ನಾನು ಮುದುಕನಾದರೂ ಕಲೀಲಿಲ್ಲ. ಗೊತ್ತಾಯ್ತೇನಪ್ಪಾ, ನನಗೆ ನಿಜವಾಗಲೂ ಆಗಲಿಲ್ಲ."

ಮುದಿಬಾಬುಗಳು ತುಟಿಯಂಚಿನಲ್ಲಿ ನಗತೊಡಗಿದರು. ಬಲಿದತ್ತ ಅವಾಕ್ಕಾಗಿ ನೋಡತೊಡಗಿದ, "ಏನಂದಿರಿ ?"

"ಇವೆಲ್ಲ ಬಿಡಿಸಿಹೇಳೋದು ಚೆನ್ನಾಗಿರಲ್ಲ, ಬಿಡು. ಆದರೆ ನೀನು ಮತ್ತೆ ಈ ಪ್ರಯೋಜನವಿಲ್ಲದ ಧರ್ಮಕರ್ಮಗಳ ಬಗ್ಗೆ ಮಾತಾಡಬೇಡ. ತುಂಬ ದುರ್ಬಲವಾಗಿ ಹೋಗುತ್ತೀಯ. ಧರ್ಮಕರ್ಮ ಅಂತ ಜನ ಗಾಂಜಾ ಸೇದುತ್ತಾರೆ. ಗಾಂಜಾ ಸೇದಿದ ಮತ್ತಿನಲ್ಲಿ ಕನಸಿನಲ್ಲಿ ಮುಳುಗಿಬಿಡುತ್ತಾರೆ."

"ಹಾಗಂತೀರಾ ನೀವು ?"

"ಹೌದು, ಖಂಡಿತ. ಇದೇ ನನ್ನ ಅಭಿಪ್ರಾಯ. ಯಾರು ಹೇಗೆ ಸಾಧನೆ ಮಾಡುತ್ತಾರೋ ಹಾಗೆ ಫಲ ಸಿಗುತ್ತೆ. ಎಲ್ಲಿ ಹೋಗುತ್ತೆ ಹೇಳು ?"

ಮತ್ತೆ ನೆನಪಿಗೆ ಬರುತ್ತದೆ - ಜರದ್ಗವ - ಮಾರ್ಜಾರದ ವಿಚಾರ, "ಸಾರ್ ನನಗೆ ಏನಾದರೂ ತಿಳಿವಳಿಕೆ ಮಾತು ಹೇಳೋದಿಲ್ಲವಾ ? ಏನಾದರೂ ಹಿಂಟ್ಸ್, ಏನಾದರೂ ಟಿಪ್ಸ್, ಮೂವತ್ತು ವರ್ಷಗಳ ಅಮೂಲ್ಯ ಅನುಭವದಿಂದ-"

"ನಾನು ಸುಮ್ಮನೆ ಆಶೀರ್ವಾದ ಮಾಡ್ತೇನೆ ಅಷ್ಟೆ, ನಾನು ಏನನ್ನು ಸಾಧಿಸಲಾಗಲಿಲ್ಲವೊ ನೀನು ಅದನ್ನು ಸಾಧಿಸು."

ಮುದುಕನ ವಿಚಾರದಲ್ಲಿ ಅವನ ಮನಸ್ಸು ಬಾಗುತ್ತದೆ - ಇಳಿ ವಯಸ್ಸಿನ ಮುದುಕ, ಏನು ಯೋಚಿಸುತ್ತಿದ್ದಾನೆ ? ಪಶ್ಚಾತ್ತಾಪ ಪಡುತ್ತಿದ್ದಾನೆಯೋ ಅಥವಾ ಹಗಲುಗನಸು ಕಾಣುತ್ತಿದ್ದಾನೆಯೋ ?

"ನೋಡಪ್ಪಾ, ಬಣ್ಣದ ಬದುಕು. ಕಳೆದ ದಿನಗಳೆಲ್ಲ ಸೊಗಸಾಗಿ ಕಾಣುತ್ತವೆ. ಸೂರ್ಯ ಮುಳುಗುತ್ತಿದ್ದಾನೆ ಅಲ್ಲವೆ! ಹಂ ಹಂ ಹಂ - ಹಾಗಾದರೆ ನಾನು ನಿನಗೇನಾದರೂ ತಿಳಿವಳಿಕೆ ಹೇಳಬೇಕು ಅನ್ನು., ಯಾರ ಹತ್ತಿರ ಹಿಂಟ್ಸ್ ಇದೆಯೊ

ಅದೇ ಅವರ ಬಳಕೆಗೆ ಬರುತ್ತೆ, ಯಾರ ಹತ್ತಿರ ಟಿಪ್ಸ್ ಇದೆಯೊ ಅದೇ ಅವರ ಬಳಕೆಗೆ ಬರುತ್ತೆ. ಕೋತಿ ಯಾರ ಹತ್ತಿರ ಇದೆಯೊ ಅವನೇ ಅದನ್ನು ಕುಣಿಸಬಲ್ಲ. ಇದರಿಂದೆಲ್ಲ ನಿನಗೇನು ಪ್ರಯೋಜನ ? ಏನೋ ಕೆಲಸ ಮಾಡೋಣ ಅಂತ ನೌಕರಿಗೆ ಸೇರಿದೆ. ಕೆಲಸ ಮಾಡುತ್ತಾ ಹೋದೆ. ಒಳ್ಳೆಯದು - ಕೆಟ್ಟದ್ದು ನನಗೆ ಗೊತ್ತಿಲ್ಲ. ಕೆಲಸದ ಗುಂಗಿನಲ್ಲಿ ನನಗೆ ಹೊರಗಿನ ವಿಚಾರಗಳು ತಲೆಗೆ ಹತ್ತಲಿಲ್ಲ. ನಾನು ನಿನಗೇನು ಟಿಪ್ಸ್ ಕೊಡಬಲ್ಲೆ ? ಅಂದಹಾಗೆ ನೋಡು, ಕೆಲಸಕ್ಕೆ ಸೇರಿದ ಹೊಸದರಲ್ಲಿ ಮನಸ್ಸಿನಲ್ಲಿ ತುಂಬ ಹುಮ್ಮಸ್ಸಿತ್ತು. ಸ್ವಲ್ಪ ದಿನ ಚೆನ್ನಾಗಿ ಭರದಿಂದ ಓಡಾಡಿದ್ದಾಯಿತು. ಆದರೆ ಕ್ರಮೇಣ ಒಂದು ಸಣ್ಣ ಘಟನೆಯಿಂದ ಮನಸ್ಸೇ ಬೇರೆಯಾಗಿ ಹೋಯಿತು. ಸ್ಮಾರ್ಟ್ ಆಗಿರೋಣಾಂತ ಕುದುರೆ ಸವಾರಿ ಕಲೀತಿದ್ದೆ. ಒಂದು ಹೆಣ್ಣು ಕುದುರೆ ಸಿಕ್ಕಿತ್ತು. ಒಂದು ಸಾರಿ ಒಬ್ಬ ಸಾಹೇಬರ ಜೊತೆ ಟೂರ್ ಮೇಲೆ ಹೊರಟೆ. ಸಾಹೇಬರು ಕುದುರೆ ಮೇಲೆ ಹತ್ತಿದರು. ರಸ್ತೆಯಲ್ಲಿ ಸಾಹೇಬರ ಗಂಡು ಕುದುರೆ ಕೆನೆಯುತ್ತಾ ಮುಂದಿನ ಕಾಲೆತ್ತಿ ನನ್ನ ಕಡೆ ನುಗ್ಗಿಬಂತು. ಹೆಣ್ಣು ಕುದುರೆಯನ್ನು ತಡೆಯುವುದೇ ತುಂಬ ಕಷ್ಟವಾಯಿತು. ಹಾಗಾಗಿ ಏನು ಆಗಬೇಕೊ ಆಯಿತು. ಯೋಚನೆ ಮಾಡಿ ನೋಡಿದರೆ ದೇವರು ನಿನ್ನ ಮೇಲೆ ತುಂಬ ದಯೆಯಿಟ್ಟಿದ್ದಾನೆ-"

ಜಗತ್ ಬಾಬು ಜೋರಾಗಿ ನಕ್ಕರು.

"ಹೀಗೆ ನೋಡು, ಯಾವ ಯಾವುದೋ ಸಣ್ಣಪುಟ್ಟ ವಿಚಾರಗಳು ನೆನಪಿಗೆ ಬರುತ್ತವೆ. ನಾವು ತುಂಬ ಮುಂದುವರಿದುಬಿಟ್ಟಿದ್ದೇವೆ ಅಂತ ಅವೆಲ್ಲ ನೆನಪು ಮಾಡಿಕೊಡುತ್ತವೆ. ಕಿವಿ ಹಿಂಡಿದಂತಾಗಿ ನಾವು ಮೊದಲಿದ್ದ ಕಡೆಗೆ ವಾಪಸ್ಸು ಬರುತ್ತೇವೆ. ನಾನು ಸ್ಮಾರ್ಟಾಗಿರೋಣ ಅಂದರೆ ಆಗಿದ್ದು ಹಾಗೆ. ಜೋರಾಗಿ ಹೊಡೆತ ಬಿದ್ದಂತಾಯಿತು. ಇದಾದ ಮೇಲೆ ಇನ್ನೂ ಅನೇಕ ವಿಚಾರಗಳನ್ನು ಕಲಿಯೊ ಹಾಗಾಯಿತು. ಯಾವುದರ ಹಿಂದೆ ಬೇಕಾದರೂ ಓಡು, ಯಾರು ಯಾವುದನ್ನು ಹುಡುಕಿಕೊಂಡು ಹೋಗುತ್ತಾರೊ ಅದಕ್ಕೆ ತಕ್ಕಂತಹ ತ್ಯಾಗ ಮಾಡಲೇಬೇಕಾಗಿತ್ತು. ಅದರಲ್ಲೂ ಇಂಥ ತಾಪೇದಾರಿಯ ಕೆಲಸದಲ್ಲಿ - ಮೊದಲು ಮರ್ಯಾದೆಗೆ ತಿಲಾಂಜಲಿ ಕೊಡಬೇಕಾಗುತ್ತೆ. ಒಂದು ಸಾರಿ ಯಾರೋ ಒಬ್ಬ ಹಾಲೆಂಡಿನ ಸಾಹೇಬ ಹೀಗೇ ಮಾತಾಡುತ್ತಾ 'ಬೋಳಿ ಮಗನೆ' ಅಂತ ಬೈದ. ನಾನು ತಕ್ಷಣ ಅವನ ಕತ್ತಿನ ಪಟ್ಟಿ ಹಿಡಿದೆ. ಏನು ಮಾಡಿದೆನೊ ನನಗೇ ಗೊತ್ತಾಗಲಿಲ್ಲ. ನನ್ನ ಕೋಪ ಇಳಿಯೊ ಹೊತ್ತಿಗೆ ಅವನು ಜೋರಾಗಿ 'ಬಿಡಿಸಿ, ಬಿಡಿಸಿ' ಅಂತ ಒಡಕೋತಾ ಇದ್ದ. ಅದಾದ ಮೇಲೆ ನನ್ನ ಬಡ್ತಿಗೆ ದೊಡ್ಡ ಸೊನ್ನೆ ಬಿದ್ದೇಬಿತ್ತು ನೋಡು, ಆಶ್ಚರ್ಯ ಅಂದ್ರೆ ಕೆಲಸ ಹೋಗದೆ ಹಾಗೇ ಉಳೀತು. ಹೋಗಿದ್ದರೂ ಚೆನ್ನಾಗಿರ್ತಿತ್ತು. ಹಂ ಹಂ ಹಂ ಹಂ - ನಾನು ನಿನಗೇನಪ್ಪ ಉಪದೇಶ ಕೊಡಲಿ ? ನೋಡು, ಬೇರೆಯವರು ನಿನಗೆ ಸಹಾಯ ಮಾಡಲಿ ಅಂತ ನೀನು ಇಷ್ಟಪಡೋದಾದರೆ ಮೊದಲು ಅವರ ಮನಸ್ಸು ಹೇಗಿದೆ ಅಂತ ಅರ್ಥ ಮಾಡಿಕೊಳ್ಳಬೇಕು. ಅವರ ಪ್ರವೃತ್ತಿ ಹೇಗಿದೆ ಅಂತ ನೋಡಿಕೊಳ್ಳಬೇಕು. ಅಂದಹಾಗೆ ಪ್ರವೃತ್ತಿ ಅಂದರೇನು ? ಮೊದಲು ಅವರ ಕಾಮವೃತ್ತಿ - ಆಮೇಲೆ ಅವರ ಕ್ರೋಧ; ಅಂದರೆ ಅವರ ಶತ್ರುಗಳನ್ನು ಮಟ್ಟಹಾಕಲು ಅವರಿಗೆ ನೀನು ಸಹಾಯ ಮಾಡಬೇಕು, ಚಾಡಿ ಹೇಳೋದರಿಂದ ಹಿಡಿದು

ಹೋರಾಡೋವರೆಗೆ. ಇದಾದ ಮೇಲೆ ಅವರ ಲೋಭ, ಅವರಿಗೆ ಏನಾದರೂ ಕೊಡಬೇಕಾಗುತ್ತೆ. ಆಮೇಲೆ ಅವರ ಮೋಹ - ಅಂದರೆ ಯಾರ ಭ್ರಾಂತಿಯನ್ನು ಅವರು ಬದುಕಿನ ಅಸ್ತಿತ್ವ ಅಂತ ತಿಳೀತಾರೆ, ಆ ಭ್ರಾಂತಿಗೆ ಒತ್ತಾಸೆ ನೀಡಬೇಕು. ಆ ಮೌಲ್ಯಗಳನ್ನು ತನ್ನವೆಂದು ತಿಳಿದು ಅವುಗಳಿಗೆ ಪ್ರೋತ್ಸಾಹ ನೀಡಬೇಕು. ಅನಂತರ ಅವರ ಮದಮಾತ್ಸರ್ಯ - ಅಂದರೆ ಅವರನ್ನು ಚೆನ್ನಾಗಿ ಖುಷಿಪಡಿಸುತ್ತಿರಬೇಕು. ಹಾಗೆಯೆ ಅವರ ಸೇವೆ, ಅವರ ಅಗತ್ಯಗಳನ್ನು ನೋಡಿಕೊಳ್ಳುತ್ತಿರಬೇಕು. ಅವರ ಸ್ಮರಣೆ, ಹಾಡಿಹೊಗಳುವುದು ಇವೆಲ್ಲ ನಡೆಯುತ್ತಿರಬೇಕು. ಎಲ್ಲಕ್ಕಿಂತ ಕಡೆಯಲ್ಲಿ ಅವರ ಹಿತಾಹಿತಗಳ ಬಗ್ಗೆ ಪರಿಜ್ಞಾನ. ಇಂತಹೆಗಳಲ್ಲಿ ಕರ್ತವ್ಯನಿಷ್ಠೆ ಹೇಗಿರುತ್ತದೆಂದು ಅಳತೆ ಮಾಡಿ ನೋಡೋದು - ಕಡೆಯಲ್ಲಿ ಅವರಿಗೆ ಪೂಸಿ ಹೊಡೆಯುವ ತಂತ್ರ. ಇದೇ ನೋಡು, ತಾಬೇದಾರಿ ಮಾಡುವವರ ಧರ್ಮದ ಒಟ್ಟು ಸಾರಾಂಶ! ಆದರೆ ನನಗೆ ಇದರಲ್ಲಿ ಸ್ವಲ್ಪವನ್ನೂ ನಡೆಸಲು ಸಾಧ್ಯವಾಗಲಿಲ್ಲ. ಇನ್ನು ನಿನಗೆ ಉಪದೇಶ ಕೊಡುವಂಥ ಸಾಹಸಕ್ಕೆ ಹೇಗೆ ಕೈ ಹಾಕಲಿ ಹೇಳು. ನನಗಂತೂ ಮಾಡಲಾಗಲಿಲ್ಲ. ಹೆಂ ಹೆಂ ಹೆಂ ಹೆಂ - ಸರಿ, ಹೋಗು. ನಿನ್ನ ಸಮಯವನ್ನೆಲ್ಲ ಹಾಳು ಮಾಡಿದೆ. ಒಟ್ಟಿನಲ್ಲಿ ಆಶೀರ್ವಾದ ಮಾಡುತ್ತೇನೆ. ಬದುಕಿನಲ್ಲಿ ನಿನಗೆ ಶಾಂತಿ ದೊರೆಯಲಿ.'' ಜಗತ್‌ಬಾಬುಗಳು ಕೆಲಸದಲ್ಲಿ ತೊಡಗಿದರು.

ಅಯ್ಯೋ, ಹಾಳು ಮುದುಕ ಚೆನ್ನಾಗಿ ಕೊರೆದ. ಬಲಿದತ್ತ ಹೊರಗೆ ಬಂದು ನೆಮ್ಮದಿಯಿಂದ ಉಸಿರಾಡಿದ. ಅಬ್ಬಾ! ಈ ಕೊಠಡಿಯಲ್ಲಿ ಕಾಗದಗಳೆಲ್ಲ ಚೂರುಚೂರಾಗಿ ಹೋಗುತ್ತಿದೆ. ಧೂಳು, ಎಲ್ಲೆಲ್ಲೂ ಧೂಳು. ಬಾಯಿ ಮೂಗಲ್ಲೆಲ್ಲ ಹೋಗುತ್ತದೆ, ಉಸಿರು ಕಟ್ಟಿದ ಹಾಗಾಗುತ್ತಿದೆ. ಜೀವ ತಣ್ಣಗಾದ ಹಾಗಾಗುತ್ತದೆ. ಕುತ್ತಿಗೆ ತಿರುಗಿಸಿ ಕೆಳಗೆ ಬಗ್ಗಿ ನೋಡಿ ಮುದುಕನ ಮಾತಿಗೆ ಇಲ್ಲ ಎಂದು ಹೇಳಿಕೊಳ್ಳುವಾಗ ಎದೆಯಲ್ಲಿ ಯಾವುದೇ ಬೆಕ್ಕು ಮೆಲ್ಲಗೆ ಸೇರಿಕೊಂಡಂತೆಯೂ, ಅವನ ಸ್ವಂತ ವ್ಯಕ್ತಿತ್ವ ಇಲಿ ಮರಿಯಂತೆ ಅವರ ಪಂಜಾದಲ್ಲಿ ಒದ್ದಾಡುತ್ತಿರುವಂತೆಯೂ ಭಾಸವಾಗುತ್ತಿತ್ತು.

ಅಬ್ಬಾ! ಆ ಅನುಭವ ಹಿಂದೆ ಮರೆಯಾಯಿತು. ಆಶಾವಾದ ತಲೆಯೆತ್ತಿತ್ತು. ಅದಾದ ಮೇಲೆ ರಣಜಿತಬಾಬು, ಸೊಗಸಾದ ಮಾತು, ಶುಚಿಯಾದ ಮುಖ, ತಲೆಬಾಚಿಕೊಳ್ಳುವುದರಲ್ಲೂ ಕಲೆಗಾರಿಕೆ, ನೋಡುವುದಕ್ಕೆ ಜಾಹಿರಾತಿನಲ್ಲಿರುವ ಚಿತ್ರದಂತಿದ್ದಾರೆ. ಹೊರಗಡೆ ಹೋಗುತ್ತಿದ್ದಾರೆ. ಬಾಗಿಲ ಬಳಿ ಭೇಟಿ ಮತ್ತು ಪರಿಚಯ.

"ಏನ್ಸಾರ್ ಹೊರಟಿರಾ!"

"ಓಹೋ, ನೋಡಿ, ಆಗಲೇ ನಾಲ್ಕೂವರೆ ಗಂಟೆ. ಇನ್ನೊಂದು ಅರ್ಧಗಂಟೆಯಲ್ಲಿ ಕಚೇರಿಯ ವೇಳೆ ಮುಗಿಯುತ್ತೆ ಅಲ್ಲವೆ. ಕೆಲಸಾನೂ ಅಚ್ಚುಕಟ್ಟಾಗಿ ಮಾಡಿ ಮುಗಿಸಿದ್ದೇನೆ, ಬಿಡಿ. ಯಾವ ಸಾಹೇಬರ ಹತ್ತಿರ ಬೇಕಾದರೂ ಹೋಗಿ ಕೇಳಿ, ಎಫಿಷಿಯೆನ್ಸಿ ಅಂದರೆ ಈ ಆಫೀಸಿನಲ್ಲಿ ನನ್ನದೇ ನೋಡಿ. ಅದನ್ನು ಕಾಪಾಡಿಕೊಂಡು ಬರೋದಕ್ಕೆ ಕತ್ತೆಗಳ ಹಾಗ ಏನೂ ದುಡಿಯಬೇಕಾಗಿಲ್ಲ. ಅಗತ್ಯ ಬಿದ್ದರೆ ನಮ್ಮ ಮೈಯಿನ ಕಡೆ ಸ್ವಲ್ಪ ಹೆಚ್ಚು ಗಮನ ಕೊಡಬೇಕು, ಬೇರೆಯವರ ಸೆಂಟಿಮೆಂಟ್‌ಗಳ

ಬಗ್ಗ ಸಹ ಅಷ್ಟೆ. ಕೆಲಸ ಮಾಡ್ತಾ ಮಾಡ್ತಾ ಮೇಲಿನ ಅಧಿಕಾರಿಗಳಿಗೆ ಹುಚ್ಚು ಹಿಡಿಯುವ ಹಾಗಾದರೆ, ಅವರ ಹತ್ತಿರ ಹೋಗಿ ಎರಡು ಒಳ್ಳೇ ಮಾತಾಡಿದರೆ ಖುಷಿಯಾಗಿ ಹೋಗ್ತಾರೆ. ಅದು ಬಿಟ್ಟು ಅವರ ನೆರಳೂ ಬೀಳದ ಹಾಗೆ ದೂರವಿದ್ದು, ನಮ್ಮ ನಮ್ಮ ಕೋಣೆಗಳಲ್ಲಿ ಫೈಲುಗಳಲ್ಲಿ ತಲೆಯಿಟ್ಟು ಕೆಲಸ ಮಾಡ್ತಾ ಇದ್ರೆ ಅವರಿಗೆ ಏನು ಸಂತೋಷ ಆಗುತ್ತೆ ಅಂದುಕೊಂಡಿದ್ದೀರಾ? ನೀವೇ ಯೋಚನೆ ಮಾಡಿ. ಅಂದರೆ ಕೆಲಸ ಮಾಡದೆ ಹೆಸರು ಗಳಿಸಬೇಕಾದರೆ ಇದೇ ಸೀಕ್ರೆಟ್ ನೋಡಿ - ಡೋಂಟ್ ವರ್ಕ್, - ಅಂದರೆ ಮೂಗಿಗೆ ಕವಡೆ ಕಟ್ಟಿಕೊಂಡು ದುಡಿಯಬೇಕಾಗಿಲ್ಲ. ಆಗಾಗ ಭೇಟಿ ಮಾಡೋದು, ಮನೆ ಮನೆಗೆ ಹೋಗಿ ಸ್ನೇಹ ಬೆಳೆಸೋದು, ಅವರ ಫೋಟೋ ತೆಗೆದು ಅವರಿಗೇ ಪ್ರೆಸೆಂಟ್ ಮಾಡೋದು, ಅವರ ಜೊತೆ ಟೆನ್ನಿಸ್ ಆಡೋದು, ಅವರನ್ನು ತಿಂಡಿ ತೀರ್ಥಗಳಿಂದ ಸತ್ಕರಿಸಿ ಖುಷಿ ಪಡಿಸೋದು - ಯಾರಿಗೆ ಏನುಬೇಕು ಅಂತ ಕಂಡುಕೊಳ್ಳಬೇಕು, ಅದಕ್ಕೆ ತಕ್ಕಂತೆ ಜೊತೆ ಕುದುರಿಸಬೇಕು. ಅಯ್ಯೋ ಸ್ವಾಮಿ, ಏನಂತೀರಿ, ಇದಲ್ಲ ಸೂಪರ್ ವರ್ಕ್. ಇದಕ್ಕೆಲ್ಲ ಬುದ್ಧಿ ತುಂಬ ಬೇಕು. ದುಡ್ಡೇನೂ ಕಡಮೆ ಖರ್ಚಾಗಲ್ಲ. ನನ್ನ ಮಾತು ಕೇಳಿ. ಇದರಿಂದ ಖಂಡಿತ ಸಕ್ಸೆಸ್ ಸಿಗುತ್ತೆ. ನೋಡಿ, ಆಗಲೇ ಟೆನ್ನಿಸ್ ಆಡೋ ವೇಳೆ ಆಯಿತು. ಕಮ್ ಆನ್, ಬಿಎ ಸ್ಪೋರ್ಟ್, ಏನಂತೀರಿ?"

"ನಂಗೆ ಸ್ವಲ್ಪ ಕೆಲಸವಿದೆ-"

"ಮತ್ತೆ ಅದೇ ಕೆಲಸ!" ರಣಜಿತಬಾಬು ನಕ್ಕರು - "ಸರಿ, ಬೈಬೈ"

ಜೋರಾಗಿ ಹೆಜ್ಜೆ ಹಾಕುತ್ತಾ ಮುಂದೆ ನಡೆದರು.

ಸ್ವಲ್ಪವೂ ಹಿಂದೆಮುಂದೆ ಯೋಚನೆ ಮಾಡದೆ ಬಲಿದತ್ತ ಅವರ ಹಿಂದೆ ಓಡಿದ. ಆದರೆ ಅವರಾಗಲೇ ಸೈಕಲ್ ಹತ್ತಿದ್ದರು. ಮುಖದ ಒಂದು ಭಾಗ ಮಾತ್ರ ಕಾಣುತ್ತಿತ್ತು. ಬಾಯಲ್ಲಿ ಕಚ್ಚಿದ್ದ ಸಿಗರೇಟು ಉರಿಯುತ್ತಿತ್ತು.

ಹಾರುತ್ತಿರುವ ದೃಶ್ಯ. ಹಾರುತ್ತಿದ್ದಾರೆ, ಎದುರಿಗೇ ಹಾರಿ ಹೋಗುತ್ತಿದ್ದಾರೆ.

ಯಾವ ಕಾರಣವೂ ಇಲ್ಲದೆ ಅವನಿಗೆ ತನ್ನ ಮೇಲೆಯೆ ಕೋಪ ಉಕ್ಕಿಬರುತ್ತದೆ. ತಾನೊಂದು ಆಮೆಯಂತೆ, ಒಂದು ಚಿಂತನಶೀಲವಾದ ಆಮೆ. ಯಾವ ಕಡೆ ಹೋಗಬೇಕೆಂಬುದರ ಬಗ್ಗ ಯೋಚನೆಯಾಗುತ್ತದೆ. ಎರಡೂ ಕಡೆ ಎರಡು ದಿಕ್ಕುಗಳ, ಪೂರ್ವ ಮತ್ತು ಪಶ್ಚಿಮ, ಸೂರ್ಯೋದಯ ಸೂರ್ಯಾಸ್ತ. ಯಶಸ್ಸಿನ ಜಾಹಿರಾತಿನ ಮೇಲೆ ಬರೆದಿದೆ - ಬಾ, ನನ್ನನ್ನು ಆಶ್ರಯಿಸು, ಮಾಮೇಕಂ ಶರಣಂ ವ್ರಜ - ಲೆಟ್ ಬಿ ಯುವರ್ ಫಾದರ್.

ಭೋಳೆ ಬಲಿದತ್ತ ಮತಿಗೆಟ್ಟವನಂತೆ ನೋಡುತ್ತಾ ನಿಂತಿದ್ದಾನೆ.

ಇದ್ದಕ್ಕಿದ್ದಂತೆ ಕೆಲಸದ ವೇಳೆ ಮುಗಿದ ಗಂಟೆ ಬಾರಿಸಿತು - ಢಣ್, ಢಣ್, ಢಣ್, ಢಣ್. ಕಂಪೆನಿಯ ಕಚೇರಿಯಿಂದ ಮಿಡತೆಯ ಹಿಂಡು ಹೊರಬಿದ್ದಿದೆ. ಎಚ್ಚರಗೊಂಡು ಹಿಂದಿರುಗಿ ನೋಡಿದ. ಅವನ ಕೋಟು ಮತ್ತು ಟೋಪಿ ತೊಗೊಂಡು, ಕಂಕುಳಲ್ಲಿ ಫೈಲುಗಳನ್ನು ಹಿಡಿದುಕೊಂಡು ಅವನ ಆಳು ನಿತಾಯಿ ನಿಂತಿದ್ದಾನೆ. ತಲೆಬಗ್ಗಿಸಿ ಅತಿ ದಾಸ್ಯಭಾವವನ್ನು ಪ್ರದರ್ಶಿಸುತ್ತಾ ಹೇಳುತ್ತಾನೆ-

"ಬುದ್ಧಿ, ನಡಕೊಂಡೇ ಹೋಗ್ತೀರಾ ಅಥವಾ ಗಾಡಿ ತಗೊಂಡು ಬರ್ಲಾ

ಗಾಡೀನೇ ತೊಗೊಂಡು ಬರ್ತೀನಿ, ಸುಸ್ತಾಗತ್ತೆ ಇಲ್ಲ ಅಂದ್ರೆ."

"ಅಯ್ಯೋ ಬಿಡು, ಎಷ್ಟು ದೂರ ಇದೆ ಗಾಡೀಲಿ ಹೋಗೋದಕ್ಕೆ, ನಡಕೊಂಡೇ ಹೋಗೋಣ ನಿತಾಯ್. ಹಾಗೇ ಗಾಳಿ ಕುಡೀತಾ ಹೋದರೆ ಚೆನ್ನಾಗಿರುತ್ತೆ."

"ಗಾಳಿ ತುಂಬ ಧೂಳಿದೆ ಬುದ್ಧಿ, ಸರಿ, ನಡೀರಿ, ನಿಮ್ಮ ಚಿತ್ತ."

ಮನೆ ತಲುಪುವ ಹೊತ್ತಿಗೆ ಒಬ್ಬ ಹುಡುಗ ಸೊಂಟದಲ್ಲಿ ಬುಟ್ಟಿಯನ್ನು ಸಿಕ್ಕಿಸಿಕೊಂಡು ಕಾಂಪೌಂಡಿನ ಒಳಗೆ ಹೆಜ್ಜೆಯಿಡುತ್ತಿದ್ದಾನೆ. ಅವನ ಬೆನ್ನು ಕಾಣುತ್ತಿದೆ. ತೆಳ್ಳನೆಯ ತೆರೆದ ಮೈ. ಉದ್ದವಾದ ಕೂದಲು ಹಿಂದೆ ಇಳಿಬಿದ್ದಿದೆ. ಬಹಳಷ್ಟು ಕಡೆ ಹರಿದಿರುವ ಪಂಚೆ ತುಂಡಿನ ಲಂಗೋಟಿ ಬಿಗಿದಿದ್ದಾನೆ. ಹಿಂದಿನಿಂದ ನಿತಾಯಿ ಕೂಗಿದ - 'ಲೋ, ಹರ್ಷ, ಶ್'-

ಹರ್ಷ ತಿರುಗಿ ಕೈಮುಗಿದ.

ತುಂಬ ಎಳೆಯ ಮುಖ. ನೋಟದಲ್ಲಿ ಒಂದು ರೀತಿಯ ಸಹಜವಾದ ದೈನ್ಯ ತುಂಬಿದ್ದು ಅವನಿಗೆ ಆಶ್ರಯವಿಲ್ಲ ಅಂತ ಎತ್ತಿಹೇಳುತ್ತಿದೆ. ಅಯ್ಯೋ ಪಾಪ ಎಂಬ ಭಾವನೆ ಮೂಡುವಂತಿದೆ. ಸಣ್ಣಸಣ್ಣಗಿರುವ ನಿರ್ಜೀವವಾಗಿರುವಂತಹ ಕೈಗಳು, ಬೆರಳಿನ ಒಂದು ಉಗುರು ಕೆಂಪಾಗಿದೆ, - ಬಹುಶಃ ಏಟು ತಿಂದಿರಬೇಕು.

ಗೊತ್ತಿಲ್ಲದವನಂತೆ ಬಲಿದತ್ತ ಕೇಳಿದ, "ಇವನು ಯಾರು, ನಿತಾಯ್?"

"ಇವನು ಹರ್ಷ ಅಂತ ಬುದ್ಧಿ. ನಿಮ್ಮ ಬಾಯ್. ನೀವು ಏನು ಅಪ್ಪಣೆ ಮಾಡಿದರೂ ಮಾಡ್ತಾನೆ: ಚೆನ್ನಾಗಿ ಕೆಲಸಕ್ಕೆ ಬರೋ ಹುಡುಗ. ಮೊದಲು ಒಬ್ಬ ಪೊಲೀಸ್ ಇನ್‌ಪೆಕ್ಟರ್ ಹತ್ತಿರ ಇದ್ದ. ಅವರ ಜೊತೆ ಬೇಕಾದ ಹಾಗೆ ಟೂರ್ ಮಾಡಿದ್ದಾನೆ ಬುದ್ಧಿ - ನೀವೇ ನೋಡುತ್ತಿರಿ ಎಷ್ಟು ಕೆಲಸ ಮಾಡ್ತಾನೆ ಅಂತ-"

"ಸರಿ ಸರಿ, ಹರ್ಷ ಏನಂತಿ - ಕುದುರೆ, ಹಂ? ಬಾ ಇಲ್ಲಿ ಬಾ ಇಲ್ಲಿ ನೋಡೋಣ"

"ಬಾ ಇಲ್ಲಿ, ಹರ್ಷ ಬಾ ಇಲ್ಲಿ, ಬುದ್ಧ್ಯೋರು ಸವಾರಿ ಮಾಡ್ತಾರಂತೆ. ಅವರು ಎಂತಾ ಸವಾರರು ಅಂತ ನಿಂಗೆ ಆಮೇಲೆ ಗೊತ್ತಾಗುತ್ತೆ.ಸ್ವಲ್ಪ ಮೈಗಳ್ಳತನ ಮಾಡಿದರೂ ಜುಟ್ಟು ಹಿಡಿದು ಜಗ್ಗಿಸ್ತಾರೆ ನೋಡು." ನಿತಾ ಹಹ್ಹ ಅಂತ ನಕ್ಕ. ಬಲಿದತ್ತನಿಗೆ ಕುತೂಹಲವಾಯಿತು. ಅವನಿಗೂ ನಗುಬಂತು. "ನಿನ್ನ ಉಗುರಿಗೆ ಏಕೆ ಏಟುಬಿದ್ದಿದೆ? ಬೆರಳು ತೋರಿಸು" - ಅನ್ನುತ್ತಾ ಅವನ ಅಂಗೈ ಹಿಡಿದು ಬೆರಳನ್ನು ಮೆಲ್ಲಗೆ ಒತ್ತಿದ. ಹರ್ಷನಿಗೆ ನೋವಾಗಿ ಸಂಕೋಚದಿಂದ ಸುರುಟಿಕೊಂಡ, ತುಟಿಕಚ್ಚುತ್ತಾ ತಲೆತಗ್ಗಿಸಿದ. ಬಲಿದತ್ತ ಮೆಲ್ಲನೆ ಅವನ ಕೈ ತಿರುಚಿದ, ಕುತ್ತಿಗೆಯ ಮೇಲೆ ಮೆಲ್ಲಗೆ ತಟ್ಟಿ ಹೇಳಿದ - "ಭೇಷ್ ಪರವಾಗಿಲ್ಲ ಹುಡುಗ, ಶೋಕೀವಾಲ, ಉಗುರು ಬೆಳೆಸಿದ್ದಾನ, ತಲೆಯಲ್ಲಿ ಒತ್ತಾದ ಕೂದಲು, ಮೂಗು ಬೊಟ್ಟು ಹಾಕಿಕೊಂಡಿದ್ದರೆ ಸರಿಹೋಗುತ್ತಿತ್ತು."

ನಿತಾ ಹೇಳಿದ "ಬುದ್ಧಿ, ಅವನು ಸ್ವಲ್ಪ ದಿನ ಕುಣಿತಾನೂ ಅಭ್ಯಾಸ ಮಾಡಿದ್ದಾನೆ."

"ಹಾಗೋ, ಸರಿ, ಕುಣೀತಾನೆ ತಾನೆ, ಕೆಲಸ ನೆಟ್ಟಗೆ ಮಾಡದಿದ್ರೆ ಹೇಗೆ ಕುಣಿಸ್ತೀನಿ

ಅಂತ ಗೊತ್ತಾಗತ್ತೆ." ಅವನ ಪಂಚೆ ತುಂಡಿನ ಸಂದಿಯಿಂದಲೆ ಮೆಲ್ಲಗೆ ಜಿಗುಟಿದ. ಹರ್ಷ ನಗುತ್ತಾನಗುತ್ತಾ ನೆಗೆದಾಡಿದ. ಬಲಿದತ್ತದಾಸ್ ಹೇಳಿದ - "ಇದೆಲ್ಲ ಏನು ? ನೀನು ಪಂಚೆ ತುಂಡು ಸುತ್ತಿಕೊಂಡಿದ್ದೇಯೊ ಅಥವಾ ಆ ತುಂಡೇ ನಿನ್ನನ್ನು ಸುತ್ತಿಕೊಂಡಿದೆಯಾ, ಇದನ್ನು ಸುತ್ತಿಕೊಂಡೇ ಕೆಲಸ ಮಾಡ್ತೀಯ ?"

"ಬಡ ಹುಡುಗ, ಬುದ್ಧಿ" - ನಿತಾ ಹೇಳಿದ, "ಅವನಿಗೆ ತಾನೆ ಯಾರಿದ್ದಾರೆ ? ಬುದ್ಧೋರು ಕೊಡದೆ ಇರ್ತೀರಾ ?"

ಹರ್ಷ ನಲಿದಾಡುತ್ತಾ ಬಟ್ಟೆಯನ್ನು ಕಂಕುಳಲ್ಲಿ ಸಿಕ್ಕಿಸಿಕೊಂಡು ಒಳಗೆ ಓಡಿಹೋದ. ಬಲಿದತ್ತ ಅವನನ್ನು ನೋಡುತ್ತಾ ಮೆಲ್ಲಗೆ ಮುಂದೆ ಅಡಿಯಿಟ್ಟ.

ಗೊತ್ತಿಲ್ಲದಂತೆಯೆ ಮನಸ್ಸಿನಲ್ಲಿ ಏನೋ ಒಂದು ರೀತಿಯ ಬೆಳಕು ಹರಡುತ್ತದೆ. ಮನಸ್ಸು ಸ್ವಲ್ಪ ಹಗುರವಾಗುತ್ತದೆ. ಹೊಸದಾಗಿ ಬಂದ ಹೃದ 'ಬಾಯ್' ನಿಂದಾಗಿ ಮನೆಯಲ್ಲಿ ಉತ್ಸಾಹವೂ ಹೆಚ್ಚಿದೆ. ಇದೊಂದು ಹೊಸ ವ್ಯಕ್ತಿತ್ವ. ಅವನ ಮೈಯಲ್ಲಿ ತಲೆಕೆಳಗಾಗಿ ಸುರುಟಿಕೊಂಡು ಒದ್ದಾಡುತ್ತಿತ್ತು. ಸೂಕ್ತವಾದ ಪರಿಸ್ಥಿತಿ ಸಿಕ್ಕಿದೊಡನೆಯೆ ಅದು ಮೆಲ್ಲಗೆ ಮೇಲೇಳುತ್ತಿದೆ, ಹಿಂದೆ ಆಗಿಹೋದ ಕ್ರಿಯೆಗೆ ಪ್ರತಿಕ್ರಿಯೆ. ಆ ಸೂತ್ರದಿಂದಲೆ ಅಲ್ಲವೆ ಹಿಂಸೆಗೊಳಗಾದ ಪಶು ನೆಲನೆಕ್ಕುತ್ತಾ ಅನಂತರ ತಾನೇ ಹಿಂಸೆ ಮಾಡಲು ತಡಬಡಾಯಿಸುತ್ತಿದ್ದುದು, ಪೆಟ್ಟು ತಿಂದಿದ್ದು ಪೆಟ್ಟುಕೊಡಲು ಹಾತೊರೆಯುತ್ತಿರುತ್ತದೆ. ಬದುಕಿನುದ್ದಕ್ಕೂ ಅವನ ವ್ಯಕ್ತಿತ್ವವನ್ನು ಗುರಿ ಮಾಡಿಕೊಂಡು ಜನ ಚೆನ್ನಾಗಿ ಕುಣಿಸಿದ್ದಾರೆ, ತಮಾಷೆಗೀಡು ಮಾಡಿದ್ದಾರೆ, ಗೇಲಿಯೆಬ್ಬಿಸಿದ್ದಾರೆ - ಏಕೆಂದರೆ ಅವನು ಕುಳ್ಳ, ದುರ್ಬಲ. ಅದೆಲ್ಲ ನೆನಪಿಗೆ ಬಂದೊಡನೆ ಮನಸ್ಸು ಕುದಿಯತೊಡಗುತ್ತದೆ, ಆತಂಕವಾಗುತ್ತದೆ. ಇವತ್ತು ಸೇಡು ತೀರಿಸಿಕೊಳ್ಳುವುದಕ್ಕೆ ಅವಕಾಶಸಿಕ್ಕಿದೆ. ಉತ್ಸಾಹ ಉನ್ಮಾದಗಳನ್ನು ತಡೆಯಲು ಎಷ್ಟು ಪ್ರಯತ್ನಿಸಿದರೂ ಕಟ್ಟೆಯೊಡೆದು ಮುನ್ನುಗ್ಗುತ್ತವೆ. ಒಂದು ಮೈಯಲ್ಲಿ ಲೆಕ್ಕವಿಲ್ಲದಷ್ಟು ಗಾಯಗಳು, ಲೆಕ್ಕಕ್ಕೆ ಸಿಗದಷ್ಟು ಪ್ರವೃತ್ತಿಗಳಿಂದುಂಟಾದ ವಿಕಾರಗಳು ಚುಚ್ಚುತ್ತಿರುತ್ತವೆ. ನಾನಾ ವಿಧವಾದ ರೋಗಾಣುಗಳನ್ನು ಉಂಟುಮಾಡುವ ಜೀವಾಣುಗಳಿವೆ. ಯಾವ ರೋಗದ ಜೀವಾಣುಗಳು ಯಾವ ಋತುವಿನಲ್ಲಿ, ತಣಿವಿನಲ್ಲಿ, ಬಿಸಿಯಲ್ಲಿ ಮತ್ತೆ ಅವಕಾಶ ದೊರಕಿಸಿಕೊಂಡು ಉಪದ್ರವ ಕೊಡಲು ಶುರು ಮಾಡುತ್ತದೊ, ಅದೇ ರೀತಿಯಲ್ಲಿ ಅವನಲ್ಲಿ ಹೊಸ ವಿಚಾರ ಮಾಡಿದೆ. ಈ ಹೃದ ಹರ್ಷನನ್ನೇ ತಿರುಚುಮುರುಚು ಮಾಡಿ ಚೂರು ಚೂರಾಗಿಸಬೇಕೆನಿಸುತ್ತದೆ. ನೆನಸಿಕೊಳ್ಳುತ್ತಲೆ ಮೈಯೆಲ್ಲ ನಡುಗುತ್ತದೆ.

ಸರೋಜಿನಿ ಕಾಯುತ್ತಿದ್ದಾಳೆ.

ಆದರೆ ಅವನಿಗೆ ಅವಳ ಮುಖವನ್ನೇ ನೋಡಲು ಆಗುತ್ತಿಲ್ಲ. ಹೊಸ ವಿಚಾರ ತಲೆಗೆ ತುಂಬಿಕೊಂಡಾಗಿನಿಂದ ಮನಸ್ಸಿನಾಳದಲ್ಲೇ ಕೊರೆಯಲು ಶುರು ಮಾಡಿದೆ. ಒಳಗೆ ಹೋಗಿ ನೋಡಿದ ಮನೆಯನ್ನೆಲ್ಲ ಓರಣವಾಗಿಟ್ಟಿದೆ - ಟೇಬಲ್ಲು, ಕುರ್ಚಿ, ಮಂಚ, ಹಾಸಿಗೆ ಎಲ್ಲಾ ಸರಿಯಾಗಿದೆ. ಕುರ್ಚಿಯ ಮೇಲೆ ಕೂತುಕೊಂಡು ಜೋರಾಗಿ ಕೂಗಿದ, "ಏ ಹೃದ, ಬೂಟು ಬಿಚ್ಚು."

ಹರ್ಷ ಬೂಟು ಬಿಚ್ಚಲು ಕುಳಿತುಕೊಂಡ. ಅವನ ತೊಡೆಗಳ ಮೇಲೆ ಕಾಲಿಟ್ಟು

ಬಲಿದತ್ತ ಅಪ್ಪಣೆ ಮಾಡಿದ, "ಹೂಂ, ಬೂಟು ಬಿಚ್ಚು, ಲೇಸು ಬಿಚ್ಚು."

ತಕ್ಷಣ ಮನಸ್ಸಿಗೆ ಬಂತು. ಮೈಕೈಯೆಲ್ಲ ನೋವಾಗಿದೆ. ಜೋರಾಗಿ ಮಾಲಿಷ್ ಮಾಡಿಸಿಕೊಳ್ಳಬೇಕು ಅನಿಸತೊಡಗಿತು. ಸರೋಜಿನಿ ಬಟ್ಟೆಗಳನ್ನು ಹಿಡಿದುಕೊಂಡು ನಿಂತಿದ್ದಳು. ಬಲಿದತ್ತ ಹೇಳಿದ, "ತುಂಬಾ ಸುಸ್ತಾಗುತ್ತಿದೆ, ಮೈಯಲ್ಲೆಲ್ಲ ನೋವು, ಅಬ್ಬಾ, ಅದೆಷ್ಟು ಕೆಲಸ."

ಸರೋಜಿನಿಯ ಮುಖ ಒಣಗಿತು. ಹಣೆಮೇಲೆ ಕೈಯಿಟ್ಟು ನೋಡಿದಳು, "ನೋಡೋಣ, ಏನೂ ಬಿಸಿಯಾಗಿಲ್ಲವಲ್ಲ!- ಇಲ್ಲ ಡಾಕ್ಟರನ್ನು ಕರೆದುಕೊಂಡು ಬಾ ನಿತಾಯ್."

"ಇಲ್ಲ, ಇಲ್ಲ ಹಾಗೆಲ್ಲ ಏನೂ ಯೋಚನೆ ಬೇಡ. ನನಗೆ ಅಂತದೇನೂ ಆಗಿಲ್ಲ. ಇಲ್ಲಿ ಕೆಲಸ ಬಹಳ ಜಾಸ್ತಿ. ತಲೆಮೇಲೆ ಜವಾಬ್ದಾರಿ ಬಿದ್ದಿದೆ. ಸಾಧಾರಣವಾದ ನೋವು, ನೀನು ಹೋಗು, ಚಹಾ ತೊಗೊಂಡು ಬಾ, ಲೋ ಹರ್ಷ ಸ್ವಲ್ಪ ಮೈಒತ್ತಿ - ಬಿಡು, ನಿನಗೆ ಒತ್ತಲು ಬರೋದಿಲ್ಲ. ಸರಿ, ಸ್ವಲ್ಪ ಮಾಲೀಶಾದರೂ ಮಾಡು. ನೀನು ಹೋಗಿ ಹಾಗೆ ಊಟನೂ ತಂದುಬಿಡು ಸರೋಜ." ಪಂಚೆ ಬದಲಾಯಿಸಿ ಆರಾಮವಾಗಿ ಮೈಚಾಚಿದ ಬಲಿದತ್ತ. ಹರ್ಷ ಮಾಲಿಶ್ ಮಾಡಲು ಶುರುಮಾಡಿದ - ಮೊದಲು ಹೆದರಿಕೊಂಡು ಮೆಲ್ಲಗೆ ಉಜ್ಜುತ್ತಿದ್ದವನು ಆಮೇಲೆ ಧೈರ್ಯಮಾಡಿ ಜೋರಾಗಿ ತಿಕ್ಕತೊಡಗಿದ. ಅದಾದ ಮೇಲೆ ಅವನ ಕೋಮಲವಾದ ಕೈ ಸಲೀಸಾಗಿ ಮುಂದೋಡತೊಡಗಿತು. ಕೆಸರಿನಲ್ಲಿ ಕೈಯಾಡಿಸುತ್ತಿರುವಂತೆ ಉಜ್ಜತೊಡಗಿದ. ಬಲಿದತ್ತ ಆರಾಮವಾಗಿ ಕೈಕಾಲು ಚಾಚಿ ಮಲಗಿದ್ದಾನೆ. ಮಧ್ಯದಲ್ಲೇ ಹೇಳುತ್ತಿದ್ದಾನೆ - "ಸ್ವಲ್ಪ, ಸ್ವಲ್ಪ, ಹಾಗೇ, ಆಕಡೆ ಆಕಡೆ, ಸ್ವಲ್ಪ ಜೋರಾಗಿ, ಉಹೂಂ, ಸರಿ ಹೋಗಲ್ಲ, ಇನ್ನೂ ಸ್ವಲ್ಪ ಜೋರಾಗಿ. ಇನ್ನೊಂದು ಸ್ವಲ್ಪ ಮೇಲೆ, ಹಾಂ, ಅಲ್ಲೇ, ಅಬ್ಬಾ ಮುರಿದುಹೋಗುವಂತಿದೆ." ಮೋರೆ ತಗ್ಗಿಸಿ ಬೆವರಿನಿಂದ ತೊಯ್ದು ಬಡಪಾಯಿ ಹರ್ಷ ಕೈಯಾಡಿಸುತ್ತಿದ್ದಾನೆ. ಹಣೆಯಲ್ಲಿ ಬೆವರು ಮೂಡುತ್ತದೆ. ಅವನ ಮೈಯೂ ಬಿಸಿಯಾಗುತ್ತಿದೆ. ಆದರೂ ಸುಮ್ಮನಿದ್ದಾನೆ.

ಈ ರೀತಿ ಮಾಲೀಶು ಮಾಡಿಸಿಕೊಳ್ಳುವುದು ಬಲಿದತ್ತನಿಗೆ ಹೊಸ ಅನುಭವ. ಚೆನ್ನಾಗಿರುತ್ತದೆ. ಈ ಗಳಿಗೆಯಲ್ಲಿ ಇದೇ ಜೀವನದ ರುಚಿ, ಸೊಗಸು. ಅವನು ಎಷ್ಟು ದೊಡ್ಡವನು, ಎಷ್ಟು ಕಡೆ ಕೆಲಸಗಳು, ಎಷ್ಟು ಕಡೆ ಓಗೊಡಬೇಕು. ಬದುಕು ಇರುವುದು ಭೋಗಪಡುವುದಕ್ಕಾಗಿ, ಎಷ್ಟು ಎತ್ತರಕ್ಕೆ ಇಷ್ಟವಾಗುತ್ತದೊ ಅಷ್ಟು ಎತ್ತರಕ್ಕೆ ಹಾರಬೇಕು. ಯಾರ ಕೈಲಿ ಹರಿಯುವುದಿಲ್ಲವೊ ಅವರೇ ಮೂಗೆಳೆಯುವುದು, ಯಾರ ಬಳಿ ಸಾಧನಗಳಿಲ್ಲವೊ ಅವರೇ ಕೈಲಿ ಹರಿಯುವುದಿಲ್ಲ ಅಂತ ನಂಬಿ ಕೂಡುತ್ತಾರೆ. ಆದರೆ ಯಾರು ಶಕ್ತಿಶಾಲಿಗಳೊ ಯಾರಿಗೆ ಬೇರೆಯವರ ಗೊಡವೆಯಿಲ್ಲವೊ - ಈಗ ತಾನು ಆಫೀಸರು ಇರುವಂತೆ - ಅವನಿಗೆ ಕೈಲಿ ಹರಿಯುವುದಿಲ್ಲ ಅನ್ನುವ ಮಾತೇ ಒಗ್ಗುವುದಿಲ್ಲ. ಅವನಿಗೆ ಎಲ್ಲವೂ ಆರಾಮ - ಈ ರೀತಿಯ ಆರಾಮ ಸುಲಭ. ಈ ನವಾಬರು, ಬಾದಶಹರು ಇವರುಗಳ ಪ್ರತಿಷ್ಠೆ ಜನಸಾಮಾನ್ಯರಿಗೆ ಎಟುಕಲಾರದ್ದಾಗಿತ್ತು. ಅವರ ಪೇಯಗಳು ಮಂದಿಯ ಪಾಲಿಗೆ ವಿಷವಾಗಿತ್ತು. ಇಂದು ಕೂಡ ಅವರುಗಳ ವಂಶಸ್ಥರು ಬೇರೆ ಬೇರೆ ದೇಶಗಳಲ್ಲಿ

ಬೇರೆ ಬೇರೆ ವೃತ್ತಿಗಳಲ್ಲಿ ಇದ್ದಾರೆಯಾದರೂ ಅದೇ ರೀತಿಯಲ್ಲಿ ಸಾಧಾರಣ ಜನರಿಗಿಂತ ಕೈಗೆ ಎಟುಕದಷ್ಟು ದುಬಾರಿಯಾಗಿಯೆ ಇರುತ್ತಾರೆ. ಅವರು ಭೋಗಿಗಳು, ಪ್ರಪಂಚ ಅವರನ್ನು ಕೆಳಗಿನಿಂದ ಮೇಲಕ್ಕೆ ನೋಡುತ್ತದೆ. ಅವರು ತಮ್ಮ ಸ್ವಂತ ತೆವಲಿನಿಂದ ತಮಗಾಗಿ ಅನೇಕ ರೀತಿಯ ಪಿಪಾಸೆಗಳನ್ನು ಉಂಟು ಮಾಡಿಕೊಳ್ಳುತ್ತಾರೆ. ನಾನಾ ಉಪಾಯಗಳನ್ನು ಹೂಡಿ ಪಿಪಾಸೆಗಳನ್ನು ಇಂಗಿಸಿ ಕೊಳ್ಳುತ್ತಾರೆ. ನಾಯಿಗಳು ಬೊಗಳುತ್ತಿರುತ್ತವೆ, ಆನೆ ನಡೆಯುತ್ತಿರುತ್ತವೆ. ಅವರು ಹೆದರುವುದಿಲ್ಲ. ಸಣ್ಣ ಜನರು ತಮ್ಮತಮ್ಮಲ್ಲಿಯೆ ಮಾತಾಡಿಕೊಳ್ಳುತ್ತಿರುತ್ತಾರೆ. - ಇಂಥ ಮನುಷ್ಯ ಘೋರ ಕಾಮುಕ, ಸಾಮಾಜಿಕ ನಡೆವಳಿಕೆಗಳೂ ಇವನಿಗೆ ಗೊತ್ತಿಲ್ಲ, ತುಂಬ ವಿಶ್ವಾಸದಿಂದ ತನ್ನ ಪ್ರೇಯಸಿಯನ್ನು ತಂಗಿ ಅಥವಾ ಮಗಳು ಅಂತ ಹೇಳಿಕೊಂಡು ತಿರುಗುತ್ತಾನೆ. ಇನ್ನೊಬ್ಬ ಥೆ, ಇವನೊಬ್ಬ ಅಂಡಲೆಯುವ ಬೀದಿನಾಯಿ, ಈಚೆಗೆ ತಾನೆ ಅವನ ಹೆಂಡತಿ ಅವನ ಮರ್ಯಾದೆ ಕಳೆದು ಮಣ್ಣು ಮುಕ್ಕಿಸಿದ್ದಾಳೆ, ಮತ್ತೊಬ್ಬ - ಅವನನ್ನು ಕುರಿತು ಪೇಟೆಯಲ್ಲೆಲ್ಲ ಗುಲ್ಲು. ಅವನ ಮನಸ್ಸಿನ ಪ್ರವೃತ್ತಿ ಎಷ್ಟು ಅಸಹಜವಾದುದು, ಎಲ್ಲ ವಿಶ್ವಾಮಿತ್ರನ ಅವತಾರವೇ. ಆದರೆ ಅವರ ಮಾತುಗಳಿಗೆ ಗಮನ ಕೊಡುವವರು ಯಾರು ?

ಯಾರಿಗೆ ಕೈಗೆಟಕುವುದಿಲ್ಲವೊ, ಅವರೇ ಬೊಗಳುತ್ತಾ ಅಲೆಯುತ್ತಾರೆ.

ಆದರೆ ಬದುಕು! ಊದಿ ಕೆನೆ ತೆಗೆದರೆ ಅದರಲ್ಲಿ ಅನೇಕ ರುಚಿ ಕಾಣಸುತ್ತದೆ. ವಾರೆವ್ಹಾ! ಚೆನ್ನಾಗಿ ಮಾಲೀಶು ಮಾಡ್ತಾನೆ ಈ ಹುಡುಗ, ಎಳೆಯ ಬೆರಳುಗಳು ಮನಸ್ಸಿನಲ್ಲಿ ಒಂದು ರೀತಿಯ ಹೊಸ ಆನಂದ ಹುಟ್ಟುತ್ತದೆ.

ಕಣ್ಣುಗಳನ್ನು ಅರ್ಧಮುಚ್ಚಿ ಒಲಿದತ್ತ ಹೊಸ ಸುಖವನ್ನು ಆಸ್ವಾದಿಸುತ್ತಿದ್ದಾನೆ. ಮನದಾಳದ ಭಾವನೆಗಳಿಂದ ಕೂಡಿದ ಸ್ಪಂದನ, ಹೇಳದ್ದು ಹೇಳದೆ ಇದ್ದದ್ದು ಅರ್ಧ ಹೇಳಿದ್ದು, ಸುಮ್ಮನೆ ಮನಸ್ಸಿನಲ್ಲೇ ಮಂಡಿಗೆ ತಿನ್ನುತ್ತಿರುವ ಭಾವನೆಗಳು - ಅವುಗಳಲ್ಲಿ ಅನೇಕ ಭಾವನೆಗಳು ಕೇವಲ ತನ್ನ ಮನಸ್ಸಿನ ಕಿವಿಗಳಿಗೆ ಮಾತ್ರ ಕೇಳಿಸುತ್ತವೆ, ಎಷ್ಟೋ ಕೇಳಿಸದೆ ಹೋಗುತ್ತವೆ, ಸುಮ್ಮನೆ ಅನುಭವವಾದಂತಾಗು ತ್ತದೆ. ಹೆಜ್ಜೆಹೆಜ್ಜೆಗೂ ಭಾವನೆಗಳು ಮನಸ್ಸಿನಿಂದ ಮೇಲೇಳುತ್ತವೆ. ಕೆಲವು ದಿನಗಳ ಹಿಂದೆ ಅವನು ತಾನು ಈ ರೀತಿಯ ಯೋಚನೆಗಳನ್ನು ಮಾಡಬಹುದೆಂದು ಕಲ್ಪಿಸಿಕೊಳ್ಳಲೂ ಸಾಧ್ಯವಾಗುತ್ತಿರಲಿಲ್ಲ. ಯಾರಾದರೂ ತಮಾಷೆ ಮಾಡುತ್ತಾ ರಸ್ತೆಯಲ್ಲಿ ಅಲೆಯುವ ಹಾಳು ಭಿಕ್ಷುಕನ ಮನಸ್ಸನ್ನು ಹುಡುಕಿದರೆ ಅದರೊಳಗಡೆ ಸಮೃದ್ಧವಾಗಿರುವ ಶ್ರೀಮಂತನೊಬ್ಬನ ಅತ್ಯಾಚಾರಿ ಮನೋಭಾವನೆ ಪುಟಿದೇಳಲು ಅವಕಾಶ ಸಿಗದೆ ಒದ್ದಾಡುತ್ತಿರುವುದನ್ನು ಕಾಣುತ್ತೇವೆಂದು ಹೇಳಬಹುದು. ಅಭಾವದಿಂದ ಕೊಳೆತು ಭೂಮಿಯ ಮೇಲೆ ಸಮತೆಯನ್ನು ಸ್ಥಾಪಿಸುವುದಕ್ಕಾಗಿ ಅರಚುತ್ತಿರುವ ನಿರ್ಗತಿಕ ಮನುಷ್ಯನ ಮನಸ್ಸಿನೊಳಗೆ ಇಳಿದು ಅರಸಿ ನೋಡಿದಾಗ ಯಾವುದಾದರೂ ಮೂಲೆಯಲ್ಲಿ ಹುಲಿಯ ಸೇಡಿನ ಮನುಷ್ಯನ ಆದರ್ಶವಾದಿ ಮುಖಿಯಾವಲಿ ದಾರ್ಶನಿಕನ ತೀವ್ರ ಆಸೆಆಕಾಂಕ್ಷೆಗಳು ಸಿಗಬಹುದು. ಕೇವಲ ಪರಿಸ್ಥಿತಿಗಳ ಒತ್ತಡದಿಂದ ಕೆಳಗೆ ಅದುಮಿದಂತಾಗಿ ಬೇರೆ ಹಾದಿ ಹಿಡಿದಿರುತ್ತದೆ ಅಷ್ಟೆ. ಅಧರ್ಮದ ಮಾತನ್ನು ಅವನ ಎದುರಿಗೆ ಯಾರಾದರೂ ಆಡಿದರೆ ಸರಿ,

ಅವನು ಹೇಳುತ್ತಾನೆ - ಶಕ್ತಿ ಪಡೆದ್ರು ಸಾಧಾರಣ ಮನುಷ್ಯನ ಮನುಷ್ಯತ್ವ ಹಾಳಾಗಿಹೋಗುತ್ತದೆ. ಭಯ ಮತ್ತು ಅಸಂಭಾವ್ಯತೆಗಳು ಮುಂದೊಡ್ಡುವ ಅಡೆತಡೆಗಳನ್ನು ತಳ್ಳಿಹಾಕಿ ಒಳಗೇ ಅಡಗಿರುವ ಸ್ವೇಚ್ಛಾಗುಣ ತಾನೇತಾನಾಗಿ ಹೊರಬೀಳುತ್ತದೆ; ಬೀದಿ ದನದಂತೆ ಸಮಾಜದ ಮುಂದೆ ತನ್ನ ಎರಡು ಕಾಲುಗಳನ್ನೆತ್ತಿ ಇನ್ನೊಬ್ಬರ ಚಪ್ಪರವನ್ನು ಎಳೆದು ತಿನ್ನುವುದರಲ್ಲಿ ಅದಕ್ಕೆ ಯಾವ ಸಂಕೋಚವೂ ಆಗಲಾದರು. ಯೋಗಿ ಭೋಗಿಯಾಗುತ್ತಾನೆ. ಹಿಂದೆ ತ್ಯಾಗ ಮಾಡಿದ್ದೆ, ಅದರಿಂದ ತುಂಬ ಸೊರಗಿಹೋಗಿದ್ದೇನೆ ಅಂತ ಕೊಚ್ಚಿಕೊಳ್ಳುತ್ತಾ ಅವನು ರಕ್ತಮಾಂಸಗಳನ್ನು ಮೆದ್ದು ಬೇಗ ಮೈ ಊದಿಸಿಕೊಳ್ಳುತ್ತೇನೆ ಅಂತ ಡಂಗುರ ಸಾರಿ ಕೆಲಸಕ್ಕಿಳಿಯುತ್ತಾನೆ.

ಆದರೆ ದರ್ಶನಶಾಸ್ತ್ರ ಬಲಿದತ್ತನ ಪಾಲಿಗೆ ಬಂದಿದ್ದ ದೌರ್ಬಲ್ಯವಾಗಿರಲಿಲ್ಲ. ಅವನ ಶಾಸ್ತ್ರ ಯಶಸ್ವಿಯಾಗುವ ವ್ಯಕ್ತಿಯ ಶಾಸ್ತ್ರ. ಮನಸ್ಸಿನಿಂದ ಅವನು ಬ್ರಾಹ್ಮಣನಲ್ಲ. ಹಾಗಾಗಿ ಅವನು ತನ್ನನ್ನು ತಾನೆ ಅನುಕೂಲ ಮತ್ತು ಅದೃಷ್ಟಗಳ ಹರಿಯುವ ಅಲೆಗಳ ಮೇಲೆ ಹರಿಯಬಿಟ್ಟುಕೊಂಡಿದ್ದಾನೆ. ಅಲೆ ಮುಂದೆ ಮುಂದೆ ಹೋಗಲಿ ಅಂತ ಅವನ ಬಯಕೆ. ಅಲೆಯೊಡನೆ ಸೇರಿ ಮರಳಿನಲ್ಲಿ ಹೊಡೆತ ತಿಂದು ಹಿಂದಿರುಗುವುದೆಂದರೆ ಅವನಿಗೆ ಚಿಕ್ಕಂದಿನಿಂದಲೂ ಕಂಡರಾಗುವುದಿಲ್ಲ.

ಸ್ಪಂದನ ಅವನಲ್ಲಿ ಸ್ಪಂದನವನ್ನು ಮೂಡಿಸಿದೆ. "ಮಾಲೀಶು ಮಾಡುತ್ತಾ ಇರು ಹರ್ಷ. ಕೈ ನೋವಾದರೆ ಸುಮ್ಮನೆ ಹಾಗೇ ಕೈಯಾಡಿಸುತ್ತಿರು." ಸರೋಜಿನಿ ಯಾವಾಗಲೋ ಚಹಾ ಇಟ್ಟು ಹೋಗಿದ್ದಳು. ಅಡುಗೆ ಮನೆಯಿಂದ ನಿತಾಯಿಯ ಸದ್ದು ಕೇಳಿಸುತ್ತಿತ್ತು.

ಹರ್ಷ ಎದ್ದು ನಿಂತ. "ಎಲಾ, ನಿನ್ನದು ಎಷ್ಟು ಚಿಕ್ಕ ಚಿಕ್ಕ ಕೈಕಾಲುಗಳು. ಇನ್ನು ದಪ್ಪವಾಗೋದಿಲ್ಲವೆ? ಚೆನ್ನಾಗಿ ತಿಂದು ಕುಡಿದು ದಪ್ಪನಾಗು." ಅವನ ಎಳಸಾದ ಮೈಯನ್ನು ಚೆನ್ನಾಗಿ ಹಿಸುಕಿ ತನ್ನ ಶಕ್ತಿಯನ್ನು ತೋರಿಸುವುದರಲ್ಲಿ ಅದೆಷ್ಟು ಆನಂದವಿದೆ? ಈ ಕೋಮಲತೆಯಿಂದ ಅವನು ಜೀವನವನ್ನೇ ಹೀರಬಯಸುತ್ತಾನೆ.

ಹರ್ಷ ಕಳ್ಳನಂತೆ ಅತ್ತಇತ್ತ ನೋಡುತ್ತಾನೆ. "ಅಯ್ಯೋ, ತೋಳು ಮುರಿದುಹೋಗ್ತಾ ಇದೆ ಬುದ್ದಿ!"

"ಹ್ಹೆ ಹ್ಹೆ ಹ್ಹೆ ನೋಡೋಣ ನನ್ನಲ್ಲಿ ಎಷ್ಟು ಶಕ್ತಿ ಇದೆ ಅಂತ."

"ತುಂಬಾ ಶಕ್ತಿ , ತುಂಬಾ ಜೋರಾಗಿದೆ ಬುದ್ದಿ, ಅಯ್ಯೋ ಬಿಟ್ಟುಬಿಡಿ, ಬಿಟ್ಟುಬಿಡಿ!"

"ಹೀಗೇಕೆ ಕಾಡು ಮನುಷ್ಯನ ಹಾಗಾಡುತ್ತಿ. ಅದು ಸರಿ, ನೀನು ಆಟದಲ್ಲಿ ಕುಣೀತಿದ್ದೆ ಅಂದೆಯಲ್ಲ. ಅಲ್ಲಿ ಏನು ವೇಷ ಹಾಕ್ತಾ ಇದ್ದಿ?"

"ರಾಣಿ ವೇಷ ಹಾಕ್ತಾ ಇದ್ದೆ ಬುದ್ದಿ-"

"ವಾಹ್! ವಾಹ್! ರಾಣಿ, ಅಯ್ಯನೋರು ಯಾವ ರೀತಿ ಕಣ್ಣು ಹೊಡೆಯೋದನ್ನ ಕಲಿಸಿದ್ರು. ಸ್ವಲ್ಪ ತೋರಿಸು ನೋಡೋಣ? ಹಹ್ಹಾ-"

ಹರ್ಷ ನಕ್ಕ. ಬಲಿದತ್ತ ಹೇಳಿದ - "ಚೆನ್ನಾಗಿ ಕೆಲಸ ಮಾಡಬೇಕು. ನಿನ್ನನ್ನ ನನ್ನ ಹತ್ತಿರವೇ ಇಟ್ಟುಕೊಳ್ತೀನಿ. ಬೇಸಗೆ ದಿನಗಳಲ್ಲಿ ಗಾಳಿ ಹಾಕುವ ಕೆಲಸ ಶುರುವಾದ

ಮೇಲೆ ನಿನ್ನನ್ನ ನನ್ನ ಹತ್ತಿರ ಇಟ್ಟುಕೊಳ್ತೀನಿ. ದೊಡ್ಡವನಾದ ಮೇಲೆ ಒಳ್ಳೇ ಆಳಾಗಬೇಕು. ಇಲ್ಲದಿದ್ರೆ ಕಂಪೆನಿ ಉಗ್ರಾಣದಲ್ಲಿ ಕೂಲಿ ಕೆಲಸಕ್ಕೆ ಹಾಕ್ತೀನಿ."

"ಸರಿ ಬುದ್ಧಿ, ಸರಿಯಾಗಿ ಕೆಲಸ ಮಾಡ್ತೀನೆ."

ಹರ್ಷ ಮತ್ತೆ ನಕ್ಕ, ಅವನೀಗ ಬೇರೆಯವನಲ್ಲ, ಗುರುತಿಲ್ಲದವನಲ್ಲ. ತನ್ನ ದೆಸೆಯೂ ಬದಲಾಯಿಸಿತು ಅಂದುಕೊಂಡ. ಈ ಸಮಯ ನೋಡಿಕೊಂಡೇ ಅವನು ತನ್ನ ಹೊಟ್ಟೆಪಾಡಿನ ಅಹವಾಲನ್ನು ಮುಂದಿಡುತ್ತಾ ಹೇಳಿದ, "ಇದೆಲ್ಲಾ ನೋಡಿ ಬುದ್ಧಿ, ಹೇಗೆ ಹರಿದುಹೋಗಿವೆ, - ಯಾವುದಾದ್ರೂ ಹಳೇ ಹರಿದ ಬಟ್ಟೆ ತುಂಡಿದ್ರೆ-"

"ಸಿಗುತ್ತೆ, ಸಿಗುತ್ತೆ, ಎಲ್ಲಾ ಸಿಗುತ್ತೆ."

"ಈವತ್ತು ಮನೆಯಲ್ಲಿ ತಿನ್ನೋದಕ್ಕೆ ಏನೂ ಇಲ್ಲ. ಒಂದೆರಡಾಣೆ"

"ಸರಿ, ಸರಿ, ತೊಗೊ" ಮೇಲೆದ್ದು ತನ್ನ ಷರ್ಟಿನ ಜೇಬಿನಿಂದ ಎರಡಾಣೆ ತೆಗೆದು ಹರ್ಷನ ಕೈಯಲ್ಲಿಟ್ಟು ಬೆನ್ನು ತಟ್ಟಿದ. "ತೊಗೊ ತೊಗೊ, ನೀನು ಕೇಳಿದ್ದನ್ನೆಲ್ಲ ಕೊಡುತ್ತಿದ್ದೇನೆ. ನಾಳೇನೂ ಸ್ವಲ್ಪ ಕಾಲೊತ್ತಬೇಕು, ಗೊತ್ತಾಯ್ತಾ!"

ಹರ್ಷ ಕೆಲಸದ ಮೇಲೆ ಹೊರಟುಹೋದ. ಬಲಿದತ್ತನ ಮನಸ್ಸು ತೆರೆದಿದೆ. ಇದು ಅವನು ಮೊದಲನೆಯದಾಗಿ ಕೊಟ್ಟ ಉದಾರವಾದ ಕೊಡುಗೆ. ಒಂದೇ ಬಾರಿಗೆ ಎರಡಾಣೆ. ತುಂಬ ಆತ್ಮ ಸಂತೋಷವಾಗುತ್ತದೆ. ಒಳಗೆ ಹೋಗಿ ಸರೋಜಿನಿಗೆ ಹೇಳಿದ. "ಈ ಹೈದನಿಗೆ ತುಂಬಾ ಚೆನ್ನಾಗಿ ಮಾಲೀಶು ಮಾಡೋದು ಬರುತ್ತೆ. ನೋಡು, ಮೈಯಲ್ಲಿ ಸ್ವಲ್ಪ ಉತ್ಸಾಹ ಮೂಡಿತು. ನನ್ನ ಬಟ್ಟೆಗಳನ್ನು ಕೊಡು. ಹಾಗೇ ಸುತ್ತಾಡಿಕೊಂಡು ಬರುತ್ತೇನೆ."

ಮೈಯಲ್ಲಿ ಆಯಾಸ ಇನ್ನೂ ಇದೆ, ಬಲಿದತ್ತ ಹೇಳಿದ - "ಬೇಡ, ಈವತ್ತು ಬೇಡಬಿಡು. ನೀನು ಒಬ್ಬಳೇ ಇರಬೇಕಾಗುತ್ತೆ. ನಾನು ಹಾಗೇ ಸ್ವಲ್ಪ ಹೊತ್ತು ಮಲಗಿಕೊಳ್ತೇನೆ."

ಸರೋಜಿನಿ ಏನೂ ಹೇಳಲಿಲ್ಲ. ನಿಜ ಹೇಳಬೇಕೆಂದರೆ ಅವಳಿಗೂ ಏನೋ ಬಣಬಣ. ಯಾವಾಗಲಾದರೂ ಒಮ್ಮೊಮ್ಮೆ ಕಾಡುತ್ತಿದ್ದ ಒಬ್ಬಂಟತನದ ಅನುಭವವಾಗುತ್ತಿತ್ತು.

ಕೆಲಸ, ಕೆಲಸ.

ಮತ್ತೆ ಕೆಲಸದ ಮರೆಯಲ್ಲಿ ಪ್ರತಿನಿತ್ಯ ಏನಾದರೂ ನೆಪ ಹುಡುಕುವುದು, ಯಾವ ಉಪಾಯದಿಂದ ಮೆಲ್ಲಮೆಲ್ಲನೆ ಮುಂದುವರೆಯಲು ಸಾಧ್ಯವಾಗುತ್ತೆ, ಉಪಾಯವನ್ನು ಕುರಿತು ಯೋಚಿಸಿದ ಮೇಲೆಯೆ ಕೆಲಸ, ಮತ್ತೆ ಕೆಲಸ. ಅನೇಕ ಸಾಧಾರಣ ವಿಷಯಗಳು ಅವನಿಗೆ ಅಭ್ಯಾಸವಾಗಿ ಹೋಗಿದೆ. ಅವನು ಹೆಚ್ಚಾಗಿ ಎಲ್ಲೂ ತಿರುಗಾಡಲು ಹೋಗುವುದಿಲ್ಲ. ಒಂದು ವೇಳೆ ಹೋದರೂ ಯಾವುದಾದರೂ ನಿರ್ದಿಷ್ಟವಾದ ಉದ್ದೇಶವನ್ನು ಹೊತ್ತೇ ಹೋಗುವುದು. ಆಫೀಸಿಗೆ ಅಥವಾ ಕಂಪೆನಿಗೆ ಸಂಬಂಧಪಟ್ಟ ಯಾರಾದರೂ ಸಿಕ್ಕಿದರೆ ಸಾಕು. ಬಾಯಿಂದ ತನಗೆ ತಾನೆ ಈ

ಮಾತುಗಳು ಹೊರಗೆ ಬೀಳುತ್ತವೆ, - "ಅಬ್ಬಾ, ಅದೆಷ್ಟು ಕೆಲಸ, ಮೈ ತುರಿಸಿಕೊಳ್ಳಲೂ ಪುರುಸೊತ್ತಿಲ್ಲ." ಕೂಡಲೇ ಅವನು ತಾನು ಮಾಡಿದ ಕೆಲಸವನ್ನು ಕುರಿತಂತೆ, ತಾನೇ ಕಲ್ಪಿಸಿದ ಒಂದು ಮಾದರಿಯನ್ನು ಮುಂದಿಡುತ್ತಾನೆ. ಜನ ಕೇಳುತ್ತಾರೆ. ಆದರೆ ಕೇಳಿ ತಲೆಯೊಳಗೆ ತುಂಬಿಕೊಳ್ಳುವ ಮೊದಲು ನಿಜ ಯಾವುದು ಸುಳ್ಳು ಯಾವುದು ಅಂತ ಕಂಡುಕೊಳ್ಳುವುದು ಸಾಧಾರಣ ಮನುಷ್ಯರ ಸಾಮರ್ಥ್ಯಕ್ಕೆ ಹೊರತಾದದ್ದು. ಈ ಮನೋವಿಜ್ಞಾನದ ಆಸರೆಯನ್ನು ಪಡೆದೇ ಬಲಿದತ್ತ ಒಂದನ್ನು ಹತ್ತು ಮಾಡಿ ಹೇಳುತ್ತಾನೆ. ಯಾರು ಎಂತಹ ಉಪದೇಶವನ್ನು ಕೊಟ್ಟಿದ್ದರು ಅಂತ ಅವನಿಗೆ ನೆನಪಾಗುತ್ತದೆ - ಆ ಶಾಸ್ತ್ರದ ಹೆಸರು ಬ್ಲಫಾಲಜಿ. ದಾರಿಯಲ್ಲಿ ಅವನು ತುಂಬ ಕೆಲಸ ಹೊತ್ತವನಂತೆ ಹೆಜ್ಜೆ ಹಾಕುತ್ತಾನೆ. ಯಾರಾದರೂ ಕೇಳಿದರೆ ಹೇಳುತ್ತಾನೆ - "ಕೆಲಸದ ಹೊರೆ ಬಹಳವಾಗಿದೆ. ನಿಂತುಕೊಳ್ಳುವುದಕ್ಕೂ ಪುರುಸೊತ್ತಿಲ್ಲ." ಹಾಗೆಯೆ ಯಾವಾಗಲಾದರೂ ಸ್ನೇಹಿತರು ಸಹೋದ್ಯೋಗಿಗಳು ಸುತ್ತಾಡುತ್ತಾ ಮನೆಗೆ ಬಂದರೆ ಸಾಕು, ಹೊರಗಿನಿಂದಲೆ ಧ್ವನಿ ಕೇಳುತ್ತಲೇ ಮನೆ ತಯಾರಾಗಿರುತ್ತದೆ - ಮೇಜಿನ ಮೇಲೆ ಅಸ್ತವ್ಯಸ್ತವಾಗಿ ಹರಡಿದ ಕಾಗದ ಪತ್ರಗಳು, ಫೈಲುಗಳ ರಾಶಿ, ಶಾಯಿ ಕುಡಿಕೆಯ ಮುಚ್ಚಳ ತೆರೆದಿದೆ, ಪೆನ್ನಿನ ನಿಬ್ಬು ಇಂಕಾಗಿದೆ. ಮೆಲ್ಲಗೆ ಪರದೆ ತೆಗೆಯುತ್ತಾ ಆಗಂತುಕನನ್ನು ಸ್ವಾಗತಿಸಿ ಹೇಳುತ್ತಾನೆ, "ಕೆಲಸ ಮಾಡಿ ಮಾಡಿ ಸೊಂಟ ನೋವು ಬಂದಿದೆ. ಇಲ್ಲಿಗೆ ಬಂದು ಇನ್ನೂ ಕೆಲವೇ ದಿನಗಳಾದವು. ಅವರ ಮನಸ್ಸಿಗೆ ಹೇಗೆ ಅಷ್ಟೊಂದು ಇಷ್ಟವಾಗಿದೆಯೊ ಏನೋ ಗೊತ್ತಾಗಲಿಲ್ಲ. ಯಾವ ಯಾವ ಜವಾಬ್ದಾರಿ ಕೆಲಸಗಳಿದ್ದರೂ ಸಾಕು, ನನ್ನ ತಲೆಗೆ ಹೊರಿಸಿಬಿಡ್ತಾರೆ. ಏನು ಮಾಡೋದು ? ಮಾಡಲೇಬೇಕಲ್ಲ. ಕಂಪೆನಿಯ ಒಳಿತನ್ನು ನೋಡಬೇಕು. ಲಕ್ಷಾಂತರ ರೂಪಾಯಿಗಳ ವಿಚಾರ. ನಿಯತ್ತಿನಿಂದ ಕೆಲಸ ಮಾಡದಿದ್ದರೆ ಸಂಬಳ ತಾನೆ ಹೇಗೆ ಮೈಗೆ ಹಿಡಿದೀತು ? ಕಂಪೆನಿ ನಮಗೆಲ್ಲಾ ಅನ್ನ ಹಾಕೋದಿಲ್ಲವೆ". ಬ್ಲಫಾಲಜಿ, ಗಂಭೀರವಾಗಿ ಠೀಕುಠಾಕಾದ ಭಂಗಿಯಲ್ಲಿ ಇವೆಲ್ಲ ಹೇಳಿದರೆ ಕೇಳುವವರ ಮನಸ್ಸಿನ ಮೇಲೆ ಅವನ ವಿಷಯದಲ್ಲಿ ಮರ್ಯಾದೆಯ ಭಾವನೆ ಹುಟ್ಟುತ್ತದೆ. ಅವನು ಅದನ್ನೇ ನೋಡುವುದು - ಅವನೊಬ್ಬನೇ ಭಾವುಕನಲ್ಲ.

ಮೊದಲಿದ್ದ ಕೆಲಸದಲ್ಲಿ ಜೊತೆಯ ಉದ್ಯೋಗಿಗಳ ನಡುವೆ ಇದ್ದಾಗ ಅವನು ಯೋಚಿಸುತ್ತಿದ್ದ, - ಅವನಂತೆ ಯಶಸ್ಸನ್ನೇ ಸರ್ವಸ್ವವಾಗಿ ಮಾಡಿಕೊಂಡು ಕೆಲಸ ಮಾಡುವವರ ಸಂಖ್ಯೆ ಹೆಚ್ಚಿಲ್ಲ. ಕೆಲವು ಮಂದಿ ಇದ್ದರೂ, ಅವರ ಯೋಜನೆಯಲ್ಲಿ ಅಗತ್ಯವಾದ ವಿಶಿಷ್ಟ ಸೂಕ್ಷ್ಮತೆಯಿರಲಿಲ್ಲ.

ಆದರೆ ಇಲ್ಲಿ ನೋಡುತ್ತಾನೆ, ಕಂಪೆನಿಯಲ್ಲಿ ಅಧಿಕಾರ ವರ್ಗಕ್ಕೆ ಸೇರಿದವರಲ್ಲದಿದ್ದರೂ ಬಹಳ ಮಂದಿ ಮೇಧಾವಿಗಳಿದ್ದಾರೆ. ಬರಿ ರಣಜಿತ ಬಾಬು ಮಾತ್ರವಲ್ಲ, ಇನ್ನೂ ಅನೇಕ ಮಂದಿ ಇದ್ದಾರೆ. ಅವರೆಲ್ಲ ಅನೇಕ ರೀತಿಯ ಉಪಾಯಗಳನ್ನು ಹೂಡುತ್ತಾರೆ - ಎಚ್ಚರಿಕೆಯಿಂದ ತಿಜೋರಿಯಲ್ಲಿ ನೋಟಿನ ಕಂತೆಗಳಿಡುವಂತೆ ಸ್ಥೂಲದಿಂದ ಸೂಕ್ಷ್ಮದವರೆಗೆ ವಿಧವಿಧವಾದ ಪ್ರಯತ್ನಗಳನ್ನು ನಡೆಸುತ್ತಾರೆ. ಬಲಿದತ್ತ ದಿಕ್ಕೆಟ್ಟವನಂತಾಗುತ್ತಾನೆ. ಇಂತೆಡೆಯಲ್ಲಿ ಭಾರಿಭಾರಿಯಾದ ತೋಪು ಬಂದೂಕುಗಳು ಸಿಡಿಯುತ್ತಿರುವಾಗ ಅವನು ಸುಮ್ಮನೆ ಟಪ್ ಅನ್ನುವ

ಸಣ್ಣ ಪಟಾಕಿಯಂತಿದ್ದಾನೆ. ಒಮ್ಮೊಮ್ಮೆ ಭವಿಷ್ಯದ ಆಸೆಯನ್ನೇ ಕೈಬಿಡುತ್ತಾನೆ. ಆಮೇಲೆ ಮತ್ತೆ ಪ್ರಯತ್ನ ಮಾಡತೊಡಗುತ್ತಾನೆ. ತನ್ನ ಆಕೃತಿ, ಆರೋಗ್ಯ, ಕುಲ, ಮನೆ ಮುಂತಾದುವನ್ನು ಬಂಡವಾಳವನ್ನಾಗಿ ಮಾಡಿಕೊಂಡು ನಡೆಸಬಹುದಾದಂತಹ ಮಾರ್ಗಗಳನ್ನು ಹುಡುಕುತ್ತಾನೆ.

ಆ ದಿನದ ಮಾತು - ಚಿಕ್ಕ ಸಾಹೇಬರಿಗೆ ಜ್ವರ ಬಂದುಬಿಟ್ಟಿತ್ತು. ಮೇಲಿನವರಿಗೆ ಆರೋಗ್ಯ ತಪ್ಪಿತು ಅಂದರೆ ಸಾಕು, ಯಶಸ್ಸನ್ನು ಬಯಸುವ ಕೆಳಗಿನ ನೌಕರರಿಗೆ ಅದೊಂದು ತುಂಬ ಒಳ್ಳೆಯ ಅವಕಾಶ. ರಣಜಿತ ಬಾಬು ದ್ರಾಕ್ಷಿ, ಸೇಬು, ಕಿತ್ತಲೆ ಹಣ್ಣುಗಳನ್ನು ತುಂಬಿದ ಒಂದು ಬುಟ್ಟಿಯನ್ನೇ ಕೊಟ್ಟುಹೋದರು. ಆದರೆ ಇದು ಹಣ ಖರ್ಚಿನ ಬಾಬ್ತು, ಬಲಿದತ್ತನ ಪಾಲಿಗೆ ಸಾಧ್ಯವಿಲ್ಲದ್ದು. ಚಿಕ್ಕಸಾಹೇಬರು ಕಣ್ಣುಮುಚ್ಚಿ ನಿದ್ದೆ ಹೋಗುತ್ತಿದ್ದರೂ ಜವಾನನ ಕೈಯಿಂದ ಬೀಸಣಿಗೆ ಕಸಿದುಕೊಂಡು ಗಾಳಿ ಹಾಕಿದ್ದ.

ಡಾಕ್ಟರನ್ನು ಕರೆತರಲು ಮೂರು ನಾಲ್ಕು ಬಾರಿ ಹೋಗಿದ್ದ. ಆದರೆ ಇಲ್ಲಿ ಸ್ಥೂಲವಾದ ಯೋಜನೆಯೊಂದು ಅಗತ್ಯವಿತ್ತು. ಉಮೇಶ ಬಾಬು ಇದರಲ್ಲಿ ಚಾಣಾಕ್ಷರು. ಉಮೇಶಬಾಬುವಿನದು ಕಟ್ಟುಮಸ್ತಾದ ಮೈಕಟ್ಟು, ಅವರನ್ನು ನೋಡಿದರೆ ರಾಕ್ಷಸರಂತೆ ಕಾಣುತ್ತಾರೆ ಬಲಿದತ್ತನ ಪಾಲಿಗೆ. ಊಟ, ಹಸಿವು, ಮತ್ತು ಇತರ ಪ್ರವೃತ್ತಿಗಳಲ್ಲಿ ನಾಚಿಕೆಯಿಲ್ಲದ ಆಸುರೀಭಾವನೆ ಅವರದು. ಅವರ ಮೇಲೆ ಎಷ್ಟೇ ಹೊಟ್ಟೆಕಿಚ್ಚಿದ್ದರೂ ಬಲಿದತ್ತ ಸಹಿಸಿಕೊಳ್ಳಲೇಬೇಕಾಯಿತು. ಜ್ವರದಿಂದ ಮಲಗಿದ ಚಿಕ್ಕ ಸಾಹೇಬರ ಬಳಿ ಉಮೇಶ ಬಾಬುಗಳ ಆಟೋಪವೇ ಜಾಸ್ತಿ. ಏಕೆಂದರೆ ಅವರು ಎಲ್ಲರ ಎದುರಿಗೆ ತಮ್ಮ ಬಲವಾದ ತೋಳುಗಳನ್ನು ಚಾಚಿ ಸಾಹೇಬರ ಕಾಲನ್ನು ನೀವಬಲ್ಲರು. ಹೆದರುತ್ತಾ ಹೆದರುತ್ತಾ ಬಲಿದತ್ತನೂ ತನ್ನ ದುರ್ಬಲವಾದ ತೋಳನ್ನು ಮುಂದಕ್ಕೆ ಚಾಚಿದ. ಆದರೆ ಉಮೇಶ ಬಾಬುಗಳ ಗಮನ ಎಲ್ಲೋ ಇದ್ದುದರಿಂದ ಅವನ ಕೈಯನ್ನು ಸೇರಿಸಿ ನೀವತೊಡಗಿದ್ದರು. ಬಲಿದತ್ತನ ಕಣ್ಣಲ್ಲಿ ಬುಳಬುಳ ಅಂತ ನೀರಿಳಿಯಿತು. ಅವನು ಮತ್ತೆ ಆ ಪ್ರಯತ್ನ ಮಾಡಲು ಹೋಗಲಿಲ್ಲ. ಇದಾದ ಮೇಲೆ - ಜ್ವರದಿಂದ ತಳಮಳಿಸುತ್ತಿದ್ದ ಚಿಕ್ಕ ಸಾಹೇಬರ ಕಣ್ಣು ಕೆಂಪಾಗಿ ತಲೆಯೆಲ್ಲ ಕಾವಲಿಯಂತೆ ಕಾಣತೊಡಗಿತು, ಅನೇಕ ಬಾರಿ ತುಟಿಗಳ ಮೇಲೆ ನಾಲಗೆಯಾಡಿಸಿ ಹಲ್ಲು ಕಡಿಯತೊಡಗಿದರು, ಕೈಕಾಲು ಒದರತೊಡಗಿದರು, ಹುಚ್ಚು ಹಿಡಿದವನಂತೆ ಗರ್ಜಿಸತೊಡಗಿದರು - "ಫೈಲು, ಫೈಲು ತೊಗೊಂಡು ಬಾ" ಅವರ ತಲೆಯನ್ನು ಬಗ್ಗಿಸಿ ನೀರು ಚಿಮುಕಿಸಬೇಕೆಂದು ಡಾಕ್ಟರು ಹೇಳಿದರು - ಕೆಲಸವನ್ನು ಉಮೇಶ ಬಾಬುಗಳೇ ಮಾಡಿದರು. ಏಕೆಂದರೆ ಎಲ್ಲರಿಗಿಂತ ಹೆಚ್ಚು ತಾಕತ್ತಿದ್ದವರು ಅವರೇ. ಅವರು ಕೆಲಸ ಮಾಡುತ್ತಿದ್ದ ಭಂಗಿಯನ್ನು ನೋಡಿದರೆ ಜ್ವರದೊಂದಿಗೆ ಕುಸ್ತಿಯಾಡುವಂತಿತ್ತು. ಅವರು ಏನೇ ಮಾಡಲಿ ಅವರ ಪಳಗಿದ ಮನಸ್ಸು ಅದನ್ನು ಸಹಜವಾಗಿ ಲೀಲಾಜಾಲವಾಗಿ ಮಾಡಿ ಮುಗಿಸುತ್ತಿತ್ತು. ಹಾಗಾಗಿ ಅವರು ಚಿಕ್ಕ ಸಾಹೇಬರಿಗೆ ಬೇಕಾದವರಾಗುತ್ತಾರೆ, ಹತ್ತಿರದವರಾಗುತ್ತಾರೆ ಅನ್ನೋದರಲ್ಲಿ ಆಶ್ಚರ್ಯವಾದರೂ ಏನು ?

ಅದಾದ ಮೇಲೆ, ಈ ಉಮೇಶಬಾಬು, ಅವರೇ - ತಾವು ಸ್ವತಃ ದೊಡ್ಡ

ಮನುಷ್ಯರ ಮಕ್ಕಳಾದರೂ ಬಿಡುವಾದಾಗಲೆಲ್ಲ ಮೇಲಿನವರ ಬಳಿಗೆ ಹೋಗಿ ಹಟ ಹಿಡಿಯುತ್ತಾರೆ - "ಸಾರ್, ತುಂಬಾ ಹಸಿವಾಗಿದೆ, ಏನಾದರೂ ಸ್ವಲ್ಪ ಕೊಡಿ ಈ ಕಡೆ." ನಗುನಗುತ್ತಲೆ ತಿಂಡಿ ತೂಗೊಂಡು ಬಾಯಿಗೆ ಹಾಕಿಕೊಳ್ಳುತ್ತಾರೆ. ಹಾಗೆಯೆ ಮುಂದುವರಿಯುತ್ತಲೆ ಯಾರನ್ನೋ ಧರ್ಮದ ಅಪ್ಪ, ಮತ್ತಾರನ್ನೊ ಧರ್ಮದ ಸಹೋದರನನ್ನಾಗಿ ಮಾಡುತ್ತಾರೆ. ನಗುತ್ತಲೇ ಮೇಲಿನವರು ಬಿಟ್ಟ ಬಟ್ಟೆಬರೆಗಳನ್ನು ಹಳೆಯದಾದ ಪದಾರ್ಥಗಳನ್ನು ಕೈಚಾಚಿ ತೆಗೆದುಕೊಂಡು ಹೇಳುತ್ತಾರೆ - "ಈ ಕಡೆ ಕೊಟ್ಟು ಬಿಡಿ ಸಾರ್, ತಮ್ಮ ಹತ್ರ ಬೇಕಾದಷ್ಟಿದೆಯಲ್ಲ."

ಉಮೇಶಬಾಬುಗಳ ಬಾಯಲ್ಲಿ ಬರುವ ಪ್ರೀತಿಯ ಮಾತುಗಳು ಸಿಹಿಯಾಗಿರುತ್ತವೆ. ಅವನು - ಬಲಿದತ್ತ ನೋಡುತ್ತಾನೆ, ನಿಟ್ಟುಸಿರುಬಿಡುತ್ತಾನೆ, ಇದು ಅವನ ಪಾಲಿಗೆ ಎಂದಿಗೂ ಎಟುಕಲಾರದ್ದು.

ನಿರಾಕಾರ ಬಾಬುಗಳಿದ್ದಾರೆ ನೋಡಿ, ಹುಡುಗಿಯರಿಗೆ ಗಂಡು ಹುಡುಕೋದರಲ್ಲಿ ಸಿದ್ಧಹಸ್ತರು. ಈ ಉಪಕಾರಕ್ಕಾಗಿ ಮೇಲಿನವರಿಗೆ ಅವರನ್ನು ಕಂಡರೆ ವಿಶೇಷವಾದ ಗೌರವ. ಆದರೆ ಅವರು ಸೋಮಾರಿ, ಕೆಲಸ ಕಡಮೆ ಮಾಡುತ್ತಾರೆ ಅಂತ ಎಲ್ಲರಿಗೂ ಗೊತ್ತು. ಆದರೆ ಸ್ವಲ್ಪ ಸಮಯ ಸಿಕ್ಕಿದರೆ ಸಾಕು, ಗಂಡು ಹೆಣ್ಣುಗಳ ಬಗ್ಗೆ ಮಾತಾಡಲು ಶುರು ಮಾಡುತ್ತಾರೆ, ಜೇಬಿನಿಂದ ಹಲವಾರು ಕಾಗದಗಳನ್ನು ತೆಗೆದು ತಿರುವಿ ಹಾಕುತ್ತಾ "ನೋಡಿ, ರಾಮನ ಕಾಗದ ಇದು, ಎಂ.ಎಸ್.ಸಿ. ಓದುತ್ತಿದ್ದಾನಂತೆ, ಚಿಕ್ಕಪ್ಪ ನಿಮಗೆ ನನ್ನ ನಮಸ್ಕಾರಗಳು ಅಂತ ಬರೆದಿದ್ದಾನೆ. ಆಹಾ, ಎಷ್ಟು ಒಳ್ಳೆಯ ಹುಡುಗ." ಅವರ ಬಾಯಿಂದ ಹೂವು ಉದುರುತ್ತದೆ. ಪರೆಯುವನ್ನು ಕುರಿತ ಆಲೋಚನೆ, ಅದೇ ಅವರ ಕಲೆ - ಅದರಲ್ಲೂ ಅವರನ್ನು ಎದುರಿಸುವುದು ಬಲಿದತ್ತನಿಗೆ ಅಸಂಭವ.

ಒಟ್ಟಿನಲ್ಲಿ ಎದುರಿಸಲಾಗದ ಹುರಿಯಾಳುಗಳೊಡನೆ ಸ್ಪರ್ಧೆ ನಡೆಸುವುದು ದುರಾಸೆ ಮಾತ್ರವಷ್ಟೆ. ಮದುವೆಯಂಥ ಸಂಬಂಧಗಳ ಕಾರಣದಿಂದಾಗಿ ಕೆಲವೆಡೆ ಗಳಲ್ಲಿ ಬಡ್ತಿ ಸಿಗುವುದಾದಲ್ಲಿ, ಆ ಕ್ಷೇತ್ರವೂ ಬಲಿದತ್ತನ ಪಾಲಿಗೆ ನಿಷಿದ್ಧ. ಆ ಕ್ಷೇತ್ರದಲ್ಲಿ ಹೀಗಾಗುವುದು ಸ್ವಾಭಾವಿಕ, ವಿಶಿಷ್ಟವಾದ ಸಂಬಂಧದ ಕಾರಣದಿಂದ ವಿಶಿಷ್ಟವಾದ ಆಸನ, - ಏಕೆಂದರೆ ಮುಷ್ಟಿಯಲ್ಲಿ ಇಟ್ಟುಕೊಳ್ಳುವುದು ಇಲ್ಲವೇ ಜುಟ್ಟು ಹಿಡಿದು ಕೈಯಲ್ಲಿಟ್ಟುಕೊಳ್ಳುವುದು ಮನುಷ್ಯನ ಸಹಜ ಸ್ವಭಾವ. ಕಂಪೆನಿಯ ಡಿಪೋವಿನಿಂದ ಹಿಡಿದು ದ್ವೀಪದ್ವೀಪಾಂತರಗಳವರೆಗೂ ಹರಡಿರುವ ಆಡಳಿತದಲ್ಲಿ ಕಾಣುವುದೆಂದರೆ ಮಾವ-ಅಳಿಯ, ಭಾವ-ಭಾವ ಮೈದುನರು, ನೆಂಟರು ಇಂಥದೇ ಸಂಬಂಧಗಳು. ಇದಾದ ಮೇಲೆ ಭಾಷಾವಾರು ಗುಂಪು, ಜಾತಿವಾರು ಗುಂಪು, ಎಲ್ಲೆಲ್ಲಿ ನೋಡಿದರೂ "ಮಾಮಕಾಃ" ಈ ರೀತಿಯಲ್ಲಿ ಗುಂಪು ಕಟ್ಟಿಕೊಂಡು ಎಲ್ಲೆಡೆಯಲ್ಲೂ ಬೇರುಬಿಟ್ಟುಕೊಂಡಿದ್ದು ಜನ ಗುಟ್ಟಾಗಿಯೆ ತಮ್ಮ ಕೆಲಸ ಮಾಡಿಕೊಳ್ಳುತ್ತಾರೆ. ಬಲಿದತ್ತನಿಗೆ ಅಲ್ಲಿಯೂ ಪ್ರವೇಶವಿಲ್ಲ. ಅವನ ಕಣ್ಣಿಗೆ ಬೀಳುವುದು ಇಷ್ಟೇ - ಕಂಪೆನಿಯ ಕೆಲಸಗಾರರ ವರ್ಗಾವಣೆಗೆ ಬಡ್ತಿಗೆ ಸಂಬಂಧ ಪಟ್ಟಂತೆ ಆಗಾಗ್ಗೆ ಮೇಲಿನಿಂದ ಬರುವ ಆದೇಶ ಪತ್ರಗಳು. ಇವೆಲ್ಲ ವರ್ಗಾವಣೆಗಳು ಪಂಚಾಂಗದಲ್ಲಿರುವ ವಿವಾಹಾದಿ ತಿಥಿಗಳ ಜೊತೆ ಸಂಬಂಧವಿಟ್ಟು

ಕೊಂಡಿವೆಯೇನೋ ಎಂಬ ಭಾವನೆ ಬರುತ್ತದೆ.

ಹೊಟ್ಟೆಪಾಡಿನ ಹೋರಾಟದಲ್ಲಿ ಇದೆಲ್ಲ ದಿನನಿತ್ಯದ ಘಟನೆಗಳು - ಬಲಿದತ್ತ ಗಂಭೀರವಾಗಿ ಯೋಚಿಸುತ್ತಾನೆ. ಇಲ್ಲಿ ಪ್ರತಿಸ್ಪರ್ಧೆ ನಡೆಸುವುದು ಅಸಂಭವ. ಏಕೆಂದರೆ ಎಲ್ಲಿ ಕೇವಲ ತನ್ನ ಸ್ವಂತ ಯೋಗ್ಯತೆಯಿಂದ ಕೆಲಸ ಸಾಗುವುದಿಲ್ಲವೊ ಅಲ್ಲೆಲ್ಲ ಯಾವಾಗಲೂ ಎಲ್ಲ ಕಾಲಕ್ಕೂ ಇಂಥದೇ ವಿಚಾರಗಳು ನಡೆದು ಬಂದಿರುತ್ತವೆ.

ಆದರೆ ಇವೇ ಅಲ್ಲದೆ ಇನ್ನೂ ಅನೇಕ ಮಾರ್ಗಗಳಿವೆ. ಆ ಮಾರ್ಗದಲ್ಲಿ ಹೆಜ್ಜೆ ಹಾಕುತ್ತಿರುವ ಜನರನ್ನು ಅಳೆದು ಸುರಿದುನೋಡಿ ಅವನು ತನ್ನ ಯೋಜನೆಯನ್ನು ರೂಪಿಸಿಕೊಳ್ಳುತ್ತಾನೆ.

ಈ ಹರಿಹರ ಬಾಬುವನ್ನೇ ತೆಗೆದುಕೊಳ್ಳಿ - ಮೇಲಿನವರ ಬಲಗೈಯಿದ್ದಂತೆ. ಮೇಲಿನವರ ಜವಾನರೊಡನೆಯೂ ಸಂಬಂಧ ಇಟ್ಟುಕೊಂಡಿರುತ್ತಾರೆ. ಯಾವ ವಸ್ತುವಿನ ಅಗತ್ಯವಿದೆ, ಅದನ್ನು ಹೇಗೆ ಗಿಟ್ಟಿಸುವುದು ಎಂದೆಲ್ಲ ಚಿಟಿಕೆ ಹೊಡೆಯುವಷ್ಟರಲ್ಲಿ ತೀರ್ಮಾನಿಸಿರುತ್ತಾರೆ. ಯಾರ ಬಳಿಯಲ್ಲಿ ಕೆಲಸ ಮಾಡುತ್ತಿರುತ್ತಾರೊ ಅವರ ಮೇಲೆಯೇ ಕಣ್ಣು ಮುಚ್ಚಿಕೊಂಡು ಬೀಳುತ್ತಾರೆ. ಕೈಯಲ್ಲಿ ಕೋಲು ಹಿಡಿದು ಅವರು ಎಲ್ಲ ಕೆಲಸ ಮಾಡಿಸಬಲ್ಲರು, ಮೇಲಿನವರ ಕೈಯಲ್ಲಿ ಶಿಫಾರಸು ಬರೆಸಿಕೊಳ್ಳಬಲ್ಲರು. ಮರದ ಬುಡದಿಂದ ಹಿಡಿದು ಮಧ್ಯದ ಕಾಂಡದವರೆಗೂ ಸರಸರ ಹತ್ತಿಯೂ ಬಿಟ್ಟಿದ್ದಾರೆ. ಯಾವಾಗಲೂ ನಗುಮುಖ, ನೋಡುವುದಕ್ಕೆ ತುಂಬಾ ಕೆಲಸದಲ್ಲಿ ತೊಡಗಿರುವಂತೆ ತೋರ್ಪಡಿಸಿಕೊಳ್ಳುತ್ತಾರೆ. ಅವರ ಮನೆಯ ಮುಂದೆ ಮೂರು ದೊಡ್ಡ ದೊಡ್ಡ ಮಣೆಗಳನ್ನು ರಸ್ತೆಗೆ ಕಾಣುವಂತೆ ಹಾಕಿರುತ್ತಾರೆ. ಅವುಗಳ ಮೇಲೆ ಫೈಲುಗಳನ್ನಿಟ್ಟು ಅವು ಹಾರದಂತೆ ಕಲ್ಲು ಹೇರಿ, ಕೈಯಲ್ಲಿ ಹುಕ್ಕಾ ಹಿಡಿದು ಕೆಲಸ ಮಾಡುವ ಸೋಗು ಹಾಕಿ ಕುಳಿತಿರುತ್ತಾರೆ. ಎಲ್ಲಾದರೂ ಹರಟೆ ಹೊಡೆಯುತ್ತಾ ಇರಬೇಕಾದರೆ ಗೊತ್ತಿಲ್ಲದ ಹಾಗೆ ಗುಟ್ಟಿನ ಮಾತುಗಳೇನಾದರೂ ಬಾಯಿಂದ ಹೊರಬಿದ್ದೀತೋ ಎಂಬ ಭಯದಿಂದ, ಅವರು ಹೆಚ್ಚಿಗೆ ಯಾರ ಜೊತೆಯಲ್ಲೂ ಬೆರೆಯದೆ ನುಣುಚಿಕೊಂಡು ಹೋಗುತ್ತಾರೆ. ಯಾರಾದರೂ ಪಟ್ಟು ಹಿಡಿದು ಮಾತಾಡಿಸುತ್ತಲೆ ಕುಳಿತರೆ ಇದ್ದಕ್ಕಿದ್ದಂತೆಯೆ ಮಾತು ನಿಲ್ಲಿಸಿ-

"ನಾನು ಬರುತ್ತೇನೆ, ತುಂಬ ಅವಸರದಲ್ಲಿದ್ದೇನೆ" ಅಂತ ಜಾರಿಕೊಳ್ಳುತ್ತಾರೆ.

ಧನೇಶಬಾಬುಗಳು ಇದಕ್ಕೆ ತೀರ ವಿರುದ್ಧ. ಚಿನ್ನದ ಚಾವಟಿಯಿದ್ದಂತೆ ಅವರ ಮೈ. ಅಂದರೆ ಬೆಳ್ಳಗಿದೆ, ಆರೋಗ್ಯ ಕಡಿಮೆ, ಎದೆಯಲ್ಲಿ ತೆಳುವಾದ ಮೂಳೆಗಳು ಎದ್ದು ಕಾಣುತ್ತವೆ, ಕೃಶವಾದ ಎದೆ ಭಾಗ, ಆದರೆ ತಲೆ ದೊಡ್ಡದು, ಮುಖ ತುಂಬಿಕೊಂಡಿದೆ. ಸ್ವಲ್ಪ ಕಿವುಡಾದರೂ ಅವರ ಕಿವಿಗಳು ಯಾವಾಗಲೂ ಮೊಲದ ಕಿವಿಗಳಂತೆ ನಿಮಿರಿ ನಿಂತಿರುತ್ತವೆ. ಯಾರಾದರೂ ಏನಾದರೂ ಹೇಳಿದರೆ ಕೇಳಿದರೆ 'ಆಂ, ಊಂ' ಅನ್ನುವ ಅಭ್ಯಾಸ ರೂಢಿಯಾಗಿದೆ. ಉದ್ದವಾದ ಮೋರೆ ಸಾಧಾರಣವಾದ ಭಂಗಿಯಲ್ಲಿದ್ದರೂ ಬಾಯಿ ಸ್ವಲ್ಪ ಡೊಂಕಾಗಿ ತೆರೆದಿರುತ್ತದೆ. ದಪ್ಪ ಗಾಜಿನ ಕನ್ನಡಕದ ಹಿಂದಿರುವ ಕಣ್ಣುಗಳಲ್ಲಿ ಕುತೂಹಲ ಸ್ಪಷ್ಟವಾಗಿ ಎದ್ದು ಕಾಣುತ್ತಿರುತ್ತದೆ. ಮೂವತ್ತು ಮೂವತ್ತೆರಡರ ಸುಮಾರು ವಯಸ್ಸಿರಬಹುದು.

ಆದರೆ ಕಿವಿಗಳ ಮೇಲೆ ಕೆಲವು ಬೆಳ್ಳಿ ಗೂದಲುಗಳು ಮತ್ತು ಹಣೆಯ ಮೇಲೆ ಸುಕ್ಕಿನ ಗೆರೆಗಳು ಕಂಡುಬರುತ್ತದೆ - ಆರೋಗ್ಯ ಸ್ವಲ್ಪ ಚೆನ್ನಾಗಿಲ್ಲದಿದ್ದರೇನಂತೆ, ಮೈಯಲ್ಲಿ ಲವಲವಿಕೆಗೇನೂ ಕೊರತೆಯಿಲ್ಲ. ಒಂದು ದೃಷ್ಟಿಯಲ್ಲಿ ಅವರು ಸ್ಫೂರ್ತಿಯ ಅವತಾರವೇ. ಅಪ್-ಟು-ಡೇಟ್ ಲೇಪ ನೋಡಿದರೆ ಸಾಕು, ಸಿಗರೇಟಿನ ಡಬ್ಬ ಮುಂದೆ ಚಾಚುತ್ತಾರೆ. ಮಾತಿನಲ್ಲೇ ಕೊಂಡುಕೊಂಡು ಬಿಡುತ್ತಾರೆ, ಸವಿನಗುವನ್ನು ನೋಡಿದರೆ ಕಣ್ಣಿನಲ್ಲಿ ಏನೋ ಜಾದೂ ಇರುವಂತೆ ಕಾಣುತ್ತದೆ. ಸರಿಯಾಗಿ ಆಡುವುದಕ್ಕೆ ಬರದಿದ್ದರೂ ಸಾಯಂಕಾಲದ ಹೊತ್ತು ಮರೆಯದೆ ಟೆನ್ನಿಸ್ ಆಡುತ್ತಾರೆ. ರಾತ್ರಿ ಹೊತ್ತು ಗೆಳೆಯರನ್ನು ಜಮಾಯಿಸಿ ಬ್ರಿಜ್ ಆಡುತ್ತಾರೆ. ಆದರೆ ಸೋಲು ಅವರಿಗೆ ಅನೇಕ ಬಾರಿ ಗಟ್ಟಿ. ಸಂಗೀತ, ಸಾಹಿತ್ಯ, ಚರಿತ್ರೆ, ದರ್ಶನ, ಅರ್ಥಶಾಸ್ತ್ರ, ರಾಜಕೀಯ - ಪ್ರತಿಯೊಂದು ವಿಷಯದಲ್ಲೂ ಮೇಲ್ಪಟ್ಟದ್ದೆನಿಸುವಂತೆ ಭ್ರಮೆ ಹುಟ್ಟಿಸುವ ವಿಮರ್ಶೆಯ ಮಾತಾಡುತ್ತಾರೆ, ಆದರೆ ಕಡೆಯಲ್ಲಿ ಸೋತು ಸುಮ್ಮನೆ ಶರಣಾಗುತ್ತಾರೆ. ಆದಾದ ಮೇಲೆ ಗೆದ್ದವರ ನಾಲ್ಕಾರು ಗುಣಗಳನ್ನು ವಿಶ್ಲೇಷಣೆ ಮಾಡಿ, ಅವನ ನಾಲ್ಕಾರು ಒಳ್ಳೆಯ ಗುಣಗಳು ಯಾವುದೆಂದು ಗುರುತಿಸಿ ತೋರಿಸುತ್ತಾರೆ, ಚಹಾ ಸಿಗರೇಟುಗಳನ್ನು ಕುಡಿಸಿಯೆ ಕಳಿಸುತ್ತಾರೆ. ಗೆದ್ದವನು ಮತ್ತೊಮ್ಮೆ ಕಡೆಯ ಪಕ್ಷ ಒಂದು ಬಾರಿಯಾದರೂ ಅದೇ ಗೆಲುವಿನ ಸುಖ ಪಡೆಯಲು ಹಿಂದಿರುಗಬೇಕು, ಬೇರೆಯವರನ್ನು ಉಬ್ಬಿಸಿ ಸಣಸಾಡುವ ಆಭಾಸ ಉಂಟುಮಾಡಿ ಅವರಿಂದ ಸೋಲೊಪ್ಪಿಕೊಳ್ಳುವುದು ಅವರ ಒಂದು ದೊಡ್ಡ ಗುಣ. ಹೀಗೆ ಮಾಡುವುದರಿಂದ ಮೇಲಿನವರಿಗೆ ಅನೇಕ ವೇಳೆ ಧನೇಶ್ವರ ಬಾಬುಗಳ ಒಡನಾಟದ ಅನುಭವ ಒಂದು ರೀತಿಯ ಮಾನಸಿಕ ಸಂತೃಪ್ತಿಯನ್ನು ನೀಡುತ್ತದೆ. ಹಾಗಾಗಿ ಅವರು ತಮ್ಮಲ್ಲಿ ಮಾನಸಿಕವಾಗಿ ಮೇಲ್ಪಟ್ಟವನ್ನು ಕಂಡುಕೊಂಡು, ತಮ್ಮ ಅಹಂಭಾವನೆಯನ್ನು ಉದಾರವಾಗಿಸಿಕೊಂಡು ಧನೇಶಬಾಬುಗಳಿಗೆ ಒಳಿತನ್ನೇ ಉಂಟು ಮಾಡುವವರಾಗುತ್ತಾರೆ. ಯಾರೋ ಅವರಿಗೆ ಟೆನ್ನಿಸ್ ಕಲಿಸುವ ಪ್ರಯತ್ನ ನಡೆಸುತ್ತಾರೆ. ಮತ್ತೆ ಯಾರೋ ಅವರಿಗೆ ಕಚೇರಿ ಕೆಲಸ ಕಲಿಸುವ ಯತ್ನವನ್ನು ಮುಂದುವರಿಸುತ್ತಾರೆ. ಎಲ್ಲರ ಪರಿಶ್ರಮದಿಂದ ತಮಗೆ ತುಂಬ ಉಪಕಾರವಾಯಿತು ಎಂಬಂತೆ ಅವರು ಪ್ರತಿದಿನ ತಮ್ಮ ಅಭ್ಯಾಸದಲ್ಲಿ ಏಳಿಗೆ ತೋರಿಸುತ್ತಾ ಹೋಗುತ್ತಾರೆ - ತಮಗೆ ಎಷ್ಟು ಬೇಗ ಎಲ್ಲ ಅರ್ಥವಾಗುತ್ತದೆ ಅನ್ನುವ ಸೋಗು ಹಾಕುತ್ತಾರೆ. ಇಂಥ ವಿಷಯಗಳ ಬಗ್ಗೆ ಚರ್ಚೆ ನಡೆಸುತ್ತಿರುವಾಗ ಮೇಲಿನವರು ಅವರ ಬುದ್ಧಿವಂತಿಕೆಯನ್ನು ಹೊಗಳುತ್ತಾರೆ. ಎಲ್ಲರೂ ತಮ್ಮನ್ನು ಅವರ ಕ್ಷೇಮ ಚಿಂತಕರೆಂದೇ ಭಾವಿಸಿ ಅವರನ್ನು ಮುಂದಕ್ಕೆ ತಳ್ಳುವ ಪ್ರಯತ್ನ ನಡೆಸುತ್ತಾರೆ. ಮನುಷ್ಯನ ಮೂಲಸೃಷ್ಟಿಯಿಂದಲೇ ಅವನ ರಚನೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ನೆಗಟಿವ್ ಗುಣಗಳಿಲ್ಲದಿದ್ದರೆ, ಈ ರೀತಿಯಲ್ಲಿ ಏಳಿಗೆ ಪಡೆಯುವುದು ಅಸಂಭವ. ಧನೇಶ್ವರ ಬಾಬುಗಳಿಗೆ ಅದು ದೂರವಿದೆ. ಅದರ ಜೊತೆಗೆ ಎಲ್ಲರೆದುರಿಗೆ ತಮಗೆ ಏನೂ ಗೊತ್ತಿಲ್ಲ ಅಂತ ವೇಷ ಹಾಕುವ ಕಲೆಯೂ ಕರಗತವಾಗಿದೆ. ಇದೇ ಮರೆಯಲ್ಲಿ ಅವರು ಕಂಪೆನಿಯ ಪ್ರಭಾವವನ್ನು ಬಳಸಿಕೊಂಡು ಅನೇಕ ಕಾರೋಬಾರುಗಳನ್ನು ನಡೆಸುತ್ತಾರೆ. ಅವರ ಸಂಸಾರ ಹಳ್ಳಿಯಲ್ಲಿದೆ. ಹಾಗಾಗಿ ಅತಿಥಿ ಸತ್ಕಾರದ

ಪರಾಕಾಷ್ಠೆಯನ್ನು ತೋರಿಸುವುದಕ್ಕೆಂದೇ ಮನ ಬಿಡುವಾಗಿ ನಿಂತಿದೆ. ಹಾಗೆಯೆ ಹೆಂಡತಿ ಮಕ್ಕಳನ್ನು ನೋಡಿಕೊಂಡು ಬರುವ ನೆಪದಲ್ಲಿ ಸಂಪಾದಿಸಿದ ಹಣವನ್ನೆಲ್ಲ ಯಥಾಸ್ಥಾನಕ್ಕೆ ತಲುಪಿಸುವುದಕ್ಕಾಗಿ ಕಂಪೆನಿಯಿಂದ ಸಾಕಷ್ಟು ರಜೆಯನ್ನು ಗಿಟ್ಟಿಸಿಕೊಳ್ಳುತ್ತಾರೆ.

ಇದೆಲ್ಲ ಬುದ್ಧಿಯ ಆಟ. ಈ ಉಪಾಯವನ್ನು ಕರಗತ ಮಾಡಿಕೊಳ್ಳುವುದರಲ್ಲೇ ಬಲಿದತ್ತ ಹಿಂದೆ ಬಿದ್ದಿದ್ದಾನೆ. ಅವನಂತೆ ಇನ್ನೂ ಅನೇಕ ಮಂದಿ ಆಸೆಬುರುಕರು ದೈವೀ ಶಕ್ತಿಯ ಆವಾಹನೆ ಮಾಡಿಕೊಳ್ಳಲು ಟೊಂಕ ಕಟ್ಟಿ ನಿಂತಿದ್ದಾರೆ. ದೇವೇಂದ್ರ ಬಾಬುಗಳಿದ್ದಾರಲ್ಲ, ಅವರ ಮನೆಯಲ್ಲಿ ಆಗಾಗ್ಗೆ ಬ್ರಾಹ್ಮಣರಿಗೆ ಭೋಜನ, ಸತ್ಯನಾರಾಯಣ ಕಥೆ, ಉತ್ಸವ, ಹೋಮ, ಯಜ್ಞ, ಪ್ರಸಾದ, ದೇವರ ಪೂಜೆ ನಡೆಯುತ್ತಲೇ ಇರುತ್ತವೆ. ಒಬ್ಬ ಗಡ್ಡದ ಬಾಬಾ ಅವರ ಮನೆಯಲ್ಲಿ ಕಾಣಿಸಿಕೊಳ್ಳುತ್ತಿರುತ್ತಾರೆ. ಈ ಎಲ್ಲ ಪ್ರಯತ್ನಗಳೂ ಪ್ರಮೋಷನ್ ಸಿಕ್ಕಲೆಂದು - ಹಾಗೇ ಅವರಿಗೆ ಪ್ರಮೋಷನ್ ಕೂಡ ದೊರಕಿದೆ. ಚಂದ್ರಕಾಂತ ಬಾಬುಗಳು ಜಾತಕಫಲ ಮತ್ತು ಅದೃಷ್ಟಗಳಲ್ಲಿ ನಂಬಿಕೆ ಇಟ್ಟುಕೊಂಡಿದ್ದಾರೆ. ಅವರ ಮನೆಯಲ್ಲಿ ಅನೇಕ ಮಂದಿ ಜ್ಯೋತಿಷಿಗಳು ಬಂದುಹೋಗುತ್ತಿರುತ್ತಾರೆ. ಯಾರೋ ಕರ್ಣ ಪಿಶಾಚಿಯನ್ನು ವಶಪಡಿಸಿಕೊಳ್ಳಲು ಸಾಧನೆ ನಡೆಸುತ್ತಿರುವವರು. ಇನ್ನಾರೋ ಗಡಿಯಾರ ನೋಡಿ ಪ್ರಶ್ನೆಗೆ ಉತ್ತರ ಹೇಳುವವರು, ಮತ್ತಾರೋ ಮುಖ ನೋಡಿಯೆ ಭವಿಷ್ಯ ನುಡಿಯುವವರು. ಒಬ್ಬರು ಕೈ ನೋಡಿ, ಇನ್ನೊಬ್ಬರು ಜಾತಕ ನೋಡಿ ಆಗುಹೋಗುಗಳನ್ನು ನಿರ್ಧರಿಸಬಲ್ಲವರು. ಅನೇಕ ರೀತಿಯಲ್ಲಿ ಇವರೆಲ್ಲ ದಶಾಶೋಧನೆ ನಡೆಸುತ್ತಿದ್ದಾರೆ. ಆದರೆ ಯಾರ ಲೆಕ್ಕಾಚಾರವೂ ತಾಳೆಯಾಗುತ್ತಿಲ್ಲ. ಆದರೂ ಅವರು ಯಾವಾಗ ಯಾರ ಅರಿಷ್ಟಶಾಂತಿಗಾಗಿ ಏನು ಮಾಡಬೇಕೆಂದಿರುತ್ತಾರೋ ಅದನ್ನೇ ಮಾಡುತ್ತಾರೆ, ಯಾವಾಗಲೂ ಅವರ ಮನಸ್ಸು ಹೊಸ ಜ್ಯೋತಿಷಿಗಳನ್ನೂ ತಂತ್ರ ವಿದ್ಯಾ ಪರಿಣತರನ್ನೂ ಅನ್ವೇಷಿಸುತ್ತಿರುತ್ತದೆ. ತ್ರಿಗುಣಾಕವಚ, ದೈವೀ ಕವಚ, ಅಷ್ಟಧಾತುಗಳಿಂದ ಮಾಡಿದ ದೈವೀಶಕ್ತಿಯ ಉಂಗುರ, ವಶೀಕರಣ ಕರವಸ್ತ್ರ ಮುಂತಾದ ಅನೇಕ ವಸ್ತುಗಳನ್ನು ಅವರು ಸಂಗ್ರಹಿಸಿಟ್ಟಿದ್ದಾರೆ. ಪ್ರಮೋಷನ್ ಪಡೆಯುವುದಕ್ಕಾಗಿ ಹೀಗೇ ಅವರದೇ ಆದ ಹಲವಾರು ಇಂಥದೇ ಮಾರ್ಗಗಳು.

ಹಣ ನೀರಿನಂತೆ ಖರ್ಚಾಗುತ್ತದೆ, ಆದರೂ ಫಲ ಸಿಕ್ಕಿಯೆ ಸಿಗುತ್ತದೆಂಬ ನಂಬಿಕೆಯಿಲ್ಲ - ಬಲಿದತ್ತ ಈ ದಾರಿಯಿಂದ ದೂರ ಸರಿಯುತ್ತಾನೆ.

ಹಾಗಾದರೆ ಏನು ಮಾಡುವುದು ?

ಬಲಿದತ್ತ ಚಿಂತೆಗೀಡಾಗುತ್ತಾನೆ, ಆದರೂ ಭರವಸೆಯನ್ನು ಕೈಬಿಡುವುದಿಲ್ಲ.

ಆಗಾಗ್ಗೆ ಉಳಿದವರ ಕಡೆ ನೋಡುತ್ತಾನೆ. ಬೇರೆ ಬೇರೆ ಉಪಾಯಗಳನ್ನು ಪರೀಲಿಸಿ ನೋಡುತ್ತಾನೆ. ಬೇಡ ಅಂತ ಮರಳಿ ಬರುತ್ತಾನೆ. ಆದರೂ ತಿಣುಕಾಡುವುದರಲ್ಲಿ ಸ್ವಲ್ಪವೂ ಬಗ್ಗುವುದಿಲ್ಲ, ಹಿಂದೆ ಬೀಳುವುದಿಲ್ಲ.

ಯಶಸ್ಸಿನ ಶಾಸ್ತ್ರದ ಮೊದಲ ನಿಯಮದಂತೆ ಅವನು ಪ್ರತಿದಿನವೂ ರಾತ್ರಿ ಮಲಗುವ ಮೊದಲು ಇಡೀ ದಿನ ನಡೆದ ವಿಚಾರಗಳನ್ನು ಮೆಲುಕು ಹಾಕುತ್ತಾನೆ.

ಈ ದಿನ ಅವನು ಬಡ್ತಿ ಪಡೆಯುವುದಕ್ಕಾಗಿ ಏನೇನು ಮಾಡಿದ, ಇನ್ನೇನು ಮಾಡಲು ಸಾಧ್ಯ ಅಂತೆಲ್ಲ ಯೋಚಿಸುತ್ತಾನೆ.

ಈ ರೀತಿ ಉಪಾಯಗಳನ್ನು ಕಂಡುಕೊಳ್ಳುವ ದಿಕ್ಕಿನಲ್ಲಿ ಅನೇಕರು ಸ್ಥೂಲವಾಗಿ ವಿಚಾರ ನಡೆಸುತ್ತಿರುವುದನ್ನು ನೋಡುತ್ತಾನೆ, ಆ ಕಡೆಗೆ ಅವನು ಮೂಸಿ ನೋಡುವುದು, ಮಾರನೆಯ ದಿನ ಕಚೇರಿಯಲ್ಲಿ ನೋಡುತ್ತಾನೆ - ಗುರುಬಾಬುಗಳು ಇದ್ದಕ್ಕಿದ್ದ ಹಾಗೆ ನುಣ್ಣಗೆ ಗಡ್ಡ ಬೋಳಿಸಿದ್ದಾರೆ, ಗಡ್ಡ ಬೆಳೆಸಿಕೊಂಡು ನೂರಾರು ರೂಪಾಯಿ ಸಾಲ ಮಾಡಿದವರಂತೆ ಸಪ್ಪೆಮೋರೆ ಹಾಕಿಕೊಂಡು ಕುಳಿತಿರುತ್ತಿದ್ದರು. ನಗೆ ಎಂದರೇನೆ ಅವರ ಮುಖಕ್ಕೆ ಗೊತ್ತಿರಲಿಲ್ಲ. ಅಂಥವರು ಇವತ್ತು ಹೊಳೆಯುತ್ತಿರುವ ರಕ್ಷಾಪುಟವಿರುವ ಸಫಲತಾಶಾಸ್ತ್ರದ ಮೇಲೆ ಇಂಗ್ಲಿಷಿನಲ್ಲಿರುವ ಪುಸ್ತಕವೊಂದನ್ನು ಕಿಸೆಯಿಂದ ತೆಗೆದು ಮುಂದಿಡುತ್ತಾ ಹೇಳಿದರು, "ಸಾರ್, ಬಹಳ ಒಳ್ಳೆಯ ಪುಸ್ತಕ ನೋಡಿ," ಕೆಂಪು ಪೆನ್ಸಿಲಿನಿಂದ 'ಯಾವಾಗಲೂ ನಗುತ್ತಿರಿ' ಎಂಬ ಮೊದಲನೆಯ ಸೂತ್ರದ ಕೆಳಗೇ ಗೆರೆ ಎಳೆದಿದ್ದರು. ಬಡಪಾಯಿ ಗುರುಬಾಬು, ಕಂಪೆನಿಯ ಕೆಲಸದಲ್ಲಿ ಜೀವ ತೇಯುತ್ತಲೆ ಹನ್ನೆರಡು ವರ್ಷ ಕಳೆಯಿತು. ಯಾವ ಹುದ್ದೆಯಲ್ಲಿ ಸೇರಿದ್ದರೂ ಅದೇ ಹುದ್ದೆಯಲ್ಲಿ ಮುಂದುವರೆಯುತ್ತಿದ್ದಾರೆ. ಸಂಸಾರ ಬೆಳೆದಿದೆ ಅಷ್ಟೆ. ಹೊಟ್ಟೆಪಾಡಿನ ಬವಣೆಯಲ್ಲೇ ಹನ್ನೆರಡು ವರ್ಷ ಕಾಲ ಹಾಕಿದ್ದಾರೆ, ಮುರುಕಲು ಗೋಡೆಯ ಮೇಲೆ ಬೆರಣಿ ತಟ್ಟಿದಂತೆ. ಅವರು ಇನ್ನು ಉಳಿದಿರುವಷ್ಟು ವರ್ಷವೆಲ್ಲ ನಗುತ್ತಿರಬಹುದು, ಆದರೆ ಪರಿಸ್ಥಿತಿ ಬದಲಾಯಿಸಲಾರದು.

ಇನ್ನು ಕೆಲವರು ಸುಮ್ಮನೆ ವ್ಯರ್ಥವಾಗಿ ಸೀಸೆ ಹೊಡೆಯುತ್ತಿರುತ್ತಾರೆ. ಮನಸ್ಸಿನಲ್ಲಿ ಬಡ್ತಿಯ ಜಪ ಮಾಡುತ್ತಿರುತ್ತಾರೆ. ಅವರ ಬಯಕೆಗಳೇನೆ ಇರಲಿ, ಅದರಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ.

ಏಕೆಂದರೆ ಇಲ್ಲಿ ತೀವ್ರ ಪೈಪೋಟಿ ನಡೆಯುತ್ತಿರುತ್ತದೆ. ಅತ್ಯಂತ ಗೋಜಲು ಉಪಾಯಗಳನ್ನು ಹೂಡುತ್ತಾ ಸೆಣಸಾಡುತ್ತಿರುತ್ತಾರೆ, ಒಂದಾಗುತ್ತಿರುತ್ತಾರೆ, ಕೈಬಿಡುತ್ತಿರುತ್ತಾರೆ. ಎಷ್ಟಾದರೂ ಬುದ್ಧಿವಂತಿಕೆಯ ಆಟವಲ್ಲವೆ ಇದು.

ಬಲಿದತ್ತ ಯೋಚಿಸುತ್ತಾನೆ, ತಲೆನೋವು ಬರುವವರೆಗೂ ಯೋಚಿಸುತ್ತಾನೆ. ಆಮೇಲೆ ಇತ್ತೀಚೆಗೆ ತಾನು ಓದಿದ ಸ್ವಂತ ಏಳಿಗೆಯನ್ನು ಪಡೆಯುವ ಮಾರ್ಗವೊಂದರ ಪ್ರಕಾರ ತನಗೆ ತಾನೆ ಆಟೊ ಸಜೆಷನ್ ಕೊಡುತ್ತಾನೆ. ತನಗೆ ಬಡ್ತಿ ಸಿಕ್ಕಿದೆಯೆಂದು ಯೋಚಿಸುತ್ತಾನೆ. ತೆರೆದ ಆಕಾಶದ ಕೆಳಗೆ ಕುಳಿತುಕೊಂಡು ಮೈಯನ್ನು ಸಮತೋಲನದಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸುತ್ತಾನೆ. ಒಂದು ಪ್ರಸಿದ್ಧವಾದ ಉಪಾಯವನ್ನು ಮನಸ್ಸಿನಲ್ಲೇ ಸ್ಮರಿಸಿಕೊಂಡು ಪಠಿಸುತ್ತಾನೆ.

ಪ್ರಾಣ ವಿಶ್ವವನ್ನೇ ಪರಿಪೂರ್ಣವನ್ನಾಗಿ ಮಾಡಿದೆ.
ಅದೇ ಶಕ್ತಿಯನ್ನು ನಾನು ಉಸಿರಿನಿಂದ ಒಳಕ್ಕೆಳೆದುಕೊಳ್ಳುತ್ತೇನೆ.
ನನ್ನ ಮೈಯಲ್ಲಿ ಪ್ರಾಣ ತುಂಬುತ್ತಿದೆ, ತುಂಬುತ್ತಲೆ ಇದೆ.
ಪ್ರಾಣದಿಂದ ನಾನು ಪ್ರಾಣವಂತನಾಗಿದ್ದೇನೆ.
ನಾನು ಬಯಸುತ್ತೇನೆ, ಕೆಲಸದಲ್ಲಿ ನನಗೆ ಖಂಡಿತ ಬಡ್ತಿ ಸಿಕ್ಕುತ್ತದೆ.
ನಾನು ಅಪ್ಪಣೆ ಮಾಡುತ್ತೇನೆ, ನನಗೆ ಹಣ ಸಿಕ್ಕಲಿ, **ನನಗೆ** ಬಡ್ತಿ ದೊರೆಯಲಿ.

ಯೋಚನೆ ಮಾಡುತ್ತಿದ್ದ. ಹಾಗೆಯೆ ಮನಸ್ಸು ವಿಚಲಿತವಾಗುತ್ತದೆ. ಧ್ಯಾನ ಮುಂದುವರಿಸಲಾಗುವುದಿಲ್ಲ. ಪ್ರತಿದಿನ ರಾತ್ರಿ ಮಲಗುವುದಕ್ಕೆ ಮುಂಚೆ ಅಭ್ಯಾಸ ನಡೆಸುತ್ತಾನೆ.

ಕಂಪೆನಿಯ ಕೆಲಸಗಾರರ ಪೈಕಿ ಎಲ್ಲರೂ ಯಶಸ್ವಿಗಳಾಗುವಷ್ಟು ಅಷ್ಟು ಕಾಳಜಿ ವಹಿಸಿರುವುದಾಗಿ ಕಂಡುಬರುವುದಿಲ್ಲ. ಅವನ ಸಫಲತಾ ಶಾಸ್ತ್ರದ ವ್ಯಾಪ್ತಿಯಲ್ಲಿ ಅನೇಕ ಮಂದಿ ಕೆಲಸಗಾರರ ಕೆಲಸದ ವಿಧಾನ ಕಂಡುಬರುವುದಿಲ್ಲ. ಆದರೂ ಅವರು ಅಷ್ಟೋ ಇಷ್ಟೋ ಯಶಸ್ಸನ್ನು ತರವಾಗಿಯಾದರೂ ಪಡೆದಿರುತ್ತಾರೆ. ಅವರವರ ಅದೃಷ್ಟ.

ದಿವಾಕರ ಬಾಬುಗಳಿದ್ದಾರೆ ನೋಡಿ, ಅವರು ವಿಶ್ವವಿದ್ಯಾನಿಲಯದ ಪ್ರತಿಭಾಶಾಲಿ ಮೇಧಾವಿ ವಿದ್ಯಾರ್ಥಿ. ನಾಡಿನ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದವರು. ಅದರಿಂದಾಗಿ ಸರ್ಕಾರಿ ಕೆಲಸಕ್ಕೆ ಹೋಗದೆ ಕಂಪೆನಿ ಸೇರಿದರು. ಮನೆಯಲ್ಲಿ ಖಾದಿ ಹಾಕಿಕೊಳ್ಳುತ್ತಾರೆ, ಕೆಲವು ವೇಳೆ ಭಾವುಕತೆಯಲ್ಲಿ ಮುಳುಗಿರುತ್ತಾರೆ. ಹಾವುಗೆಗಳನ್ನು ಹಾಕಿಕೊಳ್ಳುತ್ತಾರೆ. ಅವರು ಏಕಾಂತದಲ್ಲಿ ಯೋಗಸಾಧನೆ ಮಾಡುತ್ತಾರೆಂದೂ ಕೆಲವರು ಹೇಳುತ್ತಾರೆ. ಆದರೆ ಮಾತಿನಲ್ಲಿ ಯಾವಾಗಲೂ ಧರ್ಮದ ಪ್ರೊಪಗಾಂಡಾ ಮಾಡುವುದಿಲ್ಲ. ಮೆಲ್ಲಮೆಲ್ಲಗೆ ಮಾತನಾಡುತ್ತಾರೆ. ಮನಸ್ಸನ್ನು ನೋಡಿ ಮಾತು ಹೆಣೆಯುವ ಸೂಕ್ಷ್ಮ ಕಲೆಗಾರಿಕೆಯಲ್ಲಿ. ಅವರ ಬುದ್ಧಿ ಪ್ರಚಂಡವಾದುದು. ಬಿಗಿಯಾದ ಮನುಷ್ಯ. ಜನ ಅವರನ್ನು ಗಡುಸು ಆಫೀಸರ್ ಎಂದೇ ಕರೆಯುವುದು. ತಮ್ಮ ದಾರಿ ಬಿಟ್ಟು ಅವರು ಯಾರಿಗಾದರೂ ಮಸ್ಕಾ ಹೊಡೆದಿದ್ದಾರೆ ಅಂತ ಯಾರೂ ಬೆರಳೆತ್ತುವ ಹಾಗಿಲ್ಲ. ಸಾಯಂಕಾಲ ಹರಟೆ ಹೊಡೆಯುವುದಕ್ಕೆ ಎಲ್ಲೂ ಹೋಗುವುದಿಲ್ಲ. ಗುಂಪುಗೊಂದಲಗಳಲ್ಲಿ ಸೇರುವುದಿಲ್ಲ. ಇಷ್ಟಾದರೂ ಜನಗಳ ಬಾಯಲ್ಲಿ ಅವರ ಬಗ್ಗೆ ಹೊಗಳಿಕೆ ಮಾತು ಬರುತ್ತಿರುತ್ತದೆ. ಅವರು ಮೆಲ್ಲಗೆ ಮೇಲೇರುತ್ತಿದ್ದಾರೆ. ಕಂಪೆನಿಯ ಒಬ್ಬ ಜವಾಬ್ದಾರಿ ಅಧಿಕಾರಿ ಎನಿಸಿಕೊಂಡಿದ್ದಾರೆ.

ಅದೇ ಸತೀಶ್ವರ ಬಾಬುಗಳನ್ನು ನೋಡಿ. ಮಾತಿನಲ್ಲಿ ತುಂಬ ಗಟ್ಟಿಗರು. ತರ್ಕಬದ್ಧವಾಗಿ ಮಾತಾಡುತ್ತಾರೆ. ಮನಸ್ಸಿನಲ್ಲಿ ಯಾವ ಮಾತನ್ನು ಮುಚ್ಚಿಟ್ಟುಕೊಳ್ಳುವುದಿಲ್ಲ. ಅದಕ್ಕೆ ಬದಲಾಗಿ ಮಾತುಮಾತಿಗೂ ಕೂಗಾಡುತ್ತ, ಗಲಾಟೆ ಎಬ್ಬಿಸುತ್ತಿರುತ್ತಾರೆ. ತರ್ಕಬದ್ಧವಾಗಿ ಯಾರಾದರೂ ಬುದ್ಧಿವಂತಿಕೆಯಿಂದ ಮಾತಾಡತೊಡಗಿದರೆ ಸಾಕು, ಅವರ ಬಾಯಿ ಮುಚ್ಚಿಸುತ್ತಾರೆ. ಅವರಿಗೆ ಹಿಂದುಮುಂದು ಗೊತ್ತಾಗುವುದಿಲ್ಲ. ಯಶಸ್ಸನ್ನು ಬಯಸುವ ಯಾರಾದರೂ ಯಾರನ್ನಾದರೂ ಹೊಗಳುತ್ತಿದ್ದರೆ ಅವರು ಕಿಡಿಯಾಗುತ್ತಾರೆ. 'ಕಳ್ಳಕೊರಮರು, ಸೀಸಿ ಹೊಡೆಯುವ ಭಟ್ಟಂಗಿಗಳು' ಅಂತ ಕೆಂಡ ಕಾರುತ್ತಾರೆ. ಅವರ ಬಿಳಿಯ ದುಂಡು ಮುಖ ಅವರ ಮಾತಿಗೆ ಪುಷ್ಟಿ ಕೊಡುತ್ತದೆ. ಚಂದ್ರನಂತೆ ಗುಂಡಾಗುತ್ತಿರುವ ಅವರ ತಲೆ ಅವರ ಮಾತಿನ ಮೇಲೆ ನಂಬಿಕೆ ಹುಟ್ಟಿಸುತ್ತದೆ. ದಪ್ಪ ಕೋಲನ್ನು ನೆಲದ ಮೇಲೆ ಕುಟ್ಟುತ್ತಾ ಜೋರಾಗಿ ಮಾತಾಡುತ್ತಾರೆ. ಅವರಿಗೂ ವಿಲಾಸ ವೈಭೋಗಗಳೆಂದರೆ ಆಗದು. ಬದುಕಿನಲ್ಲಿ ಅವರು ಸವಿಯುವ ಒಂದೇ ಒಂದು ವೈಭೋಗವೆಂದರೆ ಪ್ರತಿಸಿತ್ಯ

ಹೊಟ್ಟೆ ಭರ್ತಿ ಪೇಡಾಗಳನ್ನು ಕೊಂಡು ತಿನ್ನುತ್ತಾರೆ.

ಇಷ್ಟಾದರೂ ಅವರ ಸ್ಥಿತಿ ಯಾವ ರೀತಿಯಲ್ಲೂ ಬಿಗಡಾಯಿಸಿಲ್ಲ. ಮೇಲಿನ ಮೆಟ್ಟಿಲ ಮೇಲೇ ಇದ್ದಾರೆ.

ಇಷ್ಟೇ ಅಲ್ಲದೆ ಇನ್ನೂ ಅನೇಕ ಮಂದಿ ಇದ್ದಾರೆ. ಈ ಜನ ಬರೀ ಉತ್ಪಾದನೆ ಮಾಡುತ್ತಾರೆ ಅಷ್ಟೆ, ವ್ಯಾಪಾರ ಮಾಡುವುದಿಲ್ಲ. ತಲೆ ಬಗ್ಗಿಸಿ ಬಾಯಿ ಮುಚ್ಚಿಕೊಂಡು ದುಡಿಯುತ್ತಾ ಇರುತ್ತಾರೆ, ದುಡಿಯುತ್ತಲೆ ಹೋಗುತ್ತಾರೆ. ಏಳಿಗೆಯನ್ನು ಪಡೆಯುವುದಕ್ಕಾಗಿ ಇವರು ತಮ್ಮದ್ದೇ ಆದ ಯಾವುದೇ ಯೋಜನೆಯನ್ನು ರೂಪಿಸಿಕೊಂಡಿಲ್ಲ.

ಆದರೂ ಇವರಲ್ಲಿ ಕೆಲವರು ಮೇಲೇರುತ್ತಿರುತ್ತಾರೆ. ಬಹುಶಃ ತಮ್ಮಲ್ಲಿ ಯಾರು ಮೇಲೇರುತ್ತಾರೆ, ಬೀಳುತ್ತಾರೆ ಎಂಬ ಪರಿವೆಯೆ ಇವರಿಗಿಲ್ಲ. ಅಂತರ್ಯಾಮಿ ಬಾಬುಗಳಿದ್ದಾರೆ ನೋಡಿ, ಹದಿನಾರು ವರ್ಷಗಳಿಂದ ಮೂಗಿಗೆ ಕವಡ ಕಟ್ಟಿಕೊಂಡು ದುಡಿಯುತ್ತಿದ್ದಾರೆ, ಈಗಷ್ಟೆ ಸ್ವಲ್ಪ ಬಡ್ತಿ ದೊರೆತಿದೆ, ಕಂಪೆನಿ ಎರಡು ಮೆಚ್ಚುಗೆಯ ಮಾತುಗಳನ್ನಾಡಿದೆ. ಇಷ್ಟಾದರೂ ಅವರು ಯಾವಾಗಲೂ ಹುಮ್ಮಸ್ಸಿನಿಂದಿರುತ್ತಾರೆ, ಸದಾ ನಗುತ್ತಾ ನಲಿಯುತ್ತಾ ಇರುತ್ತಾರೆ. ಸವಿಯಾಗಿ ಮಾತಾಡುತ್ತಾರೆ. ಇನ್ನೊಬ್ಬರ ಜಗಳವನ್ನು ಐದೇ ನಿಮಿಷದಲ್ಲಿ ಬಗೆಹರಿಸುವುದರಲ್ಲಿ ನಿಸ್ಸೀಮರು. ನಾನು ಆಶಾವಾದಿ, ಫುಟ್‌ಬಾಲ್ ಇದ್ದಂತೆ, ಒದ್ದಷ್ಟೂ ಹೆಚ್ಚಾಗಿ ಮೇಲೇರುತ್ತಿರುತ್ತೇನೆ ಅಂತ ಹೇಳುತ್ತಿರುತ್ತಾರೆ.

ಬಲಿದತ್ತ ಇವರ ಬಗ್ಗೆ ಯೋಚಿಸುತ್ತಾನಾದರೂ ತನ್ನ ಸಫಲತಾಶಾಸ್ತ್ರವನ್ನು ಕುರಿತಂತೆ ಅವನ ನಂಬಿಕೆ ಕಡಿಮೆಯಾಗಿಲ್ಲ. ಒಂದು ವಿಚಾರವಾಗಿ ಅವನು ಇವರೆಲ್ಲರನ್ನೂ ಕಿತ್ತೆಸೆದು ಒಂದು ಕಡೆ ಬಿಸಾಡಬಲ್ಲ. ಅದೃಷ್ಟ? - ಈ ಜನ ಅದೃಷ್ಟಶಾಲಿಗಳಾಗಿರಲೂ ಸಾಧ್ಯ.

ಆದರೆ ಅವನು ಅದೃಷ್ಟವನ್ನು ಕಾಣುತ್ತಾ ಕುಳಿತುಕೊಳ್ಳಲು ಇಷ್ಟಪಡುವುದಿಲ್ಲ. ಏನಾದರೂ ಕುಮ್ಮಕ್ಕು ಮಾಡಲು ಪ್ರಯತ್ನಿಸುತ್ತಲೆ ಇದ್ದಾನೆ.

ಒಟ್ಟಿನಲ್ಲಿ ಏನೇ ಆದರೂ ಇದೇ ರೀತಿಯಲ್ಲಿ ಯೋಚನೆ ಮಾಡುತ್ತಾ ತಡಕಾಡುತ್ತಿದ್ದರೆ ಒಂದು ದಿನ ಕತ್ತಲೆಯಲ್ಲಿ ಬೆಳಕು ಕಂಡೇ ಕಾಣುತ್ತದೆ, ಅನುಕೂಲವಾಗುತ್ತದೆ ಅಂತ ಅವನಿಗೆ ನಂಬಿಕೆ.

ಆದರೆ ಯಾವಾಗ? ಇನ್ನೆಷ್ಟು ದಿನಗಳು ಬೇಕು. ಹತಾಶನಾಗಿ ಬಲಿದತ್ತ ಯೋಚಿಸುತ್ತಾನೆ. ಚಿಂತೆ ಬಗೆಹರಿಯುವುದಿಲ್ಲ.

ಕಂಪನಿಯ ಪ್ರಪಂಚದಲ್ಲಿ ಅಧಿಕಾರಿಯ ಹೆಂಡತಿಯಾಗಿರುವುದು ಸರೋಜಿನಿಗೆ ಮೆಲ್ಲಗೆ ಅಭ್ಯಾಸವಾಗಿ ಹೋಯಿತು. ದೂರ ಬಂದ ಮೇಲೂ ಅವಳು ತನ್ನದೇ ಆದ ಸಮಾಜದಲ್ಲಿ ಸುತ್ತಾಡಬೇಕು. ಪ್ರಾರಂಭದಲ್ಲಿ ಎಲ್ಲ ಹೊಸದಾಗಿ ಕಾಣಿಸುತ್ತದೆ, ಆನಂತರ ಅದೇ ಸರಿಹೋಗಿ ತನ್ನದಾಗುತ್ತದೆ. ಹಾಗೆ ಹೇಳೋದಾದರೆ ಮೊದಲಿಗೆ ಪರಿಸ್ಥಿತಿ ಹೊಸದಾಗಿಯೆ ಇತ್ತು. ಇಷ್ಟು ದೊಡ್ಡ ಪರಿಸರದಲ್ಲಿ ಇಷ್ಟೊಂದು ಜನ,

ನಾನಾ ಜಾತಿಯವರು, ಬೇರೆ ಬೇರೆ ಭಾಷೆಗಳನ್ನಾಡುವವರು. ಆದರೆ ಜಾತಿ ಅಂದರೆ ಆ ಪದದ ಸಂಸ್ಕಾರಗತವಾದ ಅರ್ಥವಲ್ಲ, ವ್ಯವಹಾರದಿಂದ ಪಡೆದುಕೊಂಡ ಅರ್ಥ - ಅಂದರೆ ವೃತ್ತಿ ಭೇದದಿಂದ ಜಾತಿಭೇದ - ಬ್ರಾಹ್ಮಣ ಕ್ಷತ್ರಿಯ ಈ ಜಾತಿಗಳಲ್ಲ, ಹೊಸ ಜಾತಿಗಳು. ಕೂಲಿಕಾರರ ಜಾತಿ, ಮಾಲಿಕರ ಜಾತಿ, ಗುಮಾಸ್ತರ ಜಾತಿ, ಅಧಿಕಾರಿಗಳ ಜಾತಿ, ಹಾಗೆಯೆ ಯಾವುದೋ ಒಂದು ಕಂಪನಿಯ ಕೆಲಸಗಾರರ ಜಾತಿ, ಇನ್ನೊಂದು ಕಂಪನಿಯ ಕೆಲಸಗಾರರ ಜಾತಿ, ಸರ್ಕಾರಿ ನೌಕರರ ಜಾತಿ, ವಕೀಲರ ಜಾತಿ, ಪ್ರೊಫೆಸರುಗಳ ಜಾತಿ, ಪತ್ರಕರ್ತರ ಜಾತಿ.

ಹೊರಗಿನ ಜಾತಿಭೇದಗಳ ಬಗ್ಗೆ ತಲೆಕೆಡಿಸಿಕೊಳ್ಳುವುದಕ್ಕೆ ಸರೋಜನಿಗೆ ವ್ಯವಧಾನವಿಲ್ಲ. ಅನುಕೂಲವಿಲ್ಲ. ಯಾವಾಗಲಾದರೂ ಅವಳು ತನ್ನ ಜಾತಿ ರಾಜ್ಯದಲ್ಲಿ ಸುತ್ತಾಡುತ್ತಾಳೆ. ನೋಡುತ್ತಾಳೆ, ಆಲೋಚಿಸುತ್ತಾಳೆ, ತನ್ನ ಸಂಸಾರ ತಾಪತ್ರಯಕ್ಕೆ ಮತ್ತೆ ಹಿಂದಿರುಗಿಬರುತ್ತಾಳೆ. ಅಲ್ಲಿ ಅವಳದು ಕೇವಲ ಹೆಣ್ಣಿನ ಜಾತಿ.

ಮನೆ ತುಂಬುತ್ತಿದೆ. ನಿತಾಯಿ ಎಷ್ಟು ಚಾಕಚಕ್ಯತೆಯಿಂದ ಕೆಲಸ ಮಾಡಬಲ್ಲ ಅಂತ ನಿಧಾನವಾಗಿ ಅವಳ ಅನುಭವಕ್ಕೆ ಬರುತ್ತದೆ. ಸಂಜೆಯಾಗುತ್ತಲೆ ಯಾವಾಗಲಾದರೂ ಕೆಲವು ಮಂದಿ ಅಪರಿಚಿತರು ಹಿತ್ತಲ ಕಡೆಯಿಂದ ನಿತಾಯಿಯ ಜೊತೆ ಬರುತ್ತಾರೆ. ರಾತ್ರಿಯ ಕತ್ತಲೆಯಲ್ಲೇ ಬಲಿದತ್ತ ಅವರೊಡನೆ ಮಾತುಕತೆ ಮುಗಿಸುತ್ತಾನೆ, -ಮನೆಮಠ ಮಾಡಿಕೊಳ್ಳುವ ಈ ಹೊಸ ಹಾದಿಗೆ ಬಲಿದತ್ತ ತಕ್ಕಂತೆ ನಡೆಯಬೇಕಾಗಿದೆ. ಧರ್ಮಕರ್ಮದ ಒಳಿತುಕೆಡಕಿನ ಮಾತುಗಳನ್ನೂ ವಿವೇಕವನ್ನೂ ಜನ ಒದ್ದು ಗುಂಡಿಯಲ್ಲಿ ಹಾಕಿ ಮುಚ್ಚಿ ಬಿಡುತ್ತಾರೆ, ಏಕೆಂದರೆ "ಮನುಷ್ಯ ಬದುಕಬೇಕು."

ಹಾಗಾಗಿ ಮನೆ ತುಂಬುತ್ತಾ ಹೋಗುತ್ತಿದೆ. ಗೊನೆ ಗೊನೆ ಬಾಳೆಹಣ್ಣು, ಮೂಟೆ ಮೂಟೆ ಅಕ್ಕಿ, ಧವಸಧಾನ್ಯ, ಹಣ. ಇಬ್ಬರೂ ಮನೆಯಲ್ಲಿ ಪದಾರ್ಥ ತುಂಬಿಕೊಳ್ಳುವುದರಲ್ಲಿ ಮಗ್ನರಾಗಿದ್ದಾರೆ. ಯಾವಾಗಲಾದರೂ ಒಮ್ಮೆ ಶುರು ಮಾಡಿದರೆ ಸಾಕು, ಮತ್ತೆ ಈ ದಾಹ ಎಂದೂ ಬಿಡುವುದಿಲ್ಲ. ಮನೆ ತುಂಬುತ್ತಿದೆ.

ಕುಳ್ಳ ಬಲಿದತ್ತ ತನ್ನನ್ನು ತಾನೇ ತುಂಬ ಬುದ್ಧಿವಂತ ಅಂತ ತಿಳಿದುಕೊಂಡು ಹೆಂಡತಿಯ ಮುಂದೆ ತನ್ನ ದರ್ಶನ ಶಾಸ್ತ್ರವನ್ನು ವಿವರಿಸುತ್ತಾ ಬಡಾಯಿ ಕೊಚ್ಚಿಕೊಳ್ಳುತ್ತಾನೆ, - "ಸ್ವಂತ ಮಾಡಿದರೆ ಮಾಡಿದ ಹಾಗೆ ನೋಡು, ಬೇರೆಯವರು ಮಾಡಿದರೆ ಅದು ಕಳ್ಳತನ, ಆದರೆ ದೊಡ್ಡವರಿಂದ ಸಣ್ಣವರವರೆಗೂ ಯಾರನ್ನು ಬೇಕಾದರೂ ನೋಡು, ಎಲ್ಲರೂ ಮಾಡುವುದು ಇದನ್ನೇ - ಯಾರಿಗೆ ಕೈಲಿ ಹರಿಯೊಲ್ಲ ಅವರೇ ಬೇಕೂಫರು. ಯಾರ ಅಕ್ಕಿಕಾಳನ್ನು ತೆಗೆದುಕೊಂಡು ಹೋಗುತ್ತಿದ್ದಿ ಅಂತ ಇರುವೆಯನ್ನು ಕೇಳೋದಕ್ಕಾಗುತ್ತದೆಯ ? ಕಂಪೆನಿಯೂ ಅಷ್ಟೆ ಅಲ್ಲದೆ ಮತ್ತೇನು ? ಲೂಟಿ ಮಾಡುವುದಕ್ಕೆ ಇರೋ ಉಗ್ರಾಣದಂತಿದೆ. ಅಂದಮೇಲೆ - ಅದೇ ನೋಡು ಮಿಸ್ಟರ್ ಎಡ್ವರ್ಡ್ ಎರಡು ಲಕ್ಷ, ಮಿಸ್ಟರ್ ರಾಧಾರಮಣ್ ಒಂದೇ ಏಟಿಗೆ ಮೂರು ಲಕ್ಷ ಹೊಡೆದಿದ್ದಾರೆ. ಮಿಸ್ಟರ್ ವೈದ್ಯನಾಥ ಮೆನನ್ ಮಗಳ ಮದುವೆಯಲ್ಲಿ ಕಂಟ್ರಾಕ್ಟರುಗಳಿಂದ ಕೇವಲ ಅರವತ್ತು ಸಾವಿರ ರೂಪಾಯಿಗಳ ಬಳುವಳಿಯನ್ನು ತೆಗೆದುಕೊಂಡಿದ್ದಾರೆ. ಇಂಥ ಬೇಕಾದಷ್ಟು ಉದಾಹರಣೆಗಳಿವೆ.

ಇವರೆಲ್ಲ ತುಂಬ ದಕ್ಷರು ಯೋಗ್ಯರು ಅಂತ ಹೆಸರು ತೊಗೊಂಡಿದ್ದಾರೆ. ನಾವೇ ಅರ್ಧ ಬೇಕೂಫರು. ತುಂಡು ಲಂಗೋಟಿ ಕಟ್ಟಿಕೊಂಡು ಧರ್ಮಕರ್ಮ ಅಂತ ಹಿಂದುಮುಂದು ನೋಡುತ್ತಿರು ಮಗನೆ, ಮೊದಲು ಸ್ವರ್ಗದ ದಾರಿ ಹಿಡೀತೀಯ. ಈ ಕಾಲದ ಪ್ರಪಂಚ ಕಣಪ್ಪ, ಎಂದಿನಂತಲ್ಲ. ಮಾಡಬೇಕು, ಇಲ್ಲ ಅಂದರೆ ಸಾಯಬೇಕು. ಜನರೆಲ್ಲ ಏನು ಹೇಳೋದು ? ಅಭಾವದ ದಿನಗಳು, ಜೋಡಿಸಿಕೊ, ಏನಾದರೂ ಗಿಟ್ಟಿಸಿಕೊ. ಏನಾದರೂ ಹುಟ್ಟಿಸಬೇಕು. ಎಲ್ಲಿಂದ ಜೋಡಿಸೋದು ? ಎಲ್ಲಿಂದ ಹುಟ್ಟಿಸೋದು ? ಹೀಗೇ ತಾನೇ ?''

ಹೀಗೆ ಹೇಳುತ್ತಾ ಕಣ್ಣು ಮಿಟಕಿಸಿ ಹ್ಹೆಹ್ಹೆ ಅಂತ ನಗುತ್ತಾನೆ. ಅವನ ಭಂಗಿ ವಿಚಿತ್ರವಾಗಿ ಕಾಣುತ್ತದೆ. ಮುಖ ಕೆನ್ನೆಗಳು ತುಂಬಿಕೊಳ್ಳುತ್ತಿವೆ, ಮೈಯಲ್ಲಿ ಮಾಂಸ ಕೂಡಿಕೊಳ್ಳುತ್ತಿದೆ, ಸ್ವಚ್ಛಂದತೆ ಮತ್ತು ಸ್ವಾತಂತ್ರ್ಯದ ಸುಖದ ಮೈಯಿನ ಹೊಳಪು ಕಾಣತೊಡಗಿದೆ.

ಒಬ್ಬ ಮನುಷ್ಯನ ಸಾಮರ್ಥ್ಯವನ್ನು ಉದಾಹರಣೆಯಾಗಿ ಕೊಡುತ್ತಾನೆ. ''ಕಂಪೆನಿಯಲ್ಲಿ ಒಂದು ಕಬ್ಬಿಣದ ಪೆಟ್ಟಿಗೆಯಿತ್ತು. ಬುದ್ಧಿವಂತರಾದ ಹೆಡ್ ಗುಮಾಸ್ತರ ದೃಷ್ಟಿ ಅದರ ಮೇಲಿತ್ತು. ಮೊದಲು ರಿಜಿಸ್ಟರಿನಲ್ಲಿ 'ಖಾಲಿ' ಪೆಟ್ಟಿಗೆ ಅಂತ ಬರೆದರು. ಐದು ವರ್ಷದ ಮೇಲೆ 'ಪೆಟ್ಟಿಗೆಯನ್ನು ಗೆದ್ದಲು ತಿಂದಿದೆ' ಅಂತ ದಾಖಲು ಮಾಡಲಾಯಿತು. ಗೆದ್ದಲು ಹಿಡಿಯುವ ವಿಚಾರವೇನೂ ಸರಿ, ತುಂಬ ಹಳೆಯ ಪೆಟ್ಟಿಗೆಯನ್ನು ಗೆದ್ದಲು ತಿನ್ನಬಹುದು, ಆದರೆ ಸಮರ್ಥನಾದ ವ್ಯಕ್ತಿ ಕಬ್ಬಿಣದ ಪೆಟ್ಟಿಗೆಯನ್ನು ಗೆದ್ದಲು ತಿನ್ನುವಂತೆ ಮಾಡಿ ಬಿಡುತ್ತಾನೆ. ಅವನೇನು ಕಡಮೆ ಮನುಷ್ಯನೆ ? ಹಾಗೆಯೆ-''

ಆದರೆ ಬಲಿದತ್ತ ಎಷ್ಟು ದೂರದೃಷ್ಟಿ ಇಟ್ಟುಕೊಂಡು ನಗಬಲ್ಲನೋ, ಸರೋಜಿನಿ ಅಷ್ಟು ನಗಲಾರಳು. ತಿರಸ್ಕಾರದಿಂದ ಮನಸ್ಸು ಉರಿಯುತ್ತದೆ. ಬಲಿದತ್ತನ ಕಡೆ ಕಾಡು ಬೆಕ್ಕಿನಂತೆ ನೋಡುತ್ತಾಳೆ. ಎಷ್ಟಾದರೂ ಅವಳು ಹೆಣ್ಣು. ಅವಳಿಗೆ ಎರಡು ಹೊತ್ತಿನ ರೊಟ್ಟಿ ಸಿಕ್ಕಿದೆ, ಬಟ್ಟೆ ಸಿಕ್ಕಿದೆ, ಒಡವೆ ಸಿಕ್ಕಿದೆ.

ಆದರೆ ಇದೇ ಸರ್ವಸ್ವವೇ ?

ಒಮ್ಮೊಮ್ಮೆ ಏನೋ ಕಳೆದುಕೊಂಡಂತೆ ದೂರ ನೋಡುತ್ತಿರುತ್ತಾಳೆ.

ಪಕ್ಷಿ ಹಾರಿಹೋಗಿದೆ ಅಂತ.... ಅನಿಸುತ್ತದೆ.

ಎಲೆಗಳು ಒಣಗಿ ಉದುರಿಹೋಗುತ್ತಾ ಇವೆ.

ನದಿ ತುಂಬಿಹೋಗಿದೆ.

ಹಾಗೆಯೆ ಅವಳು ತನ್ನಷ್ಟಕ್ಕೆ ತಾನೇ - ತಾನೊಂದು ತಮಾಷೆಯ ವಸ್ತು ಅಂದುಕೊಳ್ಳುತ್ತಾಳೆ. ಈ ತಮಾಷೆಯ ವಸ್ತು ಬೆಲೆಬಾಳುವ ಸೀರೆ ಉಡುತ್ತದೆ, ಜಡೆ ಹಾಕಿಕೊಳ್ಳುತ್ತದೆ, ಒಡವೆ ಹಾಕಿಕೊಳ್ಳುತ್ತದೆ, ಶೃಂಗಾರ ಮಾಡಿಕೊಳ್ಳುತ್ತದೆ, ಸುಮ್ಮನೆ ನೋಡುತ್ತಿರುತ್ತದೆ.

ಸುಮ್ಮನೆ ನೋಡುತ್ತಿರುತ್ತದೆ.

ಕೆಲವೊಮ್ಮೆ ನಿದ್ದೆ ಮಾಡುತ್ತಿರುವ ನೆಪದಲ್ಲಿ, ಕೆಲವೊಮ್ಮೆ ಜಾಗೃತಾವಸ್ಥೆಯಲ್ಲಿ ಮಲಗಿರುವಾಗ ಕಿವಿಗೆ ದೂರದಲ್ಲಿರುವ ಅಲೆಗಳ ಲವಲವಿಕೆಯ ಬದುಕು

ಡಿಕ್ಕಿಹೊಡೆದಂತಾಗುತ್ತದೆ. ಲೆಕ್ಕಕ್ಕೆ ಸಿಗದಷ್ಟು ಅಲೆಯುಂಗುರಗಳು ತೇಲಿ ಬಂದಂತಾಗುತ್ತದೆ. ತಂಗಾಳಿ, ತುಂಬಿದ ಮನಸ್ಸು ಬೆಚ್ಚಿ ಮೇಲೆದ್ದಂತಾಗುತ್ತದೆ.

ಬೆಚ್ಚಿದಂತಾಗಿ ನೋಡುತ್ತಾಳೆ. ನಿಜ; ಅವಳು ಕಾಯುತ್ತಿದ್ದಾಳೆಯೆ ?

ಈ ರೀತಿ ಕಾಯುವುದಕ್ಕೆ ಕೊನೆಯಿಲ್ಲ.

ಚಡಪಡಿಸುತ್ತ ಹೊರಗಡೆ ಬಾಗಿಲಿನ ಕಡೆಗೆ ಅನ್ಯಮನಸ್ಕಳಾಗಿ ನೋಡುತ್ತಿದ್ದಾಗ, ಆ ದಿನ ಇದ್ದಕ್ಕಿದ್ದ ಹಾಗೆ ಸಿಗರೇಟಿನ ಹೊಗೆ ಬಿಡುತ್ತಾ ಕೈಯಲ್ಲಿ ಟೆನಿಸ್ ರ್‍ಯಾಕೆಟ್ ಹಿಡಿದ ಒಬ್ಬ ಚೆಲುವ ತನ್ನ ಪತಿಪರಮೇಶ್ವರ ಬಲಿದತ್ತನನ್ನು ಮುಂದಿಟ್ಟುಕೊಂಡು ಬರುತ್ತಿರುವುದನ್ನು ಕಂಡಳು. ನೋಡುತ್ತಲೆ ಸರೋಜಿನಿ ಒಳಗೆ ಓಡಿದಳು.

ಸ್ವಭಾವದಿಂದ ಅವಳು ಸಂಯಮಶೀಲೆ. ಗಂಭೀರವಾಗಿರುತ್ತಾಳೆ, ಮೌನವಾಗಿರುತ್ತಾಳೆ. ಗುಪ್ತವಾದ ಮನಸ್ಸಿನ ಏಕಾಂಗಿತನ ನೀಳವಾಗಿ ಉಸಿರಾಡುವುದಕ್ಕಾಗಿ ಎಂದಿನಂತೆ ದೂರದಲ್ಲಿ ಕಾಣುತ್ತಿರುವ ಮನಮುಟ್ಟುವಂತಿರುವ ಸೂರ್ಯಾಸ್ತವನ್ನು ನೋಡುತ್ತಿರುವಾಗ, ಮುಂದೆ ಸಾಗಿಬರುತ್ತಿದ್ದ ಆ ಇಬ್ಬರನ್ನು ಕಂಡು ಅವಳ ಮನಸ್ಸಿನಾಳದಲ್ಲಿ ಯಾವುದೋ ಅಲೆಯೊಂದು ಹರಿದಂತಾಗಿರಬಹುದು. ಬಹುಶಃ ಆ ಅಲೆಯ ಒಂದು ಓಟ ಅರಿವಿಲ್ಲದೆಯ ಅವಳ ಅಂಗಾಂಗಗಳ ಮೇಲೆ ಸಾಗಿದ್ದಿರಬಹುದು. ಅದೇ ಅಲೆಯೆ ಅವಳ ಉಡುಗೆಯನ್ನು ಅಸ್ತವ್ಯಸ್ತಗೊಳಿಸಿದ್ದಿರಬೇಕು. ಅವಳಿಗೆ ಇದರ ಅರಿವೇ ಇಲ್ಲ. ಅವಳಿಗೆ ತನ್ನ ಮೇಲೆಯೆ ಕೋಪ ಬರುತ್ತದೆ - ಛೆ, ಇದೇನು ಹೀಗಾಯಿತು ? ಜನರೆಲ್ಲ ಒಳ್ಳೆಯ ಮನುಷ್ಯ ಅಂತ ಕರೆಯುವ ಬಲಿದತ್ತನ ಮನೆಯವಳು ಅಂತ ತಾನೆ ? ಛೆ, ಜನ ಏನು ಯೋಚಿಸಬಹುದು ? ಛೆ ಛೆ, ಏನು ತಿಳಿಯುತ್ತಾರೆ! ಹೀಗೆ ಯೋಚಿಸುತ್ತಿದ್ದ ಹಾಗೆಯೆ ಅವಳಿಗೆ ಅರಿವಿಲ್ಲದೆಯೆ ಮನಸ್ಸಿನಲ್ಲಿ ವಿಚಾರಗಳ ಅಲೆಗಳೇಳುತ್ತವೆ. ಈಗ ಅವಳು ಸ್ವಚ್ಛಂದವಾಗಿ ಅಲೆಗಳತ್ತ ಸಾಗಬಲ್ಲಳು - ಆದಕ್ಕಾಗಿಯೆ ಹೆಣ್ಣು ಅಂದರೆ ಸೃಷ್ಟಿಯಲ್ಲಿ ರಾಣಿ, ಲತಾ ಸೃಷ್ಟಿಯ ಐಸಿರಿ, ಮನುಷ್ಯನ ಮನಸ್ಸು ಎಂದಿನಿಂದಲೂ ಪ್ರಕೃತಿಯನ್ನೇ ಆಶ್ರಯಿಸಿದೆ. ನ್ಯಾಯದ ತಕ್ಕಡಿ ಒಳಿತು ಕೆಡಕುಗಳ ವಿಚಾರದಿಂದ ಹೊರತಾದುದು. ಮನಸ್ಸಿನಲ್ಲಿ ಇಂಥ ಆಲೋಚನೆ ಮೂಡುತ್ತಿದ್ದಂತೆಯೆ ಅವಳ ಮುಖ ಕೆಂಪಾಗುತ್ತದೆ. ಕೂದಲು ಹರಡಿಕೊಳ್ಳುತ್ತವೆ. ಹಣೆಯ ಮೇಲೆ ಬೆವರು ಹನಿಗಳು. ಕಿಟಕಿಯ ಬಳಿ ದೂರದಲ್ಲಿ ಮುಳುಗುತ್ತಿರುವ ಸೂರ್ಯನನ್ನು ನೋಡುತ್ತಿರುವಂತೆಯೆ ಮೂಗಿನ ಹೊಳ್ಳೆಗಳು ಅರಳುತ್ತವೆ. ಪೊದೆಯ ಮರೆಯಲ್ಲಿ ಬಚ್ಚಿಟ್ಟುಕೊಂಡಿರುವ ಆಗಂತುಕನ ಕಾಲು ಸಪ್ಪಳ ಕೇಳಿ ಕಾದುಪ್ರಾಣ ಹಿಂದೆಮುಂದೆ ನೋಡುತ್ತಿರುವಂತಹ ಅನುಭವ ಅವಳಿಗಾಗುತ್ತಿದೆ.

"ಇದು ಬಡವರ ಗುಡಿಸಲು ರಣಜಿತ ಬಾಬು, ತಮ್ಮಂತಹ ಶ್ರೀಮಂತರ ಹೆಸರುವಾಸಿಯಾಗಿರುವವರ ಮನೆಯ ಹಾಗಲ್ಲ. ತಾವಾದರೋ ದೊಡ್ಡ ಮನುಷ್ಯರು. ನಮ್ಮ ಮನೆ ಕಡೆ ಪಾದ ಬೆಳೆಸಿದ್ದೀರಿ. ನನ್ನ ಪುಣ್ಯ".

"ಸರಿ ಬಿಡಿ ಬಲಿದತ್ತ ಬಾಬು, ನೀವು ಎಷ್ಟು ಬೇಕೋ ಅಷ್ಟು ಬೈಗಳ ಮಳೆಯನ್ನೇ

ಸುರಿಸಿ. ನಿಜ ಹೇಳಬೇಕೆಂದರೆ ನೀವು ಬಂದು ಇಷ್ಟು ದಿನವಾಯಿತು, ನನಗೆ ಬರಲೇ ಆಗಲಿಲ್ಲ. ವಾಸ್ತವವಾಗಿ ತಪ್ಪು ನನ್ನದೇ. ಆದರೆ ನೀವಂತೂ ಕರೆಯುವುದೇ ಇಲ್ಲವಲ್ಲ. ಏಕೆ, ಊಟ ಹಾಕಬೇಕಲ್ಲ ಅಂತ ತಾನೆ ?"

"ಹೌದು ಹೌದು, ಊಟ ಹಾಕಬೇಕು ಅಂತಲೆ! ವಿದುರನ ಮನೆಯ ಊಟೋಪಚಾರ ನೋಡಿ. ಅಷ್ಟಲ್ಲದೆ ಇನ್ನೇನು? ಮೊದಲು ತಮಗೆ ಕುಳಿತುಕೊಳ್ಳೋದಿಕ್ಕೆ ಕೂಡ ಸ್ಥಳ ಸರಿಯಾಗಿಲ್ಲ, ಹಾಗೇ-"

"ಪರವಾಗಿಲ್ಲ ಬಿಡಿ, ಏನು ಹೇಳ್ತಾ ಇದೀರಿ- ಅದು ಸರಿ, ನಿಮ್ಮ ಮನೆಯಲ್ಲಿ ಎಷ್ಟೊಂದು ಜಾಗ ಇದೆ, ಕಿಟಕಿಯ ಹತ್ತಿರ ಸ್ವಲ್ಪ ದೂರವಾಯಿತು, ಆದರೇನು ಬಿಡಿ, ಎಷ್ಟು ಸೊಗಸಾದ ಸ್ಥಳ, ಸಣ್ಣ ತೋಟ ಮಾಡಬಹುದಿತ್ತು. ಇಲ್ಲಿ ಗುಲಾಬಿ, ಡಾಲಿಯಾ, ಕ್ರಿಸೈಂಥಿಮಮ್ ಆ ಕಡೇ ಸಾಲಿನಲ್ಲಿ ಕ್ಯಾನಾ, ಲಿಲಿ, ಜಾಜಿ, ಮೆಗ್ನೋಲಿಯಾ - ಆಹಾ, ಎಷ್ಟು ಚೆನ್ನಾಗಿರುತ್ತಿತ್ತು!"

ಹಾಗಾದರೆ ಕಿಟಕಿಯ ಕಡೆ ನೋಡಿಬಿಟ್ಟಿದ್ದಾರೆ ? ಆ ಕಡೆಗೇ ನೋಡುತ್ತಿರುವಂತೆ ಕಾಣಿಸಿತು. ಆದರೆ ದೂರದಲ್ಲಿರುವ ಬಾಗಿಲಿನ ಕಡೆಗೆ ನೋಡುತ್ತಿರುವ ಹಾಗಿದೆಯಲ್ಲ. ಬಲಿದತ್ತ ಹೇಳುತ್ತಿದ್ದಾನೆ- "ಈ ಖಾಲಿಯಾದ ಬಂಜರು ಪ್ರದೇಶ ನೋಡಿ ನಿಮಗೆ ಹೂವಿನ ಜ್ಞಾಪಕ ಬಂತೆ ? ಅದಕ್ಕೆ ಬದಲು ಇನ್ನೊಂದು ಸ್ವಲ್ಪ ಹೆಚ್ಚು ಕಾಳು ತರಕಾರಿಗಳನ್ನು ಬೆಳೆಯಬಹುದಿತ್ತೆಂದು ಯೋಚಿಸುತ್ತಿದ್ದೆ ನೋಡಿ, ಅದೇ ಇನ್ನೊಂದು ಸ್ವಲ್ಪ ಬೆಂಡೆಕಾಯಿ, ಬದನೆಕಾಯಿ....

ಸರೋಜಿನಿಗೆ ಗೊಳ್ ಅಂತ ನಗು ಬಂತು. ಆದರೂ ತಡೆದುಕೊಂಡಳು. ಅವರೂ ನಗುತ್ತಿದ್ದಾರೆ, - ಸುಂದರವಾಗಿ ಹತ್ತಿರ ಹತ್ತಿರವಿರುವ ಹಲ್ಲುಗಳು, ಮಣಿ ಪೋಣಿಸಿದ್ದಂತೆ ಹೊಳೆಯುತ್ತವೆ, ಹೀಗೂ ಇರುವುದುಂಟೆ ? ರಣಜಿತಬಾಬು ನಗುತ್ತಿದ್ದಾರೆ. ಇಂಗ್ಲಿಷಿನಲ್ಲಿ ಅವರು ಏನು ಹೇಳುತ್ತಾ ಇದ್ದಾರೆ ಅಂತ ಅವಳಿಗೆ ಅರ್ಥವಾಗಲಿಲ್ಲ. ಒರಿಯ ಭಾಷೆಯಲ್ಲಿ ಹೇಳುತ್ತಿದ್ದುದು ಚೆನ್ನಾಗಿ ಅರ್ಥವಾಯಿತು - "ನಿಮ್ಮದಂತೂ ಭರ್ಜರಿಯಾದ ಪ್ರಾಕ್ಟಿಕಲ್ ಇನ್‌ಸ್ಟಿಟ್ ಬಲಿಬಾಬು! ಆರ್ಗನೈಸಿಂಗ್ ಎಬಿಲಿಟಿ ಬೇಕಾದಷ್ಟಿದೆ. ತರಕಾರಿ ಕಾಳುಗಳನ್ನು ಬೆಳೆಯುವ ವಿಚಾರ ನನ್ನ ತಲೆಗೆ ಹೊಳೆಯಲೆ ಇಲ್ಲ ನೋಡಿ, ಆದರೆ ಒಂದು ವಿಷಯ ಗೊತ್ತಾ ನಿಮಗೆ ಯಾವುದಾದರೂ ಜಾಗದಲ್ಲಿ ನಿಂತುಕೊಂಡರೆ, ಅಲ್ಲಿರುವ ಮಣ್ಣಿನಿಂದಲೆ ಹೊರಡುವ ಐಡಿಯ ಮನಸ್ಸಿಗೆ ಹೊಳೆಯುತ್ತೆ ನೋಡಿ. ಇಲ್ಲಿ ನಿಂತುಕೊಂಡು ನಿಮ್ಮ ಮನೆ ಕಡೆ ನೋಡಿದರೆ ಮನಸ್ಸಿನಲ್ಲಿ ಬರೀ ಹೂವುಗಳ ತೋಟದ ವಿಚಾರವೆ ಏಳುತ್ತದೆ, ಚೆನ್ನಾಗಿರುತ್ತೆ ಅನಿಸುತ್ತೆ ನೋಡಿ."

ಅಬ್ಬಾ, ಎಂಥ ಮನುಷ್ಯ! ಒಳ್ಳೆಯ ಶಿಕಾರಿಯೆ ಸರಿ! ಸರೋಜಿನಿ ಯೋಚಿಸುತ್ತಾಳೆ. ಈ ರೀತಿ ಕಡುಬಿನಲ್ಲಿ ಹೂರಣ ಸೇರಿಸುವಂತೆ, ಮಾತಿನೊಳಗೊಂದು ಮಾತಿನ ಅರ್ಥ ಸೇರಿಸಿ ಹೇಳುವುದು ಅವರಿಗೆ ಚೆನ್ನಾಗಿ ಬರುತ್ತದೆ.

ಆದರೆ ಸರೋಜಿನಿಗೆ ಗೊತ್ತಿಲ್ಲ, ಮನುಷ್ಯನ ಮೊದಲ ಪ್ರವೃತ್ತಿ, ಮೂಲಭೂತ ಪ್ರವೃತ್ತಿ ಅಂದರೆ ಶಿಕಾರಿ ಮಾಡುವುದು. ಸರೋಜಿನಿ ಪೆಚ್ಚುಪೆಚ್ಚಾಗಿ ಕುಳಿತು ನೋಡುತ್ತಿದ್ದಾಳೆ. ಬಲಿದತ್ತನ ಮಾತುಗಳು ಒಡೆದ ತುತ್ತೂರಿಯಿಂದ ಹೊರಟ

ಧ್ವನಿಯಂತೆ ಅಧ್ವಾನವಾಗಿ ಕೇಳಿಸುತ್ತಿದೆ. ಬಲಿದತ್ತ ಹೇಳುತ್ತಿದ್ದಾನೆ, "ನೀವು ತುಂಬ ಪ್ರತಿಭಾನ್ವಿತರು, ಸುಸಂಸ್ಕೃತರು, ಹುಟ್ಟಿನಿಂದಲೆ ಸಂಸ್ಕಾರ ಹೊಂದಿರುವವರು ಮಾತ್ರ ಸ್ವಭಾವತಃ ಕವಿಗಳಾಗಿರುತ್ತಾರೆ. ಆದ್ದರಿಂದಲೇ ನಿಮಗೆ ಹೂವಿನ ಗಿಡಗಳ ನೆನಪು ಬಂದಿದೆ. ಆದರೆ ನೋಡಿ, ನಿಮಗೆ ಗೊತ್ತಿರುವಂತೆ ನಮ್ಮಂಥವರ ಯೋಚನೆಯೆಲ್ಲ ಇರುವುದು ಹೊಟ್ಟೆಪಾಡಿನ ಕಡೆಗೇ. ಪೇಟೆಯಲ್ಲಿ ಎರಡು ಕಾಸುಕೊಟ್ಟು ಸೊಪ್ಪು, ಎರಡು ಕಾಸಿನ ಬದನೆಕಾಯಿ, ಆರು ಆಣೆ ಸೇರು ಬತುವಾ ಸೊಪ್ಪು, ಎಂಟಾಣೆ....."

"ಒಳ್ಳೇ ಲೆಕ್ಕಾಚಾರವನ್ನೆ ಶುರುಮಾಡಿದಿರಲ್ಲ", ಮಾತನ್ನು ಮಧ್ಯದಲ್ಲಿಯೆ ತುಂಡರಿಸಿ ರಣಜಿತ ಬಾಬು ಹೇಳಿದರು, "ತರಕಾರಿ ಗಿಡಗಳನ್ನೇ ಹಾಕಿ, ಚೆನ್ನಾಗಿರುತ್ತೆ. ಹಾಲು ಕೂಡ ತುಂಭಾ ದುಬಾರಿ, ಹಾಗೆಯೆ ತೋಟಕ್ಕೆ ಸಾಕಷ್ಟು ಒಳ್ಳೆಯ ಗೊಬ್ಬರ ಕೂಡ ಸಿಗೋದಿಲ್ಲ. ಆದ್ದರಿಂದ ನೀವು ಒಂದು ಕೆಲಸ ಮಾಡಬಹುದು. ಮನೆ ಮುಂದೆ ತಡಿಕೆ ಹಾಕಿ ಕೊಟ್ಟಿಗೆ ಕಟ್ಟಿಸಬಹುದು. ಎರಡು ಹಸು ಕಟ್ಟಿ- ಹಸುಗಳು ಕೂಡ ಕಿಟಕಿಗೆ ನೇರವಾಗಿಯೆ ಕಾಣಿಸುತ್ತವೆ. ಸಗಣಿ ಗಂಜಲದಿಂದ ತೋಟಕ್ಕೆ ಗೊಬ್ಬರವೂ ಸಿಗುತ್ತೆ. ಈಕಡೆಯಲ್ಲಿ ಗೊಬ್ಬರ ಕೊಳೆಯಲು ಹಾಕಿದರಾಯಿತು. ಕೊಳೆತ ಗೊಬ್ಬರ ಬದನೆಕಾಯಿಗೆ ಫಸ್ಟ್‌ಕ್ಲಾಸಾಗಿರುತ್ತೆ. ಸ್ವಲ್ಪ ಕೆಟ್ಟ ವಾಸನೆ ಬರಬಹುದು, ನೊಣಸೊಳ್ಳೆ ಹೆಚ್ಚಾಗಬಹುದು. ಆದರೆ ಅದರಿಂದೇನಾಗತ್ತೆ, ಸಂಸಾರಸ್ಥರ ಮನೆ ಅಂದ ಮೇಲೆ ಸ್ವಲ್ಪ ವಾಸನೆ ಇದ್ದರೇನಂತೆ, ನೊಣಸೊಳ್ಳೆಗಳಿಗೆ ನೀವು ಮುನಿಸಿಪಾಲಿಟಿಯಿಂದ ಸ್ವಲ್ಪ ಡಿ.ಡಿ.ಟಿ ತಂದು ಹಾಕಿದರಾಯಿತು. ಕೇಳಿದರೆ ಅವರೇ ಕೊಡ್ತಾರೆ-"

ರಣಜಿತ ಬಾಬು ಸಿಗರೇಟ್ ಕೇಸು ತೆಗದು ತಾವೊಂದು ಎಳೆದುಕೊಂಡರು, ಕೇಸನ್ನು ಬಲಿದತ್ತನ ಕಡೆಗೆ ಚಾಚಿದರು, ಸಿಗರೇಟು ಹೊಗೆ ಎಳೆಯುತ್ತಾ ರಣಜಿತ ಬಾಬುವಿನಂತೆಯೆ ಕಾಲುಚಾಚಿ ಭುಜ ಮೇಲೆತ್ತಿ ಹೊಗೆ ಬಿಡುತ್ತಾ ಬಲಿದತ್ತ ಹೇಳಿದ - "ಅಬ್ಬಬ್ಬಾ,- ಎಷ್ಟು ದುಬಾರಿ ಸಿಗರೇಟು. ಒಂದು ಸಿಗರೇಟಿಗೆ ಆರು ಕಾಸಾದರೂ ಆಗಬಹುದು. ಅಯ್ಯೋ ದೇವರೇ, ನಾವು ಹೀಗೆ ಸಿಗರೇಟು ಸೇದಿದರೆ ಇಡೀ ತಿಂಗಳಿನ ಸಂಬಳವೆಲ್ಲ ಐದು ದಿನಗಳೊಳಗೆ ಸಿಗರೇಟಿಗೇ ಕರಗಿಹೋಗುತ್ತದೆ."

"ನೀವು ಬುದ್ಧಿವಂತರು, ನನಗೆ ಈ ಚಟ ಅಂಟಿಬಿಟ್ಟಿದೆ."

"ಏಕೆ ಸೇದುತ್ತಿರಿ ? ಸಿಗರೇಟು ಸೇದೋದರಿಂದ ಕೆಮ್ಮು ಬರುತ್ತೆ, ಕೂದಲು ಉದರತ್ತೆ, ತಲೆಸುತ್ತು ಬರುತ್ತೆ ಅಂತ ಜನ ಹೇಳ್ತಾರೆ-"

"ಹಂ ಹಂ ಹಂ ಹಂ - ಏನೂ ಆಗಲ್ಲ ಬಲಿದತ್ತಬಾಬು, ಏನೂ ಆಗಲ್ಲ. ನಾನು ನೋಡಿ ಹದಿನೈದು ವರ್ಷ ವಯಸ್ಸಿನಿಂದಲೂ ಸೇದುತ್ತಾ ಇದ್ದೇನೆ. ಇದು ಇಲ್ಲ ಅಂದ್ರೆ ನಡೆಯೋದೆ ಇಲ್ಲ. ಇನ್ಸ್‌ಪಿರೇಷನ್ ಕೊಡತ್ತೆ ನೋಡಿ."

"ಜನ ಏನೋ ಹೇಳ್ತಾರೆ-"

"ಹಾಗೆ ಹೊಟ್ಟೆ ಕಿಚ್ಚು ಪಡೋರು ಹೇಳ್ತಾರೆ ಅಷ್ಟೆ. ಜನ ಅನೇಕ ರೀತಿ ಹೇಳ್ತಾರೆ. ಆದರೆ ನಿಜ ಸುಳ್ಳು ಏನು ಅಂತ ಅನುಭವ ಇರೋರು ತಾನೆ ತಿಳಿದುಕೊಳ್ಳಬೇಕು. ನೀವು ಇನ್ನೊಂದು ಸ್ವಲ್ಪ ದಿನಗಳಲ್ಲಿ ಆಫೀಸರ್ ಆಗ್ತೀರಿ - ನಿಮ್ಮ ಅನುಭವ

ಹೆಚ್ಚುತ್ತಿದ್ದ ಹಾಗೆಯ ನೋಡ್ತಿರಿ. ಜನರ ಹೊಟ್ಟೆಕಿಚ್ಚಿನ ಕಣ್ಣುಗಳಿಗೆ ಇನ್ನೊಬ್ಬರ ಸುಖ ಎಳಿಗೆ ಕಂಡರಾಗಲ್ಲ. ಜನ ಬೊಗಳೋದೆಲ್ಲ ಅಂತಹ ನ್ಯಾಯ, ನೀತಿ, ಮಾರಲ್ಸ್ -ಅದರಲ್ಲೂ ಹೆಚ್ಚು ಹೆಚ್ಚಾಗಿ ಗುಂಪುಕಟ್ಟಿಕೊಂಡು ಹೊಟ್ಟೆಕಿಚ್ಚಿನ ಮಾತಾಡುತ್ತಾರೆ. ನೀವೇ ಆ ಮಾತುಗಳನ್ನು ಡಿಸ್ಕಾರ್ಡ್ ಮಾಡ್ತೀರಿ ನೋಡಿ.-"

"ಓಹೋ, ನಿಮಗಿಂತ ಮೊದಲೇ ನಾನು ದೊಡ್ಡ ಆಫೀಸರ್ ಆಗ್ತೀನಾ ?"-

"ಅಯ್ಯೋ, ನನ್ನ ಮಾತು ಬಿಡಿ. ನಾನು ಸುಮ್ಮನೆ ದಿನ ಕಳೆಯುತ್ತಿದ್ದೇನೆ, ಅಷ್ಟೆ. ಸೌಂದರ್ಯದ ಪೂಜೆ ಮಾಡ್ತೀನಿ. ಹೊಚ್ಚ ಹೊಸದಾಗಿರುವುದು ಅಂದರೆ ನನಗೆ ತುಂಬ ಇಷ್ಟ. ಆನಂದವೇ ನನ್ನ ಪಾಲಿನ ದೇವತೆ. ಪ್ರಮೋಷನ್ ವಿಚಾರವಾಗಿ ನನಗೆ ಸ್ವಲ್ಪವೂ ಇಂಟರೆಸ್ಟ್ ಇಲ್ಲ-"

"ಅದು ಹೇಗೆ ಆಗತ್ತೆ ? ಹಾಗಾದರೆ ದೋಣಿ ನಡೆಸೋರು ಯಾರು ? ನೀವೇ ಆಫೀಸರ್ ಆಗ್ತೀರಿ, ಆಗ್ತೀರಿ ನೋಡಿ."

"ಅಯ್ಯೋ ಬಿಡಿ. ತುಂಬ ಥ್ಯಾಂಕ್ಸ್. ನಿಜ ಹೇಳಬೇಕೆಂದರೆ ನಿಮ್ಮ ಜೊತೆ ಮಾತಾಡುತ್ತಿದ್ದರೆ ತುಂಬ ಖುಷಿಯಾಗುತ್ತೆ. ಎಂಥ ಬ್ರೇನ್, ಇಂಥ ಬುದ್ಧಿ ಬಹಳ ಕಡಿಮೆ ಜನರ ಹಣೇಲಿ ಬರೆದಿರತ್ತೆ ನೋಡಿ-"

"ಛೆ ಛೆ, ಇನ್ನೂ ನಿಮ್ಮನ್ನು ಕೂಡಿಸೇ ಇಲ್ಲ, ಇದೇ ನೋಡಿ ನನ್ನ ಬ್ರೇನು. ಆಟ ಆಡುತ್ತಿದ್ದ ಹಾಗೆಯೆ ನೀವು ಬಂದಿದ್ದೀರಿ, ಬೆವರು ಹರಿಯುತ್ತಿದೆ. - ಲೋ ಹರ್ಷ, ಬಂದು ಸ್ವಲ್ಪ ಗಾಳಿ ಹಾಕು, -ಸ್ವಲ್ಪ ಕುಳಿತುಕೊಳ್ಳಿ, ಒಳಗೆ ಚಹಾ ಮಾಡಲು ಹೇಳಿಬರುತ್ತೇನೆ- ಸ್ವಲ್ಪ ಎಲೆ ಅಡಿಕೆ ಹಾಕಿಕೊಳ್ಳಿ, ನಿಮಗೆ ಸಾದಾ ಬೀಡ ಸಾಕೊ, ಜರ್ದಾ ಬೀಡ ಬೇಕಿದ್ದರೆ ಹೇಳಿ-"

"ಅಯ್ಯೋ ಏನಿದು ಬಲಿದತ್ತ ಬಾಬು, ತುಂಬ ಯೋಚಿಸುತ್ತಿದ್ದೀರಲ್ಲ. ನಿಮ್ಮ ಮನೆಗೇನು ಮದುವೆ ಗಂಡು ಬಂದಿದೆಯಾ ?"- ಬಲಿದತ್ತ ಹೋ ಹೋ ಅಂತ ಚೆನ್ನಾಗಿ ನಕ್ಕ - "ನೋಡಿ, ಸುಮ್ಮನೆ ನನಗಾಗಿ ತೊಂದರೆ ತೆಗೆದುಕೊಳ್ಳುತ್ತಿದ್ದೀರಿ. ನಾನು ಎಲೆ ಅಡಿಕೆ ಹಾಕಿಕೊಳ್ಳೋದಿಲ್ಲ. ಅರೆ, ಈ ಹುಡುಗ ಆಗಲೇ ಗಾಳಿ ಬೀಸಲು ಶುರುಮಾಡಿದನಲ್ಲ, - ನಡಿ, ನಡಿ-"

"ಸರಿ, ಹರ್ಷ, ನೀನು ಒಳಗೆ ನಡಿ. - ನೀವು ಸ್ವಲ್ಪ ಕುಳಿತುಕೊಳ್ಳಿ, ಬಂದು ಬಿಟ್ಟೆ."

"ಹರ್ಷ, ಲೋ ಹರ್ಷ, ಥೂ ಕತ್ತೆ ಹೋಗಿ ನೀರು ತೊಗೊಂಡು ಬಾ."

ಮರೆಯಲ್ಲಿ ಎಲ್ಲವನ್ನೂ ಕೇಳುತ್ತಿದ್ದಳು ಸರೋಜಿನಿ. ಕೇಳುತ್ತಿದ್ದಳು, ಹಾಗೆಯೆ ಯೋಚಿಸುತ್ತಿದ್ದಳು. ಪ್ರಪಂಚದಲ್ಲಿ ನಗುತ್ತಾ ನಲಿದಾಡುತ್ತಾ ಇರುವಂಥ ಜನರೂ ಇದ್ದಾರಲ್ಲ.

ಹಾಗಾದರೆ.

ಹೊರಗಡೆ ಯಾವುದೋ ಹಾಡಿನ ಮಟ್ಟನ್ನು ಗುನಗುನಿಸುತ್ತಿರುವ ಧ್ವನಿ ಕೇಳಿಸುತ್ತಿದೆ.

ಮತ್ತೆ ಅದೇ..... ಮನಸ್ಸಿನ ಆಳದಲ್ಲಿ ಅದರ ಅಲೆಗಳು ಏಳುತ್ತಿವೆಯೊ... ಹೊರಗಿನ ರಾಗಕ್ಕೆ ಪ್ರತಿಸ್ಪಂದಿಸುತ್ತಿದೆಯೊ ಎಂಬಂತೆ ಕಂಡುಬರುತ್ತಿದೆ.

ಈ ಮುಬ್ಬುಕವಿದಿರುವ ಸಂಜೆಯು ವೇಳೆಯಲ್ಲಿ ತನ್ನ ವಿಚಾರವೂ ನೆನಪಿಗೆ ಬರುತ್ತದೆ. ಎಳೆತನದಲ್ಲಿ ಅವಳು ಬೆಳೆದುಬಂದ ಮನೆಯಲ್ಲಿ ಈ ಜಾತಿಯ ಜನ ಹೆಚ್ಚಾಗಿರಲಿಲ್ಲ. ಆ ಬದುಕಿನ ರೀತಿ ಬೇರೆಯದೆ ಆಗಿತ್ತು. ನಾಲ್ಕೂ ಕಡೆಗಳಲ್ಲಿ ಎತ್ತರದ ಗೋಡೆಗಳಿಂದ ಆವರಿಸಿದಂತಿತ್ತು. ತುಂಬ ಪ್ರಯತ್ನಪಟ್ಟು ಕಟ್ಟ ಸಾಹಸ ಮಾಡಿದರೆ ಗೋಡೆಯ ಮೇಲಿನಿಂದ ತಲೆ ಹಾಕಿ ಇಣುಕಿ ನೋಡಬಹುದಾಗಿತ್ತು, ಅದಕ್ಕಿಂತ ಹೆಚ್ಚೇನೂ ಮಾಡುವ ಹಾಗಿರಲಿಲ್ಲ. ಇದಾದ ಮೇಲೆ ಗಂಟು ಬಿತ್ತು, ಬೇರೆ ರೀತಿಯ ಪರಾಧೀನದ ಬದುಕು. ಕಪ್ಪೆಯನ್ನೂ ಇಲಿಯನ್ನೂ ಒಟ್ಟು ಸೇರಿಸಿದಂತಿತ್ತು. ದಾರಿಯಲ್ಲಿ ಸಾಗುತ್ತಿದ್ದರೆ ಹೆಜ್ಜೆಯೊಂದಿಗೆ ಹೆಜ್ಜೆ ಊರಲಾಗುತ್ತಿಲ್ಲ, ಎಡವಿದಂತಾಗುತ್ತದೆ. ಏನೋ ಒಳಗುದಿ. ಶೂನ್ಯವಾದ ಬದುಕಿನ ಸ್ಥಿತಿಗೆ ಚಾಟಿ ಹೊಡೆದಂತಾಗುತ್ತದೆ, ಪರಿಸರದ ಎಲ್ಲ ಕಟ್ಟು ಏನೆಂಬುದನ್ನು ಮನದಟ್ಟು ಮಾಡಿಕೊಡುತ್ತದೆ. ಆದರೂ ಅವಳು ಮನಸ್ಸಿನಲ್ಲಿ ಅದೆಷ್ಟೋ ಸಾರಿ ಯೋಚಿಸಿದ್ದಾಳೆ - ಪ್ರಪಂಚದಲ್ಲಿ ಅದೆಷ್ಟು ರೀತಿಯ ಜನ ತುಂಬಿದ್ದಾರೆ. ಮನುಷ್ಯನ ಮೈಯಲ್ಲಿ ಜೀವವಿದೆ, ಮನುಷ್ಯ ಸುಂದರ. ಆದರೆ ಇಂದಿನಂತೆ ಇಷ್ಟು ತೀವ್ರವಾಗಿ, ಇಷ್ಟು ತೀಕ್ಷ್ಣವಾದ ಭಾವನೆಯೊಂದಿಗೆ ಎಂದಾದರೂ ಯೋಚಿಸಿದ್ದಾಳಾ ? ಯೋಚಿಸುವುದೇನೊ ಚೆನ್ನಾಗಿ ಕಾಣುತ್ತದೆ, ಆದರೆ ಯೋಚನೆ ಮಾಡಿದಷ್ಟು ಮೈ ಕಟ್ಟೆಗೆಯಂತಾಗುತ್ತೆ. ಹೊರಗಿನಿಂದ ವಿಗ್ರಹವೇನೊ ಎಂಬಂತೆ ಕಾಣಿಸುತ್ತಿದೆ, ಯಾರೇ ಆದರೂ ಮನಸ್ಸಿಗೆ ಬರುವಂತೆ ಶಿಕ್ಷೆ ಕೊಟ್ಟು ಬಿಡುತ್ತಿದ್ದ-ಗೊತ್ತಿರುವ ರೀತಿಯಿಂದಲ್ಲ. ಗೊತ್ತಿಲ್ಲದಂತೆ - ಯಾವ ನಿಟ್ಟಿನಲ್ಲಿ ಆಳವಾದ ಮನಸ್ಸಿನ ಪರಿಚಯವಾಗುತ್ತದೆಯೊ, ಯೋಚಿಸಿದರೆ ಕನಸು ಕೈಗೆಟಕುವ ಮಟ್ಟಿಗೆ ಹತ್ತಿರ ಬರುತ್ತದೆ.

ಇಷ್ಟೂ ಹೊಣೆಗಾರಿಕೆಯಿಲ್ಲದಿದ್ದರೆ ಹೇಗೊ ಏಳುತ್ತ ಬೀಳುತ್ತ, ಅಳುತ್ತ ಕರೆಯುತ್ತ ಬದುಕು ಮುಂದೆ ಸಾಗುತ್ತಿತ್ತೇನೊ, ಈ ರೀತಿಯಾಗಿ ಭಾವನಾ ಲೋಕದಲ್ಲಿ ಮುಳುಗಿರುವಾಗಲೆ ಅವಳ ವ್ಯಕ್ತಿತ್ವಕ್ಕೆ ಒಂದು ರೀತಿಯಲ್ಲಿ ಮತ್ತೆ ಪಡೆಯಲಾಗದ ಪುನರ್ಜನ್ಮ ಸಿಕ್ಕಂತಾಯಿತು. ಬಲಿದತ್ತ ಕಿವಿಯಲ್ಲಿ ಪಿಸುಗುಟ್ಟಿದ್ದ-

"ಇದೇನೆ ? - ನಿಂತುಬಿಟ್ಟೆ ಸುಮ್ಮನೆ ನಡಿ, ಸ್ವಲ್ಪ ತಿಂಡಿ ಮತ್ತು ಚಹಾ ತೊಗೊಂಡು ಬಾ. ಯಾರು ಬಂದಿದ್ದಾರೆ ಗೊತ್ತಾ ? -ತುಂಬಾ ದೊಡ್ಡವರು, ಇವರನ್ನು ಸ್ವಲ್ಪ ಸರಿಯಾಗಿ 'ಹುಕ್' ಮಾಡಿ ಇಟ್ಟುಕೊಂಡಿರಬೇಕು."

"ಅಯ್ಯೋ ಬಿಡಿ, ಏನು ಹುಕ್ಕೊಗಿಕ್ಕೊ ನನಗೊಂದು ಗೊತ್ತಾಗಲ್ಲ, ಅಯ್ಯೋ ರಾಮ."

"ಅಯ್ಯೋ, 'ಹುಕ್' ಅಂದ್ರೆ ಗೊತ್ತಾಗಲಿಲ್ವೇನೆ ? ಗಾಳ ಹಾಕಿ ಮೀನು ಹಿಡಿಯೋದೂಂತ. ಹಾಗೆಯೆ, ಇದೂ ಒಂದು ಮೀನು, ಸರಿಯಾದ ಮೀನು-"

ಮಾತೇನೊ ಆಡಿಬಿಟ್ಟ. ಆದರೆ ತಕ್ಷಣ ನಾಲಗೆ ಕಚ್ಚಿಕೊಂಡ. ಯೋಜನೆ ಹಾಕುವ ಗಡಿಬಿಡಿಯಲ್ಲಿ ವಿಚಾರವನ್ನು ಮನಸ್ಸಿನಲ್ಲೇ ಇಟ್ಟುಕೊಳ್ಳಲಾಗಲಿಲ್ಲ. ಆಮೇಲೆ ತಿಳಿಸಿ ಹೇಳತೊಡಗಿದ- "ಇವರು ತುಂಬ ದೊಡ್ಡ ಮನುಷ್ಯರು. ಮೇಲಿನವರ ಮೇಲೆ ಇವರ ಇನ್‌ಫ್ಲುಯೆನ್ಸ್ ಚೆನ್ನಾಗಿ ನಡೆಯುತ್ತದೆ. ಅಂದರೆ ಪ್ರಭಾವ ಬೀರುತ್ತಾರೆ,

ಯಾಕೆಂದರೆ ಅವರೇ ಸ್ವತಃ ದೊಡ್ಡ ಮನುಷ್ಯರು ಅದಕ್ಕೇ. ಇವತ್ತು ನಮ್ಮ ಅದೃಷ್ಟಕ್ಕೆ ಅವರೇ ನಮ್ಮ ಮನೆ ಕಡೆ ಬಂದಿದ್ದಾರೆ. ಅವರ ಜೊತೆ ಸ್ವಲ್ಪ ಚೆನ್ನಾಗಿ ಮಾತಾಡಬೇಕು. ಆಮೇಲೆ ನೋಡು - ಒಂದು ಛಾನ್ಸ್ ಹೊಡೆದು ಮೇಲೆ ಮೇಲೆ ಹತ್ತುತ್ತಾ ಹೋಗುತ್ತಿರಬಹುದು-"

ಮೇಲೆ ನೆಗೆಯುವ ಮಾತನ್ನಾಡುತ್ತಾ ಬಲಿದತ್ತ ಅವಳ ಎರಡೂ ತೋಳುಗಳನ್ನು ಎತ್ತಿ ಕುಲುಕಾಡಿದ. ಅವನಿಂದ ಬಿಡಿಸಿಕೊಂಡು ಸರೋಜನಿ ಒಳಗೆ ಹೆಜ್ಜೆ ಹಾಕುತ್ತಾ ಅಂದಳು - "ನಿಮ್ಮ ಸ್ನೇಹಿತರು ತುಂಬಾ ತಿಂಡಿಪೋತರು ಅಂತ ಕಾಣುತ್ತೆ, ಅಲ್ವಾ ?"

ಸ್ವಲ್ಪ ಹೊತ್ತಿನ ಮೇಲೆ, - ಚಹಾ ತಿಂಡಿ ಸೇವನೆ ಆಗುತ್ತಿತ್ತು. ರಣಜಿತಬಾಬು ಹೇಳಿದರು. "ನಿಮ್ಮ ಹೆಂಡತಿಗೆ ಒಬ್ಬರೇ ಇರೋದು ತುಂಬ ಕಷ್ಟವಾಗುತ್ತಿರ ಬಹುದಲ್ಲವೆ. ನಮ್ಮ ಕಡೆ ಬಂದು ನೋಡಿ, ಅಲ್ಲೇನು ಹೆಂಗಸರ ಕ್ಲಬ್ ಇದ್ದ ಹಾಗೆ ಇರುತ್ತೆ. ಅಲ್ಲಿಗೆ ಒಂದು ಸಾರಿ ಬಂದ ಮೇಲೆ ನಿಮಗೇ ಗೊತ್ತಾಗತ್ತೆ. ಮಾನವ ಸಮಾಜದಲ್ಲಿ ಇದ್ದುಕೊಂಡು ಸಮಾಜದ ಜೊತೆ ಸೇರದಿದ್ದರೆ ಏನು ಸುಖ, ನೀವೇ ಹೇಳಿ. ಆದರಲ್ಲೂ ಈ ಕೆಲಸ, ಬದುಕೋದಕ್ಕೆ ಏನಾದರೂ ಕೆಲಸಮಾಡಲೇಬೇಕಲ್ಲ. ಎಲ್ಲರ ಕೆಲಸವೂ ಒಂದೇ ರೀತಿಯಲ್ಲಿ ಸಭ್ಯವಾಗಿರೋದಿಲ್ಲ. ಜೀವನದಲ್ಲಿ ಫನ್ ಇರಬೇಕು. ಫನ್ ಇದ್ದರೆ ಸಭ್ಯತೆ ಬರುತ್ತೆ. ಹಾಗಾಗಿ ಎಲ್ಲರೂ ಸಭ್ಯರಾಗಲೇಬೇಕು, ನಾಗರಿಕರಾಗಬೇಕು. ಸುಮ್ಮನೆ ಓದುಬರಹ ಇದ್ದರೆ ಏನು ಬಂತುಬಿಡಿ. ನೀತಿ ಹೇಳಿದರೆ ಏನು ಸಿಗುತ್ತೆ, ಚೆನ್ನಾಗಿ ಜನ ಸಂಪರ್ಕ ಬೆಳೆಸಿಕೋಬೇಕು - ತುಂಬಾ ಚೆನ್ನಾಗಿ ಜೋರಾಗಿ, ತುಂಬಾ ಚೆನ್ನಾಗಿ-"

ಬಲಿದತ್ತನಿಗೆ ಕುತ್ತಿಗೆಯ ಬಳಿ ಕೋಟಿನ ಕಾಲರನ್ನು ಹಿಚುಕುತ್ತಿದ್ದಾರೇನೊ ಅನಿಸತೊಡಗಿತು. ಹೇಳಿದ-"ಇದರಲ್ಲಿ ನಮ್ಮ ತಪ್ಪೇನು ? ನಿಮಗೆ ಗೊತ್ತೇ ಇದೆಯಲ್ಲ, -ನಾವುಗಳು ಅಂದರೆ ನಮ್ಮ ಮನೆಗಳಲ್ಲಿ ಹೆಂಗಸರು ಹೆಚ್ಚಿಗೆ ಫಾರ್ವರ್ಡ್ ಆಗಿರೋದಿಲ್ಲ." 'ಹೆಚ್ಚಿಗೆ' ಅನ್ನೋ ಪದವನ್ನು ಅವನು ಬಹುಶಃ ತನ್ನ ಸ್ವಂತ ಪ್ರತಿಷ್ಠೆ ಆತ್ಮಗೌರವಗಳಿಗೆ ಬಾಲಂಗೋಚಿಯಂತೆ ಸೇರಿಸಿದ್ದ. ಆದರೆ ರಣಜಿತ ಬಾಬು ಅದಕ್ಕೆ ಎದುರಾಗಿಯೆ ಹೇಳಿದರು, "ಜನ ಯಾವುದನ್ನು ಫಾರ್ವರ್ಡ್ ಅಂತ ಕರೀತಾರೋ ಅದು ನನಗೆ ಇಷ್ಟವಿಲ್ಲ, ಖಂಡಿತ ಇಷ್ಟವಿಲ್ಲ. ಫಾರ್ವರ್ಡ್ ಫಾರ್ವರ್ಡ್ ಅಂತ ಕೂಗುತ್ತಾ ಜನ ಅದಕ್ಕೆ ತಪ್ಪು ಅರ್ಥ ಕಲ್ಪಿಸಿಬಿಟ್ಟಿದ್ದಾರೆ. ಅದೇ ನೋಡಿ, ಎಷ್ಟೋ ಜನ ತಪ್ಪಾಗಿ ಹೇಳುತ್ತಾರಲ್ಲ - 'ಸ್ಕಿನ್ ಅಂಡ್ ಸ್ಕಿನ್ ನೋ ಸಿನ್ ಅಂತ, - ಯಾರೋ ಒಬ್ಬ ಹೆಣ್ಣು ಅಂತ ಇಟ್ಟುಕೊಳ್ಳಿ. ಯಾವ ಗಂಡಸಿನೊಡನೆಯೂ ಅವಳಿಗೆ ಕೆಲಸವಿಲ್ಲದಿದ್ದರೂ ಫಾರ್ವರ್ಡ್ ಅಂತ ಅನಿಸಿಕೊಳ್ಳುವುದಕ್ಕಾಗಿ ಆಕೆ ಮುಂದೆ ಹೋಗಿ ಆತನ ಜೊತೆ ಮಾತಾಡಿದರೆ, ಸುತ್ತಾಡಿದರೆ, ಅದನ್ನು ಏನಂತ ಹೇಳೋಣ ? ಅದು ನಮ್ಮ ಸಂಸ್ಕಾರಗಳ ಮೇಲಾಗುವ ಅತ್ಯಾಚಾರ-"

"ಹಿಯರ್ ಹಿಯರ್-" ಬಲಿದತ್ತ ಖುಷಿಯಾಗಿ ಹೇಳಿದ, "ನಾನೊಬ್ಬನೇ ಕನ್ಸರ್‌ವೇಟಿವ್ ಅಂತ ತಿಳಿದಿದ್ದೆ. ನೀವೂ ಪರವಾಗಿಲ್ಲ ನೀತಿನಿಯಮ ಅಂತ ಇಷ್ಟಪಡ್ತೀರಿ - ವಾಹ್‌ವಾಹ್.

ಆಮೇಲೆ ಅವನು ಲೋಟಕ್ಕೆ ತುಟಿಯಿಟ್ಟು ಚಹಾ ಹೀರಿದ.

ರಣಜಿತ ಬಾಬು ಹೇಳಿದರು, "ತೀರ ಆ ತರಹದ ನೀತಿನಿಯಮಗಳವನು ಅಂತ ಭಾವಿಸಿದರೆ ತಪ್ಪಾಗತ್ತೆ - ಟ್ರೆಡಿಷನಲ್, ಟ್ರೆಡಿಷನ್ ಅನ್ನುವುದರಿಂದ ಒಂದು ವರ್ಗದ ಜನರಿಗೆ ಕೊಟ್ಟು, ಅದನ್ನು ಬಿಟ್ಟುಬಿಟ್ಟರೆ ಆ ವರ್ಗಕ್ಕೆ ಅಸ್ತಿತ್ವ ತಾನೆ ಎಲ್ಲಿರುತ್ತೆ-"

ಬಲಿದತ್ತ ಆಶ್ಚರ್ಯ ತುಂಬಿದ ಕಣ್ಣುಗಳಿಂದ ಅವರನ್ನು ಹೊಗಳುವಂತೆ ನೋಡುತ್ತಿದ್ದ. ಅವನ ಮನಸ್ಸಿನಲ್ಲಿ ಅನುಮಾನವೇನಿರಲಿಲ್ಲ. ರಣಜಿತ ಬಾಬು ಮುಂದುವರೆದಿದ್ದರು - "ಟ್ರೆಡಿಷನಲ್ ಅನ್ನುವುದು ಒಂದು ಅಭಿಜಾತ ಲಕ್ಷಣ. ಆರ್ದೇ ನೋಡಿ. ಮಾಮೂಲಿ ಟೆನಿಸ್ಸಿನಲ್ಲೇ-"

"ಮಾಮೂಲಿ ಯಾಕೆ ? ನೀವು ಚಾಂಪಿಯನ್ ಅಂದ್ರೆ ಚಾಂಪಿಯನ್" ಬಲಿದತ್ತ ಜೋರಾಗಿ ನಕ್ಕು ಹೇಳಿದ. ಆದರೆ ರಣಜಿತಬಾಬು ಅದನ್ನು ಅಲ್ಲಗಳೆಯುತ್ತಾ ಹೇಳಿದರು- "ಚಾಂಪಿಯನ್ ಯಾತಕ್ಕೆ ಆದೆ ಅಂದರೆ ಇಲ್ಲಿ ಅರಂಡೋಪಿ ದ್ರುಮಾಯತೇ - ಹಾಳೂರಿಗೆ ಉಳಿದೋನೆ ಗೌಡ ಅಂತಾರಲ್ಲ ಹಾಗೆ - ಆದರೆ ಎಷ್ಟೇ ಬ್ರಿಲಿಯಂಟ್ ಆಗಿ ಆಡಲಿ ವಾಸ್ತವವಾಗಿ ಮನುಷ್ಯನ ಟ್ರೆಡಿಷನಲ್ ಸ್ಟೈಲ್ - ಫ್ಲಾಷಿಂಗ್ ಆದ ಮೇಲೆ ಜನ ಕಣ್ಣುಬಾಯಿ ಬಿಟ್ಟುಕೊಂಡು ನೋಡುತ್ತಿರುತ್ತಾರೆ. ಆದರೆ ಅದರಿಂದ ಆಟ ಗೆಲ್ಲೋದಕ್ಕಾಗೋದಿಲ್ಲ-"

"ವಂಡರ್‌ಫುಲ್."

"ಎಂಥದೂ ಇಲ್ಲ ಬಿಡಿ. ಆದರೆ ಫಾರ್ವರ್ಡ್ ಅಥವಾ ಬ್ಯಾಕ್‌ವರ್ಡ್ ಆಗಿರೋದರ ನಡುವೆ ಇನ್ನೊಂದು ಸ್ವಾರಸ್ಯವಿದೆ. ಅದೇನೆಂದರೆ ಸುಶಿಕ್ಷಿತರಿಗೆ ಲಾಯಕ್ಕಾದ ಹಾವಭಾವ, ಅಭಿರುಚಿ, ಮಾತುಕತೆ, ನಡವಳಿಕೆ. ವಿದೇಶದವರು ನಮ್ಮನ್ನು ನೋಡಿ ದೇವರ ಸೃಷ್ಟಿಯಲ್ಲಿ ನಾವು ಪ್ರಾಣಿಗಳ ತರಹ ಅಸಂಸ್ಕೃತರು ಅಂತ ಹೇಳೊ ಹಾಗಿರಬಾರದು.

"ಹಹಹಾ-"

"ಹಾಗಾದರೆ ನೋಡಿ, ಅದೂ ನಾಲ್ಕು ಜನರ ಜೊತೆ ಸೇರಿ ನೋಡೋದರಿಂದ ಬರುತ್ತೆ, ನೋಡದೆ ಸುಮ್ಮನೆ ಮನಸ್ಸಿಗೆ ಬರೋದಿಲ್ಲ. ಸಮಾಜದ ಜೊತೆ ಬೆರೆಯೋದರಿಂದ ಕಲ್ಚರ್ ಕಲಿತ ಹಾಗಾಗತ್ತೆ, ಕಲ್ಚರ್ ಹೆಚ್ಚುತ್ತೆ. ನಮ್ಮ ಹೆಂಗಸರಿಗಂತೂ ಅದು ತುಂಬ ಬೇಕೇಬೇಕು. ಯಾಕೆಂದರೆ ನಾವು ಮುಂದೆ ಗಳಿಸುವಂತಹ ಏಳಿಗೆಯೆಲ್ಲ ಅವರನ್ನೇ ಅವಲಂಬಿಸಿರುತ್ತೆ-"

"ನಿಜ, ನಿಜ. ಸರಿಯಾಗೇ ಹೇಳಿದಿರಿ," ಬಲಿದತ್ತ ಹೇಳಿದ, "ದೇರ್ ಯೂ ಆರ್-"

"ಯಾವಾಗಲಾದರೂ ಬನ್ನಿ ನಮ್ಮ ಮನೆಕಡೆ," ರಣಜಿತಬಾಬು ಹೊರಟರು, "ಹಾಗೆಯೆ ಮಿಸೆಸ್ ದಾಸ್ ಅವರನ್ನೂ ಜೊತೆಯಲ್ಲಿ ಕರಕೊಂಡು ಬನ್ನಿ".

ಬಲಿದತ್ತ ಹೂಂಗುಟ್ಟಿದ.

ಮಾರನೆಯ ದಿನ.

ಕಂಪನಿಯ ನೆಚ್ಚಿನ ಕೆಲಸಗಾರನಾದ ಬಲಿದತ್ತ ದಾಸ್ ಆಫೀಸಿಗೆ ಹೋಗುವ ಮೊದಲು ಊಟ ಮಾಡುತ್ತಿದ್ದಾಗ ತಟ್ಟೆಯ ಆ ಬದಿಯಲ್ಲಿ ಕುಳಿತಿದ್ದ ಮಡದಿಗೆ ಎಂದಿನಂತೆ ಲೆಕ್ಚರ್ ಹೊಡೆಯುತ್ತಾ ಹೇಳಿದ, "ನೋಡು ಸರೋಜ, ಈಗ ನೀನು ಖಂಡಿತವಾಗಿಯೂ ಬದಲಾಯಿಸಬೇಕು. ನಾವು ಈಗಿರುವ ಸೊಸೈಟಿಯಲ್ಲಿ ಎಲ್ಲರೂ ಇರುವುದಕ್ಕೆ ತಕ್ಕಂತೆ ತಾಳ ಹಾಕುತ್ತಾ ಗೌರವ ಸಂಪಾದಿಸಿಕೊಂಡು ಮೇಲೇರುವ ಪ್ರಯತ್ನಮಾಡಬೇಕು. ಈ ವಿಷಯದಲ್ಲಿ ನಾನೊಬ್ಬನೇ ಕೆಲಸಮಾಡಿದರೆ ಸಾಲದು, ನೀನು ಪರಿಶ್ರಮ ಪಡಬೇಕು. ಹೆಚ್ಚೇನೂ ಮಾಡಬೇಕಾಗಿಲ್ಲ. ಒಂದೆರಡಕ್ಷರ ಇಂಗ್ಲಿಷ್ ಕಲೀಬೇಕು, ಹೊಸರೀತಿಯ ಕೆಲವಾರು ನಾಗರಿಕ ನಡವಳಿಕೆಗಳನ್ನು ಕಲೀಬೇಕು. ಆಮೇಲೆ ನಾವು ಇವರ ಜೊತೆ ಸೇರಿಕೊಳ್ಳಬೇಕು. ಇಲ್ಲದಿದ್ದರೆ ನಮ್ಮನ್ನು ಕಂಡು ಇವರು ನಗ್ತಾರೆ, ಅಷ್ಟೇ." ಅವನು ಬಹಳ ಗಂಭೀರವಾಗಿ ಈ ಮಾತುಗಳನ್ನಾಡುತ್ತಿದ್ದಾನೆ. ಸರೋಜಿನಿ ಮನಸ್ಸಿನಲ್ಲೇ ತರ್ಕಿಸುತ್ತಿದ್ದಾಳೆ. ಬಲಿದತ್ತ ಹುರುಪಿನಿಂದ ಭಾಷಣ ಮಾಡುತ್ತಿದ್ದಾನೆ. ಆಮೇಲೆ ಗಡಿಯಾರದ ಕಡೆ ನೋಡಿಕೊಂಡು ಗಡಿಬಿಡಿಯಲ್ಲಿ ತಯಾರಾಗಿ ನೇರವಾಗಿ ಆಫೀಸಿಗೆ ಓಡುತ್ತಾನೆ. ಇದು ನಿತ್ಯದ ವಾಡಿಕೆ.

ಆದರೆ ಇವತ್ತು ಸರೋಜಿನಿ ಎದುರಾಡಲಿಲ್ಲ.

ಬದಲಾಯಿಸುವುದಿಲ್ಲ ಅವಳು, ಅದಲ್ಲ ವಿಚಾರ. ಎದುರುಮನೆಯಲ್ಲಿ ಪೆಟರನರಿ ಡಾಕ್ಟರ್ ಬಾಬು ಅವರಿದ್ದಾರೆ. ಅವರ ಹೆಂಡತಿಯೊಡನೆ ಸಂಪರ್ಕ ಬೆಳೆಸಿಕೊಂಡಿದ್ದಾಳೆ. ಅವರು ಕ್ರೈಸ್ತರು. ಆಕೆಯ ಹತ್ತಿರ ಸ್ವಲ್ಪ ಹೆಣಿಗೆ ಕೆಲಸ ಕಲಿತಿದ್ದಾಳೆ. ಈಗಷ್ಟೆ ಕುತ್ತಿಗೆ ಹಾಕಿ ಮುಗಿಸಿದ್ದಾಳೆ. ಆಮೇಲೆ ಹೆಮ್ಮೆಯಿಂದ ಅದರ ಕೆಳಗೆ ತನ್ನ ಹೆಸರನ್ನು ಹೆಣೆಯುತ್ತಾಳೆ - "ಸರೋಜಿನಿ"

ಇದು ಅವಳ ಗುಟ್ಟು. ಇದ್ದಕ್ಕಿದ್ದಂತೆ ಒಂದುದಿನ ಬಲಿದತ್ತನಿಗೆ ತೋರಿಸಿ ಆಶ್ಚರ್ಯವುಂಟು ಮಾಡುವ ಹಂಚಿಕೆ ಅವಳದು.

ಸಮಾಜ ಅಂದಮೇಲೆ ಚೆನ್ನಾಗಿರುತ್ತದೆ. ಒಳ್ಳೆಯದು ಅಂತ ಮನಸ್ಸಿನಲ್ಲಿ ಅವಳಿಗೆ ಅನಿಸುತ್ತದೆ. ಸಮಾಜದ ಜೊತೆ ಸೇರಲು ಬಯಸುತ್ತಾಳೆ.

"ಈ ಸಾರಿ ಇಂಗ್ಲಿಷ್ ಪುಸ್ತಕ ತರ್ತೀನಿ, ಏನಂತೀಯಾ ?"

"ಅಮ್ಮಮ್ಮಾ ಇಂಗ್ಲಿಷಾ ? ಯಾರೋ ಹೇಳ್ತಾ ಇದ್ದರು ಹೆಣ್ಣುಮಕ್ಕಳು ಎರಡಕ್ಷರ ಇಂಗ್ಲಿಷ್ ಕಲಿತುಬಿಟ್ಟರೆ ಮುಗಿತು, ಎಲ್ಲಾರ ಎದುರಿಗೂ 'ದೇ ಆರ್‌ಆರ್....ಶೂಸ್' - ಅಂತ ಹೇಳಿಕೊಂಡು ತಿರುಗಾಡ್ತಾರೆ ಅಂತ. ಹಾಗೆಯೇ ನನಗೂ ತಮಾಷೆ ಮಾಡ್ತೀರಾ ?"

"ತಮಾಷೆ ಅಲ್ಲ, ನಿಜವಾಗ್ಲೂ ಪುಸ್ತಕ ತರ್ತೀನಿ-"

"ಸರಿ, ತೊಗೊಂಡು ಬನ್ನಿ-"

"ಒಂದೇ ಸಾರಿಗೆ ಎಲ್ಲಾನೂ ಬೇಗ ಬೇಗ ಉರು ಹೊಡೀತೀಯಾ ?"

"ಹೂಂ ಇನ್ನೇನು ಮಾಡೋದು? ನೀವು ಎಲ್ಲಾನೂ ಬೇಗ ಬೇಗ ಉರು ಹೊಡೆದಿದ್ದಿರಾ? ಸರಿ, ಹಾಗೆ ಮಾಡಲೇಬೇಕು ಅಂದ್ರೆ, ಒಂದು ಪುಸ್ತಕ ತೊಗೊಂಡು ಬನ್ನಿ - ನೋಡ್ತೀನಿ. ಅದು ಸರಿ, ಯಾವುದೋ ಮನೆಗೆ ಹೋಗಿಬರೋಣ ಅಂತ ಹೇಳ್ತಾ ಇದ್ರಿ".

"ಖಂಡಿತ ಹೋಗೋಣ, ಮೊದಲು ರಣಜಿತ ಬಾಬು ಮನೆಗೆ".

"ಇವತ್ತು ಶನಿವಾರ, ಅಲ್ಲದೆ ಅಮಾವಾಸ್ಯೆ ಬೇರೆ."

"ಆದರೇನು, ಇವತ್ತೇ ಹೋಗೋಣ-"

"ನೀವು ಬೇಗ ಬಂದ್ರೆ ತಾನೆ ಹೋಗೋದು?"

"ನಾನು ಬೇಗ ಬಂದುಬಿಡ್ತೀನಿ".

ಮಧ್ಯಾಹ್ನ ಕಳೆಯಿತು. ನೆರಳು ಆವರಿಸತೊಡಗಿತು. ಆಮೇಲೆ ಅವಳು ಸಿದ್ಧವಾಗತೊಡಗಿದಳು. ಯಾವುದೋ ಬೇರೆ ದೇಶಕ್ಕೆ ಹೋಗುತ್ತಿರುವಂತೆ ಸ್ವಲ್ಪ ಹೆಚ್ಚಿಗೆ ಅಲಂಕಾರ ಮಾಡಿಕೊಂಡಳು. ಒಂದೆರಡು ಹೆಚ್ಚಿಗೆ ಬೀಡಾ ಜಗಿದಳು. ಒಳ್ಳೇ ಹುಡುಗತನ ನೆನಪಿಗೆ ಬರುತ್ತಿದೆ. ಬಲಿದತ್ತನಿಗಾಗಿ ಚಡಪಡಿಸುತ್ತಾ ಬಾಗಿಲು ಕಾಯ ತೊಡಗಿದಳು. ಬಲಿದತ್ತನಿಗೂ ಮಡದಿ ಸೊಗಸಾಗಿ ಕಂಡಳು, ಸರೋಜಿನಿ ತನ್ನ ಹಳೆಯ ವ್ಯಕ್ತಿತ್ವ ಉಳಿಸಿಕೊಂಡಿದ್ದಾಳೆಯೆ ಅಂತ ಅವನ ಮನಸ್ಸಿಗೆ ಬಂತು.

ಸರೋಜಿನಿ ಬದಲಾಯಿಸಿದ್ದಾಳೆ - ಬಲಿದತ್ತ ನೋಡುತ್ತಿದ್ದಾನೆ, ಚೊಕ್ಕವಾಗಿ ಅರಳಿನಿಂತ ಕಮಲದ ಹೂವು, ಹೂಗಿಡಗಳ ಪಾತಿಯಲ್ಲಿ ನಗೆಯ ತುಂತುರು, ಮಾತಿನಲ್ಲಿ ವೈಯ್ಯಾರ ಮಾಡುತ್ತಾ ನಗೆಯುಕ್ಕಿಸುತ್ತಿದ್ದಾಳೆ. ಆಗ ತಾನೆ ಅರಳಿದ ಕಮಲದ ಹೂವು ನಲಿಯುತ್ತಾ, ಅಲೆಯುಂಗುರದ ನೀರಿನಲ್ಲಿ ತನ್ನ ಪ್ರತಿಬಿಂಬ ನೋಡಿಕೊಂಡು ಉಬ್ಬುತ್ತಿದೆ. ಅವನ ಪರಿಸ್ಥಿತಿ, - ದೋಲಾಯಮಾನವಾಗುತ್ತಿರುವ ದೋಣಿಯಲ್ಲಿ ಹತ್ತಿ ಕಮಲವನ್ನು ಹಿಡಿಯಲು ಹೊರಟವನಂತೆ, ದೋಣಿಯನ್ನು ನೂಕುತ್ತ ಎಷ್ಟು ಕೈಚಾಚಿದರೂ ಕೈಯಿಂದ ಸ್ವಲ್ಪ ಸ್ವಲ್ಪ ದೂರವಾಗಿ ಕಮಲ ತಲೆಯಲ್ಲಾಡಿಸುತ್ತಿರುವಂತಹ ಅನುಭವ.

ಆದಿನದ ಮಾತು ನೆನಪಿಗೆ ಬರುತ್ತದೆ - ಹೊಸದಾಗಿ ಮದುವೆಯಾಗಿತ್ತು.

ಮಸುಕು ಕತ್ತಲೆಯಲ್ಲಿ ಮಿಣುಗುಟ್ಟುತ್ತಿರುವ ಸಣ್ಣಮನೆ. ಅಂಗಳದಲ್ಲಿರುವ ಪಾತ್ರೆಗಳಲ್ಲಿ ಹಂಡೆಗಳಲ್ಲಿ ನೀರು, ಎಂಜಲು, ಮುಸುರೆ ಎಲ್ಲ ಒಟ್ಟು ಸೇರಿ ಸೊಳ್ಳೆಗಳ ಸೊಂಯ್ ಶಬ್ದ. ಆ ವಾತಾವರಣದಲ್ಲೇ ಮದುವೆಯಾದ ತರುಣದಲ್ಲಿ ಕೆಲವು ತಿಂಗಳುಕಾಲ ಹೊಸ ಬದುಕಿನ ಸೊಬಗನ್ನು ಉಂಡಿದ್ದ. ಆ ಸರೋಜಿನಿ ಯಾರೋ ಬೇರೆಯವಳಂತೆಯೇ ಇದ್ದಳು. ಅವಳನ್ನು ಮಾತಿನಲ್ಲಿ ಬಣ್ಣಿಸುವುದಾಗಲಿ ಭಾವನೆಯಲ್ಲಿ ಹಿಡಿಯುವುದಾಗಲಿ ಸಾಧ್ಯವಿರಲಿಲ್ಲ.

ಬಡಸಂಸಾರ, ನೂರಾರು ಹರಕಲು ಚಿಂದಿಗಳಿಂದ ಕೂಡಿದ್ದರೂ ಅದರಲ್ಲಿ ಅವಳ ಬಾಳು ಆನಂದದಿಂದಲೇ ಸಾಗುತ್ತಿತ್ತು. ನಗೆಯ ಅಲೆಯುಕ್ಕಿಸಿ ಅಪರೂಪವಾದ ಒಂದು ರೀತಿಯ ಮಾಯಾಮಯವಾದ ವಾತಾವರಣವನ್ನೇ ಅವಳು

ಸೃಷ್ಟಿಸಿದಂತಿತ್ತು. ಲೇವಡಿಯೆಬ್ಬಿಸುವುದು, - ಕೈಗೆ ಸಿಗದ ನುಣುಚಿಕೊಳ್ಳುತ್ತಾ ಅವನಲ್ಲಿದ್ದ ಗಂಡಸುತನವನ್ನು ಎಬ್ಬಿಸುತ್ತಿದ್ದಳು. ತನ್ನನ್ನು ಗೆಲ್ಲುವುದೆ ಅವನ ಆದರ್ಶವೆನ್ನುವಂತೆ ಮನವರಿಕೆ ಮಾಡಿಕೊಡುತ್ತಿದ್ದಳು. ಅಪ್ಪುಗೆಯ ಬಂಧನದಲ್ಲೇ ಸ್ವಾತಂತ್ರ್ಯದ ಸವಿಯನ್ನೂ ಆತ್ಮವಿಶ್ವಾಸದ ಆನಂದವನ್ನೂ ಅನುಭವಿಸುತ್ತಿದ್ದಳು. ಆವಳು ಅಂದಿನ ಸರೋಜಿನಿ.

ಮಣ್ಣಿನೆಲವನ್ನೇ ರತ್ನಗಂಬಳಿಯಾಗಿ ಮಾಡಿಕೊಂಡು ಹೊಸ ಬಾಳಿನ ಮಧುಶಯ್ಯೆಯ ಮೇಲೆ ಮಲಗಿ ಮೆಲ್ಲನೆ ಅವಳ ಕಣ್ಣುಗಳಲ್ಲಿ ಕಣ್ಣಿಟ್ಟು ಹೃದಯ ಸ್ಪಂದಿಸುತ್ತಿರುವಂತೆ ಒಲಿದತ್ತ ಆನಂದದಿಂದ ಮೈಮರೆತು ಬದುಕಿನ ಎಲ್ಲ ಸೊಬಗನ್ನೂ ಹೀರುತ್ತಿದ್ದ, ಇಲ್ಲ ಅಂದರೆ ಗೊರಕೆ ಹೊಡೆಯುತ್ತಾ ಮಲಗುತ್ತಿದ್ದ. ಸುಖದ ನಿದ್ದೆ, - ಯಾವ ಅಶಾಂತಿ ಆಕಾಂಕ್ಷೆಗಳೂ ಇಲ್ಲದ ನಿದ್ದೆ.

ಆಗ ಅವನಿಗೆ ದೊಡ್ಡ ಮನುಷ್ಯನಾಗಬೇಕೆಂಬ ಆಸೆ ಆಕಾಂಕ್ಷೆಗಳ ಅಮಲೇರಿರಲಿಲ್ಲ. ತಲೆಯಲ್ಲಿ ಶತಾಯ ಗತಾಯ ಬಡ್ತಿ ಪಡೆಯಲೇಬೇಕೆಂಬ ಲೆಕ್ಕಾಚಾರ ಹಾಕುತ್ತಿರಲಿಲ್ಲ.

ಅವನು ಮತ್ತು ಸರೋಜಿನಿ ಅಷ್ಟೆ.

ಕಚೇರಿ ಕೆಲಸ ಒಂದು ವೃತ್ತಿಯಾಗಿತ್ತಷ್ಟೆ, ಬದುಕಾಗಿರಲಿಲ್ಲ.

ಆ ಕಾಣದ ಆನಂದದ ಎಳೆ ಎಳೆಯಲ್ಲೂ ತುಂಬಿರುವ ನಿಗೂಢವಾದ ಅನುಭವದಲ್ಲಿ ಶಾಂತ ಮನಸ್ಸಿನಿಂದ ಕೈಕಾಲು ಚಾಚಿ ಮಲಗಿರುತ್ತಿದ್ದ ವೇಳೆಯಲ್ಲಿ ಏನಾದರೂ ಸರಿ ಪರವಾಗಿಲ್ಲ, ಹೇಗಾದರೂ ಮಾಡಿ ತನ್ನ ಮನದನ್ನೆಯನ್ನು ಸಂತೋಷಪಡಿಸಬೇಕೆಂಬ ಬಯಕೆ ಮನಸ್ಸಿನಲ್ಲಿ ಮೂಡಿಬರುತ್ತಿತ್ತು. ಅದೇ ಅವನ ಪಾಲಿನ ಸುಖವಾಗಿತ್ತು.

ಅವನು ತನ್ನ ಮನಸ್ಸಿನಲ್ಲಿ ತಾನೇ ಮೇಲೇಳುತ್ತಿದ್ದ, - ತಾನು ಬಡವನಾಗಿದ್ದುದರಿಂದ ಮದುವೆ ಬೇಡವೇ ಬೇಡವೆಂದು ನಿರ್ದಾಕ್ಷಿಣ್ಯವಾಗಿ ಹೇಳಿದ್ದ. ಒಮ್ಮೆ ವಯಸ್ಸಾದ ಅಪ್ಪ ಹೇಳಿದ್ದರು,- "ನಿನಗೆ ಏನಂತ ತಿಳುವಳಿಕೆ ಹೇಳಲಿ. ಎಂಥ ನಾಚಿಕೆಗೇಡು, - ಮದುವೆ ಅನ್ನೋದು ಹಣ ಕಾಸು ನೋಡಿ ಯಾರೂ ಮಾಡಿಕೊಳ್ಳೋದಲ್ಲ. ಇಬ್ಬರ ಹೊಟ್ಟೆಹೊರೆಯೋದು ಅಂತಹ ಕಷ್ಟ ವಿಚಾರವಲ್ಲ. ನಿಜವಾಗಿಯೂ ಹೇಳಬೇಕೆಂದರೆ - ಮನೆ, ಸಂಸಾರ ಅಂತ ಆಗಬೇಕು. ಹೆಣ್ಣಿಗೆ ಗಂಡುಬೇಕು, ಗಂಡಿಗೆ ಹೆಣ್ಣುಬೇಕು, ಇನ್ನೇನಾಗಬೇಕು ? ಮನಸ್ಸು ಮನಸ್ಸು ಸೇರಿತು ಅಂದರೆ ಒಂದು ತಟ್ಟೇಲಿ ಎರಡು ತುತ್ತು ಅನ್ನ, ಎರಡು ತುಂಡು ಬಟ್ಟೆ - ಭತ್ತದ ಹೊಟ್ಟಿನಲ್ಲಿ ಅಕ್ಕಿಕಾಳಿದ್ದಂತೆ - ಇದೇ ನೋಡು ಬ್ರಹ್ಮಜ್ಞಾನ. ಅದಲ್ಲಪ್ಪ, ದುಡ್ಡು ಅಂದರೆ ನೀನೇ ತಾನೇ ? ನೀನು ದುಡಿಯೋದಿಲ್ಲದೆ ? ನಿನ್ನ ತರಾ ಬುದ್ಧಿ ಎಲ್ಲರಿಗೂ ಇದ್ದಿದ್ದರೆ, ಈಗ ನೀನೆಲ್ಲಿರುತ್ತಿದ್ದಿ ? ಪ್ರಪಂಚದಲ್ಲಿ ಯಾರೂ ಮದುವೆ ಆಗ್ತಾ ಇರಲಿಲ್ಲ, ಮನೆ ಮಠ ಅಂತ ಮಾಡ್ತಾ ಇರಲಿಲ್ಲ. ಯುಗ ಯುಗಾಂತರಗಳಿಂದ ಜನ 'ಬೇಡ ಬೇಡ' ಅಂತ ಹೇಳ್ತಾನೆ ಬಂದಿದಾರೆ. ಎಲ್ಲೋ ಕೆಲವರು ನಿಜವಾಗ್ಲೂ ಹಾಗೇ ಅಂದುಕೊಂಡಿರಬಹುದು."

ಆಗ ಸರೋಜಿನಿಯ ಮಾಯೆ, ಒಮ್ಮೊಮ್ಮೆ ವಯಸ್ಸಾದ ಅಪ್ಪನ ತಿಳುವಳಿಕೆ

ಮಾತಿಗೆ ಹೊಳಪು ಕೊಡುತ್ತಿತ್ತು. ಬಡವನಾಗಿದ್ದೂ ಅವನು ಮದುವೆಯಾಗಿದ್ದ, ಪಶ್ಚಾತ್ತಾಪ ಪಟ್ಟಿರಲಿಲ್ಲ.

ಕಳೆದುಹೋದ ದಿನಗಳು ಕತ್ತಲೆಯಲ್ಲಿ ಎದ್ದು ನಿಲ್ಲುತ್ತಿದ್ದವು. ರಣಜಿತ ಬಾಬುಗಳ ಮನೆಗೆ ಹೋಗಬೇಕಾದರೆ ಆ ಸರೋಜಿನಿಯ ಅದೇ ಅಳಿದುಳಿದ ರೂಪ ಕಾಣಿಸುತ್ತಿದೆ.

ಹಾಗೆಯೆ ಇವತ್ತು ಏನೋ ಯೋಜನೆ ಯೋಜನೆ ಅಂತ ತಲೆಕೆಡಿಸಿಕೊಳ್ಳುವ ಬಲಿದತ್ತನಿಗೆ ಹಿಂದೆ ಗಂಡಹೆಂಡತಿ ಒಬ್ಬರಿಗೊಬ್ಬರು ಮುನಿಸಿಕೊಳ್ಳುತ್ತಿದ್ದುದು ಸಮಾಧಾನ ಮಾಡುತ್ತಿದ್ದುದು ನೆನಪಾಗುತ್ತದೆ. ನಾಲ್ಕೂ ಕಡೆಗಳಲ್ಲಿ ಕತ್ತಲೆಯಿಂದ ತುಂಬಿರುವ ಆ ಪಾತಾಳನಗರಿ, ನೀಳವಾದ ಉಸಿರಿನ ಮಧ್ಯೆ ಅನೇಕ ಬಾರಿ ನೆನಪಿನಲ್ಲಿ ಮೂಡುತ್ತದೆ, - ಅಭಾವದ ಆ ಬಿರುಕು ಇನ್ನೂ ಕೂಡಿಕೊಂಡಿಲ್ಲ, ಒಂದಾಗಿಲ್ಲ, ಬದುಕಿನಲ್ಲಿ ಅವನ ಬಳಿ ಐಶ್ವರ್ಯ ಬಲ ಇದ್ದಿದ್ದರೆ ಆ ಪರಿಯೆ ಬೇರೆಯದಾಗಿರುತ್ತಿತ್ತು.

ಮನಸ್ಸಿನಲ್ಲೇ ಅವನು ಯೋಚಿಸಿ ನೋಡುತ್ತಿದ್ದಾನೆ, - ವಿಶಾಲವಾದ ಮನೆಯಲ್ಲಿ ಇರುವ ಪ್ರೇಮ, ಗುಡಿಸಿಲಿನಲ್ಲಿಯೂ ಅದೇ ಪ್ರೇಮ ಸಿಕ್ಕಿತ್ತೆ? ವಿಶಾಲವಾದ ಆವರಣದಲ್ಲಿರುವ ಹೂದೋಟದ ಹೂವುಗಳ ನಡುವೆ ಇರುವ ಬಳ್ಳಿಗಳ ಹಂಬಿನ ಹಿಂದೆ ಕಾಣಸಿಗುವ ಕಣ್ಣುಮುಚ್ಚಾಲೆಯ ಆನಂದ ಗೆದ್ದಲು ತಿಂದ ಬಂಬಿನ ಸೀಳಿಗೆ ಹಮ್ಮಿಕೊಂಡಿರುವ ಹೀರೆಬಳ್ಳಿಯಲ್ಲಿ ಸಿಗುತ್ತದೆಯೆ? ಆ ಸಣ್ಣ ತೋಟದಲ್ಲಿ ಹುಳುತಿಂದ ಸೊಪ್ಪಿನ ಗಿಡಗಳ, ಚಂಡೆಗಿಡಗಳ ನಡುವೆ ಕಾಣಿಸುತ್ತದೆಯೆ? ಖಂಡಿತ ಇಲ್ಲ- ಬಲಿದತ್ತ ಯೋಚಿಸುತ್ತಾನೆ. ಅರ್ಧ ಬದುಕೆಲ್ಲ ಕಷ್ಟಾಕಾರ್ಪಣ್ಯಗಳಿಗೆ ಸಿಕ್ಕಿ ಸೊರಗಿ ಸಪ್ಪೆಯಾಗಿದೆ. ಇಲ್ಲದಿದ್ದರೆ ಅವನು ಬೇರೆ ರೀತಿಯಲ್ಲೇ ಇರುತ್ತಿದ್ದ. ಚೊಕ್ಕವಾದ ಮನೆ, ಸುಂದರವಾದ ಕೈತೋಟ, ಬೇಕಾದಷ್ಟು ಹಣ, - ಒಂದು ಕಾರು, -ಮನಸ್ಸಿಗೆ ಬಂದದ್ದು ಕೊಳ್ಳಬಹುದು, ವೈವಾಹಿಕ ಬದುಕು ಹೀಗಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಇನ್ನೂ ಅನೇಕ ದಿನಗಳು ಬಾಕಿ ಉಳಿದಿವೆ. ಉಸಿರು ಇರೋವರೆಗೆ ಆಸೆ. ಬದುಕನ್ನು ಅವನು ಮನಸ್ಸಿಗೆ ತಕ್ಕಂತೆ ಮಾಡಿಕೊಳ್ಳಬಲ್ಲ. ಅದಕ್ಕಾಗಿ ಹೊಟ್ಟೆಪಾಡಿನ ಹೋರಾಟದಲ್ಲಿ ಅವನು ಗೂಳಿಯಬಲ, ಗುಳ್ಳೆ ನರಿಯ ಕೈಚಳಕ ಎಲ್ಲವನ್ನೂ ಬಳಸುತ್ತಾನೆ. ಯಾರಿಗೆ ಏಳಿಗೆಯ ಚಿಂತೆಯಿಲ್ಲವೂ, ಅಂಥವರ ಪಾಲಿಗೆ ಅವನು ಮನುಷ್ಯನ ಹೃದಯ ಮತ್ತು ಮನುಷ್ಯನ ವಿವೇಕವನ್ನು ಬಿಟ್ಟುಬಿಡುತ್ತಾನೆ. ಆ ದೌರ್ಬಲ್ಯ ಅವನಲ್ಲಿಲ್ಲ. ಉದ್ದೇಶವೇನೆಂದು ಅರಿತು ಉಪಾಯವಾಗಿ ಕೆಲಸಮಾಡಿ ಸಾಧಿಸುತ್ತಾನೆ.

ಹೊಟ್ಟೆಪಾಡಿನ ಹೋರಾಟ, - ನೌಕರಿಯೆ ಅವನ ಕುರುಕ್ಷೇತ್ರ, ಅವನ ಧರ್ಮಕ್ಷೇತ್ರ, - ರಣಜಿತ ಬಾಬುವಿನಿಂದ ಯಾವ ರೀತಿಯಲ್ಲಿ ಪ್ರಯೋಜನ ಪಡೆದುಕೊಳ್ಳಬಹುದು?

ದಿನಸಿತ್ಯದ ಆಲೋಚನೆ ಅಂದರೆ ಇಷ್ಟ. ನೌಕರಿ, ಅದಕ್ಕೆ ಸಂಬಂಧಿಸಿದ ಪೀಕಲಾಟ. ಯೋಜನೆ ಮಾಡಿದರೆ ಮನುಷ್ಯ ದೊಡ್ಡವನಾಗುತ್ತಾನೆ. ಬಲಿದತ್ತ ಲೆಕ್ಕಹಾಕಿ ನೋಡುತ್ತಿದ್ದ, ಪಕ್ಕದಲ್ಲಿ ಸರೋಜಿನಿ ಇರುವುದನ್ನು ಪೂರ್ತಿ ಮರೆತೇ ಬಿಟ್ಟಿದ್ದ.

ಕೆಲಸ, ನೌಕರಿ, ಹೇಗೆ ಬಡ್ತಿ ಪಡೆಯುವುದು, ಅಷ್ಟೆ.

ಸರೋಜಿನಿ ಮುಂದೆ ಹೆಜ್ಜೆ ಹಾಕುತ್ತಿದ್ದಾಳೆ. ಮದುವೆಯಾಗುವುದಕ್ಕಿಂತ ಮೊದಲ ದಿನಗಳಂತೆ ನಿಜವಾಗಿಯೂ ಅವಳು ವಿಮೋಚನ ಬಯಸುತ್ತಿದ್ದಾಳೆಯೆ ? ಮನಸ್ಸಿನ ಮೂಲೆಯ ಆಳದಲ್ಲಿ ಏನೋ ಭಾವನೆ ಮೇಲೇರುತ್ತಿದೆ. ದೈವ ದಾರಿ ತೋರಿಸುತ್ತಿದೆ, ಗಾಳಿಯಲ್ಲಿ ಮಿಂಚಿನ ಸುವಾಸನೆ ತುಂಬಿದೆ. ರಕ್ತವೂ ಮೈಯಲ್ಲಿ ಅದಕ್ಕನುಗುಣವಾಗಿ ಮಿಡಿಯುತ್ತಿದೆ.

ಬದುಕಿನಲ್ಲಿ, ಅವಳಿಗೆ ನೂರಾರು ರೀತಿಯಲ್ಲಿ ನೂರಾರು ಅನುಭವಗಳಾಗಿವೆ, ಇವತ್ತೇನಾಗಿದೆ ?

ಅವನ ಕತೆ-

ಮನುಷ್ಯನ ಕತೆ.

ಅವನು ಕೇವಲ ಅವಯವಗಳಿಂದ ಮಾತ್ರ ಕೂಡಿದವನಲ್ಲ. ವಾಸ್ತವವಾಗಿ ತನ್ನ ಪೂರ್ವಿಕರ ದೇಹದ ಮೇಲೆ ಮೆಂಡಲನ ನಿರೂಪಣೆಯ ಸಾರ್ಥಕ್ಯವೇನೊ ಎಂಬಂತಿದ್ದಾನೆ. ಅವನ ಮುಖಚರ್ಯೆ ಚಲನಚಿತ್ರಕ್ಕಾಗಿ ಅಲ್ಲ, ಕಾವ್ಯಕ್ಕಾಗಿ ಅಲ್ಲ. ಸಾಧಾರಣವಾದ ಊಟವನ್ನುಂಡ ಸಣಕಲು ಮಾಮೂಲು ಮೈ. ಅದರಲ್ಲಿ ಹೆಮ್ಮೆ ಪಡುವುದಕ್ಕೇನೂ ಇಲ್ಲ, ನಾಚಿಕೆ ಪಡುವುದಕ್ಕೂ ಅಷ್ಟೆ.

ಕತೆ ಅವನ ಆಳವಾದ ಮನಸ್ಸಿನದು ಮಾತ್ರವೆ ಅಲ್ಲ. ಕತ್ತಲೆಯಲ್ಲಿ ಅನೇಕ ಭೂತಪ್ರೇತಗಳಿವೆ. ಬೆಳಕಿನ ಹಾದಿಯಲ್ಲಿ ಲೆಕ್ಕವಿಲ್ಲದಷ್ಟು ಮಂದಿ ದೊಣ್ಣೆ ಹಿಡಿದ ಕಾವಲುಗಾರರಿದ್ದಾರೆ. ಏಕಾಂತದ ಕ್ಷಣಗಳು ಬರುವುದೇ ಅಪರೂಪ. ಅವನ ಬದುಕಿನಲ್ಲಿ, - ಆಗ ಯಾರಾದರೂ ಒಬ್ಬ ಕಾವಲುಗಾರ ಅಡ್ಡಾಡಲು ಬರುತ್ತಾನೆ. ಯಾವನೋ ಅಫೀಮಿನ ಗುಳಿಗೆ ತೆಗೆದುಕೊಳ್ಳುತ್ತಾನೆ, ಮತ್ತೆ ಎಲ್ಲರೂ ಮಲಗಿಬಿಡುತ್ತಾರೆ. ಆದರೆ ಎಷ್ಟು ಕ್ಷಣ ? ಒಂಟಿ ಬದುಕಿನ ಅದೆಷ್ಟು ಭಗ್ನಾವಶೇಷಗಳು. ಬರೀ ಪಹರೆಯವರು, ಸ್ವತಂತ್ರವಾದ ಮನಸ್ಸು ಭಯದಿಂದ ಹಿಂದೇಟು ಹಾಕುತ್ತಿದೆ. ಅಳಿವಿನ ಭಯ, ಸಮಾಜದ ಭಯ, ಬಡತನ ಮತ್ತು ಸಾವಿನ ಭಯ, ನಿರಾಶೆಯ ಭಯ, ಬರೀ ಭಯ ಅಂದರೆ ಭಯ, ಬರೀ ಎದುರಾಗಬಹುದೆಂದು ಭಯಪಡುವ ಏಳುಬೀಳುಗಳ ಇತಿಶ್ರುತಿ, ಅವನ ಕತೆಯಲ್ಲ.

ಅವನ ಕತೆ, -ಕೇವಲ ಮನುಷ್ಯ ಸಮೂಹದಲ್ಲಿ ಅದು ವಿಕಾಸಗೊಂಡಿಲ್ಲ. ಅದು ವಿಕಾಸಗೊಳ್ಳುವುದಿಲ್ಲ. ಅದೊಂದು ಯಃಕಶ್ಚಿತ್ ಇರುವೆ ಅಷ್ಟೆ, ಸಾಧಾರಣವಾದ ಇರುವೆ.

ಅದು ಅವನ ಯಶಸ್ಸು ಅಥವಾ ಸೋಲಿನಿಂದ ಕೂಡಿದ ಕೌಟುಂಬಿಕ ಘಟನೆಗಳ ವರ್ಣನೆಯೂ ಅಲ್ಲ. ಒಂದಾದ ಮೇಲೊಂದು, -ಎದುರಾಗುತ್ತಲೆ ಇರುವ ಸಮಸ್ಯೆಗಳ ಸೆಣಸಾಟ, ಲೆಕ್ಕಾಚಾರದ ಮೇಲೆ ಲೆಕ್ಕಾಚಾರ. ಘಟನೆಯಲ್ಲ, - ಇವತ್ತು ನಡೆಯುವುದು ನಾಳೆ ಅಡಗೂಲಜ್ಜಿ ಕತೆಯಾಗಿ ಹೋಗುತ್ತದೆ. ನಕ್ಷೆಯಲ್ಲಿ ನೋಡಿದಾಗ ಕಾಣುವ ಸಮತಲವಾಗಿಲ್ಲದ ಮಾಮೂಲಿ ಪರಿಳಿತಗಳು.

ಅವನ ಕತೆ ಪ್ರಕೃತಿಯ ನಂಟಿಗೆ ಗಂಟುಬಿದ್ದು ಅಧೋಮುಖವಾಗುತ್ತಿರುವ ಅವನ ಕೀಳು ಸ್ಥಿತಿಯ ಪರಿಚಯವೂ ಅಲ್ಲ. ಪ್ರಕೃತಿ, -ಅದಾದರೊ ನಿತ್ಯ ನೂತನ, -ಇಷ್ಟು ದೊಡ್ಡ ಆಕಾಶ, ಅದರಲ್ಲಿ ಕೋಟಿ ಕೋಟಿ ವಿಶ್ವಬ್ರಹ್ಮಾಂಡಗಳು, ನಾನಾ ವರ್ಣಗಳು, ನಾನಾ ಭಾವಗಳು, ಕೆಳಗೆ ಹಳ್ಳ, ಕಂದರಗಳು, ಬೆಟ್ಟಗುಡ್ಡಗಳು, ಸಮತಲಪ್ರದೇಶ, ಲೆಕ್ಕವಿಲ್ಲದಷ್ಟು ದೃಶ್ಯಗಳು ತುಂಬಿವೆ. ಪ್ರಕೃತಿ, ಮರಗಿಡಬಳ್ಳಿಗಳು. ದವಸಧಾನ್ಯ. ಹಸುಕರುಗಳು, ಪಶುಪಕ್ಷಿಗಳು, 'ಎಲಿಜಿ' ವರೆಗೆ, ಎಲ್ಲಿ ಯಾವುದರ ಕೆಳಗೆ ಮರೆಯಾಗಿ ಹೋಗುತ್ತಾನೊ ಬಲಿದತ್ತ, ಬಡಪಾಯಿ ಬಲಿದತ್ತ, ಮರೆಯಾಗಿ ಹೊರಗಿನ ಪ್ರಪಂಚಕ್ಕೆ ಸಂಬಂಧಿಸಿದ ತನ್ನ ವಿಶೇಷ ಚೇತನವನ್ನು ಕಳೆದುಕೊಳ್ಳುತ್ತಾನೆ. ನೀರಿನಲ್ಲಿರುವ ಮೀನು, - ಅದು ನೀರನ್ನು ದೂರದಿಂದ ನೋಡಲಾರದು. ಆ ಹರಿವಿನ ವೇಗ, ಹರಿವಿನ ರಭಸವನ್ನು ತಡೆಯುವ ಸೌಲಭ್ಯ ಅದರ ಬಳಿಯಲ್ಲಿಲ್ಲ. ಅತ್ತ ಕಡೆ ಅದರ ದೃಷ್ಟಿ ಇಲ್ಲ, -ಆಕಾಶದಲ್ಲಿ ಚಂದ್ರ ಯಾವಾಗ ಹುಟ್ಟುತ್ತಾನೆ, ಯಾವಾಗ ನಕ್ಷತ್ರಗಳು ಮೂಡುತ್ತವೆ. ದೂರ ಕ್ಷಿತಿಜದಲ್ಲಿ ಯಾವಾಗ ಯಾವ ಭಾವನೆ ಮೂಡುತ್ತದೆ, ಯಾವಾಗ ಯಾವ ದೃಶ್ಯ ಕಾಣುತ್ತದೆ. ಹುಡುಗನಾಗಿದ್ದಾಗ ರಾತ್ರಿಯಲ್ಲಿ ಅವನು ಆಕಾಶ ನೋಡಿದ್ದ.

ಬಾಗಿಲ ಬಳಿಯಲ್ಲಿ ಮೈಚೆಲ್ಲಿ ಮಲಗಿ ಚಂದ್ರ ಮತ್ತು ಮೋಡಗಳ ಜೂಟಾಟವನ್ನು ಅವನು ನೋಡುತ್ತಿದ್ದ. ಈಗಲ್ಲ. ಈಗ ಆಕಾಶಕ್ಕೆ ಬದಲಾಗಿ ಅವನ ತಲೆಮೇಲೆ ಹರಕಲು ಗೋಣಿಚೀಲವನ್ನು ಹೊಲೆದು ಟೊಪ್ಪಿಯಂತೆ ತೂಗು ಬಿಟ್ಟರೂ ತನ್ನ ಕೆಲಸಕ್ಕೆ ಅಡ್ಡಿಯಾಗದ ಹೊರತು ಅವನು ಆ ಕಡೆ ನೋಡುವುದಿಲ್ಲ. ಅವನು ಅನೇಕ ಮರಗಳನ್ನು ನೋಡಿದ್ದಾನೆ. ಆದರೆ ಕಾಲ ಕೆಳಗೆ ಸಿಕ್ಕಿ ಹಾಳಾಗುವ ಹುಲ್ಲಿನಂತೆ ಅವುಗಳನ್ನು ಕಂಡಿದ್ದಾನೆ. ಯೋಚನೆ ಮಾಡಿಲ್ಲ. ಕೇವಲ ಪ್ರವೃತ್ತಿಯಲ್ಲಿ ಅನುಭವ ಪಡೆದಿದ್ದಾನೆ.

ಅವನ ಕತೆ ಅನಂತವಾದ ಕಾಲದ ಸಂಪರ್ಕದಲ್ಲಿದ್ದುಕೊಂಡು ತೇಲಾಡುತ್ತಿರುವ ಭಾವರಾತ್ರಿಯದಲ್ಲ. ಎಲ್ಲ ಯಥಾರ್ಥ, ಎಲ್ಲ ತಿಣುಕಾಟ ಲೋಪವಾಗಿ ಕೇವಲ ಮಹಾಶೂನ್ಯದಲ್ಲಿ ಬಯಲಾಗಿ ನಿಂತಿದೆ,- ಹಿಂದೆ ಹೋಗದು, ಮುಂದೆ ಬಾರದು, ಮಧ್ಯ ನಿಲ್ಲದು. ಅರಿಸ್ಟಾಟಲ್ ರೂಪಿಸಿದ ಕಾವ್ಯ ಸೂತ್ರಗಳ ನೀತಿ ನಿಯಮಗಳಿಲ್ಲ, ವಿಷಮತೆಯಿಲ್ಲ, ಕೇವಲ ರಸವತ್ತಾದ ಅನುಭವ. ಒಂದೊಂದು ಸ್ಪಂದನದಲ್ಲೂ ಅದರ ಚರಿತ್ರೆ ತುಂಬಿದೆ, ಹಾರದಲ್ಲಿ ಪೋಣಿಸಿರುವ ಒಂದೊಂದೇ ಮಣಿಯಂತೆ, ಕಾಲ ಎಂಬ ದಾರಕ್ಕೆ ಪೋಣಿಸಿದಂತಿದೆ. ಯಾವ ಕಡೆಯಿಂದಲಾದರೂ ಸರಿ ಹಾರತಿರುಗಿಸಿ, ಜೀವನ ಎಂಬ ನಾಮವೇ, ಸಹಸ್ರನಾಮ ಅಥವಾ ಲಕ್ಷನಾಮದಲ್ಲೂ ಅದೇ ಬದುಕು, - ಪವಿತ್ರವಾದ ದೇವರ ನಾಮ. ಅದೂ ಅವನ ಕತೆಯಲ್ಲ, - ಬಡಪಾಯಿ ಬಲಿದತ್ತ, - ಗಡಿಯಾರದ ಗೋಳಾಕಾರದ ತಟ್ಟೆಯ ಮೇಲಿರುವ ಎರಡು ಮುಳ್ಳುಗಳ ನಡುವಣ ಸ್ಥಾನವನ್ನೇ ಸಮಯ ಅಂದುಕೊಳ್ಳುತ್ತಾನೆ. ಎಲ್ಲ ಜಾಗಗಳಲ್ಲೂ ಅವನು ನಿಂತು ನೋಡುವುದಿಲ್ಲ, - ಬೆಳಗ್ಗೆ ನಿತ್ಯಕರ್ಮಗಳನ್ನು ಮಾಡುವ ವೇಳೆ, ಹಾಗೂ ಹತ್ತರಿಂದ ಐದರವರೆಗೆ, -ಕಚೇರಿ, ಇಷ್ಟೇ ಇಷ್ಟು. ಸಮಯವಲ್ಲ, - ಸಮಯ ತೋರಿಸುವ ಮುಳ್ಳು. ಅದೂ ಅಲ್ಲ ಅವನ ಕತೆ.

ಒಟ್ಟು ಸೇರಿಸಿ - ಮನುಷ್ಯನ ಇರುವಿಕೆಯ ಈ ಆರುದಿಕ್ಕುಗಳು, ಆರು ಡೈಮೆನ್‌ಷನ್ಸ್- ಇವುಗಳಲ್ಲಿ ಒಂದೊಂದರದೂ ನಾನಾ ಭಂಗಿಗಳು, ಬಗೆಬಗೆಯ ಸೊಬಗು, - ಮತ್ತು ಇವುಗಳಲ್ಲಿ ಕ್ರಿಯೆ ಪ್ರತಿಕ್ರಿಯೆಗಳ ಪರಸ್ಪರ ಸಂಬಂಧದಿಂದ ಹುಟ್ಟಿದ ಸಾವಿರಾರು ರೂಪಗಳು. ಅದೃಶ್ಯನಾದ ಅಕ್ಕಸಾಲಿಯ ಕೈಗಳಿಂದ ಕಡೆಯಲ್ಪಟ್ಟ ಒಂದೇ ವಜ್ರದ ಲೆಕ್ಕವಿಲ್ಲದಷ್ಟು ಮುಖಗಳು, -ಗಣನೆಗೆ ಬಾರದಂತಿರುವ ಬಲಿದತ್ತದಾಸ್ ಕೊಹಿನೂರಿನಂತೆ ಕಾಂತಿ ಬೀರುತ್ತಾನೆ, ಬೆಳಕನ್ನು ಒಟ್ಟುಗೂಡಿಸುತ್ತಾನೆ, -ಇದೇ ಅವನ ಕತೆ, - ಸದ್ದಿಲ್ಲದ ಸಪ್ಪೆ ಕತೆ.

ಅವನು ನಡೆಯುತ್ತಿದ್ದಾನೆ, ನಡೆದು ಬಂದಿದ್ದಾನೆ. ಬಹಳ ಪ್ರಾಚೀನ ಕಾಲದಲ್ಲಿ ನಡೆದು ಹೋದ ಘಟನೆಗಳ ಇಬ್ಬನಿಯಲ್ಲಿ ಹೂತು ಹೋಗಿರುವ ಅದೆಷ್ಟು ತಲೆಮಾರುಗಳ ಕಾಲದಿಂದ, - ಯಾವಾಗಲೋ ಎಲ್ಲೋ ಚೇತನದಲ್ಲಿ ಅನುಪ್ರಾಸವುಂಟಾಗಿದೆ, ಶಕ್ತಿಪಾತವಾದ ಅನುಪ್ರಾಸದಲ್ಲಿ ಹುಟ್ಟಿದ್ದಾರೆ ಎಷ್ಟೊ ಮಂದಿ ದೇವತೆಗಳು ಮತ್ತು ಆದರ್ಶಗಳು. ಇಂದು ಬಹುಶಃ ಅವನ ಹೊಟ್ಟೆಪಾಡಿನ ಬವಣೆಯಲ್ಲಿ ಹುಟ್ಟಿಬಂದಿರುವ ದೇವತೆಗಳು, - ಆ ದೇವತೆಗಳ ಪೂಜೆಯನ್ನು ಮಾಡುತ್ತಿದ್ದಾನೆ, ಹೆಸರು ಕೊಟ್ಟಿಲ್ಲ.

ಅವನು ಹೋಗುತ್ತಲೇ ಇದ್ದಾನೆ.

ಕಾಂಪೌಡಿನ ಆಕಡೆ ಮೂರು ಮೋಟಾರು ಕಾರುಗಳು, ಒಂದೆರಡು ಸಣ್ಣ ಕುದುರೆಗಾಡಿಗಳು. ಎಲ್ಲವೂ ಸುಮ್ಮನೆ ನಿಂತಿವೆ.

ರಸ್ತೆ ಮೈ ಚಾಚಿ ಮಲಗಿದೆ. ಒಂದೊಂದು ಬಾರಿ ಒಮ್ಮುಖವಾಗಿ ದೂರಸಾಗುತ್ತಿರುವ ಪಾದರಕ್ಷೆಗಳ ಖಟಖಟ ಸದ್ದು, ಅದಾದ ಮೇಲೆ ಗಪ್‌ಚಿಪ್, ಕತ್ತಲೆಯ ರಾಶಿಯಲ್ಲಿ ಮುಚ್ಚಿಹೋಗಿರುವ ತೋಟದ ಆ ಕಡೆಯ ಮನೆಯಿಂದ ತೀಕ್ಷ್ಣವಾದ ಬೆಳಕು ಬರುತ್ತಿದೆ. ಒಮ್ಮೊಮ್ಮೆ ಸಾಮೂಹಿಕವಾಗಿ ಕಿಲಕಿಲನಗು ಕೇಳಿ ಬರುತ್ತಿದೆ. ಅದೇನು ನಗುವೊ ಆರ್ತನಾದವೊ ತಿಳಿಯದ ಮನಸ್ಸಿಗೆ ಗಾಬರಿಯಾಗುತ್ತದೆ, ತಬ್ಬಿಬ್ಬಾಗುತ್ತದೆ.

"ಇದೇ ರಣಜಿತಬಾಬುಗಳ ಮನೆ"-ಬಲಿದತ್ತ ಹೇಳಿದ.

"ಇದೇನಾ..." ಸರೋಜಿನಿ ಗಮನವಿಟ್ಟು ನೋಡಿದಳು. 'ಇದೇನಾ' ಎಂಬ ಒಂದೇ ಪದದಲ್ಲಿ ಅವಳ ಎಲ್ಲ ಊಹಾಪೋಹಗಳು, - ದೊಡ್ಡ ಬಾಗಿಲು, ವಿಸ್ತಾರವಾದ ತೋಟ, ದೊಡ್ಡದಾದ ಚೊಕ್ಕವಾದ ಮನೆ, - ಒಟ್ಟಿನಲ್ಲಿ ಬಹಳ ದೊಡ್ಡ ಮನೆ, - ಎದೆಯ ಮೇಲೆ ಹತ್ತಿ ಕುಳಿತಂತೆ ಭಾಸವಾಗುತ್ತದೆ. ಇಷ್ಟು ಬಟ್ಟಬಯಲಿನಲ್ಲಿ ಮನುಷ್ಯರೂ ಇದ್ದಾರಲ್ಲ! ಬದುಕು ಅಂದರೆ ಇದು.

ಹೊಟ್ಟೆಕಿಚ್ಚಿನ ನಿಟ್ಟುಸಿರೊಂದು ಹೊರಬೀಳುತ್ತದೆ.

"ಇದೇನು ಬಂತು, ಇಷ್ಟು ದೊಡ್ಡ ಮನೆ ಆದರೂ ಬಾಗಿಲಲ್ಲಿ ಬೆಳಕೇ ಇಲ್ಲ. ಸ್ವಲ್ಪ ನೋಡಿಕೊಂಡು ಬನ್ನಿ. ಎಡವಿ ಬಿದ್ದೀರಿ, ಜೋಕೆ-" ಸರೋಜಿನಿ ಹೇಳುತ್ತಿದ್ದಳು.

ಕತ್ತಲೆಯ ಹಾದಿ, ಉದ್ದವಾದ ಹಾದಿ, -ಎರಡೂ ಕಡೆಗಳಲ್ಲಿ ಕತ್ತಲೆಯ ಅಲೆಗಳು ಓಡುತ್ತಿವೆ. ತಾಜಾ ಹೂವುಗಳ ಸೊಂಪಾದ ಸುವಾಸನೆ ಮೂಗಿಗೆ ಬಡಿಯುತ್ತಿದೆ.

ಒತ್ತಾದ ಮೆಳೆಗಳು ಕತ್ತಲೆಯ ಮರೆಯಲ್ಲಿ ಆಳವಾದ ಮನಸ್ಸಿನ ನೀರವತೆ ಎಷ್ಟಿದೆಯೆಂಬುದನ್ನು ಸಂಕೇತರೂಪದಲ್ಲಿ ತೋರಿಸುತ್ತಿವೆ, - ಸರೋಜಿನಿಗೆ ಯೋಚನೆ ಮಾಡದೆ ಸುಮ್ಮನಿರಲು ಸಾಧ್ಯವಾಗುತ್ತಿಲ್ಲ.

ಬಲಿದತ್ತ ಯೋಚಿಸಲು ಪ್ರಯತ್ನಮಾಡುತ್ತಾನೆ. ಆ ಮೋಟಾರುಗಳಲ್ಲಿ ಯಾರು ಯಾರು ಬಂದಿರಬಹುದು, ಗಾಡಿಗಳಲ್ಲಿ ಯಾರು ಬಂದಿರಬಹುದು, -ತನ್ನ ನೌಕರಿಯಲ್ಲಿ ಬಡ್ತಿ ಸಂಪಾದಿಸಲು ಅವನು ಇವರುಗಳಿಂದ ಏನೇನು ಪ್ರಯೋಜನ ಪಡೆಯಬಹುದು. ಅವನು ನಗುತ್ತಿರುವವರ ಧ್ವನಿಯನ್ನು ಗಮನಿಸುತ್ತಾನೆ, ಮನಸ್ಸಿನಲ್ಲೇ ಮುಗುಳ್ನಗುತ್ತಾ ಮುಂದುವರೆಯುತ್ತಿದ್ದಾನೆ,- ಆಶಾವಾದಿ.

"ಎಷ್ಟು ಚೆನ್ನಾಗಿದೆ ತೋಟ," ಸರೋಜಿನಿ ಹೇಳಿದಳು.

"ಸ್ವಲ್ಪ ತಡಿ, ಕೂಗಿ ನೋಡುತ್ತೇನೆ," ಬಲಿದತ್ತ ಉತ್ತರಿಸಿದ, - "ಯಾರಾದರೂ ಇದ್ದೀರಾ ? ರಣಜಿತ ಬಾಬುಗಳು ಇದ್ದಾರೆಯೆ ? ಯಾರು, ಭೀಮಾನ ?" ಭೀಮಾ ಆಳು. "ಹೋಗಿ ಬಲಿದತ್ತ ಬಂದಿದ್ದಾರೆ ಅಂತ ಹೇಳು".

ಹೆಚ್ಚು ಹೊತ್ತೇನೂ ಕಾಯಬೇಕಾಗಲಿಲ್ಲ. ರಣಜಿತಬಾಬು ಖಟ್ ಅಂತ ಸ್ವಿಚ್ ಹಾಕಿ ಬಾಗಿಲಿನ ದೀಪ ಹಾಕಿದರು. ನಗುತ್ತಲೇ ಕೈಮುಂದೆ ಮಾಡಿ ಬರಮಾಡಿಕೊಳ್ಳುತ್ತಾ ನಿಂತರು.

ಗೆರೆಗಳುಳ್ಳ ಅಳ್ಳಕವಾದ ಪೈಜಾಮಾ, ಅಳ್ಳಕವಾದ ಅಂಗಿ, ಗಟ್ಟಿ ಮುಟ್ಟಾದ ಮೈ ಎದ್ದು ಕಾಣುತ್ತಿದೆ. ನಗುಮುಖದಲ್ಲಿ ವಿಲಕ್ಷಣವಾದ ಸೊಬಗು. ಕಣ್ಣುರೆಪ್ಪೆ ಮುಚ್ಚುವಷ್ಟರಲ್ಲಿಯೆ ಇದ್ದಕ್ಕಿದ್ದ ಹಾಗೆಯೆ ತೋಟದ ಹೂಗಿಡಬಳ್ಳಿಗಳೆಲ್ಲ ಬೆಳಕಿನಲ್ಲಿ ತೊಯ್ದುಹೋದವು. ಹೊರಗಿನ ಕೋಣೆಯ ಒಪ್ಪ ಓರಣ ಅಲಂಕರಣ ಕಣ್ಣು ಕೋರೈಸಿತು. ಸರೋಜಿನಿ ಕಣ್ಣಗಲಿಸಿ ಬಾಗಿಲಲ್ಲಿ ನಿಂತಿದ್ದ ರಣಜಿತ ಬಾಬುಗಳನ್ನು ನೋಡುತ್ತಾ ನಿಂತುಬಿಟ್ಟಳು.

"ಹಲೋ ಮಿಸ್ಟರ್ ದಾಸ್! ನಮಸ್ಕಾರ, ನಮಸ್ಕಾರ, ಬನ್ನಿ ಬನ್ನಿ ತುಂಬ ಸಂತೋಷ. ದಯಮಾಡಿಸಿ ಒಳಗೆ" - ಅವಸರದಲ್ಲಿ ತಿರುಗಿ ಒಳಗೆ ಹೋಗುತ್ತಾರೆ, - ಒಂದೊಂದು ಹೆಜ್ಜೆಯಲ್ಲೂ ಮೈಯನ್ನು ಒಳಕ್ಕೆ ಎಳೆದುಕೊಂಡು ಹೋಗುತ್ತಿರುವಂತೆ ಕಾಣುತ್ತಿದೆ, ವ್ಯಾಯಾಮ ಮಾಡುವ ಮನುಷ್ಯನ ಮೈಯಲ್ಲಿ ಅನೇಕ ವಿಶೇಷ ಭಂಗಿಗಳು ಎದ್ದು ಕಾಣುತ್ತವೆ, - ನಡೆಯುವುದು ಅಂದರೆ ಹೆಜ್ಜೆ ಹೆಜ್ಜೆಗೂ ಲಘುವಾದ ನಿಲುಗಡೆಯೊಡನೆ ಮುಂದುವರಿಯುವುದು ಎಂದರ್ಥ.

"ಬನ್ನಿ-ಬನ್ನಿ-ಅಮ್ಮ - ಮಿಲಿ, ನೀಲಿ - ಬಿಂದೂ, - ಎಲ್ಲಿ ಹೋದರು ಎಲ್ಲರೂ."

'ಎಲ್ಲರೂ' ಅನ್ನುವುದರಲ್ಲಿ ಅನೇಕರಿದ್ದಾರೆ, ಇದ್ದಕ್ಕಿದ್ದಂತೆ ಒಂದೇ ಬಾರಿಗೆ ಪೂರ್ತಿ ಕ್ಯಾಟಲಾಗ್ ಓದುವುದಕ್ಕಾಗುವುದಿಲ್ಲ.

ಆ ಕಡೆಯಿಂದ ಒಂದು ಮಧುರ ಧ್ವನಿ ಕೇಳಿಸುತ್ತದೆ, ಹತ್ತಿರ ಹತ್ತಿರ ಬರುತ್ತಿದೆ ಅದು.

ಬಡಪಾಯಿ ಬಲಿದತ್ತ ಆಕಡೆ ಈಕಡೆ ಪೆಚ್ಚಾಗಿ ನೋಡುತ್ತಿದ್ದಾನೆ. ಸರೋಜಿನಿಯ ಹೆಜ್ಜೆಗಳು ಹಾಗೆಯೆ ಸ್ತಬ್ಧವಾಗಿ ನಿಂತವು, - ಆ ಜನ ಬಂದೇ ಬಿಟ್ಟರು, -ಸ್ವಾಗತ ಸಮಿತಿಯ ಸದಸ್ಯರು.

"ಮಿಸ್ಟರ್ ಬಲಿದತ್ತ ದಾಸ್, ನನ್ನ ಸಹೋದ್ಯೋಗಿ ಆಫೀಸರ್, ಇವರು ಈಗಷ್ಟೇ ವರ್ಗವಾಗಿ ಬಂದಿದ್ದಾರೆ-ಮಿಸೆಸ್ ದಾಸ್-"

"ನಮಸ್ಕಾರ - ನಮಸ್ಕಾರ - ನಮಸ್ಕಾರ-"

"ಓಹೋ, ನೀವೇನಾ ಮಿಸ್ಟರ್ ದಾಸ್! ನಿಮ್ಮ ಹೆಸರು ಕೇಳಿ ನಿಮ್ಮ ಪರಿಚಯ ನನಗಿದೆ ಅಂತ ಭಾವಿಸಿದ್ದೆ. ಓ! ತುಂಬಾ ಸಂತೋಷ-"

"ಇವಳು ನನ್ನ ಸಿಸ್ಟರ್ ಮಿಲಿ, ಬಲಿದತ್ತ ಬಾಬು, ಸ್ವಲ್ಪ ಚೂಟಿ".

"ಅಯ್ಯೋ ಬಿಡಿ, ಅಣ್ಣಯ್ಯ ಹೇಳೋದೆಲ್ಲ-"

"ಹಾಗೇ ಇವಳು ನೋಡಿ ನೀಲಿ, ಹಹಹಹ, ಇವರಿಬ್ಬರೂ ತಂಗಿಯರಲ್ಲ, ಎರಡು ಗುಡುಗುಸಿಡಿಲುಗಳಿದ್ದಂತೆ. ಈ ಕಾಲದಲ್ಲಿ ಗಂಡು ಸಿಗೋದು ಎಷ್ಟು ಕಷ್ಟ".

"ಏಯ್, ಸುಮ್ನೇ ಇರು".

"ನೀವು ತುಂಬ ಅದೃಷ್ಟವಂತರು ರಣಜಿತಬಾಬು-"

"ನೋಡಿ, ಈ ಬಿಂದು - ಅಂದರೆ ಮಿಸೆಸ್-"

ಹೊ ಹೊ ಹೊ ಹೊ.

"ನಾಚಿಕೆಯಾಗಿ ಬಿಟ್ಟಿತಾ ಬಿಂದೂ, ಅಣ್ಣಯ್ಯನ ಇಂಟ್ರೊಡಕ್ಷನ್, ಆಲ್ವೆಮ್, ಯೂ ನಾಟ್ಟಿ ಬಾಯ್-" ಮಿಲಿ ಅಣ್ಣನ ಗಲ್ಲ ಹಿಂಡಿದಳು. ಬಿಂದು ಸರೋಜಿನಿಯ ತೋಳು ಹಿಡಿದುಕೊಂಡು ಒಳಗೆ ಕರೆದುಕೊಂಡು ಹೋದಳು. ಮಿಲಿ ನೀಲಿ ಇಬ್ಬರೂ ಬಲಿದತ್ತನ ಎರಡೂ ಕಡೆಗಳಲ್ಲಿ ಬಾಡಿಗಾರ್ಡ್‌ಗಳಂತೆ, ಇಬ್ಬರೂ ಅವನಿಗಿಂತ ಸುಮಾರು ಆರು ಅಂಗುಲ ಎತ್ತರ.

ಮೆರವಣಿಗೆ ಮುಂದೆ ಸಾಗುತ್ತಿದೆ.

ಆದರೆ ಬಲಿದತ್ತನಿಗೆ ಪ್ರಜ್ಞೆಯೆ ತಪ್ಪಿದಂತಾಗಿ ಎಲ್ಲೋ ಇರುವ ಅನುಭವ. ಪ್ರಜ್ಞೆ ಮರಳುತ್ತದೆ. -ಆ ವೇಳೆಗೆ ಮೂಗಿನ ಬಳಿ ಯಾವುದೋ ತೀಕ್ಷ್ಣವಾದ ವಿದೇಶಿ ಸೆಂಟಿನ ವಾಸನೆ ಹೊಡೆಯುತ್ತದೆ. ಅದು ಅವನ ವ್ಯಕ್ತಿತ್ವ ನೀರಾಗಿಸುವಷ್ಟು ಚಂಚಲವನ್ನಾಗಿ ಮಾಡುತ್ತದೆ, ಉಗ್ರವನ್ನಾಗಿ ಮಾಡುತ್ತದೆ, ಅತಿ ಉಗ್ರ, ಬಹಳ ಬಿಸಿ ಹುಟ್ಟಿಸಿ ಅವನನ್ನು ಮೇಲೆತ್ತುತ್ತದೆ. ಅದಾದ ಮೇಲೆ ಅವನು ಕರಗಿಹೋಗುತ್ತಾನೆ, ಆವಿಯಾಗಿ ಹೋಗುತ್ತಾನೆ, ಅರಿವು ಅಳಿಯುತ್ತದೆ, ಸ್ತಬ್ಧನಾಗುತ್ತಾನೆ. ಮತ್ತೆ ಅರಿವು ಮೂಡುತ್ತದೆ, ನೋಡುತ್ತಾನೆ, ಮಿಲಿ ನೀಲಿ ಮತ್ತು ಬಿಂದು ಮೂವರಿಂದ ಕೂಡಿದ ಒಂದು ಅಪರಿಚಿತ ಪ್ರಪಂಚ.

ಬರಿ ಸೆಂಟಿನ ವಾಸನೆ, - ಮತ್ತು ರಕ್ತದಂತೆ ಮಿನುಗುತ್ತಿರುವ ತುಟಿಗಳು. ಮಂಜಿನ ಮುಂಜಾನೆಯಂತಹ ಮುಖ, ಹಾಗೆಯೆ ಮಿಲಿಯ ತೆರೆದ ತೋಳುಗಳು, ಬಲೆಬಲೆಯಾದ ಬಟ್ಟೆಯೊಂದನ್ನು ಮೇಲೆ ಹೊದ್ದಿದ್ದಾಳೆ, ನೆಪಮಾತ್ರಕ್ಕೆ ಮೈ ಮುಚ್ಚುತ್ತಿದೆ ಅಷ್ಟೆ. ಅವಳು ನೀಲಿ ಅಪ್ಸರೆ. ನೀಲಿಯ ಉಡುಗೆ ತೊಡುಗೆ ಸಹ ಥೇಟ್ ಅದೇ ರೀತಿಯದು, ಆದರೆ ಅವಳು ಗುಲಾಬಿ ಅಪ್ಸರೆ. ಇಬ್ಬರ ಜಡೆಗಳೂ ಗಂಗಾ ಯಮುನಾ ಧಾರೆಗಳಂತೆ ಇಳಿದು ಎದೆಯ ಉಬ್ಬನ್ನು ಬಳಸಿಕೆಳಗಿನ ಮಟ್ಟಸವಾದ ಭೂಮಿಯ ಕಡೆ ಹರಿಯುತ್ತಿವೆ. ಕಂಪಾಸಿನ ಎರಡು ತುದಿಗಳಂತೆ, ಅಥವಾ ಕರಿಹಾವಿನ ಬಾಲದಂತೆ ಕಾಣುತ್ತಿವೆ. ಇಬ್ಬರ ಮೇಲುವಸ್ತ್ರಗಳೂ ಮಧ್ಯದಲ್ಲಿ

ಇಂಗ್ಲಿಷಿನ 'ವಿ' ರೀತಿಯಲ್ಲಿ ಬಗ್ಗಿವೆ. 'ವಿ' ಯ ಸುತ್ತಮುತ್ತ ಚೊಕ್ಕವಾಗಿ ಬಿಳಿಯ ಬಣ್ಣದ ಗುಂಡನೆಯ ಎರಡೆರಡು ಇಂಚಿನ ಉಬ್ಬುಗಳು ಎದ್ದುಕಾಣುತ್ತಿವೆ. ಅವುಗಳ ಮಧ್ಯದಲ್ಲಿ ಆಟವಾದ ಗುಳಿ, ಅದರ ಮೇಲೆ ಒಂದು ಬಣ್ಣದ ಕಲ್ಲಿನ ಆಭರಣ ಶೋಭಾಯಮಾನವಾಗಿ ಕಂಗೊಳಿಸುತ್ತಿದೆ. ಅದರ ಕೆಳಭಾಗ ತಕ್ಕಡಿಯ ಫಲ್ ಕ್ರಮ್‌ಗೆ ಸೇರಿಸಿದ ಮುಳ್ಳಿನಂತಿದೆ. ಸುಂದರವಾದ 'ವಿ' ಆಕೃತಿ - ದಿಗ್ವಿಜಯದ 'ವಿ' ಆಕೃತಿ - ಎಲ್ಲೋ ನೋಡಿದ ಹಾಗಿದೆ. ಹೌದು, ಹೌದೇ ಸರಿ, ಕಳೆದ ಮಹಾ ಯುದ್ಧದಲ್ಲಿ..... 'ವಿ' ಚಿಹ್ನೆ ವಿಜಯದ ಸಂಕೇತ, 'ವಿ' ಫಾರ್ ವಿಕ್ಟರಿ, - 'ವಿ' ಫಾರ್....

ಆಗ ಚಕ್ರ-ಶಕ್ತಿಗಳೆಲ್ಲ ನಡುಗಿಹೋಗಿದ್ದವು, ಈಗ ಬಡಪಾಯಿ ಬಲಿದತ್ತ ನಡುಗುತ್ತಿದ್ದಾನೆ. ಪ್ರಜ್ಞೆ ತಪ್ಪಿದಂತಾಗುತ್ತಿದೆ, -ಅವನು ಆವಿಯಾಗಿ ಆವಿಯಲ್ಲಿ ಸೇರಿ ಹೋಗುತ್ತಿದ್ದಾನೆ. ಪ್ರಜ್ಞೆ ಮತ್ತೆ ಮರಳಿ ಬರುತ್ತಿದೆ, - ಹೆಣ್ಣಿನ ರೂಪ ಎಷ್ಟು ಶ್ರೀಮಂತವಾಗಿರುತ್ತದೆ, ಸೊಗಸಾಗಿರುತ್ತದೆ. ನಿಜ, -ಬಟ್ಟೆಯೇನೂ ನಾರುಮಡಿ ಯಲ್ಲ, -ಸುಮ್ಮನೆ ಹೊದ್ದಿರೋದು ಅಷ್ಟೆ ಸಾಕು, - ಮನುಷ್ಯನನ್ನು ಬಗ್ಗಿಸಿ ಕುಗ್ಗಿಸಿ ಹಾಸಿಗೆಯನ್ನಾಗಿ ಮಾಡಿಬಿಡುವುದು, -ಕೆಳಗಡೆ ಎರಡು ಕಾಲುಗಳು, ಹರಡಿನ ಕೆಳಗಿನಿಂದ ಬಟ್ಟೆ ರೂಪಕ್ಕೆ ಆಭರಣವಿದ್ದಂತೆ, ಮುಚ್ಚುವುದಕ್ಕಲ್ಲ ಇರುವುದು ಅದು, ತೋರಿಸೋದಕ್ಕೆ. ಎಷ್ಟು ಸುಂದರವಾಗಿದೆ! ಎಷ್ಟು ಮಜಬೂತಾಗಿದೆ! ಎಷ್ಟು ಸೊಗಸಾಗಿದೆ! ಮನುಷ್ಯ ದೇಹದ ಏರಿಳಿತಗಳು ಅಲೆಯಂತಹ ಸಂಕೇತ ರೇಖೆಗಳು, ಚಲಿಸುತ್ತಿರುವಂತೆಯೆ ಅಲೆಗಳು ಹರಡುತ್ತಾ ಹೋಗುತ್ತವೆ.

ಮತ್ತೆ ಮುಂದೆ ನೋಡಿದರೆ ಬಿಂದು ಉಟ್ಟಿರುವ ಸೀರೆ, ಅದೂ ಅಷ್ಟೆ ಆವರಣವಲ್ಲ, ಆಭರಣವೇ ಸರಿ. ಬ್ಲೌಸು, ಅಲ್ಲಿಯೂ ಅದೇ ರೀತಿಯ 'ವಿ' ಆಕಾರ. ಮೇಲೆ ಸೀರೆಯ ಒಂದು ತುದಿ ತೂಗಾಡುತ್ತಿದೆ, -ಹೆಗಲಿನ ಮೇಲೆ ಸುಂದರವಾದ ಹೂವಿನ ಆಕಾರದ ಗಂಟು. ಎಲ್ಲವೂ ಕೆಂಪುಬಣ್ಣದ್ದು. ಇಬ್ಬನಿ ಬಿದ್ದಿರುವ ಗುಲಾಬಿಯ ಎಸಳುಗಳು ಈ ಚೆಲುವಾದ ಮೈಯನ್ನು ಸುತ್ತುವರೆದಂತಿದೆ. ಯೋಚಿಸುತ್ತಿದ್ದಂತೆಯೆ ಮತ್ತೆ ಪ್ರಜ್ಞೆ ತಪ್ಪಿದಂತಾಗುತ್ತದೆ.

ಅವನ ಪಕ್ಕದಲ್ಲಿ ಹೆಜ್ಜೆಯಿಡುತ್ತಿದ್ದಾಳೆ ಸರೋಜಿನಿ. ಮರದ ಗೊಂಬೆಗೆ ದಪ್ಪ ಬಟ್ಟೆಯನ್ನು ಸುತ್ತಿದಂತೆ ಠಪ್ ಠಪ್ ಅಂತ ಮುಂದೆ ಹೋಗುತ್ತಿದ್ದಾಳೆ.

ಹೊಸ ಪ್ರಪಂಚದ ಮೊದಲನೇ ಭೇಟಿಯಲ್ಲೇ ತನ್ನವಳು, ಛೆ ಛೆ! ಅವಳ ನಾಗರಿಕತೆಯೆಲ್ಲಿ? ನಾಗರಿಕತೆ ಹುಟ್ಟುವುದು ಸೌಂದರ್ಯದಿಂದಲ್ಲವೆ? ಸಹಜವಾದ ನಡೆ, ಸುಂದರವಾದ ರೂಪ, ಸುಂದರವಾದ ಉಡುಪು ಇಂಥ ಕಲ್ಪನೆಯಲ್ಲೇ ಸೌಂದರ್ಯ ಅಡಗಿದೆ. ಆದರೆ ತನ್ನವಳು! ವಿದ್ಯೆಯಿಲ್ಲ, ಸಂಸ್ಕೃತಿಯಿಲ್ಲ, ಹುಟ್ಟಿನಿಂದ ಪಡೆದುಕೊಂಡು ಬಂದಂತಹ ಸುಂದರವಾದ ನಡೆವಳಿಕೆಯಿಲ್ಲ. ಭಾವನೆಯ ಹುರಿ ಸಿಕ್ಕು ಸಿಕ್ಕಾಗಿ ಹೋಗಿದೆ. ಈ ದೃಷ್ಟಿಯಿಂದ ಅವನು ಎಂದೂ ಯೋಚನೆ ಮಾಡಿರಲಿಲ್ಲ. ತನ್ನ ನೌಕರಿ, - ತನ್ನ ಕಂಪೆನಿಯಲ್ಲಿ ಕೆಲಸ-, ತನ್ನ ಕಚೇರಿ, -ಅಲ್ಲಿ ತನ್ನ ಅಹಂಭಾವ ತುಂಬಿದ ಓಡಾಟ. ಇಲ್ಲಿ ಅವನಿಗೆ ಧೈರ್ಯದಿಂದ ಆತ್ಮವಿಶ್ವಾಸದಿಂದ ಹೆಜ್ಜೆಯೂರಲಾಗುತ್ತಿಲ್ಲ, - ಈ ನೆಲವನ್ನು ಕಾಲಿನಿಂದ ಮುಟ್ಟುವುದೂ ಅವನಿಗೆ

ಹೀನಾಯುವೆನಿಸುತ್ತದೆ, - ಬೇರೆ ಏನೂ ಯೋಚಿಸಲಾರ. ಯಂತ್ರದಂತೆ ಸಾಗುತ್ತಿದ್ದಾನೆ. ನೆನಪಿಗೆ ಬರುತ್ತಾನೆ - ಹರ್ಷ. ಮನೆಗೆ ಹೋಗಿ ಹರ್ಷನ ಕೈಲಿ ಚೆನ್ನಾಗಿ ಮೈ ತಿಕ್ಕಿಸಿಕೊಳ್ಳಬೇಕು. ಪರಿಸ್ಥಿತಿಯ ಅರಿವು ಅವನನ್ನು ಮೆಲ್ಲಗೆ ಸುತ್ತಿಕೊಳ್ಳುತ್ತದೆ.

ಎಚ್ಚೆತ್ತು ಗಮನವಿಟ್ಟು ನೋಡುತ್ತಾನೆ. ಮೇಜಿನ ಬಳಿ ಇನ್ನೂ ಮೂರು ಮಂದಿ ಕುಳಿತಿದ್ದಾರೆ, - ಒಬ್ಬ ಧಡೂತಿಯಾದ ಪ್ರೌಢ ಹೆಂಗಸು ಎದ್ದು ಬರುತ್ತಿದ್ದಾಳೆ.

"ಅಮ್ಮಾ"-ರಣಜಿತ ಬಾಬು ಹೇಳುತ್ತಾರೆ,- "ಮಿಸ್ಟರ್ ಅಂಡ್ ಮಿಸೆಸ್ ಬಲಿದತ್ತ ದಾಸ್".

"ನಮಸ್ಕಾರ - ನಮಸ್ಕಾರ - ನಮಸ್ಕಾರ - ನಮಸ್ಕಾರ ".

"ಇನ್ನು ಬೇರೆಯವರ ಪರಿಚಯ ಮಾಡಿಕೊಡುತ್ತಿದ್ದೇನೆ - ಮಿಸ್ಟರ್ ಸಕ್ಸೇನ್ ವಾಲಾ, ಹೆಸರು ವಾಸಿಯಾದ ಕಂಟ್ರಾಕ್ಟರ್, -ಇಲ್ಲಿ ಕಂಪನಿಯ ಕಾಗದ ಪತ್ರಗಳಲ್ಲಿ ಇವರ ಹೆಸರು ಕಂಡು ಬರುತ್ತಲೆ ಇರುತ್ತದೆ, - ಮಿಸ್ಟರ್ ತ್ರಿಪಾಠಿ, ಹೆಸರುವಾಸಿಯಾದ ಮುಖಂಡರು, ಮಿಸ್ಟರ್ ವ್ರತಾಚಾರಿ, ನಮ್ಮ ಕಂಪನಿಯ ಸಹಕಾರಿ ವಿಭಾಗದಲ್ಲಿ ದೊಡ್ಡ ಸಾಹೇಬರು, ಬಹುಶಃ ನೀವು ಇವರನ್ನು ಭೇಟಿಮಾಡಿರಲಾರಿರಿ. ಏಕೆಂದರೆ ಇವರು ಹೆಚ್ಚುಕಡಮೆ ಟೂರಿನಲ್ಲಿರುತ್ತಾರೆ, - ಮಿಸ್ಟರ್ ಬಿ.ಡಿ. ದಾಸ್, ಅಂದರೆ ಬಲಿದತ್ತ ದಾಸ್...."

ಪರಿಚಯ-ಪರಿಚಯ- ವಿನಾಕಾರಣ ಬನುವಿನ ಮನೆ ನೆನಪಿಗೆ ಬರುತ್ತದೆ, -ಅಲ್ಲೂ ಅಷ್ಟೆ, ಸುಮ್ಮನೆ ಇದೇ ರೀತಿಯ ಪರಿಚಯ, - ಪರಿಚಯ-

ಆದರೆ ಅಲ್ಲಿ ಸಂಟೂದಾನ ಮಾತುಗಳ ಹಿಂದೆ ಸ್ವಲ್ಪವಾದರೂ ಹುರುಳಿರುತ್ತಿತ್ತು, -ಪರಿಚಯ ಆದ ಮೇಲೆ ಆ ಕ್ಷಣವೇ ಎಲ್ಲ ಗಪ್‌ಚಿಪ್, ಯಾರು ಯಾರಿಗೂ ಗೊತ್ತಿಲ್ಲ.

ಸಕ್ಸೇನ್‌ವಾಲಾ ಸರೋಜಿನಿಯ ಕಡೆಗೆ ಮುಖಮಾಡಿ ಕುಳಿತರು. ಮಿಸ್ಟರ್ ವ್ರತಾಚಾರಿ ಗಂಭೀರವಾದ ಮುಖದೊಡನೆ ತಲೆಬಗ್ಗಿಸಿ ಕುಳಿತಿದ್ದಾರೆ. ಸುಮ್ಮನೆ ಎರಡು ಕಣ್ಣುಗಳೂ ಮೇಲೆದ್ದು ಪರಿಸ್ಥಿತಿಯನ್ನು ಒಮ್ಮೊಮ್ಮೆ ಗಮನಿಸುತ್ತಿವೆ ಅಷ್ಟೆ. ಮಿಸ್ಟರ್ ತ್ರಿಪಾಠಿ ನಗು ನಗುತ್ತಾ ತಮ್ಮ ಪಾಲಿನ ಕೆಲಸವೇನೂ ಎಂಬಂತೆ ಬಲಿದತ್ತನ ಜೊತೆ ಮಾತನಾಡಲು ಶುರುಮಾಡಿದರು. ಅವರ ಕಣ್ಣುಗಳು ಆಗಾಗ್ಗೆ ಬೇರೆಯವರ ಕಡೆಗೆ ತಿರುಗುತ್ತಿವೆ.

ನಮಸ್ಕಾರ ಮತ್ತು ಪರಿಚಯ ಇವೆರಡರ ಬಿಸಿ ಬಾಣಗಳ ಹೊಡೆತದಿಂದ ಕಮರಿದಂತಾದ ಸರೋಜಿನಿ ಸೆರಗಿನಿಂದ ಬಾಯಿ ಮುಚ್ಚಿಕೊಂಡು ಕುಳಿತಿದ್ದಳು. ಬಿಂದು ಅವಳೊಡನೆ ಮಾತನಾಡುವ ಪ್ರಯತ್ನ ನಡೆಸುತ್ತಿದ್ದಾಳೆ. ಬೆವರುತ್ತಿದ್ದ ಸರೋಜಿನಿ ಮಧ್ಯೆ ಮಧ್ಯೆ ಒಂದೊಂದು ಮಾತಾಡುತ್ತಾಳೆ. ಬಲಿದತ್ತ ಜೋರಾಗಿ ಉಸಿರಾಡುತ್ತಿದ್ದಾನೆ, ಏನೇನು ಮಾತನಾಡುತ್ತಿದ್ದಾನೊ ಅವನಿಗೇ ಗೊತ್ತಿಲ್ಲ. ಪೆದ್ದು ಪೆದ್ದಾಗಿ ಮಾತಾಡುತ್ತಿದ್ದೇನೆ ಎಂಬುದಷ್ಟು ಚೆನ್ನಾಗಿ ಗೊತ್ತಾಗುತ್ತಿದೆ. ಏನೋ ಯೋಚಿಸುತ್ತಾನೆ. ಆದರೆ ಅದಕ್ಕೆ ತೀರ ವಿರುದ್ಧವಾಗಿ ಮಾತಾಡಿರುತ್ತಾನೆ. ಬಾಯಿಂದ ಯಾವುದಕ್ಕೋ ಏನೋ ಹೊರಡುತ್ತದೆ. ಎಲ್ಲರೂ ನಗುತ್ತಾರೆ, ಅವನೂ ನಕ್ಕುಬಿಡುತ್ತಾನೆ.

ಅಲ್ಲೇ ಶುರುವಾಯಿತು. ಸರೋಜಿನಿ ಯೋಚಿಸುತ್ತಾಳೆ - ಅದೆಷ್ಟು ಹುಚ್ಚು ರಾತ್ರಿಗಳು.

ನೆನಪಿನಲ್ಲಿ ಆ ರಾತ್ರಿ ಮಿಂಚಿನಂತೆ ಹೊಳೆಯುತ್ತದೆ - ಮನಸ್ಸಿನ ಒಳಗೇ ಅಪನಂಬಿಕೆ ಮೂಡಿಬರುತ್ತದೆ - ಅವಳ ಬಳಿ ಎಷ್ಟೊಂದಿತ್ತು - ಆದರೆ -

ಬಹುಶಃ ಮನುಷ್ಯನಿಗೆ ತನ್ನ ಗುರುತೇ ಹತ್ತುವುದಿಲ್ಲ ಅಂತ ಕಾಣುತ್ತದೆ.-ಅಲ್ಲಿಯವರೆಗೆ -ಅಂದರೆ ಬೇರೆಯವರ ಬಾಯಲ್ಲಿ ತಾನೇನು ಅಂತ ಕೇಳಿಸಿಕೊಳ್ಳುವುದಿಲ್ಲವೊ ಅಲ್ಲಿಯವರೆಗೆ. ಬೇರೆಯವರ ಬಾಯಲ್ಲಿ ಬರುವ ಹೊಗಳಿಕೆಯ ಮಾತುಗಳು ಸಿಹಿಯಾಗಿರುತ್ತವೆ- ನಿಜವಾಗಿಯೂ ಅದೆಷ್ಟು ಸಿಹಿ- ಹೊಗಳಿಕೆ ಮಾತೊಂದನ್ನು ಬಿಟ್ಟರೆ ಉಳಿದ ಯಾವುದೇ ವಿಷಯವನ್ನು ಪದೇ ಪದೇ ಕೇಳುತ್ತಿದ್ದರೆ ಬೇಸರ ಮೂಡುವುದಿಲ್ಲವೆ.

ಸರೋಜಿನಿ ತಾನು ಅಪನಂಬಿಕೆಯಲ್ಲೇ ಆಲೋಚಿಸುವುದನ್ನು ಕಲಿತಿದ್ದೇನೆ ಅಂತ ಯೋಚಿಸುತ್ತಾಳೆ. ಹಾಗಾಗಿಯೇ ಅವಳು ತನ್ನಲ್ಲಿ ಎಷ್ಟೊಂದು ಬುದ್ಧಿ, ಎಷ್ಟೊಂದು ಕೈಚಳಕ ಮತ್ತು ಧೈರ್ಯ ಇದೆ ಎಂಬುದನ್ನು ನಿಧಾನವಾಗಿ ಕಂಡುಕೊಂಡಿದ್ದಾಳೆ.

-ಹಾಗೆಯೆ ಅದೆಂತೆಂಥ ಅಭಿರುಚಿ, ವಿಚಾರಧಾರೆ, ನಂಬಿಕೆ, ಜ್ಞಾನ, ಪ್ರವೃತ್ತಿಗಳು -ಅದೆಷ್ಟೊಂದನ್ನು ಕುರಿತು ಅವಳು ತಿಳಿದುಕೊಂಡಿದ್ದಾಳೆ -

ಸೊಂಟದ ಬಲಭಾಗಕ್ಕೆ ಸೆರಗಿನ ತುದಿ ಸಿಕ್ಕಿಸಿ ಎರಡು ತೋಳುಗಳೂ ಕಾಣುವಂತೆ ಕುಪ್ಪುಸ ಹಾಕಿಕೊಳ್ಳುವುದರಿಂದ ಸೊಬಗು ಹೆಚ್ಚುತ್ತದೆಂದು ಅವಳಿಗೆ ಮೊದಲಿನಿಂದ ಗೊತ್ತಿರಲಿಲ್ಲ-ಅಲಂಕಾರ ಮಾಡಿಕೊಂಡರೆ ಒಪ್ಪುತ್ತದೆ. ಉಗುರುಗಳಿಗೆ ಪಾಲಿಶ್ ಹಚ್ಚಿದರೆ ಪ್ರಾಣಿಗಳ ಪಂಜಾಗಳಂತೆ ಕಾಣುತ್ತದೆ-ಈ ರೀತಿಯಾಗಿಯೇ ಅನೇಕ ವಿಚಾರಗಳು. ಹೊಸದಾಗಿ ಸಿಕ್ಕಿ ಪರಿಚಯವಾದಂಥ ಹೆಂಗಸರಿಗೆ ಅವಳು ಇಂಥ ಬೋಧನೆಗಳನ್ನು ಮಾಡುತ್ತಿರುತ್ತಾಳೆ; ವ್ಯವಹಾರದಿಂದ ವಿಚಾರದವರೆಗೆ - ಸಣ್ಣ ಮಾತಿನಿಂದ ದೊಡ್ಡ ಮಾತಿನವರೆಗೆ - ಒಂದು ಸಣ್ಣ ವ್ಯತ್ಯಾಸ; ನಾಗರಿಕ ಮತ್ತು ಅನಾಗರಿಕ ಇವೆರಡರ ನಡುವೆ ಇರುವ ಸರಳವಾದ ವ್ಯತ್ಯಾಸ. ಉಡುಗೆ ತೊಡುಗೆಗಳಲ್ಲಿ ನಡೆನುಡಿಗಳಲ್ಲಿ ನಾಗರಿಕರದೇ ಆದ ವಿಶಿಷ್ಟ ರೀತಿಗಳಿವೆ. ಅನೇಕ ರೀತಿಯಲ್ಲಿ ಇವುಗಳಿಂದ ಪ್ರಯೋಜನ ಉಂಟಾಗಿರುವುದರಿಂದ ಈ ನಡವಳಿಕೆಗಳು ಅಗತ್ಯವೆಂದು ನಿಶ್ಚಯಿಸಲಾಗಿದೆ. - ಉದಾಹರಣೆಗೆ ಚಪ್ಪಲಿ - ಚಪ್ಪಲಿ ಹಾಕಿಕೊಳ್ಳದಿದ್ದರೆ ಕಾಲಿಗೆ ನೋವಾಗುತ್ತದೆ; ಇದರಲ್ಲಿ ಅನುಮಾನವೇನಿದೆ ? ನಮ್ಮನ್ನು ನಾವು ಖುಷಿಯಾಗಿಟ್ಟುಕೊಳ್ಳದಿದ್ದರೆ ಪ್ರಪಂಚಕ್ಕೆ ಖುಷಿ ನೀಡಲು ಆಗುವುದಿಲ್ಲ. ಆದ್ದರಿಂದ ಯಾರು ಹೊಟ್ಟೆ ಬಟ್ಟೆ ಕಟ್ಟಿ ಒಣಗುತ್ತಾರೂ ಅವರೇ ಕಡೆಯಲ್ಲಿ ಟೋಪಿ ಬೀಳುತ್ತಾರೆ. ಪ್ರಪಂಚದಲ್ಲಿ ಯಾರು ಯಾವ ಸ್ಥಿತಿಯಲ್ಲಿದ್ದಾರೂ ಅದು ಅವರ ದುಡಿಮೆ ಮತ್ತು ಯೋಗ್ಯತೆಯ ಫಲ ಅಂತ ಅವಳು ಯೋಚಿಸುತ್ತಾಳೆ. ಮನುಷ್ಯ ತನ್ನ ಹಣೆಯ ಬರಹವನ್ನು ತಾನೇ ಬರೆದುಕೊಳ್ಳುತ್ತಾನೆ. ಹಾಗಾಗುವುದು ಅಥವಾ ಮುಂದೆ ಬರುವುದು ಅವನನ್ನೇ ಅವಲಂಬಿಸಿರುತ್ತದೆ. ಬಲಿದತ್ತ ಇವತ್ತು ಇಂಥ ಸ್ಥಿತಿಯಲ್ಲಿದ್ದಾನೆ. ಏಕೆಂದರೆ ಆ ಸ್ಥಿತಿಗೆ ಅವನೇ ಅಧಿಕಾರಿ. ಕೂಲಿ ಮಾಡುವವನೂ ತನ್ನ ಆ ಕೆಲಸಕ್ಕೆ ತಾನೇ ಹೊಣೆ. ಪ್ರಪಂಚದಲ್ಲಿ ದೊಡ್ಡವರು ಸಣ್ಣವರು, ಮೇಲು ಕೀಳು, ಬಡವರು -ಬಲ್ಲಿದರು ಎಂಬ ಈ ವ್ಯತ್ಯಾಸಗಳೆಲ್ಲ ಒಂದು ರೀತಿಯ

ನಿಯಮಗಳಾಗಿ ಹೋಗಿವೆ. ಈ ನಿಯಮಗಳನ್ನು ದಾಟಬರುವುದು ಸುಲಭವಲ್ಲ. ಮೌಲ್ಯಗಳು ಸಹ ಪರಿಶ್ರಮದಿಂದ ಕೈಗೆಟಕುತ್ತವೆ ಎಂದು ಸರೋಜಿನಿ ಯೋಚಿಸುತ್ತಾಳೆ. ಆದರೆ ಅವುಗಳನ್ನು ಕಾರ್ಯರೂಪಕ್ಕೆ ತರಬೇಕಾದರೆ ತನ್ನದೇ ಆದ ವಿಧಾನಗಳಿವೆ. ಈ ನಂಬಿಕೆಯಿಂದಲೇ ಬೇರೆಯವರ ದುಃಖದಲ್ಲಿ ಸೇರಿ ತಾನು ದುಃಖಪಡುವುದು ಇಲ್ಲವೆ ಸಹಾನುಭೂತಿ ವ್ಯಕ್ತಪಡಿಸುವುದೆಂದರೆ ಅವಳಿಗೆ ಅಸಂಬದ್ಧವಾಗಿ ಕಾಣುತ್ತದೆ. ಯಾರ ಬಳಿ ಏನಿದೆಯೊ ಅದು ಅವನ ದುಡಿಮೆಯು, ಇಲ್ಲವೆ ದುಡಿಯದೆ ಇರುವುದರ ಫಲ. ಹಾಗಾಗಿ ಅಂಥವರ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸುವುದು ಮೂರ್ಖತನವಲ್ಲದೆ ಮತ್ತೇನೂ ಅಲ್ಲ. ಅದಕ್ಕೆ ಬದಲು ಅಷ್ಟು ಸಮಯವಾದರೂ ಹಾಳಾಗದೆ ಉಳಿಯುತ್ತದೆ.

ಈ ಎಲ್ಲವಿಚಾರ ಧಾರೆಗಳನ್ನು ಅವಳು ಹೊಸದಾಗಿ ಗಳಿಸಿಕೊಂಡಿದ್ದಾಳೆ, -ಇವುಗಳ ಜೊತೆಗೆ ಅವಳ ಅರಿವಿನ ಆಳವೂ ಹೆಚ್ಚಿದೆ. ಸರೋಜಿನಿ ಈಗ ಅಚ್ಚಾಗಿರುವ ವಿಷಯಗಳನ್ನು ಓದತೊಡಗಿದ್ದಾಳೆ. ಓದುಬರಹ ಕಲಿತವರು ಹೇಗೆ ಓದುತ್ತಾರೊ ತಾನೂ ಹಾಗೆಯೆ ಓದುತ್ತೇನೆ ಅಂತ ಅವಳು ಯೋಚಿಸುತ್ತಾಳೆ. ಮೊದಲು ವರ್ತಮಾನ ಪತ್ರಿಕೆ, ಅದರಲ್ಲಿ ದೇಶವಿದೇಶಗಳ ಸಮಾಚಾರವೆಲ್ಲ ಅಚ್ಚಾಗಿರುತ್ತದೆ. ಪತ್ರಿಕೆಯ ಸಮಾಚಾರಗಳನ್ನು ಕುರಿತು ಚರ್ಚೆ ನಡೆಸುವುದಕ್ಕಾಗಿ ದೇಶದ ಆಗುಹೋಗುಗಳ ಬಗ್ಗೆ ತಿಳಿವಳಿಕೆ ಅಗತ್ಯ ಅಂತ ಯಾರಾದರೂ ಅಂದರೆ ಸರೋಜಿನಿ ಮಿಲಿಯ ಮಾತನ್ನು ಅನುಸರಿಸಿ ಸರಾಗವಾಗಿ ಹೇಳುತ್ತಾಳೆ - "ನೀವು ಹೂಂಗುಟ್ಟಿದರೆ ನಾನು ಹಾಗೆಯೆ ಹೂಂಗುಟ್ಟಲಾಗುವುದಿಲ್ಲ. ವಾಲ್‌ಸ್ಟ್ರೀಟ್ ಹಾಳಾಗುತ್ತಿದೆ, ಅಯ್ಯೋ ಹಾಳಾಗುತ್ತಿದೆ." ಬಹಳ ತಮಾಷೆಯ ಸಮಾಚಾರ ಅಂದರೆ 'ವಾಲ್‌ಸ್ಟ್ರೀಟ್' ಎಂಬ ಮಾತನ್ನು ಒರಿಸ್ಸಾದವರು ತಡಬಡಾಯಿಸಿ ಮಾತಾಡುತ್ತಾರೆ ಅಂತ ಅನಿಸುತ್ತದೆ. ಅದು ಹಾಳಾಗುತ್ತದೆ ಅಂತ ಪತ್ರಿಕೆಗಳಲ್ಲಿ ಬಂದ ಮೇಲೆ ಅದು, ಹಾಳಾಗಲಿಕ್ಕೇ ಲಾಯಕ್ಕಾಗಿರೋದು. ಆದ್ದರಿಂದಲೆ ಕೈಯಲ್ಲಿ ಚಹಾ ಬಟ್ಟಲು ಹಿಡಿದು, ಕಾಲಿನ ಮೇಲೆ ಕಾಲು ಹಾಕಿಕೊಂಡು ಮಜವಾಗಿ ಅದರ ವಿಮರ್ಶೆಮಾಡಬಹುದು. ವಾಲ್‌ಸ್ಟ್ರೀಟ್ ಏನೆಂಬುದು ನಿಮಗೆ ಗೊತ್ತೆ ? ಪತ್ರಿಕೆ ನೋಡಿ, ಅದು ಹಾಳಾಗುತ್ತಿದೆ, ಛೆ ಛೆ; ಎಂಥ ದುರಾದೃಷ್ಟ ! ಅದರಿಂದ ಅನೇಕ ಮಂದಿಗೆ ತೊಂದರೆ ಉಂಟಾಗುತ್ತದೆಂದು ಪತ್ರಿಕೆಗಳು ಬರೆದಿವೆ. ಅದು ಹೇಗೆ ಆಗಲ್ಲ ಹೇಳಿ ? ವಾಲ್‌ಸ್ಟ್ರೀಟ್ ಅಂದರೇನು ಸಾಮಾನ್ಯ ವಿಚಾರವೆ ? ಅದು ಮೇಲೆ ಎಷ್ಟಿದೆಯೊ ಕೆಳಗೂ ಅಷ್ಟೇ ಇದೆ ಅಂತ ಹೇಳುತ್ತಾರೆ. ಎಷ್ಟು ಕೆಟ್ಟ ಕಾಲದಲ್ಲಿ ನಾವು ಬದುಕುತ್ತಿದ್ದೇವೆ ? - ಬೆಳಗ್ಗೆ ಎದ್ದು ಪೇಪರು ನೋಡಿದರೆ ಸಾಕು, ಏನಾದರೊಂದು ಖಂಡಿತವಾಗಿ ಹಾಳಾಗುತ್ತಿದೆ ಇಲ್ಲ ಹಾಳಾಗಿ ಹೋಗಿದೆ. ಎಲ್ಲೆಲ್ಲೂ ವಿನಾಶ, ಎಷ್ಟೋ ಜನ ಸಾಯುತ್ತಿದ್ದಾರೆ - ಈ ಮನುಷ್ಯ ಜಾತಿಗೆ ಎಂತಹ ಆಪತ್ತು ಬಂದೊದಗಿದೆ.

ಅಚ್ಚಾದ ವಿಚಾರ, ಅಂದಮೇಲೆ ಮಾತಾಡಲು ಬೇಕಾದಷ್ಟು ಸಾಮಗ್ರಿ ಒದಗಿಸುತ್ತದೆ. ಯೋಚನೆ ಮಾಡಿ ಅರ್ಥಮಾಡಿಕೊಳ್ಳುವುದು ಸುಲಭವಲ್ಲದೆ ಇರಬಹುದು. ಆದರೆ

ಕಿವಿ ಮೇಲೆ ಬಿದ್ದಿರುವುದನ್ನು ಮತ್ತೆ ಮತ್ತೆ ಪುನರಾವರ್ತಿಸಲು ಎಷ್ಟು ಹೊತ್ತು ಹಿಡಿಯುತ್ತದೆ ? ಸರೋಜಿನಿಗೆ ನಂಬಿಕೆಯಿದೆ, - ಇದು ಘೋಷಣೆಗಳ ಯುಗ ಅಂತ ಅವಳಿಗೆ ಗೊತ್ತು. ಜನ ಒಂದೆಡೆ ಸೇರಿ ಘೋಷಣೆಗಳನ್ನು ಕೂಗುತ್ತಾ ರಸ್ತೆಯಲ್ಲಿ ಹೊರಡುತ್ತಾರೆ ಅಂತ ಅವಳು ಬಲ್ಲಳು. ಎಲ್ಲ ಒಟ್ಟಿಗೆ ಸೇರಿ ಒಂದೇ ಮಾತನ್ನು ಘೋಷಣೆ ಮಾಡುತ್ತಾ ಹೋಗುವುದರಲ್ಲೂ ಮಜಾ ಇದೆ. ಅರ್ಥಮಾಡಿಕೊಂಡಾಗ ಆ ಮಜವೇ ಕಿರಿಕಿರಿ ಅನಿಸುತ್ತದೆ. ಹಾಗಾಗಿ ಎಲ್ಲವನ್ನೂ ಅರ್ಥಮಾಡಿಕೊಳ್ಳುವ ಅಗತ್ಯ ಇಲ್ಲ. ಸುಮ್ಮನೆ ಅರಚಬೇಕು, ಬಾಯಿ ಬಿಟ್ಟು ಬೊಮ್ಮಡ ಬಜಾಯಿಸಬೇಕು, ಇನ್ನೊಬ್ಬರ ಮೇಲೆ ಕೆಸರು ಎರಚಬೇಕು; ಅದನ್ನೇ ವ್ಯಕ್ತಿತ್ವ ಅಂತ ಕರೆಯೋದು. ಯಾರು ಕೆಲಸಕ್ಕೆ ಬಾರದವರೋ ಅವರ ಬಳಿ ಯಾವ ಸ್ಲೋಗನ್ನೂ ಇರುವುದಿಲ್ಲ. ಅವರು ಯಾವ ಪಾರ್ಟಿಗೂ ಸೇರಿರುವುದಿಲ್ಲ. ಹಾಗಿರುವುದು ತುಂಬ ಹೇಯವಾದುದು. ಯಾರು ಮನಸ್ಸಿಗೆ ಬಂದಂತೆ ಪ್ರಶ್ನೆ ಮಾಡುತ್ತಾರೊ, ಅಂಥವರು ತಪ್ಪುಮಾಡುತ್ತಾರೆ, ಉತ್ತರ ನೀಡುವ ಹೊಣೆಗಾರಿಕೆ ಯಿರುವುದಿಲ್ಲ. ಹೊಣೆಗಾರಿಕೆಯಿಲ್ಲದಿರುವುದು ಸ್ವಂತಿಕೆಯ ಲಕ್ಷಣ ಅಂತ ಹೇಳುತ್ತಾರೆ! ಹಾಗಾದರೆ ? ಸರೋಜಿನಿ ಈಗ ಎಗ್ಗಳವಿಲ್ಲದೇ ಇನ್ನೊಬ್ಬರ ಮೇಲೆ ತನ್ನ ಹೊಸ ಜ್ಞಾನದ ಬುಗ್ಗೆ ಹಾರಿಸಬಲ್ಲಳು, ಆದರೆ ಸರಿಯಾಗಿ ತಿಳಿಯ ಹೇಳುವ ಜವಾಬ್ದಾರಿ ಹೊರುವುದಿಲ್ಲ.

ಇದನ್ನು ಬಿಟ್ಟರೆ ಒಬ್ಬರ ಸ್ವಾರ್ಥದಿಂದ ಮತ್ತೊಬ್ಬರಿಗೆ ಏನು ಸಿಗುತ್ತೆ ? ಅರ್ಥ ಅನ್ನುವುದು ಅನರ್ಥದ ಮೂಲ. ಇವತ್ತಿನ ಸಂಸ್ಕೃತಿ ನಾಗರಿಕತೆಗಳ ಪರಿಚಯ ಅವಳಿಗೆ ಆಗಿರುವುದರಿಂದ ಒಂದೇ ಮಾತಿಗೆ ಹತ್ತು ಬೇರೆ ಬೇರೆ ಅರ್ಥ ಇರುವುದನ್ನು ಅವಳು ಗಮನಿಸುತ್ತಾಳೆ. ಯಾರು ಹೊಸ ಅರ್ಥ ಹುಡುಕಲಾರ ಅವನು ಯಾವ ಲೆಕ್ಕಕ್ಕೂ ಇಲ್ಲ ಬಿಡಿ. ಮಾತು ಸುಲಭವಾಗಿ ಅರ್ಥವಾಗುವುದಾದರೆ ಅದು ಮಾಮೂಲಿನ ಮಾತು ಅಂತ ಅನಿಸಿಕೊಳ್ಳುತ್ತದೆ, ಸುಮ್ಮನೆ ಕೆಲಸಕ್ಕೆ ಬಾರದ್ದು. ಅರ್ಥವಾಗದ ಮಾತುಗಳನ್ನಾಡುವುದೆ ಧೀರನ ಲಕ್ಷಣ - ಅದನ್ನೇ ಜ್ಞಾನ ಅಂತ ಕರೆಯೋದು, ಛಾಯಾವಾದ, ಮಿಸ್ಟಿಫಿಸ್ಟ್, ಇನ್ನೂ ಏನೇನೊ ಅಂತಾರೆ. ಹೆಣ್ಣಿನ ಸ್ವಭಾವ ಅವಳಿಗೇ ಒಂದು ಸಮಸ್ಯೆ. ಅರ್ಥವಾಗದ ರಹಸ್ಯವಾದ ಅಂದರೆ ಅವಳಿಗೆ ಇಷ್ಟ. ಹಾಗಾಗಿ ಅಚ್ಚರಿ ಮೂಡಿಸುವಂತಹ ಮಾತುಗಳನ್ನಾಡುವುದು ಹೆಣ್ಣಿನ ಹುಟ್ಟುಗುಣ. ಅಲ್ಲಿ ಇಲ್ಲಿ ಅಚ್ಚಾದ ಪುಸ್ತಕಗಳನ್ನು ನೋಡಿ ಅಲ್ಲಿಯ ಮಾತುಗಳನ್ನು ಉರುಹಚ್ಚಿ ತಿರುಗುಮುರುಗಾಗಿ ಹೇಳುತ್ತಿದ್ದರೆ ಮಾತಿನ ಗೌರವ ಹೆಚ್ಚುತ್ತದೆ. ಪೇಪರುಗಳಿಂದ ಅವಳಿಗೆ ನೆರವು ದೊರೆತಿದೆ. ಹಾಗಾಗಿಯೆ ಅನೇಕ ಪುಸ್ತಕಗಳು, ಮನಶ್ಶಾಸ್ತ್ರ, ಆರ್ಯದರ್ಶನ, ಸಾಹಿತ್ಯ ದರ್ಪಣ ಇವನ್ನೆಲ್ಲ ಓದಿ ತಲೆಕೆಡಿಸಿಕೊಳ್ಳುವ ಪ್ರಮೇಯವಿಲ್ಲ. ಅದರಲ್ಲೂ ಒಂದೆರಡು ಸಾಲುಗಳು ನೆನಪಿದ್ದರೂ ಸಾಕು, ಓದುಬರಹ ಕಲಿತವರ ನಡುವೆ ಎಲ್ಲಿ ಬೇಕಾದರೂ ಒಂದು ಲೋಟ ಚಹಾ ಹೀರುತ್ತಾ ಸಂಜೆ ಕಳೆಯುವುದು ಸುಲಭವಾಗುತ್ತದೆ.

ಇದೇ ಅಲ್ಲದೆ ಅವಳು ತಾನೇ ಸ್ವತಃ ಪ್ರಶ್ನೆ ಮಾಡಬಯಸುತ್ತಾಳೆ. ತನ್ನ ಪ್ರಶ್ನೆಗಳಿಗೆ ಉತ್ತರ ಕೊಡಲು ಗಂಡಸರ ಗುಂಪೇ ಸುತ್ತಲೂ ನೆರೆಯುತ್ತದೆಂದು ಸ್ವಲ್ಪದರಲ್ಲಿಯೆ

ಅವಳು ಅರ್ಥ ಮಾಡಿಕೊಂಡಿದ್ದಾಳೆ. ಸಣ್ಣ ಪ್ರಶ್ನೆ- "ಅದು ಸರಿ, ಇಂದಿನ ಆಹಾರ ಸಮಸ್ಯೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು ? 'ಅಥವಾ' ಸಮಕಾಲೀನ ಸಾಹಿತ್ಯದ ವಿಚಾರವಾಗಿ ನೀವೇನನ್ನುತ್ತೀರಿ ?' ಅದೂ ಬೇಡ ಅಂದರೆ 'ಇನ್ನು ಐವತ್ತು ವರ್ಷಗಳಲ್ಲಿ ಸಿನೆಮಾದ ಭವಿಷ್ಯ ಏನಾಗುತ್ತದೆ ?' ಮುಂತಾದ ಪ್ರಶ್ನೆಗಳನ್ನು ಕೇಳುವುದು ತುಂಬ ಸುಲಭ.

ಯಾರಿಗಾದರೂ ತಾಕತ್ತಿದ್ದರೆ - ಉತ್ತರ ನೀಡುತ್ತಾರೆ. ಹಾಗೆ ಅವರ ಮಾತಿನಿಂದಲೆ ಅನೇಕ ವಿಚಾರಗಳನ್ನು ಕಲಿಯಲು ಸಾಧ್ಯ.

ನಾಲ್ಕೈದು ಜನ ಒಂದೆಡೆ ಸೇರಿದ್ದಾರೆ, ಯಾರಾದರೂ ಒಬ್ಬರು ಏನಾದರೂ ಮಾತೆತ್ತಿದರೆ ಸಾಕು ಅದರ ಮೇಲೆ ಚರ್ಚೆ ಶುರುವಾಗುತ್ತದೆ. ಅದನ್ನು ಕೇಳುವುದಕ್ಕೆ, ಮರೆಯಲ್ಲಿ ಮುಗುಳ್ನಗೋದಕ್ಕೆ ಸಾಕಷ್ಟು ಅವಕಾಶ ದೊರೆಯುತ್ತದೆ. ಅದರಲ್ಲೂ ಆ ಜನ ತಿಳಿದವರಲ್ಲ, ಪೆದ್ದು ಪೆದ್ದಾಗಿ ಮಾತನಾಡುತ್ತಿದ್ದಾರೆ ಅನ್ನೊ ವಿಷಯ ಸ್ವಲ್ಪ ಸೂಕ್ಷ್ಮವಾಗಿ ನೋಡುವುದರಿಂದ ಗೊತ್ತಾದಾಗಲಂತೂ ಇನ್ನೂ ಮಜವಾಗಿರುತ್ತೆ. ಆದರೂ ಬೇರೆಯವರ ಎದುರಿಗೆ ತಮ್ಮ ಸ್ಲೋಗನ್ ಇಟ್ಟುಕೊಂಡು ಅರಚೋದಕ್ಕೆ ಎಲ್ಲರೂ ತವಕಪಡುತ್ತಿದ್ದಾರೆ, ಹುಚ್ಚೆದ್ದವರಂತೆ ಕುಣಿಯುತ್ತಿರುತ್ತಾರೆ.

ಅದಾದ ಮೇಲೆ ಅವಳ ಸ್ವಂತ ವಿಚಾರ. ಆ ಬಗ್ಗೆ ಅವಳು ತಾನೇ ಯೋಚನೆ ಮಾಡುವುದಿಲ್ಲ. ಆದರೆ ಅವಳಿಗೆ ಬದುಕಿನ ಬಗ್ಗೆ ಕೃತಜ್ಞತಾ ಭಾವನೆಯಿದೆ, ಏನು ಸಿಕ್ಕಿದೆಯೊ ಅದರ ಬಗ್ಗೆ ತೃಪ್ತಿಯಿಂದಿದ್ದಾಳೆ. ಸಂತೋಷವಾಗಿದ್ದಾಳೆ. ಏನು ಸಿಗುತ್ತದೊ ಅದನ್ನು ತನ್ನದಾಗಿಸಿಕೊಂಡು ಅನಂತರ ಮರೆಯುವುದಕ್ಕೆ ಪ್ರಯತ್ನಮಾಡುತ್ತಾಳೆ. ಯಾರ ಮುಖದ ಮೇಲೆ ಪಾಪ ಅಚ್ಚೊತ್ತಿದೆಯೊ ಅವನೇ ಪಾಪಿ ಅಂತಲೂ, ಯಾರು ಕಳ್ಳತನವನ್ನು ಒಪ್ಪಿಕೊಳ್ಳುತ್ತಾನೊ ಅವನೇ ಕಳ್ಳ ಅಂತಲೂ, ಯಾರು ನಷ್ಟ ಉಂಟಾದಾಗ ಪಶ್ಚಾತ್ತಾಪಪಡುತ್ತಾನೊ ಅವನು ಸೋತವನೆಂದೂ ಅವಳು ತನ್ನ ತಿಳಿವಳಿಕೆಯಿಂದ ಬಲ್ಲಳು. ಹಾಗೆಯೆ ಯಾರು ಎಲ್ಲವನ್ನೂ ಮರೆಯುವುದಕ್ಕಾಗಿ ಒರೆಸಿಕೊಂಡು ಬಿಡುತ್ತಾರೊ, ಭಾರಿ ಭಾರಿ ಸಮಸ್ಯೆಗಳಿದ್ದಾಗಲೂ ಮಗುವಿನಂತೆ ನಗೆ ಅರಳಿಸಬಲ್ಲರೊ, ತಲೆಕೆಡಿಸಿಕೊಳ್ಳದೆ ಹಿಂದಿರುಗಿ ನೋಡದೆ ಇರುತ್ತಾರೊ ಅವರೇ ನಿತ್ಯ ಹಸುರಾಗಿ ಹರ್ಷ ಚಿತ್ತರೂ ಯಶಸ್ವಿಗಳೂ ಆಗಿರುತ್ತಾರೆಂಬುದನ್ನು ಸಹ ಅವಳು ಬಲ್ಲಳು.

ಆದ್ದರಿಂದಲೇ ಬಿಳಿಗಡ್ಡದ ಮರೆಯಲ್ಲಿ ಹೇಳಲಾರದಂಥ ಅನೇಕ ಮಾತುಗಳು ಅಡಗಿಕೊಂಡಿರುತ್ತವೆ. ಬಿಳಿ ಟೋಪಿಯ ಬುಡದಲ್ಲಿ ಮನಸ್ಸಿಗೆ ಬಂದಂತೆ ರಾಜಾರೋಷವಾಗಿ ಕಳ್ಳಸಂತೆ ವ್ಯಾಪಾರ ನಡೆಯುತ್ತಿರುತ್ತದೆ. ಹಾಗೆಯೆ ಅತ್ಯಂತ ಸಭ್ಯವೆನಿಸುವ ನಾಗರಿಕ ಉಡುಪುಗಳ ಮರೆಯಲ್ಲಿ ಭಯಂಕರವಾದ ಪ್ರಾಣಿ ಪ್ರವೃತ್ತಿಗಳು ಅಡಗಿಕೊಂಡಿರುತ್ತವೆ.

ಸರೋಜಿನಿ-

ಅವಳು ಬಂಧನದಲ್ಲಿಲ್ಲ, ಅವಳಿಗೆ ಮಕ್ಕಳು ಮರಿಯಿಲ್ಲ, ಅವಳು ನೋಡಬಲ್ಲಳು, ಯೋಚನೆ ಮಾಡಬಲ್ಲಳು.

ಆದರೆ ಅವಳಿಗೆ ಯಾವಾಗಿನಿಂದ ಗಂಡುಗಲಿತನ ಒದಗಿಬಂತು, ಈ ವಿಷಯ

ಯೋಚಿಸುತ್ತಲೆ ಬೆಚ್ಚುವಂತಾಗುತ್ತದೆ. ಕೆಲವೇ ದಿನಗಳ ಓದುಬರಹದಿಂದ ಅವಳು ಬದಲಾಯಿಸಿ ಹೋಗಿದ್ದಾಳೆಯ ? ಈಗ ಅವಳಿಗೆ ಅಸಮಾಧಾನ ವ್ಯಕ್ತಪಡಿಸುವುದು, ಅನುಮಾನ ತಳೆಯುವುದು ಬಂದುಬಿಟ್ಟಿದೆ. ಅವಳೇನೂ ಬದಲಾಯಿಸಿಲ್ಲ, ಕೆಲವು ಸಂದರ್ಭಗಳಲ್ಲಿ ಮಾತನ್ನು ಪುನರಾವರ್ತಿಸುವುದನ್ನು ಮಾತ್ರ ಕಲಿತಿದ್ದಾಳೆ ಅಂತ ಯಾರಾದರೂ ಅಂದರೆ ಅವಳು ಒಪ್ಪಿಕೊಳ್ಳುವುದಿಲ್ಲ. ತನ್ನ ಚೇತನದೊಂದಿಗೆ ಹಿಂದೆ ಹಿಂದೆ ಸರಿಯುತ್ತಾ ಅವಳು ತನ್ನನ್ನು ಮಂಗವಾಗಿಸಿಕೊಳ್ಳಲಾರಳು. ಆದರೂ ಅಚ್ಚರಿಯ ವಿಷಯವೆಂದರೆ ಅವಳು ತಾನು ಇನ್ನೂ ಹಳೆಯಕಾಲದವಳು. ಈಗ ಒಂದು ಹೊಸ ಪ್ರಪಂಚಕ್ಕೆ ಬಂದಿಳಿದಿದ್ದೇನೆ ಅಂತ ಯೋಚಿಸುತ್ತಾಳೆ.

ಅವಳ ಕಟ್ಟೆ ಒಡೆದುಹೋಯಿತು. ಒಂದು ಬಾರಿ ಒಡೆದರೆ ಸಾಕು, ಪ್ರವಾಹ ತನಗೆ ತಾನೇ ಮೇಲೇರುತ್ತಾ ನುಗ್ಗಿಬಂದು ಹೊರಟುಹೋಗುತ್ತದೆ.

ಅದೇ ರಣಜಿತಬಾಬುವಿನ ಮನೆಯಲ್ಲಿ ಆ ಮೊದಲರಾತ್ರಿಯಲ್ಲಿ. ಅದಾದಮೇಲೆ ಇನ್ನೂ ಅನೇಕ ಕಡೆಗಳಲ್ಲಿ, ಜನಗಳ ಗುಂಪಿನಲ್ಲಿ ಕುಳಿತುಕೊಳ್ಳಬೇಕೆಂದು ಅವಳ ಮನಸ್ಸಿಗೆ ಅನಿಸಿದೆ. ಮಾತಾಡುವ ಬಯಕೆ ಉಂಟಾಗಿದೆ, ಅಡ್ಡಾಡಲಿಕ್ಕೆ ಅಪರಿಚಿತರನ್ನು ಮುಖಾಮುಖಿ ಭೇಟಿಯಾಗುವುದಕ್ಕೆ ಮನಸ್ಸು ಬಯಸುತ್ತಿದೆ. ಈ ಪ್ರಪಂಚದಲ್ಲಿ ಬರೀ ಮನಸ್ಸಿನದೇ ಆಟ. ಯಾರಿಗೆ ತಾಕತ್ತಿದೆಯೊ ಅವರೇ ಸುಖ ಭೋಗಗಳನ್ನು ಅನುಭವಿಸುತ್ತಾ ಹೋಗುತ್ತಾರೆ. ಯಾರಿಗೆ ಕೈಲಿ ಹರಿಯುವುದಿಲ್ಲವೊ ಅವರು ಬೇರೆಯವರನ್ನು ತೆಗಳುತ್ತಾ ಸುತ್ತಾಡುತ್ತಿರುತ್ತಾರೆ ಅಂತ ಅವಳು ಯೋಚಿಸುತ್ತಾಳೆ.

ಸರೋಜಿನಿ ಈಗ ಹಳ್ಳಿ ಮುಕ್ಕಳಾಗಿಲ್ಲ. ಅವಳು ಬದಲಾಯಿಸಲೆಂದು ಬಲಿದತ್ತ ಬಯಸಿದ್ದ. ಆದರೆ ಅವಳು ಎಷ್ಟು ಬದಲಾಯಿಸಿದಳೆಂದರೆ ಬಲಿದತ್ತನಿಗೇ ಅವಳ ಜೊತೆ ಹೆಜ್ಜೆ ಮಿಲಾಯಿಸಲಾಗಲಿಲ್ಲ. ಸಪ್ಪೆಮೋರೆ ಹಾಕಿಕೊಂಡು ಖಿನ್ನನಾಗಿ ಯಾವಾಗಲಾದರೂ ಹೇಳೋಣವೆನಿಸುತ್ತೆ - "ಸರೋಜ, ಇವತ್ತೊಂದು ದಿನ ಹೋಗದಿದ್ದರೇನಂತೆ ?"

ಆಗ "ಸರಿ, ನಿಮ್ಮಿಷ್ಟ", ಅವಳು ಮುದುಡಿಕೊಳ್ಳುತ್ತಲೆ ಅವನು ಮತ್ತೆ ಹೇಳುತ್ತಾನೆ, "ಸರಿ, ಹೋಗಿ ಬಾ, ಅವರು ನಿನಗಾಗಿ ದಾರಿ ಕಾಯುತ್ತಿರಬಹುದು". ತನ್ನಷ್ಟಕ್ಕೆ ತಾನೆ ಹೆಮ್ಮೆ ಪಟ್ಟುಕೊಳ್ಳಲು ಹೋಗಿ ತಿಣುಕುತ್ತಾನೆ. ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಾ- "ಇದು ನಾನೇ ಮಾಡಿದ ಕೆಲಸವಲ್ಲವೆ- ನಾನೇ ಇದಕ್ಕೆ ಜವಾಬ್ದಾರ" ಅಂತ ಮನಸ್ಸಿನಲ್ಲೇ ಅದುಕೊಳ್ಳುತ್ತಾನೆ. ಮಡದಿ ಆಧುನಿಕ ಕಾಲದ ಅಭಿರುಚಿಗಳನ್ನು ಮೈಗೂಡಿಸಿಕೊಂಡಿದ್ದಾಳೆ ಅನಿಸುತ್ತೆ. ಕೇವಲ ಲಿಪ್‌ಸ್ಟಿಕ್, ಪಾಲಿಶ್, ಕ್ರೀಮ್, ಪೌಡರ್, ಕುಂಕುಮಗಳು, ಹೈಹೀಲ್ಡ್ ಷೂಗಳಷ್ಟೆ ಅಲ್ಲ, ಸರೋಜಿನಿ ಆಧುನಿಕರ ಅಭಿರುಚಿಗಳನ್ನ ಅಲ್ಲದೆ ಆಧುನಿಕ ಪ್ರಪಂಚದಲ್ಲಿ ಹೇಗಿರಬೇಕೆಂದೂ ತಿಳಿದುಕೊಂಡಿದ್ದಾಳೆ. ಬಹಳ ಬೇಗ ಅವಳು ಸ್ವಲ್ಪ ಸ್ವಲ್ಪ ಇಂಗ್ಲಿಷನ್ನೂ ಮಾತನಾಡಲು ಕಲಿತುಕೊಂಡಿದ್ದಾಳೆ. ಅದೇ ಅವಳ ಆಸ್ತಿ.

ಬಲಿದತ್ತ ದಾಸನ ಬಳಿಗೆ ಬರುವ ಕರೆಯೋಲೆಗಳಲ್ಲಿ ಇರುತ್ತದೆ - ಮಿಸ್ಟರ್ ಅಂಡ್ ಮಿಸೆಸ್ ದಾಸ್. ಮುಂದುವರಿದ ಸಮಾಜದ ಬಾಯಲ್ಲಿ ಅವನು ಮಡದಿಯ ಬಗ್ಗೆ

ಹೊಗಳಿಕೆಯ ಮಾತುಗಳನ್ನು ಕೇಳುತ್ತಾನೆ.

ತಾನೇ ಮುಂದೆ ಹೆಜ್ಜೆಯಿಡುತ್ತಾನೆ.

ಹೊಟ್ಟೆ ಪಾಡಿನ ಹೋರಾಟದಲ್ಲಿ ಅವನು ಅಗ್ರಪಂಕ್ತಿಯಲ್ಲಿದ್ದಾನೆ. ಅವನು ಹೆಸರು ಮತ್ತು ಸಂಪಾದನೆ ಸಾಕಷ್ಟು ಮಾಡಿದ್ದಾನೆ. ಉದ್ಯೋಗದಲ್ಲಿ ಒಂದರ ಮೇಲೊಂದರಂತೆ ಬಡ್ತಿ ಸಿಗುತ್ತಿದೆ.

ಆದರೂ ಅವನು ಆಹಾ! ಈ ಬಡ್ತಿಗಳೆಲ್ಲ ಒಟ್ಟಿಗೇ ದೊರಕಿದ್ದರೆ ಅಂತ ಯೋಚನೆ ಮಾಡುತ್ತಾನೆ. ಅವನ ಕಟ್ಟೆಯೂ ಒಡೆದಿದೆ. ಮನಸ್ಸಿನಲ್ಲಿ ತಡೆಯಲಾಗದಷ್ಟು ಹಸಿವು, ಯಶಸ್ಸುಗಳಿಸುವ ತನ್ನದೇ ಆದ ಯೋಜನೆಗಳ ಗುಂಗಿನಲ್ಲಿಯೆ ಅವನು ಹುಚ್ಚನಂತಿರುತ್ತಾನೆ. ಬೇರೆಯವರ ಬಗ್ಗೆ ಟೀಕೆ ಮಾಡಿ ಅವರ ಸಣ್ಣತನ ಎತ್ತಿ ತೋರಿಸುತ್ತಾನೆ. ಒಂದುದಿನ ರಾತ್ರಿ ಊಟಮಾಡುವಾಗ ಹೇಳತೊಡಗಿದ - "ಗೊತ್ತಾಯ್ತಾ ಸರೋಜ, ಈಗ ಪ್ರತಿಭೆ ಅನ್ನೋದಕ್ಕೆ ಕವಡೆ ಬೆಲೆಯೂ ಇಲ್ಲ. ನಮ್ಮ ಚಿಕ್ಕ ಸಾಹೇಬ್ರು ಮಿಸ್ಟರ್ ಜೇನಾ ಅವರನ್ನೇ ನೋಡು. ಪೆದ್ದು ಅಂದರೆ ಮಹಾ ಪೆದ್ದು, ಒಳಗೆ ಏನೇನೂ ಇಲ್ಲ. ಆದರೂ ಹೇಗೆ ಮೇಲೇರುತ್ತಿದ್ದಾರೆ ನೋಡು. ಇದೆಲ್ಲ ಹೇಗಾಯ್ತು ಗೊತ್ತಾ ಸರಿಯಾಗಿ ಕೇಳು. ಅವರಿಗೆ ಶುಭ್ರಾಂಗಿನಿ ಅಂತ ಒಬ್ಬ ಮಗಳಿದ್ದಾಳೆ. ಚೆನ್ನಾಗಿ ಡ್ಯಾನ್ಸ್ ಮಾಡ್ತಾಳೆ. ಕಂಪನಿಯ ದೊಡ್ಡ ಸಾಹೇಬರಲ್ಲಿ ಒಬ್ಬರಾದ ಕಾರಕಾರೆ ಅನ್ನೋರು ಬೊಂಬಾಯಿಂದ ಬಂದಿದ್ದರು. ಸಾಕಷ್ಟು ವಯಸ್ಸಾಗಿದೆ, ಬೊಂಬಾಯಲ್ಲಿ ತೊಗೊಂಡ ನಕಲಿ ಹಲ್ಲು ಸೆಟ್ಟು ಬೇರೆ. ಆದರೂ ಹಾಡು ಕುಣಿತ ಅಂದ್ರೆ ಸ್ವಲ್ಪ ಷೋಕಿ ಜಾಸ್ತಿ. ಅವರಿಗೆ ಅದ್ಭುತವಾದ ಸ್ವಾಗತ. ಸಮಾರಂಭದಲ್ಲಿ ಶುಭ್ರಾಂಗಿನಿಯ ಡ್ಯಾನ್ಸು. ತಬಲ ಯಾರು ಬಾರಿಸುತ್ತಿದ್ದರು ಗೊತ್ತಾ? ಸ್ವತಃ ಜೇನಾ ಸಾಹೇಬರೇ. ಆಫೀಸಿನಲ್ಲಿ ಕೆಲಸ ಮಾಡಬೇಕಾದರೆ ಒಂದು ದಿನವಾದರೂ ನಗದ ಮುದುಕ ಏನು ತಬಲ ಬಾರಿಸಿದ್ದೇ ಬಾರಿಸಿದ್ದು, ಮಗಳು ಕುಣಿದಿದ್ದೆ ಕುಣಿದಿದ್ದು. ಅದಾದ ಮೇಲೆ ಕಾರಕಾರೆ ಪುರಿಗೆ ಹೋದರು - ಕೋಣಾರ್ಕಕ್ಕೆ ಹೋದರು - ಒಟ್ಟಿನಲ್ಲಿ ಬಿಡು, ಮಿಸ್ಟರ್ ಜೇನಾ ಅವರಿಗೆ ಬಡ್ತಿ ಸಿಕ್ಕೇ ಬಿಟ್ಟಿತು. ಬಡಕೊಂಡ್ರೂ ಏನೂ ಬರಲ್ಲ ಅವರಿಗೆ. ನಾನು ನೋಡು ಅಂಬಾರಿ ಮೇಲೆ ಹೊತ್ಕೊಂಡು ಬಂದಹಾಗೆ ಫೈಲುಗಳ ರಾಶಿ ರಾಶಿ ಹೊತ್ಕೊಂಡು ಬಂದು ರಾತ್ರಿಯೆಲ್ಲ ಕೆಲಸ ಮಾಡ್ತೀನಿ. ನೀನೇ ನೋಡ್ತಾ ಇದ್ದೀಯಲ್ಲ..... ಅಯ್ಯೋ ಬಿಡು, ಯಾರಿಗೆ ತಾನೇ ಹೇಳೋದು."

ಸರೋಜಿನಿ ನಕ್ಕುಬಿಡುತ್ತಾಳೆ.

ಅಷ್ಟೇ ಸಾಕು.

ಬಲಿದತ್ತ ಕನಸು ಕಾಣುತ್ತಾನೆ.

ಸಾಯಂಕಾಲ.

ನಿತಾಯಿ ಆಕಡೆ ಈಕಡೆ ನೋಡಿದ.

ಎರಡು ಕೈಗಳನ್ನೂ ಬಾಯಿನ ಮೇಲಿಟ್ಟುಕೊಂಡು ತಗ್ಗಿದ ಧ್ವನಿಯಲ್ಲಿ ಗಟ್ಟಿನಿಂದ

ಕೂಗಿದ- "ಹರ್ಷ, ಲೋ ಹರ್ಷ."

ಬೊಂಬಿನ ನಳಿಕೆಯ ಮೂಲಕ ಉಫ್ ಅಂತ ಊದಿದ ಹಾಗಿತ್ತು ಅವನ ಕೂಗು.

ಹರ್ಷ ಹತ್ತಿರ ಬಂದ. ಅವನ ಹೆಗಲನ್ನು ಭದ್ರವಾಗಿ ಹಿಡಿದುಕೊಂಡು ನಿತಾಯಿ ಅವನನ್ನು ಹೊರಗಿನ ಕೋಣೆಗೆ ಕರೆತಂದ.

ಇಬ್ಬರೂ ಕತ್ತಲೆಯಲ್ಲಿ ಗಪ್ಪುಚಿಪ್ಪಾಗಿ ಸೇರಿದರು, ಷಡ್ಯಂತ್ರ ನಡೆಸುವವರಂತೆ-ತೀರ ಗುಟ್ಟಿನ ಮಾತನಾಡುವರಂತೆ ಒಟ್ಟಾದರು.

ಹರ್ಷ ಏನೋ ಹೇಳಲು ಇಷ್ಟಪಡುತ್ತಿದ್ದ. ನಿತಾಯಿ ಅವನ ಬಾಯಿಮೇಲೆ ಕೈಯಿಟ್ಟು ಸ್ವಲ್ಪ ಹಾಗೆಯೆ ನಿಂತ. ಕಿವಿಗೊಟ್ಟು ಏನೋ ಕೇಳುವವನಂತೆ ನಿಂತುಕೊಂಡ. ಕತ್ತಲೆಯಲ್ಲಿ ಹರ್ಷ ಬೆಚ್ಚಿದ.

ನಿತಾಯಿ ಬೆಂಕಿಕಡ್ಡಿ ಹಚ್ಚಿದ. ಕತ್ತಲೆಯಲ್ಲಿ ತಡಕಾಡಿ ಒಂದು ಕಪ್ಪಾದ ಮಸಿಗಟ್ಟಿದ ಒಡೆದ ಲಾಟೀನು ಹುಡುಕಿತಂದ. ಲಾಟೀನು ಹಚ್ಚಿದ. ನಿತಾಯಿ ಬಟ್ಟೆ ಬಿಚ್ಚಿದ. ಇಡೀ ದಿನ ಅರೇ ಬಟ್ಟೆಯಲ್ಲಿಯೆ ಕಳೆದಿದ. ಕೇಳಿದ- "ಯಾಕೆ ಕುಳಿತುಕೊಳ್ಳಲಿಲ್ಲ ?"

ಹರ್ಷ ನಕ್ಕ. ಕುಳಿತುಕೊಳ್ಳುವುದರ ಅರ್ಥ ಏನೆಂದು ಅವನಿಗೆ ಗೊತ್ತು.

ಇಡೀ ಕೋಣೆಯಲ್ಲಿ ತೆರವಾಗಿದೆ. ನಿತಾಯಿ ದಿನಪೂರ್ತಿ ಕದ್ದು ಸಂಪಾದಿಸಿ ಕಟ್ಟಿರುವ ಸಣ್ಣ ಸಣ್ಣ ಗಂಟುಗಳು. ಹರ್ಷ ಅದರಲ್ಲಿ ಒಂದನ್ನು ಬಿಚ್ಚಲು ಹೊರಟಾಗ ನಿತಾಯಿ ಹುಲಿಯಂತೆ ಹಾರಿದ. ಆದರೆ ಹರ್ಷ ಅಷ್ಟರಲ್ಲಿ ಗಂಟು ಬಿಚ್ಚಿಬಿಟ್ಟಿದ್ದ. ಒಂದೆರಡು ನುಗ್ಗೆಕಾಯಿ, ನಾಲ್ಕು ಬದನೆಕಾಯಿ, ಸೊಪ್ಪು, ಮೂರು ತುಂಬ ಕಳಿತ ಬಾಳೆಹಣ್ಣುಗಳು. ಹರ್ಷನ ಮನಸ್ಸೆಲ್ಲ ಬಾಳೆಹಣ್ಣಿನ ಮೇಲೆ ನಟ್ಟಿತ್ತು.

"ತಿಂದು ತಿಂದು ನಿನ್ನ ಹೊಟ್ಟೆ ಬಿರಿದುಹೋಗ್ತಿದೆ. ಆದರೂ ಕಿತ್ತುಕೊಂಡು ತಿನ್ನೋದಕ್ಕೆ ಮೇಲೆ ಬೀಳ್ತೀಯ. ಬಡವಾ-"

ಹರ್ಷ ನಗುನಗುತ್ತಲೆ ಬಾಳೆಹಣ್ಣು ತಿನ್ನುವುದರಲ್ಲಿ ತೊಡಗಿದ್ದಾನೆ. ನಿತಾಯಿ ಬೊಕಳೆ ಹೊಡೆಯುತ್ತಲೆ ಇದ್ದಾನೆ. ನಿತಾಯಿ ಹೊಗೆಸೊಪ್ಪಿನ ಚಿಲುಮೆ ಹಚ್ಚಿದ. ಹರ್ಷ ಬಾಳೆಹಣ್ಣು ಮುಗಿಸಿ ನಿತಾಯಿಯ ಕೊಳೆಬಟ್ಟೆಗೆ ಕೈ ಒರೆಸಿ ಕೈ ಮುಂದೆ ಚಾಚಿದ.

"ಬೇಡ, ಬೇಡ-" ನಿತಾಯಿ ಹೇಳಿದ, "ಇದು ನಿನ್ನ ಕೈಲಿ ಹರಿಯೋ ಮಾತಲ್ಲ. ನಾನು ಬೇಡ ಅಂತ ಹೇಳಿಲ್ಲವಾ! ಇದು ನಿನ್ನಂತಹವನಿಗ ದಕ್ಕೋದಲ್ಲ. ನೋಡು ಬೀಡಿ ಕುಡಿ. ಆ ಡಬ್ಬದಲ್ಲಿದೆ". ಹರ್ಷ ಬೀಡಿ ತೆಗೆದು ಹಚ್ಚಿದ. ಇಬ್ಬರೂ ಎದುರು ಬದುರಿಗೆ ಕುಳಿತರು. ಅಂಥ ಏಕಾಂತ ಕ್ಷಣಗಳಲ್ಲಿ ಮನಸ್ಸು ತೆಗೆದು ಮಾತಾಡುವುದುಂಟು. ನಿತಾಯಿ ಕೇಳಿದ-"ಇನ್ನೇನು ಸಮಾಚಾರ ?"

"ಬಾಬೂ ಬಮ್ ಆಗುತ್ತಾ ಇದ್ದಾನೆ."

ನಿತಾಯಿ ನಕ್ಕುಬಿಟ್ಟ. ಹೇಳಿದ - "ಲೋ, ಬಾಬೂ ಅನ್ನಬೇಡ, ಸಾಹೇಬರು ಅನ್ನು. ಈಗ ಏನು ಮಾಡಬೇಕೊ ಅದನ್ನು ಮಾಡು. ಮತ್ತೆ ಎಲ್ಲಿ ಅವಕಾಶ ಸಿಗತೆ ?"

"ಏನು ಮಾಡೋದು ? ಏನು ಕೊಡ್ತಾನೆ ಹೇಳು ? ಕೆಲಸ ಮಾಡಿಸಿಕೊಂಡು ಮಾಡಿಸಿಕೊಂಡು ಚರ್ಮ ಸುಲೀತಾ ಇದಾನೆ".

"ಏನು, ನಿನ್ನ ತಲೆ ತುಂಬ ಅಟ್ಟಕ್ಕೇರಿದ ಹಾಗೆ ಕಾಣುತ್ತಲ್ಲ".

ಹರ್ಷ ನಕ್ಕ-"ಇಲ್ಲ, ಇಲ್ಲ"

"ಲೋ ಮಗನೆ, ನನಗೆ ಎಲ್ಲ ಗೊತ್ತು. ಮಾತಾಡಬೇಡ, ಮಾಡ್ತಾ ಹೋಗು. ಎಲ್ಲ ದೇವರು ಕೊಟ್ಟದ್ದೇ ತಾನೇ-ನನ್ನದೇ ಅಂತ ಇರಬೇಕು. ಈಗ ನೋಡು ಬಾಬುವಿನ ಮನೆ ಹೇಗೆ ಭೇಷಾಗಿದೆ ಅಂತ. ಬಾಬೂ ಈಗ ಸಾಹೇಬ. ಅಮ್ಮ ಈಗ ಮೇಡಮ್, ....ಥೂ ನಿನ್ನ ಬಡವಾ, ಏನು ಮೈ ಸವೆದು ಹೋಗ್ತದೆ ಅಂತ ಗೋಳಾಡ್ತೀಯಲ್ಲ. ಅದೇನು ಬೇಕು ಕೇಳು, ಕೊಡೋಣ!"

"ನಂಗೊಂದು ಟಾರ್ಚ್‌ಲೈಟ್ ಕೊಡು ಮತ್ತೆ".

"ಓಹೊ, ಹಾಗಾದರೆ ಕೈಕಡೀತಿದ್ಯಾ ನಿನಗೆ? ಇನ್ನೂ ಚಿಗುರು ಮೀಸೆ ಕೂಡ ಬಂದಿಲ್ಲ - ಸರಿಸರಿ ಕೊಡೋಣ. ನಮ್ಮ ಹರ್ಷ ಇನ್ನು ಮೇಲೆ ಬಾಬೂ ಆಗ್ತಾನೆ ಅನ್ನು".

"ಈಗ ಯಾವ ವ್ಯಾಪಾರ ಶುರ್ರುಮಾಡಿದ್ದಿ ನಿತಾಯಣ್ಣ".

"ಅದರಿಂದ ನಿಂಗೇನಾಗಬೇಕು? ಶುಂಠಿ ವ್ಯಾಪಾರ ಮಾಡೋನಿಗೆ ಹಡಗಿನ ಬೆಲೆ ಕಟ್ಕೊಂಡು ಏನಾಗ್ಬೇಕು ಹೇಳು. ಎಲ್ಲ ವ್ಯವಹಾರ ನನ್ನ ಕೈಲೇ ಇದೆ. ಸಾಹೇಬರದು ಯಾವ ಕೆಲಸವಾದರೂ ಆಗಲಿ- ಎಲ್ಲದರಲ್ಲೂ ನಿತಾಯಿ ಇರಲೇಬೇಕು. ಅದರ ಮೇಲೆ ಅಮ್ಮಾವರ ಕೆಲಸ - "ದುಡ್ಡು ಸಾಲತೊಗೊಂಡು ಬಾ, ಸಕ್ಕರೆ ಮಾರಿಬಿಡು, ತರಕಾರಿ ತೊಗೊಂಡು ಹೋಗಿ ಮಾರಾಟ ಮಾಡು - ಏನಾಗುತ್ತೋ ಅದನ್ನು ಮಾಡು, ಒಟ್ಟಿನಲ್ಲಿ ಹಣ ತೊಗೊಂಡು ಬಾ. ಇವೆಲ್ಲ ದೊಡ್ಡ ದೊಡ್ಡ ವಿಚಾರಗಳು, ಕೈಕೈ ಬದಲಾಯಿಸೋದು. ನಿನಗೆ ಅರ್ಥ ಆಗಲ್ಲ. ಇನ್ನೂ ಬಚ್ಚಾ ನೀನು. ನಾನು ನೋಡೋರಿಷ್ಟೆ-ನಿನ್ನ ಬರೀ ಹೊಟ್ಟೆ ಸರಿಯಾಗಿ ತುಂಬತ್ತೊ ಇಲ್ಲವೊ ಅಂತ. ಎಷ್ಟು ಹಾಕಿದ್ರೂ ಇನ್ನೂ ಇನ್ನೂ ಅಂತ...."

ಏಯ್ - ಶ್ - ಶ್ - ಅಮ್ಮ ಕರೀತಾ ಇದಾರೆ.

ಚಹಾ - ರಾಶಿ-ರಾಶಿ - ಏಯ್ - ಹಾಳಾದವರು ಎಲ್ಲಿ ಹೋದರೋ.

ನಿತಾ ಬಿಚ್ಚಿಟ್ಟಿದ್ದ ಬಟ್ಟೆಗಳನ್ನು ಚಟ್ಟನೆ ಹಾಕಿಕೊಂಡ. ಗಡಿಬಿಡಿಯಲ್ಲಿ ಅರ್ಧ ಬಿಚ್ಚಿ ಹೋಗಿದ್ದ ರುಮಾಲು ಎತ್ತಿಕೊಂಡ. ಬಾಗಿಲಿಗೆ ಅಗಳಿ ಹಾಕಿ- "ಲೋ ಬೇಕೂಫ - ನೀನು ಆಕಡೆಯಿಂದ -ನಾವಿಬ್ಬರೂ ಒಟ್ಟಿಗೆ ಒಂದೇ ಜಾಗದಲ್ಲಿದ್ದುದನ್ನು ನೋಡಿದರೆ ಸಾಹೇಬ ನನಗೆ ಗ್ರಹಚಾರ ಬಿಡಿಸ್ತಾನೆ, ಗೊತ್ತಾಯ್ತಾ?"

ಬಲಿದತ್ತನ ಮನಸ್ಸು ಧಕ್ ಧಕ್ ಎನ್ನುತ್ತಿದೆ. ಕಂಪನಿಯು ಒಂದು ದೊಡ್ಡ ಇಂಜನ್ನಿನಂತೆ. ಅವನ ಕಚೇರಿಯ ಗಡಿಯಾರದಲ್ಲಿ ಎರಡು ಗಂಟೆ ಹೊಡೆದಿದೆ. ಫೈಲಿನಿಂದ ಕಣ್ಣೆತ್ತಿ ಸಿಗರೇಟು ಹಚ್ಚುತ್ತಾ ಕೂಗಿದ್ದಾನೆ - "ನಿತಾಯ್, - ಚಹಾ -."

ನಿತಾಯಿ ಟಿಫಿನ್ ಕ್ಯಾರಿಯರ್ ಬಿಚ್ಚುತ್ತಿದ್ದಾನೆ, ಅದರ ಕಟ್ ಕಟ್ ಸದ್ದು ಬರುತ್ತಿದೆ. - ನಿತಾಯಿ ಉದ್ದನೆಯ ಕೆಂಪು ಫ್ಲಾಸ್ಕಿನಿಂದ ಚಹಾ ಬಗ್ಗಿಸುತ್ತಿದ್ದಾನೆ - ಸಿಗರೇಟು ಉರಿಯುತ್ತಲೆ ಇದೆ - ಬಲಿದತ್ತ ಸುಮ್ಮನೆ ದೃಷ್ಟಿ ಹಾಯಿಸುತ್ತಿದ್ದಾನೆ - ಮನಸ್ಸು ಗ್ರಾಮಾಫೋನ್ ರೆಕಾರ್ಡಿನಂತೆ ಹೊಡೆದುಕೊಳ್ಳುತ್ತದೆ-

ಸರೋಜಿನಿ ಮನೆಯಲ್ಲೇ ಇರುತ್ತಾಳೆಯೆ ?

ಉರಿಯುತ್ತಲೆ ಇದೆ ಸಿಗರೇಟು. ಅದು ಸರಿ, ಈಚೆಗೆ ಅವನಿಗೆ ಸಿಗರೇಟು ಸೇದುವ ಅಭ್ಯಾಸ ಅಂಟಿದೆ. ಬಿಸಿ ನೀರು, ಬಿಸಿ ಹೊಗೆ ಇಲ್ಲದಿದ್ದರೆ ಕೆಲಸ ನಡೆಯೋದಿಲ್ಲ, ಈಗ ಅವನೇನೂ ಬಡವನಲ್ಲವಲ್ಲ.

ಬಡತನದ ಬಗ್ಗೆ ಅವನಿಗೆ ಸ್ವಲ್ಪವೂ ಸಹಾನುಭೂತಿಯಿಲ್ಲ. ಅವನು ಮೇಲೇರುತ್ತಿದ್ದಾನೆ. ಬಡತನದೊಂದಿಗೆ ಸೇಡು ತೀರಿಸಿಕೊಳ್ಳಲೋ ಎಂಬಂತೆ ಬೇಕೆಂದು ಹೆಚ್ಚಾಗಿ ಹಣ ಉಡಾಯಿಸುತ್ತಾನೆ. -ತನ್ನ ಖರ್ಚು - ಬಟ್ಟೆ ಬರೆ ಮುಂತಾದವುಗಳಿಗೆ - ಇಂತ ಎಷ್ಟೋ ವಿಚಾರಗಳು ನೋಡುವುದಕ್ಕೆ ಒಪ್ಪುವಂತೆ ಇಲ್ಲದಿದ್ದರೂ ಪರವಾಗಿಲ್ಲ. ಬೆಲೆ ಬಾಳುವ ಸೂಟು, ಆದರ ಅದರ ಬಣ್ಣ ಅವನ ಮೈಯಿನ ಬಣ್ಣಕ್ಕೆ ಹೊಂದಿಕೊಳ್ಳುವುದಿಲ್ಲ. ಮನೆಯನ್ನು ಸಜ್ಜುಗೊಳಿಸುವುದಕ್ಕಾಗಿ ಅನೇಕ ಬೆಲೆಬಾಳುವ ಪದಾರ್ಥಗಳಿವೆ, ಆದರೆ ಡ್ರಾಯಿಂಗ್ ರೂಮ್ ಹಜಾಮನ ಅಂಗಡಿಯಂತೆ ಕಾಣುತ್ತದೆ, ಇಲ್ಲ ಅಂದರ ನಾಟಕದ ಸ್ಟೇಜಿನಂತಾಗಿದೆ. ಸರೋಜಿನಿ ಸ್ವಲ್ಪ ಹಾಗೂ ಹೀಗೂ ಸರಿಮಾಡುತ್ತಾಳೆ, ಆದರೆ ಬಲಿದತ್ತ ಆಕಡೆ ಸ್ವಲ್ಪವೂ ಯೋಚನೆ ಮಾಡುವುದಿಲ್ಲ.

ಯೂನಿಫಾರಂ ಹಾಕಿಕೊಂಡು ಪೇಟ ಕಟ್ಟಿಕೊಂಡಿರುವ ಆಳು ನಿತಾಯಿಯ ಮೇಲೆ ಅರ್ಧ ದೃಷ್ಟಿ ನೆಟ್ಟಿದೆ. ತಿಂಡಿಯ ತಟ್ಟೆ ಜೋಡಿಸುವುದರಲ್ಲಿ, ಚಹಾ ಬಗ್ಗಿಸುವುದರಲ್ಲಿ ಅವನದು ತನ್ನದೇ ಆದ ಧಾಟಿ. ಬಣ್ಣಬಣ್ಣದ ಉಡುಗೆ. ಹೊಳೆಯುತ್ತಿರುವ ಹಿತ್ತಾಳೆಬಿಲ್ಲೆ, ದಪ್ಪನೆಯ ರುಮಾಲು - ನೋಡುತ್ತಲೆ ಬಲಿದತ್ತನ ಕಣ್ಣಿಗೆ ತಂಪಾಗುತ್ತದೆ - ಇದು ಅವನ ಒಂದು ಮಜಲು -

ಆದರೆ ಎರಡನೆಯದು - ಸರೋಜಿನಿ ಮನೆಯಲ್ಲಿರಬಹುದ-

ನಿಟ್ಟುಸಿರು - ನಿಟ್ಟುಸಿರು - ಸಿಗರೇಟು ಉರಿಯುತ್ತಲೆ ಇದೆ.

ಮೌನದಿಂದ ಕೂಡಿದ ಅಂಥ ಅನ್ಯಮನಸ್ಕತೆಯಲ್ಲಿ ಸಾಮಾನ್ಯ ಮನುಷ್ಯನ ಮನಸ್ಸಿನಲ್ಲಿ ಅನೇಕ ಸಮಸ್ಯೆಗಳು ಅಲೆಯುಬ್ಬಿಸುತ್ತವೆ. ಮನುಷ್ಯ ಏನು ಬಯಸುತ್ತಾನೆ ? ಸುಖ ಅಂದರೇನು ? ಬದುಕು ಅಂದರೇನು ? ಯಾವುದೇ ವಿಷಯವನ್ನು ಕುರಿತಂತೆ ಮೋಜನ್ನು ಗುದ್ದಿ 'ಏಕೆ' ಅಂತ ಕೇಳಿದರೆ ಆ ಏಕೆ ಎಂಬುದಕ್ಕೆ ಉತ್ತರವೇನು ? ಅನೇಕ ಪ್ರಶ್ನೆಗಳಿಗೆ ಕೆಲವರು ಆಕಳಿಸಿ ಉತ್ತರ ಕಂಡುಕೊಳ್ಳುತ್ತಾರೆ, ಕೆಲವರು ನಿಟ್ಟುಸಿರಿನಲ್ಲಿ ಕಂಡುಕೊಂಡರೆ ಇನ್ನು ಕೆಲವರು ಸುಮ್ಮನೆ ಪಿಳಿಪಿಳಿ ನೋಡುತ್ತಿರುತ್ತಾರೆ, ಉತ್ತರ ಸಿಕ್ಕಿಹೋಗಿರುತ್ತದೆ. ಟೆಲಿಗ್ರಾಫ್ ತಂತಿಗೆ ಕಲ್ಲು ಬೀರಿದಾಗ ಬರುವ ಶಬ್ದದಂತೆ ಅವನ ಮನಸ್ಸು ಝೇಂಕೃತವಾಗುತ್ತದೆ. ಆದರೆ ಮಾತಿನ ಮೂಲಕ ಪ್ರಶ್ನೆ ಹೊರಬೀಳುತ್ತಿಲ್ಲ.

ಬಲಿದತ್ತ- ಗಮನವನ್ನೆಲ್ಲ ತಿಂಡಿ ಚಹಾಗಳತ್ತ ಹರಿಸಿದ, ಸವಿಯುವುದಕ್ಕಲ್ಲ ಮುಗಿಸುವುದಕ್ಕಾಗಿ. ಫೈಲಿನ ರಾಶಿಯನ್ನು ನೋಡಿದ ಮೇಲೆ ಡಿಸ್‌ಪೋಸ್ ಮಾಡುವವರೆಗೆ ಮನಸ್ಸಿಗೆ ನೆಮ್ಮದಿ ಸಿಗೋದಿಲ್ಲ. ತಲೆಯಲ್ಲಿ ಫೈಲುಗಳ ಅಂಬಾರಿಯ ವಿಷಯವೇ ಅಂಡಲೆಯುತ್ತಿದೆ. ಆದರೂ ಅವನು ಒಂದೇ ವಿಷಯದ ಬಗ್ಗೆ ಯೋಚಿಸುತ್ತಿದ್ದಾನೆ - ಸರೋಜಿನಿ. ಯೋಚಿಸುತ್ತಿದ್ದ ಹಾಗೆಯೆ ತಕ್ಕಡಿಯ ಒಂದೇ

ತಟ್ಟೆಯಲ್ಲಿ ಸಣ್ಣ ಪುಟ್ಟ ವಿಚಾರಗಳು ತಲೆಕೆಡಿಸುತ್ತಾ ತಟ್ಟೆ ತುಂಬುತ್ತಿವೆ.... ಸುಖ ಅಂದರೇನು ? ಪ್ರಪಂಚದಲ್ಲಿ ಸುಖ ಹೇಗೆ ಸಿಗತ್ತೆ ? ಸ್ವಂತಿಕೆ ಎಂದರೇನು ? ಏನು ಮಾಡುವುದರಿಂದ ಮನುಷ್ಯ ಸ್ವಂತಿಕೆ, ಸ್ವಾತಂತ್ರ್ಯ ಪಡೆಯಬಲ್ಲ ?

ದೊಡ್ಡ ವ್ಯಾಪಾರಿ ಮಾರವಾಡಿ ಹರಿನಾರಾಯಣನಿಂದ ಹಿಡಿದು ದೇಶಮಹಾಂತಿ ಮಿಶ್ರನವರೆಗೆ - ವ್ಯಾಪಾರ ಬೆಳೆದು ದೊಡ್ಡ ಹುತ್ತವಾಗುತ್ತದೆ. ವ್ಯಾಪಾರ ಎಂಬುದು ಕೊಂಡಿಟ್ಟ ಗುಲಾಮನೇ. ವ್ಯಾಪಾರಿ ಸ್ವಂತಿಕೆಯನ್ನು ಬದಿಗೊತ್ತಿ ವ್ಯಾಪಾರದ ಯಶಸ್ಸಿನ ಬಾವುಟ ಹಾರಿಸುತ್ತಾ ಅಪಾಯದಿಂದ ದೂರವಿರಲು ಎಷ್ಟೆಲ್ಲ ಪ್ರಯತ್ನ ಮಾಡಬೇಕು, ಅದಕ್ಕಾಗಿ ಎಷ್ಟೆಲ್ಲ ಕಷ್ಟನಷ್ಟ ಅನುಭವಿಸಬೇಕು ? ಬೆಲೆ ಬಾಳುವ ಕಾರಲ್ಲಿ ಕುಳಿತುಕೊಂಡು ಹೋಗುತ್ತಿರಬೇಕಾದರೆ ಅದೆಷ್ಟು ಮಂದಿ ಸಲಾಮು ಹೊಡೆಯುತ್ತಿರುತ್ತಾರೆ, ಎಡಗಡೆ ಬಲಗಡೆ ಕಾರಲ್ಲಿ ಕುಳಿತೇ ಬಗ್ಗಿಬಗ್ಗಿ ಆ ಸಲಾಮುಗಳನ್ನು ಸ್ವೀಕರಿಸುತ್ತಿರಬೇಕಾದರೆ ಯಾರಾದರೂ ಸರಿಯಾದ ಕುಳ ಸಿಕ್ಕಿಬಿದ್ದರೆ ಸಾಕು, ಅವನ ಇಚ್ಛೆಗೆ ತಕ್ಕಂತೆ ಮಂಗನಾಟ ಶುರುವಾಗುತ್ತೆ. ಸರಿಯಾದ ಕಾಲಕ್ಕೆ ಊಟ ತಿಂಡಿ ವ್ಯವಸ್ಥೆಯಿಲ್ಲ, ಮನೆಯಲ್ಲಿ ಮಕ್ಕಳನ್ನು ವಿಚಾರಿಸಿಕೊಳ್ಳೋದಕ್ಕೆ ಪುರುಸೊತ್ತಿಲ್ಲ - ಬರೀ ಕೆಲಸ, ಬಿಜಿನೆಸ್.... ತುರಿಸಿಕೊಳ್ಳೋದಕ್ಕೂ ಪುರುಸೊತ್ತಿಲ್ಲ...... ಅರ್ಧ ರಾತ್ರಿಯಲ್ಲಿ ದಿಂಬಿನ ಮೇಲೆ ತಲೆಯಿಟ್ಟಿದ್ದರೂ ಅದೇ ಕೆಲಸಗಳ ಒತ್ತಡಗಳ ಕನಸು, ಭಯ. ಕೈಚಳಕ, ಕೆಟ್ಟ ಯೋಚನೆ. ಬಂತು.... ಹೋಯಿತು.... ಹೋಯಿತು ಎಂಬ ಯೋಚನೆಯಲ್ಲಿ ಮುಳುಗಿರೋದು..... ಮನಷ್ಯನನ್ನು ಕರಗಿಸುತ್ತಲೆ ಹುತ್ತ ಆವರಿಸಿಕೊಂಡು ಬೆಳೆಯುತ್ತದೆ.... ಬ್ಯಾಂಕಿನಲ್ಲಿ ಬ್ಯಾಲೆನ್ಸ್ ಏರುತ್ತದೆ.... ಬಡಪಾಯಿ ಹಣವಂತ.

ದೊಡ್ಡ ಹುದ್ದೆಯಲ್ಲಿರುವವರ.... ಭಾರಿ ಸಂಬಳ ತೆಗೆದುಕೊಳ್ಳುವ ಕಂಪನಿ ಅಧಿಕಾರಿಗಳ ದಿನವೆಲ್ಲ ಫೈಲುಗಳ ಮತ್ತು ಯಂತ್ರ ಸಾಮಗ್ರಿಗಳ ಪ್ರಪಂಚದಲ್ಲಿ ಮುಳುಗಿರುತ್ತದೆ. ಹೆಸರಿಗೆ ಮಾತ್ರ ಏಳು ಗಂಟೆ ಕೆಲಸ, ಆದರೆ ಇಪ್ಪತ್ತು ನಾಲ್ಕು ಗಂಟೆಯೂ ತಲೆ ಒತ್ತೆ ಇಟ್ಟಿರಲೇ ಬೇಕು. ಬೆಳಗಿನಿಂದ ಹಿಡಿದು ಮಧ್ಯರಾತ್ರಿ ಯವರೆಗೂ ಬೇರೆಯವರ ಕೆಲಸ, ಬೇರೆಯವರ ಚಿಂತೆ, ಬೇರೆಯವರಿಗಾಗಿ ತಲೆ ಕೆಡಿಸಿಕೊಳ್ಳುತ್ತಿರಬೇಕು. ಸಮಯಕ್ಕೆ ಯಾವ ಅಡೆತಡೆಯೂ ಇಲ್ಲ, ಎಲ್ಲೆಕಟ್ಟೂ ಇಲ್ಲ. ಅರ್ಧ ರಾತ್ರಿ ಕಳೆದ ಮೇಲೆ ಊಟ ಮಾಡಿ ಹಾಸಿಗೆಯ ಮೇಲೆ ಮೈಚೆಲ್ಲಿ ನಿದ್ದೆ ಹತ್ತುವಷ್ಟರಲ್ಲೇ ದೊಡ್ಡ ಸಾಹೇಬರ ಆಳು ಬಂದು ಹಾಸಿಗೆಯಿಂದ ಎಬ್ಬಿಸಿ ಕಾಗದಕೊಟ್ಟು ಜಬರದಸ್ತು ಮಾಡುತ್ತಾನೆ - “ನೋಡಿ ಬಹುಶಃ ಆ ಡಿಪೋನಲ್ಲಿ ಕೆಲಸಗಾರರು ಒಟ್ಟು ಸೇರಿ ಮುಷ್ಕರ ಮಾಡಬಹುದು-ನೀವು ಕೂಡಲೆ ಅಲ್ಲಿಗೆ ಹೋಗಿ, ಈ ರಾತ್ರಿಯೇ”. ಹೆಂಡತಿಗೆ ಮೈಸರಿಯಿಲ್ಲ, ಮಕ್ಕಳು ಬೀದಿಪೋಕರಿ ಗಳಾಗುತ್ತಿವೆ, ಹಳ್ಳಿಯಲ್ಲಿ ಹೊಲಗದ್ದೆ ಹಾಳಾಗಿ ಹೋಗುತ್ತಿದೆ ಇವೆಲ್ಲ ಯೋಚಿಸುವಷ್ಟರಲ್ಲಿಯೆ ಸಾಹೇಬರ ಕಡೆಯಿಂದ ಒಂದು ಕೆಂಪು ಕಾಗದ ಹಾಜರು - “ಬೆಳಗ್ಗೆ ಬಂದು ನೋಡು”. ಆಮೇಲೆ ಒಂದು ನಿಮಿಷ ಲೆಕ್ಚರ್ - “ತೊಂದರೆಯಿದ್ದರೆ ರಾಜೀನಾಮೆ ಕೊಟ್ಟುಬಿಡಿ, ನಿಮ್ಮಂತೆ ಪಿಳ್ಳೆನೆವ ಹೇಳೋರಿಗೆಲ್ಲ ಕಂಪನಿಯಲ್ಲಿ ಜಾಗ ಇಲ್ಲ.” ಇದೇ ಅಲ್ಲದೆ ಸಮಯ ಬಂದಾಗ ಮೇಲಿನ

ಅಧಿಕಾರಿಗಳ ಜೊತೆ ಸಂಪರ್ಕ ಇಟ್ಟುಕೊಳ್ಳೋದಕ್ಕೆ ಅನೇಕ ಸ್ಥೂಲವಾದ ಮತ್ತು ಸೂಕ್ಷ್ಮವಾದ ವಿಧಾನಗಳಿರುತ್ತವೆ ಹಾಗೂ ಅವುಗಳಿಗೆ ವಿಶಿಷ್ಟವಾದ ಅನೇಕ ಪ್ರತಿಕ್ರಿಯೆಗಳೂ ಇರುತ್ತವೆ - ಇನ್ನೊಬ್ಬರು ನಗುತ್ತಿರಬೇಕಾದರೆ ಅವರ ಜೊತೆ ತಾನೂ ನಗುವುದು, ತನ್ನ ಬೆನ್ನಿನ ಮೇಲೆ ಇನ್ನೊಬ್ಬರ ಭೂತ ಏರಿಸಿಕೊಂಡು ನಡೆಯುವುದು, -ಆಮೇಲೆ ಅವರ ಹುಕುಂಗಳಿಗೆ ತಲೆಕೊಡುತ್ತಾ ಹೋಗುವುದು - ಇಲ್ಲಿ ಕೂತುಕೊ, ಏಳು, ಸ್ವಲ್ಪ ನಗು, ಅಳು - ಹೊಡಿ - ಹಾಗೆ ಇರು.....

ಆಸರೆ ಅಂದುಕೊಂಡು ಮನುಷ್ಯ ಯಾವುದನ್ನು ಅವಲಂಬಿಸುತ್ತಾನೊ ಅದು ತನಗೆ ತಾನೇ ಅವನ ಪಾಲಿಗೆ ಬದುಕೇನೋ ಎಂಬಂತೆ ಗಂಟುಬೀಳುತ್ತದೆ. ಆ ಒರಳಿಗೆ ತಲೆಕೊಟ್ಟು ನಡೆಯಬೇಕಾದುದು ಅವನ ಕೆಲಸ. ತನಗೆ ತಾನೇ ಸಮಾಧಾನ ಹೇಳಿಕೊಳ್ಳುವುದಕ್ಕಾಗಿ ಮನುಷ್ಯ ಆ ಒರಳುಕಲ್ಲನ್ನು ಗುಂಡನ್ನು ನೋಡಿ ಯಾವಾಗಲಾದರೂ ಅಂದುಕೊಳ್ಳಬಹುದು - ಈ ರುಬ್ಬುಗುಂಡು ಎಷ್ಟು ಸೊಗಸಾಗಿದೆ, ತುಂಬ ಲವಲವಿಕೆಯಿಂದ ಆಡುತ್ತಿದೆ. ನಿಜವಾಗಿಯೂ ಎಂಥ ಸೊಗಸು, ಎಂಥ ಕಲ್ಪನೆ. ಆಹಾ, ಎಷ್ಟು ಜನ ಶಿಲ್ಪಿಗಳು ಬೆವರು ಸುರಿಸಿ ಇದನ್ನು ಕಡೆದಿದ್ದಾರೆ - ಎಂಥ ಪಗಡದಸ್ತಾದ ಯೋಚನೆಯಿದು.

ರಥದ ಕಲ್ಲಿನ ಚಕ್ರಗಳ ಬಗ್ಗೆ ಹೊಗಳಿಕೆಯ ಮಾತುಗಳನ್ನಾಡುವುದಕ್ಕೆ ಬದಲು ಅಸ್ಥಿಪಂಜರದ ಮೂಳೆಗಳನ್ನು ಹೊಗಳುತ್ತಿದ್ದಾನೇನೊ ಅನ್ನುವ ಅನುಭವ ವಾಗುತ್ತದೆ. ಯಾವ ಆಸರೆಯನ್ನು ಹುಡುಕಿರುತ್ತಾನೋ ಅದೇ ಗುರಿಯಾಗಿ ಹೋಗುತ್ತದೆ. ಆದರೆ ಅದು ಜೀವವಿಲ್ಲದ ಕಲ್ಲು, ಅದೊಂದು ತಂತ್ರ, ಮನುಷ್ಯನ ಮೂಳೆ ಮಾಂಸಗಳ ಮೈಯಿನ ಬಗ್ಗೆ ಅವಕ್ಕೇನು ಗೊಡವೆ? ಕೋಮಲವಾದ ಮನಸ್ಸಿನ ಒಳಗುದಿಯ ಪರಿವೆ ಅದಕ್ಕೇನು ? ಚಕ್ರಗಳು - ಆಯುಸ್ಸನ್ನು ಕಬಳಿಸುತ್ತಾ - ಮುಂದೆ ಹೋಗುತ್ತಿರುತ್ತವೆ.

ಯಾವಾಗ ಆಸರೆಯನ್ನು ಗುರಿಯ ರೂಪದಲ್ಲಿ ತೆಗೆದುಕೊಳ್ಳುತ್ತಾರೊ, ಆಗ ಬುದ್ಧಿಗೆ ಆಯುಧ ಸಿಕ್ಕಂತಾಗುತ್ತದೆ - ಆಗ ವಿವೇಕವಿರುವುದಿಲ್ಲ.....

ಕುತ್ತಿಗೆ ಹಿಡಿದು ಕೆಲಸಮಾಡಿಸಿಬಿಡುತ್ತದೆ.

ಮನುಷ್ಯ ತನ್ನತನವನ್ನು ಕಳೆದುಕೊಂಡುದದ್ದರಿಂದಲೆ ಪ್ರಪಂಚದ ಒಟ್ಟು ನಗುವಿನಲ್ಲಿ ಒಂದು ದೊಡ್ಡಭಾಗ ಹುಚ್ಚರು, ಮಕ್ಕಳು ಹಾಗೂ ಉದ್ದೇಶವಿಲ್ಲದ ನಗುವ ಭೋಳೆ ಜನರ ಕೊಡುಗೆಯಾಗಿದೆ.

ಬೇಕೆಂತಲೇ ಯಾರಿಗಾದರೂ ನಗುವುದಕ್ಕಾಗುತ್ತದೆಯ ?

ಸಿವಿಲಿಸೇಶನ್ ಇಸ್ ಸಿಫಿಲಿಸೇಶನ್.

ಡ್ಯಾಮ್ ಇಟ್ - ಚರ್ಮದ ಕೆಳಗಿರುವ ಸಣ್ಣಸಣ್ಣ ಗ್ರಂಥಿಗಳಲ್ಲೂ ವಿಷದ ಅಲೆಗಳಿವೆ. ಮನಸ್ಸಿನಾಳದಲ್ಲಿ ಉರಿಕಾರುವ ಸಿಫಿಲಿಸ್ ಇದೆ, ಆಲೋಚನೆಯಲ್ಲಿ ಸೈಕೊಸಿಸ್ ಇದೆ.

ಹೆಲ್.... ಹೆಲ್.... ಹೆಲ್.... ಈ ಪ್ರಪಂಚದಲ್ಲಿ ನರಕವಿದೆ.... ಸರೋಜಿನಿ ಮನೆಯಲ್ಲಿರಬಹುದ ?

ಮನಸ್ಸಿನಾಳದಲ್ಲಿ ಅಲೆಯೇಳುತ್ತದೆ, ಅದರ ಭಾಷೆ ಅಸ್ಪಷ್ಟ, ಅದರ ಚಿತ್ರ

ಅಸ್ಪಷ್ಟ-ಆ ಅಲೆಗಳ ಮುಂದೆ ಕಣ್ಣುಕೋರೈಸುವ ಬೆಳಕಿದೆ... ತವಕ ಪಡುತ್ತಿರುವ ಲಾವಣ್ಯ ತುಂಬಿದ ಅಲೆ... ವಾಕರಿಕೆ ಬರುತ್ತದೆ.

ನಿತಾಯಿಯ ಮೋರೆ ಕಾಣಿಸುತ್ತಿದೆ. ಮೋರೆ ಅಲ್ಲ, ಮುಖವಾಡ.... ನಿರ್ವಿಕಾರವಾಗಿದೆ, ನಿರ್ಲಿಪ್ತವಾಗಿದೆ. ಗ್ರಾನೈಟ್ ಕಲ್ಲಿನಂತಿದೆ. ಮೂಲೆಯಲ್ಲಿ ಒಂದೇ ಮುಖಭಾವದೊಂದಿಗೆ ನಿಂತಿದ್ದಾನೆ. ನರಿಯಂತಹ ಕಣ್ಣುಗಳು. ರೆಪ್ಪೆಯ ಕೂದಲುಗಳೂ ಉದುರಿಹೋಗುತ್ತಿವೆ. ರೆಪ್ಪೆ ಮಿಟುಕಿಸೋದಿಲ್ಲ ಅಂತ ಕಾಣುತ್ತದೆ. ಗ್ರಾನೈಟಿನಂಥ ಕಣ್ಣುಗಳು, ಇಲ್ಲ, ಯುರೇನಿಯಂನಿಂದಾದುವು, ಅದೂ ಆದಿಕಾಲದ ಯುರೇನಿಯಂ, ಪ್ರಪಂಚ ಯಾವತ್ತು ಹುಟ್ಟಿತೋ ಆ ಕಾಲದ್ದು. ರೇಡಿಯಂ ಜಾರುತ್ತಾ ಸೀಸವಾಗುವಂತೆ ಕಣ್ಣುಗಳು ಸೀಸದಂತಾಗಿವೆ. ಕೂದಲು ಸಹ ಸೀಸದಂತಿದೆ. ಈ ಸೀಸವನ್ನೇ ಲೆಕ್ಕಕ್ಕೆ ತೆಗೆದುಕೊಂಡು ಭೂಮಿಯ ವಯಸ್ಸನ್ನು ಲೆಕ್ಕ ಹಾಕಬಹುದಾದರೆ, ನಿತಾನ ವಯಸ್ಸು ಎಷ್ಟಾಗಬಹುದು? ಅಸ್ಥಿರ ಭಾವನೆ ಸ್ಥಿರವಾಗುತ್ತದೆ.... ಮನಸ್ಸಿನ ಧಕ್ ಧಕ್ ನಿಲುಗಡೆಗೆ ಬರುತ್ತದೆ. ಒಂದು ಕ್ಷಣ ಈ ಯುರೇನಿಯಂ ಮನುಷ್ಯ, ಸೀಸದ ಮನುಷ್ಯ, ಮಣ್ಣಿನ ಮನುಷ್ಯ ಅದೆಷ್ಟು ಮಂದಿ ಸಾಹೇಬರುಗಳ, ಅದೆಷ್ಟು ಬಗೆಯ ವಿವಿಧ ಕಂಪನಿ ಅಧಿಕಾರಿಗಳ ಆಡಂಬರ ಅಟ್ಟಹಾಸಗಳನ್ನು ನೋಡುತ್ತಾ ಬಂದಿದ್ದಾನೆ. ಕಂಪನಿ ತಲೆಮಾರುಗಳ ಕಾಲದಿಂದ ನಡೆದುಬರುತ್ತಿದೆ.... ನಿತಾನಂತಹ ಎಷ್ಟು ಮಂದಿ ಬಂದು ಹೋಗಿದ್ದಾರೆ, ಬೈಗಳನ್ನು ಅರಗಿಸಿಕೊಂಡಿದ್ದಾರೆ, ಕೈರುಜಾಡಿಸಿಕೊಂಡು ಗೈಯುತ್ತಿದ್ದಾರೆ. ಹಾಗೆಯೆ ಸಮಯ ಸಿಕ್ಕಾಗ ಒಲೆಯ ಬೆಂಕಿ ಊದಿ ಇನ್ನೂ ಧಗ್ ಅಂತ ಹತ್ತುವ ಹಾಗೆ ಮಾಡಿದ್ದಾರೆ. ನಿತಾ ಹೇಳುತ್ತಿರುತ್ತಾನೆ ಒಬ್ಬ ಮಿಲಿಟರಿ ಆಫೀಸರ್ ಇದ್ದನಂತೆ, ಅವನು ಕಾಗದದ ಮೇಲೆ ಭಾರ ಹೇರುವ ಪೇಪರ್‌ವೇಯ್ಟಿನಿಂದಲೆ ಹೊಡೆಯುತ್ತಿದ್ದನಂತೆ. ಮತ್ತೊಬ್ಬ ಮ್ಯಾಕ್ ಅಥವಾ ಹೈಲ್ಯಾಂಡರ್ ಅಂತಲೂ ಏನೋ, ಅವನು ಮಾತೆತ್ತಿದರೆ ಹೊಡೆಯುವುದಕ್ಕೇ ಬರುತ್ತಿದ್ದನಂತೆ, ನಿತಾ ಹೇಳುತ್ತಾನೆ ಗಡ್ಡದ ಆಳು ರಹಮಾನ್ ಮಿಯಾನನ್ನೂ ಅವನನ್ನು ಬಿಡಿಸಿದ್ದನಂತೆ. ಒಮ್ಮೆ ಸಾಹೇಬರು ರಹಮಾನನ ಮೇಲೆ ಕೈಯೆತ್ತಿದಾಗ ಅವನು ಅವರನ್ನು ತಡೆದು ದಬಾಯಿಸಿದ್ದನಂತೆ - "ಏನು ಬುದ್ಧಿ, ಇದೇನು ಮಾಡ್ತಾ ಇದ್ದೀರಿ. ನೋಡಿ, ಬೇಕಾದ್ರೆ ಕುಸ್ತಿ ಮಾಡೋದಾದ್ರೆ ಕೆಳಗಿಳಿದು ಬನ್ನಿ." ಆಮೇಲೆ ಮ್ಯಾಕ್ ಸಾಹೇಬರು ಕೈ ಕೈ ಮಿಲಾಯಿಸಿದ್ದರಂತೆ. ಯುರೇನಿಯಂ ಮನುಷ್ಯ, ಸೀಸದಿಂದ ಮಾಡಿದ ಮನುಷ್ಯ ನಿತಾ... ರಹಮಾನನದು ಅರ್ಧ ಗಂಡುಮುಖ, ಅರ್ಧ ಹೆಣ್ಣು ಮುಖ - ಅರ್ಧನಾರೀಶ್ವರ, ಸಹಿಸುತ್ತಲೆ ಬಂದಿದ್ದಾನೆ - ನೋಡುತ್ತಲೆ ಬಂದಿದ್ದಾನೆ. ಕಡೆಗೆ ಏಕಾದರೂ ಬದುಕಬೇಕು, ಬದುಕೋದರಲ್ಲಿ ಏನು ಖುಷಿಯಿದೆ? ಯಾಕೆ ಸಾಯೋದಿಲ್ಲ?.... ಅದೇ ಒಂದು ರಸಮಯವಾದ ಬದುಕು.... ಅವನು ಎಲ್ಲವನ್ನೂ ಒಂದೇ ರೀತಿಯಲ್ಲಿ ನೋಡಿದ್ದಾನೆ.

ಹೆಲ್.... ಓ ಹೆಲ್! ತಲೆಯಲ್ಲಿ ಬೆಂಕಿ ಇಟ್ಟಂತಾಗುತ್ತದೆ.

ಸಿವಿಲಿಸೇಷನ್ ಇಸ್.....

ಮನಸ್ಸಿನಲ್ಲಿ ಭುಗಿಲೆದ್ದ ವಿಷದಿಂದ ಒಳಗೆಲ್ಲ ತೊಳಸಿದಂತಾಗುತ್ತದೆ. ಚಡಪಡಿಸುತ್ತಿದ್ದಾನೆ-ಅದಕ್ಕಾಗಿಯೇ ಹೊಡೆದಾಟ, ಬೈಗುಳ, ನಾಯಿಯಂತೆ

ಕಚ್ಚಾಟ.... ಸಿವಿಲಿಸೇಷನ್ ಇಸ್.

ಕಣ್ಣುಗಳು ಕೆಂಪಾದವು - ಒಳಗೆ ಬೇಗುದಿ ಹೆಚ್ಚುತ್ತಿತ್ತು. ಅವನು ನಿತಾಯಿಯ ಮೇಲೆ ಅರ್ಧ ಉರಿದ ಸಿಗರೇಟು ಎಸೆದು ಗರ್ಜಿಸಿದ - "ನಿತಾಯ್.... ಈಡಿಯೆಟ್... ಮುದಿಮುಂಡೇದೆ."

"ಬುದ್ಧಿ."

"ಏನು ಬೆಪ್ಪನಂತೆ ನೋಡ್ತಾ ನಿಂತುಬಿಟ್ಟೆ. ಈ ತಟ್ಟೆಗಳನ್ನ ಯಾಕೆ ತೆಗೀಲಿಲ್ಲ?"

ಅವನ ಬಾಯಿಂದ ಇನ್ನೂ ಪೂರ್ತಿ ಮಾತು ಹೊರಟೇ ಇರಲಿಲ್ಲ, ನಿತಾ ಬಂದು ತಾನೊಂದು ಯಂತ್ರವೇನೊ ಎಂಬಂತೆ ತಟ್ಟೆಗಳನ್ನು ಎತ್ತಿಕೊಂಡ. ಸೀಸದ ಮನುಷ್ಯನಿಗೆ ತನ್ನದೇ ಆದ ಗತ್ತಿದೆ-ಎಲ್ಲವನ್ನೂ ಅವನು ಸಹಿಸಿಕೊಂಡ. ಅದಾದ ಮೇಲೆ ನ್ಯೂಸ್ ಪೇಪರ್ ಬಿಡಿಸಿಟ್ಟ. ಕೆಂಪು ಸಿಗರೇಟ್ ಡಬ್ಬತೆಗೆದು ಮುಂದಿಟ್ಟ. ಈ ಐದು ನಿಮಿಷಗಳಲ್ಲೇ ಬಲಿದತ್ತ ದಾಸ್ ಸಾಹೇಬರು ಪತ್ರಿಕೆಯ ಮೇಲೆ ಕಣ್ಣೋಡಿಸುತ್ತಾರೆ.

ಚಕಿತಗೊಳಿಸುವ ಸುದ್ದಿ. ಹೆಸರಾಂತ ಭೂಸೇನೆಯ ಅಧಿಪತಿ ಜನರಲ್ ಉಡ್ಸನ್ ಅವರ ಹೆಂಡತಿಯನ್ನು ಹೆಸರಾಂತ ವಿಮಾನದಳದ ಅಧಿಪತಿ ಏರ್‌ಕಮೋಡರ್ ಕೇಜಲಿ ಅಪಹರಿಸಿದ್ದಾರಂತೆ, ಉಡ್ಸನ್ ಅವರಿಗೆ ವಿಚ್ಛೇದನ ಪಡೆಯಲು ಅವಕಾಶ ದೊರೆತಿದೆಯಂತೆ.

ಮುದಿ ವುಡ್ಸನ್ ಅವರಿಗೆ ಅನೇಕ ಯುದ್ಧಗಳಿಗಾಗಿ ಅಭಿನಂದನೆ, ಬಿರುದುಗಳು, ಪದಕಗಳು ದೊರೆತಿವೆ. ಬಡ್ತಿ ಪಡೆದು ತುಂಬ ಮೇಲೇರಿದ್ದಾರೆ. ಇವತ್ತು ಅವರಿಗೆ ಸಂಸಾರವಿಲ್ಲ. ನಾಲ್ಕು ಅಡಿ ಒಂಬತ್ತು ಅಂಗುಲ ಎತ್ತರದ ಬಲಿದತ್ತದಾಸ್ ನಿಟ್ಟುಸಿರುಬಿಟ್ಟ. ಸಾಹೇಬರುಗಳ ಮನಸ್ಸನ್ನು ಅವನು ಅರಿಯಬಲ್ಲ. ಅವರ ಕಷ್ಟಸುಖಗಳೇನು ಅಂತ ಅವನು ತಿಳಿದುಕೊಳ್ಳಬಲ್ಲ. ಏಕೆಂದರೆ ಅವನೇ ಸ್ವತಃ ಸಾಹೇಬನಲ್ಲವೆ. ಈ ಬಗ್ಗೆ ಅವನಿಗೆ ಹೆಮ್ಮೆಯಿದೆ.

ಇದ್ದಕ್ಕಿದ್ದ ಹಾಗೆ ಅವನ ಎದೆ ಡಗ್ ಅಂದಿತು, ಕಣ್ಣಿನ ಮುಂದೆ ಪತ್ರಿಕೆಯ ಹೆಡ್‌ಲೈನ್ ಅಸ್ಪಷ್ಟವಾಗಿ ತೇಲಿಹೋಯಿತು.

ಸರೋಜಿನಿಯ ನೆನಪಾಯಿತು. ಅವಳು ಪೂರ್ತಿ ಅವನವಳೇ, ಪೂರ್ತಿ. ಅವನು ಅವಳನ್ನು ಅದೆಷ್ಟು ಪ್ರೀತಿಸುತ್ತಾನೆ.... ಮನಸಾರೆ ಇಷ್ಟಪಡುತ್ತಾನೆ. ಕಚೇರಿಯ ಗಡಿಯಾರದಲ್ಲಿ ಎರಡು ಗಂಟೆ ಹದಿನೈದು ನಿಮಿಷಗಳಾಗಿವೆ. ಸರೋಜಿನಿ ಆಡ್ತಾಡಲು ಹೋಗಿರಬಹುದೇನೊ. ಈಚೆಗೆ ಅವಳು ಅನೇಕ ಪಾರ್ಟಿಗಳಿಗೆ ಹೋಗುತ್ತಾಳೆ, ಮಗುವಿನಂತಾಗಿ ಹೋಗಿದ್ದಾಳೆ, ಏಳಿಗೆ ಹೊಂದುತ್ತಿದ್ದಾಳೆ. ಅವಳ ಬದುಕು ಅರಳುತ್ತಿದೆ.

ಅಡ್ಡಾಡಲು ಹೋಗಲಿ, ಹೇಗಿದ್ದರೂ ಹಿಂದಿರುಗುತ್ತಾಳಲ್ಲ.

ಮೂರೂವರೆ ಹೊಡೆಯುವುದರಲ್ಲಿದೆ.

ಕುತ್ತಿಗೆಯ ಕೆಳಗೆ ತೋಳುಗಳನ್ನಿಟ್ಟು ಸರೋಜಿನಿ ಮಲಗಿದ್ದಾಳೆ. ಏನೋ ಸ್ವಲ್ಪ

ಅಲಸಿಕೆ. ದಾರಿ ಕಾಯುವ ತವಕ.

ತೆರೆದ ಕಿಟಕಿ ಬಾಗಿಲುಗಳಿಂದ ಗಾಳಿ ಬರುತ್ತದೆ. ಸರೋಜಿನಿಯ ಮೈಯನ್ನು ಸೋಕುತ್ತಿದೆ. ಹತ್ತಿರದಲ್ಲೆ ಒಂದು ಬರವಣಿಗೆ ಪುಸ್ತಕ ಬಿದ್ದಿದೆ, ಅದರ ಚರ್ಮದ ಹೊದಿಕೆ ಹೊಳೆಯುತ್ತಿದೆ. ಅದರ ಅಂಚಿನಲ್ಲಿ ಹೊಂಬಣ್ಣದ ಗೆರೆಯಿದೆ. ಅದರಲ್ಲೇ ಸರೋಜಿನಿ ತಾನು ಪಾಲುಗೊಳ್ಳಬೇಕಾದ ಪಾರ್ಟಿಗಳು, ಆಹ್ವಾನದ ಮೇರೆಗೆ ಹೋದ ಸಭೆ ಸಮಾರಂಭಗಳು, ಮುಖ್ಯ ಘಟನೆಗಳು, ತನ್ನ ಯೋಜನೆಗಳು ಇವುಗಳ ಬಗ್ಗೆ ಬರೆಯುತ್ತಾಳೆ.

ಯಾರು ಹೇಳಿದ್ದರೂ ನೆನಪಿಲ್ಲ - "ಬದುಕಿನಲ್ಲಿ ಉದ್ದೇಶಗಳನ್ನು ಇಟ್ಟು ಕೊಂಡಿರಬೇಕು. ಸಮಯವನ್ನು ವೇಳಾಪಟ್ಟಿಗೆ ಅನುಗುಣವಾಗಿ ಬಳಸಬೇಕು. ಏನೇನು ಕೆಲಸಗಳನ್ನು ಮಾಡಬೇಕು ಅನ್ನುವುದನ್ನು ಡೈರಿಯಲ್ಲಿ ಬರೆದಿಟ್ಟು ಕೊಳ್ಳಬೇಕು."

ಯಶಸ್ಸು ತನಗೆ ತಾನೇ ಬರುವುದಿಲ್ಲ.

ಸರೋಜಿನಿ ಶೂನ್ಯದತ್ತ ದೃಷ್ಟಿ ನೆಟ್ಟಿದ್ದಾಳೆ. ಮೆಲ್ಲಮೆಲ್ಲಗೆ ಕಾಲಾಡಿಸುತ್ತಿದ್ದಾಳೆ. ಗಡಿಯಾರದ ಟಿಕ್‌ಟಿಕ್‌ನಂತೆ ಮನದಾಳದಲ್ಲಿ ಒಂದು ರೀತಿಯ ಹರಿವು ಕಂಡುಬರುತ್ತದೆ.

ಮೂರೂವರೆ ಹೊಡೆಯುವುದರಲ್ಲಿದೆ.

ಈಗ ಕಿವಿಗೆ ಈ ಸದ್ದು ಪರಿಚಯವಾಗಿದೆ.

ಮೇಲ್ನೋಟಕ್ಕೆ ನಿಶ್ಶಬ್ದವಾಗಿ ಕಂಡರೂ ಅದರತ್ತ ಯಾರಾದರೂ ಕಿವಿಗೊಟ್ಟು ಕೇಳಿದರೆ ಅದರಲ್ಲಿ ಅನೇಕ ಶಬ್ದಗಳಿರುವುದು ಅನುಭವಕ್ಕೆ ಬರುತ್ತದೆ. ಖಟ್-ಖಾಟ್-ದುಮ್-ದೂರದಲ್ಲಿ ಈ ಹರ್ಷ ಇದ್ದಾನೆ. ಅವನ ಬಲಗೈ ಯಾವಾಗಲೂ ಏನಾದರೂ ಮಾಡುತ್ತಲೇ ಇರುತ್ತದೆ. ಏನಾದರೂ ಸರಿ ಅವಳು ಅವನ ಮೇಲೆ ಉರಿದುಬೀಳುತ್ತಾಳೆ. ಯಾಕೆಂದರೆ ಅವನು ಶುಚಿಯಾಗಿರಲ್ಲ, ಕೊಳಕಾಗಿರುತ್ತಾನೆ. ಹರ್ಷ ಒಂದೊಂದು ಸಾರಿ ತುಂಬ ಗಲೀಜಾಗಿರುತ್ತಾನೆ. ಆಗ ಅವಳು ಇನ್ನೂ ಹೆಚ್ಚು ಕೆಂಡವಾಗುತ್ತಾಳೆ.

ಹರ್ಷನ ಧ್ವನಿ. ದೂರದಲ್ಲಿ ಎಲ್ಲೋ ಕಾಗೆ ಕಾಂವ್ ಕಾಂವ್ ಅನ್ನುತ್ತಿದೆ. ಜೊತೆಯಲ್ಲಿ ಇನ್ನೂ ಅನೇಕ ಪಕ್ಷಿಗಳ ಧ್ವನಿ, ಒಟ್ಟಾರೆ ದೂರದಿಂದ ಬರುತ್ತಿರುವ ಏನೇನೂ ಶಬ್ದಗಳು.... ಗಾಡಿ.... ಜನಗಳ ಗುಂಪು-

ಸೊಂಯ್ ಅಂತ ಬೀಸುತ್ತಿರುವ ಗಾಳಿಯ ಸದ್ದು, ಮರೆಯಲ್ಲಿ ಇಬ್ಬರು ಉಸಿರಾಡುತ್ತಿರುವಂತೆ ಕಾಣುತ್ತದೆ.... ಕೇಕೆಯ ಸದ್ದು.... ಜೊತೆಯಲ್ಲಿ ಅದುಮಿಟ್ಟ ನಗು.... ಅಡಗಿದಂತೆ. ಯೋಚಿಸಿದರೆ ಹೇಗನಿಸುತ್ತದೆ ? ಸರೋಜಿನಿ ಎದ್ದು ಹಾಸಿಗೆಯತ್ತ ನಡೆದಳು. ಓಕುಳಿ ಹಚ್ಚಿದಂಥ ಮೋರೆ, ನಾಲ್ಕೂ ಕಡೆ ನೋಡಿದಳು - ಇಲ್ಲ, ಯಾರೂ ಇಲ್ಲ.

ಬಿಸಿಲಿನ ಝಳ ಕಡಮೆಯಾಗುತ್ತಿದೆ. ಅವಳು ಕೈಗೆ ಕಟ್ಟಿದ್ದ ತೆಳ್ಳನೆಯ ಪಟ್ಟಿಯ ಗಡಿಯಾರ ನೋಡಿದಳು. ಮೂರೂವರೆ ಹೊಡೆಯುವುದರಲ್ಲಿದೆ - ಅವಳು ತಯಾರಾಗಿ ಕುಳಿತಿದ್ದಾಳೆ. ಈ ಬಾರಿ ಬಹುಶಃ..... ಕಿಟಕಿಯಿಂದ ದೂರದಲ್ಲಿ

ಕಾಣುತ್ತಿದ್ದ ಕಟ್ಟಡಗಳ ಮೇಲೆ ದೃಷ್ಟಿನೆಟ್ಟಳು. 'ಅವರು' ನೆನಪಿಗೆ ಬಂದರು. ಕಂಪನಿಯ ನೆಚ್ಚಿನ ಕೆಲಸಗಾರ. ಕೆಲಸದಲ್ಲಿ ತೊಡಗಿರಬಹುದು. ಆದರೆ ಕೆಲಸ ಯಾರು ಮಾಡುವುದಿಲ್ಲ? ವಾಪಸು ಬರೋಹೊತ್ತಿಗೆ ಮುಖವೆಲ್ಲ ಹಳಸಿದಂತಾಗಿರುತ್ತದೆ. ಸಾಯಂಕಾಲವಾಗುತ್ತದೆ - "ಹರ್ಷ, ಸ್ವಲ್ಪ ಕಾಲೊತ್ತು."

"ಹಹಹ...ಹಹಹ..."

ರಣಜಿತಬಾಬು, ಅದೆಷ್ಟು ಸ್ಮಾರ್ಟ್, ದಷ್ಟಪುಷ್ಟ ಮೈಕಟ್ಟು, ಅದೆಂಥ ಲವಲವಿಕೆ. ನರೇಂದ್ರ ಯಾದವ್ ಬಾಗಿದ ಭಂಗಿಯಲ್ಲಿ ಚುಟ್ಟಾ ಹಿಡಿದು, ತ್ರಿವ್ಯಾಗ್ರಿ ಎಷ್ಟು ಸೊಗಸಾಗಿರುತ್ತದೆ. ವಿಶಾಲವಾದ ಎದೆ, ಅಗಲವಾದ ತೋಳುಗಳ ನಡುವೆ ಅಡಗಿದಂತಿರುವ ಕುತ್ತಿಗೆ, ಬಹುಶಃ ಪ್ರಕೃತಿ ಮೊದಲೇ ಯೋಚಿಸಿ ಹೆಚ್ಚು ಜವಾಬ್ದಾರಿ ಹೊರಲೆಂದೇ ಮಾಡಿದಂತಿದೆ. ಮಿಸ್ಟರ್ ತ್ರಿಪಾಠಿ ಆಕಾರದಲ್ಲಿ ಕುಳ್ಳ, ಆದರೂ ಏನೋ ಒಂದು ರೀತಿಯ ಆಕರ್ಷಣೆ ಮೋಹಕಶಕ್ತಿ ಕಾಣುತ್ತದೆ. ಮೈಕಟ್ಟಿಗೆ ಹೊಂದುವ ಉಬ್ಬಿದ ಕೆನ್ನೆಗಳು, ಒಳ್ಳೆ ರಸ ತುಂಬಿದಂತಿವೆ, ಅಗಲವಾದ ಹಣೆ, ಕಣ್ಣುಗಳಲ್ಲಿ ಮಕ್ಕಳಿಗೆ ಲಾಯಕ್ಕಾದ ತುಂಟತನ, ಪುಷ್ಟವಾದ ಸಣ್ಣಸಣ್ಣ ಕೈಗಳು- ಅದು ಯಾವುದರಿಂದ ಮೋಹಕಶಕ್ತಿ ಹೊಮ್ಮುತ್ತದೊ ಗೊತ್ತಿಲ್ಲ. ಆದರೆ ಜನ ಹೇಗೆ ಅಂದರೆ ತೋರಿಸೋದು ಒಂದು, ಮಾಡೋದು ಮತ್ತೊಂದು. ಆದರೂ ಅವರ ಬದುಕು ಚೆನ್ನಾಗಿಯೆ ಸಾಗುತ್ತದೆ. ಯಾರೋ ಒಬ್ಬರು ನಯವಾಗಿ ವ್ಯವಹಾರ ಮಾಡಿದರೆ ಮತ್ತೊಬ್ಬರು ಒರಟಾಗಿಯ ನಡೆದುಕೊಳ್ಳುತ್ತಾರೆ. ಯಾರೋ ಒಬ್ಬರು ತುಂಬ ಅಸಹಾಯಕರಂತೆ ಕಂಡುಬಂದು ಸಹಾನುಭೂತಿಗೆ ಯೋಗ್ಯರೆನಿಸಿದರೆ ಇನ್ನೊಬ್ಬರಲ್ಲಿ ಕಾಡುಪ್ರಾಣಿಯ ಮತ್ತು, ಉನ್ಮಾದ ಎದ್ದು ಕಾಣುತ್ತದೆ. ಒಬ್ಬರ ಕೆನ್ನೆ ನುಣುಪಾಗಿ ಹೊಳೆಯುತ್ತಿದ್ದರೆ ಇನ್ನೊಬ್ಬರದು ಮುಳ್ಳುಮುಳ್ಳಾಗಿರುವ ಚೂಪು ಮೀಸೆ. ಮನುಷ್ಯನನ್ನು ಪ್ರಾಣಿಗಳ ಜೊತೆ ಸೇರಿಸಿಯೂ ನೋಡಬಹುದು - ಒಳಗೆ ಬೆಂಕಿ, ಇಂಜಿನ್ನಿನ ಶಕ್ತಿಯಿದ್ದರೆ ಮನುಷ್ಯಜಂತು ಎಷ್ಟು ಸೊಗಸಾಗಿ ಕಾಣುತ್ತಾನೆ. ಅದರಲ್ಲೂ ವಿಶೇಷವಾಗಿ ಗುಂಪಿನಲ್ಲಿ, ಅದೂ ತಮ್ಮ ಶೌರ್ಯಪ್ರದರ್ಶನ ಮಾಡುವುದಕ್ಕಾಗಿ.

ಅದೇ ಪ್ರಾಣಿಗಳು ಕುರಿಮಂದೆಯಂತಿರಬೇಕಾದರೆ ಆಗ

ಮ್ಯಾ....ಮ್ಯಾ.... ಮ್ಯಾಗುಟ್ಟುತ್ತಿರುತ್ತವೆ.

ತಲೆಯ ಮೇಲೆರಡು ಕೋಡುಗಳು.... ಮ್ಯಾ....ಮ್ಯಾ....

ಒಂದು ಮೇಕೆ ಬರುತ್ತದೆ - ಬಾಗಿಲಬಳಿ. ಸರಸರ ಸದ್ದು ಮಾಡುತ್ತದೆ. ಬಾಗಿಲು ಮುಚ್ಚಿದೆ. ಹತಾಶೆಗೊಂಡು ಕುತ್ತಿಗೆ ಉಜ್ಜುತ್ತಿದೆ. ಅದರ ಕಣ್ಣುಗಳು ಮಣ್ಣುಗೆಂಪು ಬಣ್ಣಕ್ಕೆ ತಿರುಗಿವೆ, ಬಾಯಿಂದ ಜೊಲ್ಲು ಸುರಿಯುತ್ತಿದೆ.

ಅದರ ತಲೆಮೇಲೆ ಎರಡು ಕೋಡುಗಳಿವೆ.

ಓಹ್, ಎಂಥ ಸೊಗಸಾದ ಕಲ್ಪನೆ. ಸರೋಜನಿಯ ವ್ಯಕ್ತಿತ್ವ ಇನ್ನೊಂದು ಪರದೆ ಸರಿಸಿ ಮುಂದೆ ಬಂತು. ಕೈಯಲ್ಲಿರುವ ಗಡಿಯಾರದಲ್ಲಿ ಆಗಲೇ ಮೂರು ನಲವತ್ತು. ಮೇಕೆ ಮುಂದೆ ಹೋಗುತ್ತಲೆ ಇದೆ.

ಮತ್ತೆ 'ಅವರ' ನೆನಪಾಗುತ್ತದೆ. ತಿಂಡಿ. ಸಿಹಾ ಚಹಾ ತಂದುಕೊಡುತ್ತಿರಬಹುದು.

ಆದರೆ ಅವರು ಇನ್ನೂ ಸ್ವಲ್ಪ ಪ್ರಯತ್ನಪಡಬೇಕು. ಸರೋಜಿನಿ ಗಂಭೀರವಾಗಿ ಯೋಚನೆ ಮಾಡುತ್ತಾಳೆ. ಅವರು ಊಟಕ್ಕೆ ಕುಳಿತಾಗ ಈಗ ಸರೋಜಿನಿ ಲೆಕ್ಚರ್ ಕೊಡುತ್ತಾಳೆ. ಬದುಕಿನ ಕತೆ ಹೇಳುತ್ತಾಳೆ. ಸುಖ, ಆರಾಮದ ವಿಷಯವಾಗಿ ಮಾತಾಡುತ್ತಾಳೆ, ಬೇರೆಯವರ ವಿಚಾರ ತೆಗೆಯುತ್ತಾಳೆ. ಮೊದಲಿನಿಂದಲೂ ಅವರು ಕೆಲಸಕ್ಕೆ ಬಾರದ ಹರಟೆ ಹೊಡೆಯುವುದಿಲ್ಲ. ಊಟ ಮಾಡುತ್ತಿರಬೇಕಾದರೂ ಬಹುಮಟ್ಟಿಗೆ ಉದ್ಯೋಗದ ಹೊರೆಯನ್ನು ತಲೆಯಮೇಲೆ ಹೊತ್ತೇ ಇರುತ್ತಾರೆ. ಬದುಕಿನಲ್ಲಿ ಅವರೇನು ಕಂಡಿದ್ದಾರೆ ? ಆದರೆ, ಹೇಳುವುದರಿಂದ ಇಲ್ಲವೆ ತಿಳಿಸಿಹೇಳುವುದರಿಂದ ಏನೂ ಆಗುವುದಿಲ್ಲ. ಯಾವುದು ಹೇಗಿರುತ್ತದೊ ಹಾಗೆಯೆ ಇರುತ್ತದೆ.

ಇದೇನು ? ಮೂರೂಮುಕ್ಕಾಲಾಯಿತು ? ಸರೋಜಿನಿ ತನ್ನ ಸಣ್ಣ ಪುಸ್ತಕ ತೆಗೆದು ನೋಡಿದಳು. ಇದ್ದಕ್ಕಿದ್ದಂತೆ ಮೋಟಾರು ಕಾರಿನ ಹಾರ್ನ್ ಸದ್ದು ಕೇಳಿಸಿತು, ಅದು ಪರಿಚಯವಿರುವ ಸದ್ದು, ತುತ್ತೂರಿಯ ಧ್ವನಿಯಂತೆ ಯಾವುದೋ ಸಿನೆಮಾದಂತೆ ರಾಜಾ ರಾಣಿ ರಥದಲ್ಲಿ ಬರುತ್ತಿದ್ದಾರೆ, ಜನ ಎಳೆಯುತ್ತಿದ್ದಾರೆ, ಮುಂದೆ-ಮುಂದೆ ತುತ್ತೂರಿಯ ಧ್ವನಿ-ಧ್ವನಿ ಬರುತ್ತಿದೆ - ಏಳಿ, ದಾರಿಬಿಡಿ -

ರಣಜಿತಬಾಬುವಿನ ಬೆಲೆಬಾಳುವ ಮೋಟಾರು ಕಾರು ಬಾಗಿಲಿನ ಬಳಿ ಬಂದು ನಿಂತಿತು - ಅದೇ ರಣಜಿತಬಾಬು ಇಳಿಯುತ್ತಿದ್ದಾರೆ, ಈಗ ಮಿಲಿ ಇಳಿಯುತ್ತಾಳೆ. ಮಗುವಿನಂತೆ ನಿಶ್ಚಿಂತೆಯಿಂದ ಬಾಗಿಲಿನ ಮೇಲೆ ಫ್ರೇಮಿನಲ್ಲಿ ಕಟ್ಟಿಹಾಕಿರುವ ಚಿತ್ರದಂತೆ ಸರೋಜಿನಿ ಒಂದು ಕ್ಷಣ ಹಾಗೆಯೆ ನಿಂತಳು. ಎದೆಯಲ್ಲಿ ತಿದಿ ಒತ್ತಿದಂತಾಗಿದೆ.

ಅದೇ ಭಂಗಿಯಲ್ಲೇ ಅವಳು ಆಕಡೆ ತಿರುಗಿದಳು.

ಈ ದಿನ ಒಂದು ಸಣ್ಣ ಔಟಿಂಗ್ ಇದೆ. ದೂರದಲ್ಲಿ ಒಂದು ಮೆಟ್ಟಸವಾದ ಮೈದಾನವಿದೆ. ಅಲ್ಲಿಯ ಇಳಿಜಾರು ನೆಲದ ಮೇಲೆ ಸಾಲುಸಾಲಾಗಿ ಮರಗಳನ್ನು ನೆಟ್ಟಿದೆ. ಅವಳು ಮನೆಯ ಒಳಗಡೆ ಓಡುತ್ತ ಹೋಗುತ್ತಿರಬೇಕಾದರೆ ಮನಸ್ಸಿನಲ್ಲೇ ಆ ಮೈದಾನದ ಸೊಗಸನ್ನು ಅನುಭವಿಸುತ್ತಿದ್ದಳು. ಕಣ್ಣಿನ ವಿಚಿತ್ರ ನೋಟಕ್ಕೆ ಬಿಸಿಲಿನ ಕರಗಿದ ಚಿನ್ನ ಕಾಣುತ್ತಿತ್ತು. ಮೈದಾನದ ನಿರ್ಜನತೆಯೊಂದಿಗೆ ಹೃದಯದಲ್ಲಿ ಮನೆ ಮಾಡಿದ್ದ ಶೂನ್ಯತೆ ಸೊಂಯ್ ಸೊಂಯ್ ಅನ್ನುತ್ತಿತ್ತು - ಮನಸ್ಸಿಗೆ ಅಸ್ಪಷ್ಟವಾಗಿ ಎಲ್ಲವೂ ಗೋಚರವಾಗುತ್ತಿತ್ತು. ಸಾಲುಸಾಲಾಗಿ ನಿಂತಿರುವ ಮರಗಳ ಕಡೆಗೆ ಹಂಸದಂತೆ ಹುಲ್ಲಿನ ಮೇಲೆ ತೇಲಿಹೋಗುತ್ತಿರುವ ಮಿಲಿ ಬದುಕಿನ ಬಗ್ಗೆ ಗಂಭೀರವಾದ ವಿಚಾರಗಳನ್ನು ಹೇಳುತ್ತಿರುವಂತೆ ಕಂಡುಬಂತು.

ಮಿಲಿ ಈಗ ಬಹುಶಃ ದೂರಕ್ಕೆ ಗುರಿಯಿಟ್ಟು ಹೊಡೆಯಲು ಸಣ್ಣ ಸಣ್ಣ ಕಲ್ಲುಗಳನ್ನು ಹಿಡಿದು ಹಿಂದೆ ಹೆಜ್ಜೆಯಿಟ್ಟು ನಿಲ್ಲುವಳು, ಅವಳು ಆಗಾಗ್ಗೆ ಹಾಗೆ ಮಾಡುವುದುಂಟು.

ಆಗ ರಣಜಿತಬಾಬು ಪಿಸುಗುಟ್ಟಿ ಕೇಳುತ್ತಾರೆ-

"ನೀವೇನು ಯೋಚನೆ ಮಾಡುತ್ತಿದ್ದೀರಿ-"

ಮರದ ಮರೆಯಲ್ಲಿ ಹಕ್ಕಿಗಳು ಚಿಲಿಪಿಲಿಗುಟ್ಟುತ್ತವೆ - ಚಿಲಿಪಿಲಿ - ಚಿಲಿಪಿಲಿ.

ಸರೋಜಿನಿ ಅಡ್ಡಾಡುವುದಕ್ಕೆ ಹೋಗುವುದೇನೂ ಸರಿ. ಅದಕ್ಕೇನಂತೆ.

ಬಲಿದತ್ತ ತನಗೆ ತಾನೇ ಹೆಮ್ಮೆಪಟ್ಟುಕೊಳ್ಳುತ್ತಾನೆ. ಅವನು ಮನೆಯಲ್ಲಿ ಅಡಗಿ ಕುಳಿತುಕೊಳ್ಳುವ ಸ್ವಭಾವದವನಲ್ಲ, ಹೊರಗೆ ದುಡಿಯುವ ಮನುಷ್ಯ ತನ್ನ ಬದುಕನ್ನು ಅವನು ಸಣ್ಣ ಬೀಜದಿಂದ ಹೆಮ್ಮರವಾಗಿ ಬೆಳೆಸಿಕೊಂಡಿದ್ದಾನೆ. ಇದೇ ಅವನಲ್ಲಿರುವ ಶ್ರೇಷ್ಠಕಲೆ. ಈಗ ಅವನು ಬೇರೆಯವರಿಗೆ ಉಪದೇಶ ಮಾಡುವ ಹಂತವನ್ನು ತಲುಪಿದ್ದಾನೆ. ನನ್ನನ್ನು ನೋಡು, ನನ್ನನ್ನು ನೋಡಿ ಕೆಲಸ ಮಾಡು. ನಿನಗೂ ನಿನ್ನ ಬಾಳು ರೂಪಿಸಿಕೊಳ್ಳಲು ಸಾಧ್ಯವಾಗುತ್ತದೆ.

ಇನ್ನು ಸರೋಜಿನಿಯ ವಿಚಾರ - ಅವನ ಪಾಲಿಗೆ ಅವಳೂ ಹೆಮ್ಮೆಯ ವಿಷಯವಾಗಿದ್ದಾಳೆ. ಸಮಾಜದ ಪ್ರತಿ ಮಜಲಿನಲ್ಲೂ ಒಂದೊಂದು ರೀತಿಯ ಜನ ಇದ್ದೇ ಇರುತ್ತಾರೆ. ಅವರು ಯಾವುದೇ ರೀತಿಯ ಕೆಲಸವನ್ನು ಮಾಡಿಸಿಕೊಳ್ಳಲು ಮನಸ್ಸಿನಿಂದಲ್ಲದಿದ್ದರೂ ಹೊಗಳುವ ಸಲುವಾಗಿಯೆ ಬಾಯಿಯಿಂದ ಹೊಗಳುತ್ತಾರೆ, -ಅದರಲ್ಲೂ ಅವರ ಕೆಲಸ ನಡೆಯಬೇಕಾದರೆ ಹಾಗೆ ಮಾಡಿಯೆ ಮಾಡುತ್ತಾರೆ. ಅವತ್ತಿನ ಮಾತನ್ನೇ ತೆಗೆದುಕೊಳ್ಳಿ. ಒಬ್ಬ ವಿದೇಶಿ ಕಂಟ್ರಾಕ್ಟರ್ ಚಿಕ್ಕ ಸಾಹೇಬರ ಬಳಿ ಯಾವುದೋ ಕೆಲಸಕ್ಕಾಗಿ ಬಂದಿದ್ದ. ಸಿಗರೇಟಿನ ಹೊಗೆಯ ಸುಳಿಯಲ್ಲಿ ಅವನು ಹಾಗೂ ಹೀಗೂ ಮಾತಾಡುತ್ತಾ ಬೊಂಬಾಯಿಯಲ್ಲಿ ನಡೆಯುವ ಡ್ಯಾನ್ಸ್‌ಗಳ ಬಗ್ಗೆ ಹೇಳಲಾರಂಭಿಸಿದ. ಮೆಲ್ಲಗೆ ಶುಭ್ರಾಂಗಿನಿಯ ನೃತ್ಯದ ಬಗ್ಗೆ ಸಹ ಪ್ರಸ್ತಾಪಿಸಿದ. ಶುಭ್ರಾಂಗಿಯನ್ನು ಕುರಿತು ಹೊಗಳಿಕೆಯ ಮಾಲೆಯನ್ನೇ ಪೋಣಿಸತೊಡಗಿದ. ಅವನ ಕೆಲಸ ಇದ್ದದ್ದು ಬರೀ ಒಂದು ಸಾವಿರ ರೂಪಾಯಿನದು ಮಾತ್ರ. ಆದರೆ ಅದಕ್ಕಿಂತಲೂ ಹೆಚ್ಚಿಗೆ ಲಾಭ ಹೊಡೆದುಕೊಂಡು ಹೊರಟ. ಜನ ಬಲಿದತ್ತನನ್ನು ಹೊಗಳುತ್ತಾರೆ, ಕೇಳಿ ಕೇಳಿ ಅನಿಸುತ್ತೆ - ನಿಜ ಯಾವುದು ಸುಳ್ಳು ಯಾವುದು ?

ಸರೋಜಿನಿ ಮುಂದೆ ಬರುವುದಕ್ಕಾಗಿ ಅಗತ್ಯವಾದ ಎಲ್ಲ ಅನುಕೂಲಗಳನ್ನು ಒದಗಿಸುವುದು ತನ್ನ ಹೊಣೆಗಾರಿಕೆ ಅಂತ ಅವನು ಯೋಚನೆ ಮಾಡುತ್ತಾನೆ. ಸ್ವರ ಸಾಧನೆ ಮಾಡಿದರೆ ಏನು ಬೇಕಾದರೂ ಹಾಡಬಹುದಲ್ಲವೆ.

ಇಷ್ಟರ ಮೇಲೆ - ಯೋಚಿಸುವುದರಲ್ಲಿ ಎಷ್ಟು ಹೊತ್ತು ಹಿಡಿಯುತ್ತದೆ - ಅವನಾದರೂ ಕೆಲಸಕ್ಕೆ ಮುಡುಪಿಟ್ಟ ಮನುಷ್ಯ. ಕಂಪನಿಯ ಹಿತಾಸಕ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮನಸ್ಸಿಟ್ಟು ಕೆಲಸಮಾಡಬೇಕು. ಅವಕಾಶ ಸಿಕ್ಕಿದಾಗ ಸ್ವಂತ ಏಳಿಗೆಗಾಗಿಯೂ ಪ್ರಯತ್ನ ನಡೆಸಬೇಕು.

ಅವನ ಕೈನಡೆಯುವುದು ಮಧ್ಯದ ಹಂತದಲ್ಲಿ. ಅವಕಾಶ ಸಿಕ್ಕಿದೆ, ಹಾಗಾಗಿ ಅವನೂ ಜನರನ್ನು ಮೇಯಿಸುತ್ತಾನೆ. ಪೈಪೋಟಿಯಲ್ಲಿ ಅವನು ತನ್ನ ಸಣಕಲು ಮೈಯನ್ನು ಚಾಚಿದಾಗ ತನಗಿಂತ ಕೆಳಗಿನ ಜನರ ಭಯದಿಂದ ಕೂಡಿದ ಕಣ್ಣುಗಳನ್ನು ನೋಡುತ್ತಾನೆ.... ಅವನ ಲೇಖನಿ ಸಣ್ಣನೌಕರರ ಹೊಟ್ಟೆಪಾಡಿನ ಮೇಲೆ ಗೆರೆಯೆಳೆಯಬೇಕಾದರೆ, ಯಾರಾದರೂ ದೀನರಾಗಿ ಅಂಗಲಾಚುತ್ತಿರಬೇಕಾದರೆ, ಯಾರಾದರೂ ಬುದ್ಧಿ, ನೀವೇ ಗತಿ ಅಂತ ಕಾಲಿಗೆ ಬಿದ್ದಾಗ, ಬಲಿದತ್ತನಿಗೆ ತಾನೆಷ್ಟು ದೊಡ್ಡವನು ಅಂತ ಅನಿಸುತ್ತದೆ. ಮಾತುಮಾತಿಗೆ ಅರಚಾಡುವುದು ಅವನಿಗೆ

ಸಾಧ್ಯವಾಗುವುದಿಲ್ಲ, ಅವನು ಕೆಲಸಕ್ಕೆ ಮುಡುಪಿಟ್ಟ ಮನುಷ್ಯ. ಆದುದರಿಂದ ಹಜಾಮದ ಕತ್ತಿಯಂತೆ ಲೇಖನಿ ಚಲಾಯಿಸುತ್ತಾನೆ. ನಿಯಮಾವಳಿಗಳ ಹೆಸರಿನಲ್ಲಿ ಕೊಲೆ ಮಾಡುತ್ತಾ ಮಾಡುತ್ತಾ ಅವನಿಗೆ ಪರಮಾನಂದವಾಗುತ್ತದೆ. ತನ್ನ ಕೊಳಕಾದ ಕಳೆದ ಬದುಕನ್ನು ನಿರ್ದಯವಾಗಿ ತೊಡೆದು ಹಾಕುತ್ತ ಮೇಲೆ ಮೇಲೆ ಏಳುತ್ತಿದ್ದೇನೆ ಎಂಬ ನೆಮ್ಮದಿ ಮೂಡುತ್ತದೆ.

ಗೊತ್ತಿರುವವರು ಅವನನ್ನು ನೋಡಿದರೆ ಯಮನನ್ನು ಕಂಡಂತೆ ದಿಗಿಲು ಬೀಳುತ್ತಾರೆ. ಅವನಿಗೆ ಖುಷಿಯಾಗುತ್ತದೆ. ಕೆಲಸ ನಡೆಯಬೇಕಾದರೆ ಹೆದರಿಕೆ ಯಿಟ್ಟುಕೊಂಡಿರುವುದು ಆರೋಗ್ಯಕರವಾದದ್ದು ಅಂತ ಅವನ ನಂಬಿಕೆ. ಕೆಲಸ ಮಾಡುವವರ ಮುಖ ನಗೆ ಉಲ್ಲಾಸಗಳಿಂದ ಹೊಳೆಯುತ್ತಿರುವಂತಿರಬೇಕು. ಆರೋಗ್ಯಕರ, ಶಾಂತ, ಸೋಮಾರಿ -ಇವೆಲ್ಲ ಒಂದೇ. ಹಾಗಾಗಿ ಅವನು ಏನಾದರೂ ಉಪಾಯ ಹೂಡುತ್ತಾನೆ. ಚಾಡಿ ಮಾತುಗಳನ್ನು ಕೇಳುತ್ತಾನೆ. ಅದರಲ್ಲೇ ಸಾಕಷ್ಟು ಸಮಯ ಕಳೆದು ಹೋಗುತ್ತದೆ. ಕೆಲಸಮಾಡಿ ಹೆಸರು ಸಂಪಾದಿಸುತ್ತಾನೆ. ಜನ ಅವನನ್ನು ಹೊಗಳುತ್ತಾರೆ.

ಅವನು ಹೆದರುವುದೆಂದರೆ ಮಿಸ್ಟರ್ 'ಶ' ಅವರಿಗೆ ಮಾತ್ರ. ಅಲ್ಲಿ ಅವನ ಬೇಳೆ ಬೇಯೋದಿಲ್ಲ. ಅಲ್ಲಿ ಅವನು ಸ್ವಲ್ಪವೂ ಬಾಲ ಬಿಚ್ಚುವುದಕ್ಕಾಗೋದಿಲ್ಲ. ಅಲ್ಲಿ ಅವನ ದೋಣಿಯ ಹುಟ್ಟೇ ಆಗಲಿ ಚುಕ್ಕಾಣಿಯೇ ಆಗಲಿ ತಲಪಲಾರವು. ಆಳಗೊತ್ತಿಲ್ಲದಷ್ಟು ಕತ್ತಲೆ ತುಂಬಿದ ಜಲರಾಶಿ ಅಲ್ಲಿದೆ. ಅದರ ಬಣ್ಣ ಯಾವ ಕ್ಷಣದಲ್ಲಿ ಹೇಗೆ ಬದಲಾಗುತ್ತದೆ, ವ್ಯಕ್ತಿತ್ವ ಕ್ಷಣಮಾತ್ರದಲ್ಲಿ ಹೇಗೆ ಬದಲಾಯಿಸಿಬಿಡುತ್ತದೆ ಇದೆಲ್ಲ ನೋಡಿ ಅವನಿಗೆ ಆಶ್ಚರ್ಯವಾಗುತ್ತದೆ-ಇದೇನು ಸ್ಥಿರವೆ? ಇಲ್ಲಿ ಹೇಗೆ ನಡೆದುಕೊಂಡರೆ ಸರಿಹೋಗುತ್ತೆ? ಹೊಗಳುತ್ತಾ ಹೊಗಳುತ್ತಾ ಏಟುತಿಂದವನಂತಾಗುತ್ತಾನೆ, ಗಾಯವನ್ನು ನೆಕ್ಕುತ್ತಲೆ ಶಾಭಾಸಗಿರಿ ಕೇಳಬೇಕಾಗುತ್ತದೆ. ನಗುನಗುತ್ತಲೆ ಮುಖದ ಮೇಲೆ ಮೋಡದಂತೆ ಗಾಂಭೀರ್ಯ ಮುಸುಕಿದಾಗ ತೆಪ್ಪಗಾಗುವಂತ ಅನಿಸುತ್ತೆ. ಅದೆಷ್ಟು ಬಾರಿ ತಿಣುಕಾಡಿದರೂ ಮತ್ತೆ ಮತ್ತೆ ಏಟುತಿಂದ ಅತೃಪ್ತಿ ಮೂಡಿರುತ್ತದೆ, ಬಾಯಾರಿಕೆ ಹಾಗೆಯೆ ಇರುತ್ತದೆ.

ಕಡೆಗೆ ಉಳಿಯುವುದೆಂದರೆ ಭಯ ಮಾತ್ರ.

ಅದೇ ಮೊದಲ ಭೇಟಿಯ ನೆನಪು, ಸಿಟ್‌ಡೌನ್ ಮತ್ತು ಗೆಟ್‌ಔಟ್‌ಗಳ ಸಿಡಿಲಿನ ಗರ್ಜನೆ ಕಿವಿಯಲ್ಲಿ ಸೊಂಯ್ ಸೊಂಯ್ ಅನ್ನುತ್ತಿರುತ್ತದೆ. ಮೊದಲ ಪರಿಚಯ ದಲ್ಲಿ, ಮೊದಲ ಮಾತುಕತೆಯಲ್ಲಿ ಯಾವ ರೀತಿಯ ಸಂಬಂಧಕ್ಕೆ ಅಡಿಪಾಯ ಬೀಳುತ್ತದೊ ಅದರ ಅನುಪಾತ ಕಡೆಯವರೆಗೂ ಹಾಗೆಯೆ ಉಳಿದುಬರುತ್ತದೆ. ದೊಡ್ಡವರಾದ ಮೇಲೂ ಬಾಲ್ಯದ ಮೇಷ್ಟರು ಸಿಕ್ಕಾಗ ತಲೆ ತನಗೆ ತಾನೇ ಬಗ್ಗಿ ಬಾಯಲ್ಲಿ ವಿನಯಪೂರ್ವಕವಾಗಿ 'ಸರ್' ಅಂತ ಮಾತು ಹೊರಬರುವಂತೆ ಇದು ಸಹ.

ಪ್ರಾರಂಭದಿಂದ 'ಸಾಹೇಬರು', ಅನಂತರ ಮಿಸ್ಟರ್ 'ಶ' ಇದೇ ಕ್ರಮದಲ್ಲಿ ಕಲ್ಲಿನ ಪೂಜೆ ಮಾಡುವುದು ಅವನಿಗೆ ಬಗ್ಗಿಹೋಗಿದೆ.

ಆದರೆ ಕಲ್ಲು ಅಚಲವಾಗಿರುತ್ತದೆ. ನಗು ಅಳುವಿನ ಬಗೆಗೆ, ಸ್ನೇಹವಿಶ್ವಾಸಗಳ

ಬಗಗೆ ಅದೇ ಕಲ್ಲಿನ ಮೂರ್ತಿ. ಅದರ ಜಗ್ಗದ ಪಗ್ಗದ ಸ್ಥಿರತೆ ಹೃದಯದ ಅಲೆಗಳು ತಮ್ಮಲ್ಲಿಯೆ ತಡಕಾಡಿ ಜವಾಬು ಹುಡುಕಲು ಅವಕಾಶ ನೀಡುತ್ತದೆ.

ಆದರೆ ಹೊಟ್ಟೆಪಾಡಿನ ಮಾತು ಬಂದಾಗಲಂತೂ ಇದು ಕಲ್ಲಿನ ದೇವತೆಯಾಗಿರಬಹುದು, ಆ ಕರ್ಕಶ ಧ್ವನಿ ಮತ್ತು ಗಂಟಿಕ್ಕಿದ ಹುಬ್ಬಿನಲ್ಲಿ ಕಲ್ಲಿನ ಗುಣವಿರಬಹುದಾದರೂ ಅದರ ಚಲನಶೀಲತೆಯಲ್ಲಿ ವಿಸ್ಫೋಟಕ ಗುಣವಿದೆ. ಸಿಡಿಮದ್ದಿನ ಲಕ್ಷಣವಿದೆ. ಅದನ್ನು ಆರಾಧಿಸುವುದರಿಂದ ಶಾಂತಿ ಸಿಗುವುದಿಲ್ಲ. ಸೀಸಿ ಹೊಡೆಯುವುದು ಇನ್ನೂ ಜಾಸ್ತಿ ಸೀಸಿ ಹೊಡೆಯಲು ದಾರಿ ಮಾಡಿಕೊಡುತ್ತದೆ. ಸುಮ್ಮನೆ ಮೈಕೈ ನೋಯಿಸಿಕೊಳ್ಳಬೇಕಷ್ಟೆ. ಎಡವಟ್ಟನಲ್ಲಿ ಸಿಕ್ಕಹಾಗೆ ಬಲಿದತ್ತ ಇದ್ದಲ್ಲೇ ಇದ್ದು ಬಿಡುತ್ತಾನೆ.

ಬಡ್ತಿ ಸಿಕ್ಕಿರುವುದರಿಂದ ಮಿಸ್ಟರ್ 'ಶ' ಅವರನ್ನು ಭೇಟಿಮಾಡುವ, ಅವರೊಡನೆ ಮಾತುಕತೆ ನಡೆಸುವ ಸಂದರ್ಭ ಆಗಾಗ ಬರುತ್ತಿರುತ್ತದೆ. ಹಾಗೇ ನಿಂತಿರಬೇಕಾಗುತ್ತದೆ, ಒಮ್ಮೊಮ್ಮೆ 'ಕೂತುಕೊ' ಅಂತ ಅಪ್ಪಣೆ ಬರುತ್ತದೆ. ಹಾಗೆ ತಲೆತಗ್ಗಿಸಿ ನಿಂತಿರಬೇಕಾದರೆ ಬಲಿದತ್ತ ಬೇಕೆಂದು ಅವರ ಕಾಲುಗಳನ್ನು ಗಮನವಿಟ್ಟು ನೋಡುತ್ತಿರುತ್ತಾನೆ. ಅವರು ಬೇರೆ ಯಾರಾದರೂ ಜೊತೆಯಲ್ಲಿ ಮಾತಾಡುತ್ತಿರು ವಂತೆಯೆ ಇದ್ದಕ್ಕಿದ್ದಂತೆ ಅರಚಾಡುತ್ತಾರೆ - "ಹಾಗೆ ಸುಮ್ಮನೆ ಕನಸು ಕಾಣುತ್ತಾ ಏಕೆ ನಿಂತುಬಿಟ್ಟಿರಿ - ಕನಸು ಕಾಣೋರಿಗೆ ಇಲ್ಲಿ ಜಾಗ ಇಲ್ಲ. ಸರಿ, ಹಾಗಾದರೆ ಅದಕ್ಕೆ ಏನು ಏರ್ಪಾಟು ಮಾಡಿದ್ದೀರಿ?" ಅವನು ಉರುಹೊಡೆದವನಂತೆ ಹೇಳತೊಡಗಿದರೂ ಮಧ್ಯದಲ್ಲಿಯೆ ಕಿರುಚಾಡುತ್ತಾರೆ....

"ಅಯ್ಯೋ, ಮೊದಲು ನಾನು ಹೇಳೋದನ್ನ ಕೇಳಿ".

ಬಂದಿದ್ದವರು ಮುಗುಳ್ನಗೆ ನಗುತ್ತಾರೆ.

ಬಂದಿದ್ದವನು ಒಬ್ಬ ಸಾಧಾರಣ ಮನುಷ್ಯನಾಗಿರಬಹುದು. ಧೂಳು ಮೆತ್ತಿದ ಕಾಲು, ಮಂಡಿಯವರೆಗೆ ಪಂಚೆ ಧರಿಸಿದ್ದು ಓದುಬರಹ ಬಾರದವನಾಗಿರಬಹುದು. ಆದರೆ ಆವೇಳೆಗೆ ಸಾಹೇಬರ ದೃಷ್ಟಿಯಲ್ಲಿ ಅವನೊಬ್ಬ ದೊಡ್ಡ ಮನುಷ್ಯ. ಏಕೆಂದರೆ ಅವನಿಂದ ಸಾಹೇಬರಿಗೆ ಕೆಲಸವಾಗಬೇಕು. ಬೇರೆ ಸಂದರ್ಭಗಳಲ್ಲಿ ಅವನು ಪತ್ತುಬಾರಿ ಆಫೀಸಿನ ಮೆಟ್ಟಲು ತುಳಿದಿದ್ದರೂ ಸಾಹೇಬರ ದರ್ಶನ ಆಗದಿದ್ದಿರಲೂ ಸಾಕು. ಆದರೆ ಈಗಿನ ಪರಿಸ್ಥಿತಿಯಲ್ಲಿ ಅವನು ಕುಳಿತಂತೆಯೆ ಮುಗುಳ್ನಗುತ್ತಾನೆ. ಠೀವಿಯಿಂದ ಮಾತಾಡುತ್ತಿರುತ್ತಾನೆ. ಬಲಿದತ್ತ ನಿಂತುಕೊಂಡ ಬೈಗಳನ್ನು ಕೇಳುತ್ತಿರುತ್ತಾನೆ. ಹೊರಗಡೆ ಬಂದಮೇಲೆ ಆ ಮನುಷ್ಯನೇ ಪ್ರಚಾರ ಮಾಡುತ್ತಾನೆ - ಕಂಪೆನಿಯ ದೊಡ್ಡ ಸಾಹೇಬರು ತುಂಬ ಹೊಂದಾಣಿಕೆಯವರು, ತುಂಬಾ ಪಸಂದಾಗಿ ಕೆಲಸ ಮಾಡ್ತಾರೆ. ಅವನು ಚಾಲಾಕು ಮನುಷ್ಯನಾಗಿದ್ದರೆ ಹೇಳುತ್ತಾನೆ - ಕಂಪೆನಿಯ ದೊಡ್ಡ ಸಾಹೇಬರಿಗೆ ಜನ ಬೇಕು. ತುಂಬ ಹೊಂದಿಕೊಂಡು ಹೋಗ್ತಾರೆ. ಸಿಕ್ಕಾಪಟ್ಟೆ ಕೆಲಸಮಾಡ್ತಾರೆ. ಬಹಳ ಒಳ್ಳೆಯ ಮನುಷ್ಯ. ಇಡೀ ಆಫೀಸನ್ನೇ ತಿರುಗು ಮುರುಗುಮಾಡಿ ಕೆಲಸಕ್ಕೆ ಸಂಬಂಧಪಟ್ಟ ವಿಚಾರಗಳನ್ನು ಅವರು ಹೊರತೆಗೆಸಿದರು. ಶ್ರೀಸಾಮಾನ್ಯರ ಬಗ್ಗೆ ಅವರಿಗೆ ತುಂಬ ಸಹಾನುಭೂತಿಯಿದೆ.

ಆದರೆ ಬಲಿದತ್ತ ದೊಡ್ಡವನಾಗಿದ್ದಾನೆ. ಅವನ ಅಹಂ ಪಗಡದಸ್ತಾಗಿ ಬೆಳೆದಿದೆ. ಅದು ಬೆಂಕಿ ಕಾರುತ್ತಿರುತ್ತದೆ. ಅವನು ಎಲ್ಲವನ್ನೂ ಅರಗಿಸಿಕೊಳ್ಳಬೇಕು. ಮತ್ತೆ ಅವನಲ್ಲಿ ಯಶಸ್ಸು ಪಡೆಯುವ ಏಳಿಗೆ ಹೊಂದುವ ದೃಢವಾದ ಭಾವನೆ ಮರುಕಳಿಸುತ್ತದೆ, ಹಾಗೆಯೆ ಕೆಲಸದಲ್ಲಿ ಮಗ್ನನಾಗುತ್ತಾನೆ.

ದೊಡ್ಡ ಸಾಹೇಬರ ಜೊತೆ ಅವನು ಕೆಲಸ ನಡೆಯುವ ಜಾಗಕ್ಕೆ ಉಸ್ತುವಾರಿ ನೋಡಲು ಹೊರಟ. ಅಲ್ಲಿ ಅನೇಕ ಮಂದಿ ಕೂಲಿಗಾರರಿದ್ದಾರೆ, ಅನೇಕ ಕೆಲಸಗಳಿವೆ. ಕಂಪೆನಿಗೆ ಸೇರಿದ ಕಾರ್ಖಾನೆಗಳು ಮತ್ತು ಕೆಲಸಗಾರರ ಕಾಲೋನಿಯಿದೆ. ಬಲಿದತ್ತ ಮೊದಲೇ ಸುದ್ದಿ ಕಳಿಸಿದ್ದ. ಆದ್ದರಿಂದ ಹೆಜ್ಜೆ ಹೆಜ್ಜೆಗೂ ತೋರಣ, ಹೆಜ್ಜೆ ಹೆಜ್ಜೆಗೂ ಕೆಲಸಗಾರರ ಮುಖಂಡರು, ಕೆಲಸಗಾರರ ಹೆಂಗಸರು, ಶಂಖ ಮತ್ತು ಧ್ವನಿಯಿತ್ತು. ಮಿಸ್ಟರ್ 'ಶ' ಕಾರು ನಿಲ್ಲಿಸುತ್ತಾರೆ, ಖುಷಿಯಾಗುತ್ತಾರೆ ಅಂತ ಅವನು ಅಂದು ಕೊಂಡಿದ್ದ. ಆದರೆ ಕಾರು ನಿಲ್ಲಲಿಲ್ಲ. ತೋರಣದ ಕೆಳಗಿನಿಂದ ಕಾರು ಕೋಪದಿಂದ ಗರ್ಜಿಸುವಂತೆ ಹಾರ್ನ್ ಮಾಡುತ್ತಾ ಜನಜಂಗುಳಿಯನ್ನು ಸೀಳಿ ಮುಂದುವರಿ ಯಿತು. ಬಲಿದತ್ತ ಅಂಜುತ್ತ ಹೇಳಿದ - "ಕಂಪೆನಿಗೆ ಸೇರಿದ ಪ್ರದೇಶ, ಆದರಿಂದ ಜನ ದೊಡ್ಡ ಸಾಹೇಬರನ್ನು ನೋಡೋದಕ್ಕೆ, ಅವರಿಗೆ ಮರ್ಯಾದೆ ಮಾಡೋದಕ್ಕೆ ಅಂತ ಸೇರಿದ್ದಾರೆ. ಎಷ್ಟೊಂದು ವಿಶ್ವಾಸ...."

ಥೂ - ದೊಡ್ಡಸಾಹೇಬರು ಜೋರಾಗಿ ಕ್ಯಾಕರಿಸಿ ಥೂ ಅಂತ ಉಗಿದರು. ಗುಟುರು ಹಾಕಿ ಕಾಡುಪ್ರಾಣಿಯಂತೆ ಗುರುಗುಟ್ಟತೊಡಗಿದರು, ಅದು ಬೈಯ್ಗುಳದ ಸುರಿಮಳೆಯೇ ಆಗಿತ್ತು. ದೊಡ್ಡ ಸಾಹೇಬರು ಹೇಳ ತೊಡಗಿದರು... "ಮರ್ಯಾದೆ... ವಿಶ್ವಾಸ... ಕೆಲಸಕ್ಕೆ ಬಾರದ್ದು. ಯಾರು ತಲೆ ಓಡಿಸಿ ಇವರನ್ನೆಲ್ಲ ಒಟ್ಟಿಗೆ ಸೇರಿಸಿದ್ದು, ಹುರಿದುಂಬಿಸಿದ್ದು. ಬರೋ ಕೆಲಸ ಅಷ್ಟರಲ್ಲೆ ಇದೆ. ಬರೀ ಮಶ್ಕಿರಿ, ಆಡಂಬರ, ದೊಂಬರಾಟ, ಇವನ್ನೆಲ್ಲ ಯಾರು ಮಾಡಿಸುತ್ತಾ ಇರೋದು ನಾನು ತಿಳಿದುಕೊಳ್ಳಬೇಕು."

ಅವರು ಆಕಡೆ ಕ್ರೂರದೃಷ್ಟಿ ಬೀರಿದರು. ಜನ ಸಲಾಮು ಹೊಡೆಯುತ್ತಾ ಬಿರುಗಾಳಿಯಲ್ಲಿ ಅಡಕೆ ಮರ ಬಗ್ಗುವಂತೆ ಬಗ್ಗಿಹೋಗಿದ್ದರು. ಗುಂಪನ್ನು ಸೀಳಿಕೊಂಡು ಮಿಸ್ಟರ್ 'ಶ' ಅವರ ವಾಹನ ಹೋಗುತ್ತಲೆ ಇತ್ತು. ಅವರ ಮುಖದ ಮೇಲೆ ಒಂದು ರೀತಿಯ ಅಸಹಜವಾದ ಕಳೆಯಿತ್ತು. ಒಂದೇ ಸಮನಾಗಿರದ ಹಲ್ಲಿನ ಸಾಲುಗಳು ಕಟಕಟನೆ ಕಡಿಯುತ್ತಿದ್ದವು. ಮೇಲ್ತುಟಿ ಅದುರುತ್ತಿತ್ತು. ನಗುತ್ತಿದ್ದಾರೋ ಗುಂ ಅಂತ ಇದ್ದಾರೋ ಗೊತ್ತಾಗಲಿಲ್ಲ. ಎರಡೂ ರೀತಿ ಹೇಳಬಹುದಿತ್ತು.

"ಯಾರು ಅನ್ನದಾತರೊ ಅವರ ಬಗ್ಗೆ ಎದೆಯಾಳದಿಂದ ಭಕ್ತಿ ಉಕ್ಕಿಬರುತ್ತದೆ. ಅದನ್ನು ತಡೆಯುವುದಕ್ಕೆ ಆಗಲ್ಲ-" ವಿನಯಪೂರ್ವಕವಾಗಿ ಬಲಿದತ್ತ ಹೇಳಿದ. ಮಿಸ್ಟರ್ 'ಶ' ಉದ್ವಿಗ್ನಗೊಂಡರು-

"ಹೃದಯ! ಎದೆಯಾಳ!", ಅದಾದ ಮೇಲೆ ಹೊಲಸು ಬೈಯ್ಗುಳು, "ಸುಮ್ಮನೆ ಮೋಸಮಾಡೋದಕ್ಕೆ.... ದೌರ್ಬಲ್ಯ ತೋರಿಸೋದಕ್ಕೆ ಇವೆಲ್ಲ ನೆಪ... ನಾನ್‌ಸೆನ್ಸ್. ನೀನೊಬ್ಬ ದೊಡ್ಡ ಈಡಿಯೆಟ್."

"ಸ್ವಾಮಿ", ಬಲಿದತ್ತ ಈ ಮುಖ್ಯದ ಸಂಬೋಧನೆಗೆ ಇಳಿದ. 'ಶ' ಗರ್ಜಿಸಿದರು-

"ಮಾತುಮಾತಿಗೆ ಯಾರು ಹೃದಯ ಮನಸ್ಸು ಅಂತಿರ್ತಾರೋ ಅವರು ಬೇಕೂಫರು. ನನಗೆ ಅಂಥ ಆಫೀಸರುಗಳನ್ನು ಕಂಡರೆ ಇಷ್ಟವಿಲ್ಲ. ಚೆನ್ನಾಗಿ ನೆನಪಿಡು. ನಾವು ಕಂಪೆನಿಯ ಅಧಿಕಾರಿಗಳು, ನಾವು ಮಿಷೀನಿನಂತೆ. ಏನಿದ್ದರೂ ಕೆಲಸದ ಜೊತೆ ನಮ್ಮ ವ್ಯವಹಾರ, ಹೃದಯದ ಜೊತೆಗಲ್ಲ. ಕಂಪೆನಿಯ ಕ್ರೇನ್ ನೋಡಿಲ್ಲವೆ? ಇಂಜನ್ ಮತ್ತು ಬಾಯ್ಲರ್ ಎಂದಾದರೂ ನೋಡಿದ್ದೀಯಾ? ನಾವು ಅದರಂತೆ ಮಿಷೀನು ಕೆಟ್ಟುಹೋದರೆ ಅದಕ್ಕೆ ನೀನು ಮನಸ್ಸು ಅಂತ ಹೇಳ್ತೀಯ, ಈಡಿಯಟ್. ನೋಡು, ನಾವು ಚೂರಿಯಿದ್ದಂತೆ, ಹೇಗೆ ಉಪಯೋಗಿಸಿದರೆ ಹಾಗೆ, ಯಾರಾದರೂ ದಿಬ್ಬ ಉರುಳಿಸು ಅಂದರೆ ಅದೇ ಸೈ, ಕುತ್ತಿಗೆ ಕತ್ತರಿಸು ಅಂದರೆ ಅದಕ್ಕೂ ರೆಡಿ. ನಾವು ಸೀಸನ್ ಆಗಿರೋ ಮರ ಇದ್ದಂತೆ, ಬಿಸಿಲಲ್ಲಿ ಒಣಗೊಲ್ಲ, ನೀರಲ್ಲಿ ಉಬ್ಬಲ್ಲ. ಇಲ್ಲಿ ಹೃದಯ ಏನು ಮಾಡುತ್ತೆ ನಿನ್ನ ತಲೆ?"

ಈ ಮಾತನ್ನು ಬಲಿದತ್ತ ತನ್ನ ಪುಸ್ತಕದಲ್ಲಿ ಗುರುತು ಹಾಕಿಕೊಂಡ. ಅದೊಂದು ಬೆಲೆಬಾಳುವ ಫಿಲಾಸಫಿಯ ಹೇಳಿಕೆಯಂತೆ ಅಥವಾ ಗದ್ಯದ ರೂಪದಲ್ಲಿರುವ ಕವಿತೆಯಂತೆ ಅವನಿಗೆ ಕಂಡಿತ್ತು.

ಆದರೆ ಈ ವ್ಯಾಖ್ಯ ಮಿಸ್ಟರ್ 'ಶ' ಅವರಿಗೆ ಚೆನ್ನಾಗಿ ಕಾಣೋದಿಲ್ಲ. ಸ್ವಲ್ಪ ದೂರದಲ್ಲೇ ಒಂದು ಡಿಪೋ ಬಾಗಿಲಿನ ಮುಂದೆ ಕಾರು ನಿಂತಿತು. ದೊಡ್ಡ ಸಾಹೇಬರು ಆ ಡಿಪೋ ಇನ್ಸ್‌ಪೆಕ್ಷನ್ ನಡೆಸಬೇಕಾಗಿತ್ತು. ಅಲ್ಲಿಯ ಕೆಲಸಗಾರ ಡೇಂಗೂ ನರಸಯ್ಯ ಓಡೋಡಿ ಬಂದ. ತಲೆಯಿಂದ ರುಮಾಲು ತೆಗೆದು ಕಾರಿನ ಧೂಳು ಒರೆಸತೊಡಗಿದ. ಅವನ ಜೊತೆ ಬಂದ ಜನ ಕಾರಿನ ಹಿಂಭಾಗದಲ್ಲಿ ಬುಟ್ಟಿ ತುಂಬ ಕಿತ್ತಲೆ ಹಣ್ಣು, ಬಾಳೆಹಣ್ಣು, ಸಿಹಿತಿಂಡಿಗಳನ್ನು ಇಡತೊಡಗಿದರು. ಕಾರಿನಲ್ಲಿ ಕುಳಿತಿದ್ದಹಾಗೆಯೆ ಸಾಹೇಬರು ಕೇಳಿದರು - "ಏನು, ಏನ್ಸಮಾಚಾರ -ಎಲ್ಲ ನೆಟ್ಟಗಿದೆ ತಾನೆ?"

"ಬುದ್ಧಿ"

"ಸರಿ, ಲೆಕ್ಕದ ಪುಸ್ತಕ ತನ್ನಿ".

ಕಾರಿನಲ್ಲಿ ಕುಳಿತಿದ್ದಂತೆಯೆ ಮಿಸ್ಟರ್ 'ಶ' ಇನ್ಸ್‌ಪೆಕ್ಷನ್ ರಿಪೋರ್ಟ್ ಬರೆದರು. ಎಲ್ಲ ಸರಿಯಾಗಿದೆ. ನರಸಯ್ಯ ಚೆನ್ನಾಗಿ ಉಸ್ತುವಾರಿ ನೋಡಿಕೊಳ್ಳುತ್ತಾನೆ. ಕಾರು ಮುಂದೆ ಹೊರಟಿತು.

ಅನಂತರ ಸಾಯಂಕಾಲವಾಗುವ ಹೊತ್ತಿಗೆ ಒಂದು ಪಾಳು ಬಿದ್ದಂಥ ಪ್ರದೇಶದಲ್ಲಿ ಕೂಲಿಯವರು ಅಲ್ಲಿ ಇಲ್ಲಿ ಅಡ್ಡಾಡುತ್ತಿದ್ದದನ್ನು ನೋಡಿ ಬಲಿದತ್ತ ಹೇಳತೊಡಗಿದ - "ಸುಮ್ಮನೆ ಅಲ್ಲಿ ಇಲ್ಲಿ ಅಲೆಯುತ್ತಿದ್ದಾರೆ. ಕೆಲಸಕ್ಕೆ ಬಾರದವರು. ಬಹುಶಃ ಇಲ್ಲಿ ಇವರಿಂದ ಕೆಲಸತೆಗೆಯೋದು ಚುರುಕಾಗಿಲ್ಲ ಅಂತ ಕಾಣುತ್ತೆ". ಸಾಹೇಬರಿಗೆ ಈ ಮಾತು ಹಿಡಿಸುತ್ತದೆ ಅಂತ ಅವನು ಭಾವಿಸಿದ್ದ.

ಅನ್ಯಮನಸ್ಕರಾಗಿ ದೂರ ನೋಡುತ್ತಿದ್ದ 'ಶ' ಹೇಳಿದರು - "ಇಷ್ಟೂ ನಿನಗೆ ಅರ್ಥವಾಗಲ್ಲವೆ. ಈ ಕೂಲಿಯವರಿಂದಲೇ ನಮ್ಮ ಹೊಟ್ಟೆ ಪಾಡೂ ನಡೆಯುತ್ತಿದೆ ಅಂತ ಮರೆಯಬೇಡ.

ಸಂಜೆ ಬಿಸಿಲಲ್ಲಿ ಅವರ ಮುಖ ಸ್ವಲ್ಪ ಬಾಡಿದಂತೆ ಕಾಣುತ್ತಿತ್ತು. ಇಡೀ ದಿನದ

ಬೆವರೆಲ್ಲ ಒಟ್ಟಿಗೆ ಮುಖದಲ್ಲಿ ಸೇರಿದಂತಿದ್ದು ಹತಾಶೆ ತುಂಬಿದಂತಿತ್ತು. ನಿಟ್ಟುಸಿರು ಬಿಸಿಯಾಗಿತ್ತು. ಕೂಲಿಗಳ ಕಷ್ಟಕಾರ್ಪಣ್ಯಗಳನ್ನು ಪ್ರತಿನಿಧಿಸುವ ಕಟ್ಟಾಳಿನಂತೆ ಮಿಸ್ಟರ್ 'ಶ' ಗಂಭೀರವಾದ ಧ್ವನಿಯಲ್ಲಿ ಹೇಳಿದರು-

"ನೀನೊಂದು ಪೆದ್ದು. ಬೇರೆಯವರು ಹೇಗೆ ಹೊಟ್ಟೆ ಹೊರೆಯಬೇಕು ಅಂತ ನೀನು ಯೋಚನೆ ಮಾಡೋದಿಲ್ಲ. ನೀನು ಕೇವಲ ಲಾಭ ಸಂಪಾದಿಸೋದು, ಅವರಿಗೆ ಮೋಸ ಮಾಡೋದು ಇಷ್ಟೇ ಯೋಚಿಸುತ್ತೀಯ. ಆದ್ದರಿಂದಲೇ ಸ್ವಾರ್ಥದಿಂದ, ನಿರ್ದಯನಾಗಿ ಹಿಂದುಮುಂದೆ ನೋಡದೆ ನಿನ್ನ ಅಭಿಪ್ರಾಯ ಏನು ಅಂತ ಹೇಳ್ತಾ ಇದ್ದಿ. ನೀನು ನೌಕರಿ ಮಾಡೋದು ಯಾಕೆ, ಇದನ್ನು ತಿಳಿದುಕೊಳ್ಳೋದಕ್ಕೆ ಎಂದಾದರೂ ಪ್ರಯತ್ನಿಸಿದ್ದೀಯ ? ಈ ರೀತಿಯಾಗಿ ತಿಳಿವಳಿಕೆ ಇಲ್ಲದೆ ಮುಂದೆ ನುಗ್ಗಿದರೆ ಮನಸ್ಸಿಗೆ ದುಗುಡವಾಗತ್ತೆ. ನಿನಗೆ ಗೊತ್ತಿಲ್ಲವಾ ? ಅಶಾಂತಿ ಬಿರುಗಾಳಿ ಎದ್ದಿತು ಅಂದರೆ, ಹಾಗೇ ಹಬ್ಬುತ್ತಾ ನಮ್ಮ ಸಂಸ್ಥೆಯನ್ನೆ ಅಳ್ಳಾಡಿಸಿಬಿಡುತ್ತದೆ. ಆಗ ನೀನೆಲ್ಲಿರುತ್ತಿ ? ಯಾವಾಗಲಾದರೂ ಯೋಚಿಸಿದ್ದೀಯ ? ಕೆಲಸ ಮಾಡುವವರು ಏನಿಲ್ಲ ಅಂದರೂ ನಿನ್ನಿಂದ ಎರಡು ಒಳ್ಳೆಯ ಮಾತನ್ನಾದರೂ ಬಯಸುತ್ತಾರೆ. ಸ್ವಲ್ಪ ಸಮಾಧಾನದ ಮಾತಾಡಿದರೂ ಖುಷಿಪಡುತ್ತಾರೆ. ನೀನು ಅಷ್ಟೂ ಮಾಡದೆ ಹೋದರೆ ಹೇಗೆ ಆಫೀಸರ್ ಆಗ್ತೀಯಾ ?"

ಮತ್ತೆ ಬಲಿದತ್ತ ಕಮಕ್-ಕಿಮಕ್ ಅನ್ನಲಿಲ್ಲ. ಅವನು ಏನಾದರೂ ಹೇಳಿದ ಅಂದರೆ 'ಶ' ಅದಕ್ಕೆ ತೀರ ವಿರುದ್ಧವಾಗಿ ಹೇಳುತ್ತಾರೆ. ಬಹುಶಃ ಕೈಕೆಳಗಿನ ಅಧಿಕಾರಿಗಳು ಏನು ಹೇಳಿದರೂ ಮುಖದ ಮೇಲೆ ಹೊಡೆದಂತೆ ಅದಕ್ಕೆ ತಿರುಗುಮುರುಗಾದ ಮಾತಾಡಿ ಬಾಯಿ ಮುಚ್ಚಿಸುವುದು ದೊಡ್ಡ ಅಧಿಕಾರಿಗಳ ನಿಯಮಗಳಲ್ಲಿ ಒಂದಿರಬೇಕು.

ಬಲಿದತ್ತ ಮನಸ್ಸಿನಲ್ಲೇ ಎಲ್ಲಾ ಬರೆದುಕೊಳ್ಳುತ್ತಾನೆ. ಯಾರ ಜೊತೆಯಲ್ಲೂ ಮುಖಮುರಿದಂತೆ ಮಾತಾಡುವುದು ಅವನ ಕೈಯಲ್ಲಿ ಸಾಧ್ಯವಾಗುವುದಿಲ್ಲ. ಇನ್ನೊಬ್ಬರ ವ್ಯಕ್ತಿತ್ವ ಅವನ ಎದುರಿನಲ್ಲಿ ಮೇಲುಗೈ ಪಡೆಯುತ್ತದೆ. ಅವನು ತಾನು ವಿರೋಧಿಸಬೇಕಾದುದನ್ನು ಬರವಣಿಗೆ ಮೂಲಕ ಮಾಡುತ್ತಾನೆ, ಬಾಯಲ್ಲಿ ಏನೂ ಮಾತಾಡುವುದಿಲ್ಲ.

ಉಳಿದ ದಾರಿ 'ಶ' ಜೊತೆಯಲ್ಲಿ ಹಾಗೇ ಗಪ್ಚುಪ್ಪಾಗಿ ಕುಳಿತೇ ಕಳೆಯಿತು. ಅವನು ಯೋಚಿಸಲು ಪ್ರಯತ್ನಮಾಡಿದ - ಈ 'ಶ' ವಿಚಿತ್ರ ಮನುಷ್ಯ. ಮನುಷ್ಯ ಒಬ್ಬನೇ ಆದರೂ ಬೇರೆ ಬೇರೆ ಪರಿಸ್ಥಿತಿಗಳಲ್ಲಿ ರೂಪ ಬದಲಾಯಿಸುತ್ತಾ ಹೋಗುತ್ತದೆ. ಕೆಲಸ ಮಾಡಿದರೂ 'ಕೆಲಸ ನಡೆಯಲಿಲ್ಲ' ಅಂತ ಹೀನಾಮಾನವಾಗಿ ಬೈಯುತ್ತಾನೆ. ಕೆಲಸ ಮಾಡದಿದ್ದರೂ ಸಹಾನುಭೂತಿ ವ್ಯಕ್ತಪಡಿಸುತ್ತಾನೆ. ಬಹುಶಃ ಈ ಮನುಷ್ಯ ರಕ್ತ ಕುಡಿಯುವ ಹುಲಿಯಾಗಿರಬಹುದು.... ಅದೇ ಉಸ್ತುವಾರಿ ಸರಸಯ್ಯನ ಪಾಲಿಗೆ ಕಾಮಧೇನು.... ಆದರೂ ಒಬ್ಬನೇ ಮನುಷ್ಯ.

ಅವನ ಭಾವನೆಯ ಎಳೆಗಳು ಸಿಕ್ಕುಸಿಕ್ಕಾಗುತ್ತವೆ. ಅದರ ಕೊನೆ ಮೊದಲು ಯಾವುದೆಂದೇ ಗೊತ್ತಾಗುವುದಿಲ್ಲ. 'ಶ' ಮುಂದೆ ಬಂದಾಗಲಂತೂ ಅವನ ಯಶಸ್ಸಿನ ಎಲ್ಲ ಸೂತ್ರಗಳೂ ಪುಸ್ತಕದ ಬದನೆಕಾಯಿ ಆಗಿಹೋಗುತ್ತವೆ. ಈ ಹೆಸರಾಂತ

ಸಂಸ್ಥೆಯ ಆಡಳಿತಗಾರರ ಬಗ್ಗೆ ಅವನು ಕೇಳಿದ್ದ - ಜನ ಹೇಳುತ್ತಾರೆ- ಇವರು ಎಷ್ಟು ಕುಶಲರೆಂದರೆ ಎಂಥ ಪರಿಸ್ಥಿತಿ ಎದುರಾದರೂ ಅದಕ್ಕೆ ತಕ್ಕಂತೆ ಬೇರೆಬೇರೆ ರೀತಿಯ ಮುಖವಾಡ ಹಾಕಿಕೊಂಡು ಹೊಸ ಹೊಸದಾಗಿ ಅಭಿನಯ ಮಾಡುತ್ತ ಕೆಲಸ ನಡೆಸಿಕೊಂಡು ಹೋಗುತ್ತಾರಂತೆ.

ಅವರು ಬೆನ್ನುಮೂಳೆ ಮುರಿದುಕೊಂಡು ದುಡಿಯುವವರನ್ನು ಹೊಗಳುವುದಿಲ್ಲ, ನ್ಯಾಯದ ದಾರಿ ಅವರ ಮೆಚ್ಚುಗೆಗೆ ಪಾತ್ರವಾಗುವುದಿಲ್ಲ.... ಅವನೂ ಅಷ್ಟೆ, ಹಾಗೆಯೆ. ಆದರೂ ಅವನಲ್ಲಿ ಇನ್ನೂ ಹೊಂದಾಣಿಕೆ ಅರ್ಧಮರ್ಧವಾಗಿಯೆ ಇದೆ. ಆ ಗತ್ತಿನವರೆಗೆ ತಲಪಲು ಅವನಿಗೆ ಸಾಧ್ಯವಾಗುತ್ತಿಲ್ಲ. 'ಶ' ಅವನಿಗಿಂತ ಮೇಲುಗೈ ಪಡೆಯುತ್ತಾರೆ.

ಆದರೂ ಅಂಥ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಕ್ಕಿಹಾಕಿಕೊಂಡಿದ್ದರೂ ಅವನು ತನ್ನ ಲಾಭನಷ್ಟಗಳ ಬಗ್ಗೆ ಯೋಚಿಸುತ್ತಾನೆ. ತನ್ನ ಬಾಲ ಬಿಚ್ಚುತ್ತಾನೆ, ಕೈಚಳಕ ತೋರಿಸುತ್ತಾನೆ. ಒಂದು ಯೋಚನೆ, ಒಂದು ಪ್ಲಾನ್ ಮುಗಿಯಿತು ಅಂದರೆ ಇನ್ನೊಂದು ಶುರು.... ನೂಕುನುಗ್ಗಲಲ್ಲಿಯೆ ಅವನು ನುಣುಚಿಕೊಂಡು ಮುಂದೆ ಹೆಜ್ಜೆ ಹಾಕಿರುತ್ತಾನೆ. ಅವನೊಂದು ಕುರುಡು ಕತ್ತಲೆಯ ಕೀಟವಿದ್ದಂತೆ, ಮಣ್ಣಿನ ಬುಡದಲ್ಲಿಯೆ ನೆಲಕೊರೆಯುತ್ತಾನೆ, ಅದೇ ಅವನ ಕೆಲಸ.... ಅಲ್ಲಿ ಇಲ್ಲಿ ಹೋಗುವುದು.... ಇಲ್ಲಿಂದ ಅಲ್ಲಿಗೆ, ಅಲ್ಲಿಂದ ಇಲ್ಲಿಗೆ, ಇದೇ ಅವನ ಬದುಕಿನ ಜಾಡು.

-

ಇದ್ದಕ್ಕಿದ್ದಂತೆ ಒಂದು ದಿನ ಮಿಸ್ಟರ್ 'ಶ' ಗೆ ವರ್ಗವಾಗಿ ಹೋಯಿತು. ಕಂಪನಿಯ ಕೆಲಸಗಾರರ ಪಾಲಿಗೆ ಅದೊಂದು ಐತಿಹಾಸಿಕ ದಿನವಾಗಿತ್ತು. ಅದರ ಮಹತ್ವದ ಬಗ್ಗೆ ಹೊರಗಿನವರಿಗೆ ಅರ್ಥವಾಗುವುದಿಲ್ಲ. ಊರಿನಲ್ಲಿರುವವರಿಗೂ ಗೊತ್ತಾಗುವುದಿಲ್ಲ. ಹಳ್ಳಿಯ ಒಕ್ಕಲು ಮಂದಿಯಾಗಲಿ ನಾಡಿನ ಜನ ಸಮುದಾಯವಾಗಲಿ ತಿಳಿದು ಕೊಳ್ಳಲಾರರು. ಹೊರಗಿನ ಜನರ ದೃಷ್ಟಿ ಕೇವಲ ಓಡುತ್ತಿರುವ ಯಂತ್ರಗಳ ಮೇಲೆ ಬೀಳುತ್ತದೆ.... ಚಿಮ್ಮಣಿಯಲ್ಲಿ ಹೊಗೆಯೇಳುವುದು ನಿಲ್ಲುವುದಿಲ್ಲ, ಯಂತ್ರಗಳ ಆಲಾಪ ಬಂದಾಗುವುದಿಲ್ಲ, ಕೈಗಳಿಗೆ ಬಿಡುವು ಸಿಗುವುದಿಲ್ಲ. ಹೀಗೆ ಕೆಲಸ ನಡೆಯುತ್ತಲೆ ಇರುತ್ತದೆ. ಒಬ್ಬ ಬರುತ್ತಾನೆ, ಒಬ್ಬ ಹೋಗುತ್ತಾನೆ.... ಸರಿ ಬೆಸಗಳ ಸ್ವಭಾವ ಯಾವಾಗಲೂ ಇದ್ದೇ ಇರುತ್ತದೆ. ಸೋಮನಹಳ್ಳಿಯ ಮುದುಕಿಯ ಕೋಳಿ ಕೂಗದಿದ್ದರೆ ಬೆಳಗಾಗೋದೆ ಇಲ್ಲ ಅಂತ ಹೇಳೊ ಹಾಗಿಲ್ಲ.

ಜನ ಹುಟ್ಟುತ್ತಾರೆ, ಚರಿತ್ರೆ ಬರವಣಿಗೆಗೆ ಇಳಿಯುತ್ತದೆ. ಚರಿತ್ರೆಯ ಎಂದಿನ ಮುನ್ನಡೆಯಲ್ಲಿ ಅವರ ಅಬ್ಬರ ಆಟೋಪಗಳೆಲ್ಲ ವಿಲೀನವಾಗುತ್ತವೆ. ಯಾರಾದರೂ ಪಟ್ಟುಹಿಡಿದು ಎಲ್ಲಾದರೂ ಕುಳಿತಿದ್ದರೂ ಅವರೂ ಮುದುಕಿಯ ಕೋಳಿ ಯಂತೇನೂ ಅಲ್ಲ. ಅವರು ಹುಟ್ಟಿರದಿದ್ದರೂ ಸೂರ್ಯ ಹುಟ್ಟುತ್ತಿರಲಿಲ್ಲವೆ, ಭೂಮಿಯ ಮೇಲೆ ಮಳೆಬೆಳೆ ಆಗುತ್ತಿರಲಿಲ್ಲವೆ. ಭೂಮಿಯ ಮೇಲೆ ಜನ ಹೀಗೆಯೆ ಇರುತ್ತಿದ್ದರು, ಮನುಷ್ಯನ ಬದುಕು ಇದೇ ರೀತಿ ಕಷ್ಟಸುಖಗಳಿಂದ ಕೂಡಿರುತ್ತಿತ್ತು.

ಮೃಗ ಮತ್ತು ದೇವತೆಗಳಿಂದ ಕೂಡಿದ ಈ ಮಾನವ ಸಮಾಜದಲ್ಲಿ ಮಕ್ಕಳು ಹೀಗೆಯೇ ಧೂಳಿನಲ್ಲಿ ಆಡುತ್ತಿದ್ದರು, ದೊಡ್ಡ ಮನುಷ್ಯರು ಮನೆಕಟ್ಟುತ್ತಿದ್ದರು, ವಯಸ್ಸಾದವರು ಜಪಮಣಿ ಎಣಿಸುತ್ತಿದ್ದರು.

ಬಲಿದತ್ತ ಯೋಚಿಸಬಲ್ಲ.... ಬಹುಶಃ ಬನು ಈಗ ಆರಾಮ ಕುರ್ಚಿಯ ಮೇಲೆ ಕುಳಿತು ಕಣ್ಣುಗಳನ್ನು ಅರ್ಧಮುಚ್ಚಿ ಸಂಟೂದಾ ಅವರ ಕಡೆ ನೋಡಿ ಒಂದು ದಂ ಬೀಡಿ ಎಳೆದು ಎರಡು ಮಾತುಗಳನ್ನಾಡುತ್ತಾನೆ-

"ವರ್ಗವಾಗಲಿ ಬಿಡಲಿ, ನಥಿಂಗ್ ಮ್ಯಾಟರ್ಸ್. ಕರ್ಣ ಸತ್ತರೇನು ಐದು ಮಂದಿ ಅರ್ಜುನರು ಸತ್ತರೇನು, ಮತ್ತೆ ಅದೇ ಐದು. ನಮ್ಮ ಗಂಟೇನು ಹೋಗುತ್ತದೆ?"

ಆದರೆ ಬನುವಿನ ಆಲೋಚನೆ ಬೇರೆ. ಸಾಧಾರಣ ಮನುಷ್ಯರ ಆಲೋಚನೆಯಂತಲ್ಲ. ಪ್ರತಿನಿತ್ಯ ಬನು ಓವರ್‌ಗೋಲ್ ಹೊಡೆಯುತ್ತಾನೆ, ಉಡಾಫೆ ಮಾಡುತ್ತಾನೆ. ಆದ್ದರಿಂದ ಅವನು ಪರವಾಗಿಲ್ಲ ಅನಿಸಿಕೊಳ್ಳುತ್ತಾನೆ.

ಯಶಸ್ಸನ್ನು ಪಡೆಯುವ ಘೋರ ಸೆಣಸಾಟದಲ್ಲಿ, ಪೈಪೋಟಿಯಲ್ಲಿ ಬಲಿದತ್ತ ಬನುವನ್ನು ಮರೆಯಲಾರ. ಬನುವನ್ನು ಶಿಷ್ಯನನ್ನಾಗಿ ಮಾಡಿಕೊಂಡು ಅವನಿಗೆ ಪಾಠ ಹೇಳಿಕೊಡುತ್ತೇನೆ ಅಂತ ಅವನ ನಂಬಿಕೆ. ಆ ದಿನ ದೂರವೇನಿಲ್ಲ. ಅದರಲ್ಲೂ ದೊಡ್ಡ ಸಾಹೇಬರಿಗೆ ವರ್ಗವಾದ ಈ ಐತಿಹಾಸಿಕ ಘಟನೆಯ ಸಂದರ್ಭದಿಂದಾಗಿ ಉಂಟಾಗಿದ್ದ ಮಿಂಚಿನ ವಾತಾವರಣದಲ್ಲಿ ತೇಲುತ್ತಿರುವಂತೆಯೆ ಬನುವಿನ ನೆನಪು ಮೂಡಿತ್ತು - ಒಮ್ಮೊಮ್ಮೆ ಅವನ ಬಗ್ಗೆ ದಯೆ ತೋರಿಸಬೇಕೆನಿಸಿತ್ತು. ಇನ್ನೊಮ್ಮೆ ಅವನ ಸಿದ್ಧಾಂತಗಳು ತಪ್ಪು ಅಂತ ತೋರಿಸಿಕೊಟ್ಟು ತನ್ನ ಸಿದ್ಧಾಂತಗಳು ಸರಿ ಅಂತ ಪ್ರತಿಪಾದಿಸಬೇಕು ಅನಿಸಿತ್ತು.

ದೊಡ್ಡ ಸಾಹೇಬರಿಗೆ ವರ್ಗವಾದ ವಿಷಯ ನಾಲ್ಕೂ ಕಡೆ ಹರಡಿತು. ಇದೊಂದು ಮಹತ್ವದ ಸುದ್ದಿಯಾಗಿತ್ತು. ಯಾರಾದರೂ ಇಬ್ಬರು ಕೆಲಸಗಾರರು ಎಲ್ಲೇ ಭೇಟಿಯಾಗಲಿ ಇದೇ ಗುಸುಗುಸು ಶುರು, ದೊಡ್ಡ ಸಾಹೇಬರು ಹೊರಟು ಹೋಗುತ್ತಾರೆ. ಕೆಲಸದ ಬಗ್ಗೆ ಶಿಫಾರಸಿನ ಎರಡು ಮಾತು ಬರೆಯಬಹುದು. ಕೆಲವರ ಬಗ್ಗೆ ಕಹಿ ಚೆಲ್ಲಬಹುದು. ಯಾರ ಹಣೆಬರಹ ಹೇಗಿರುತ್ತೆ, ಯಾರ ಎಲೆಗೆ ಏನು ಬಂದು ಬೀಳುತ್ತೆ, ದೊಡ್ಡ ಸಾಹೇಬರು ಹೋಗುತ್ತಾರೆ, ಕೆಲವರ ಪ್ರತಿಷ್ಠೆ ಹೆಚ್ಚುತ್ತದೆ, ಕೆಲವರ ಬಾಲ ಕತ್ತರಿಸಿದಂತಾಗುತ್ತದೆ - ಯಾರಾದರೂ ಒಬ್ಬರಿಗೆ ಹಾಗಾಗಬಹುದು ಇಲ್ಲವೆ ಕೆಲವರ ಪಾಲಿಗೆ ಹಾಗಾಗಬಹುದು. ಹೊಟ್ಟೆಪಾಡಿನ ಈ ದೊಂಬರಾಟದಲ್ಲಿ ಎಲ್ಲರಿಗೂ ದಿಗ್ಭ್ರಮೆ ಹಿಡಿದಂತಾಗಿದೆ. ಜೇನು ಹುಟ್ಟಿಗೆ ಕಲ್ಲು ಬಿದ್ದಂತೆ ಎಲ್ಲರೂ ಕೂಗಾಡುತ್ತಾ, ಗಲಿಬಿಲಿಯುಬ್ಬಿಸುತ್ತಿದ್ದಾರೆ.

ಆದರೆ ಇದೆಲ್ಲ, ದೊಡ್ಡ ಸಾಹೇಬರು ಹೋಗುತ್ತಾರೆ ಅನ್ನೋದಕ್ಕೆ ಮಾತ್ರವೇ ಅಲ್ಲ, ಅವರ ಬದಲಿಗೆ ಇನ್ನೊಬ್ಬ ಸಾಹೇಬರು ಬರುತ್ತಾರೆ, ಅದಕ್ಕೂ ಕೂಡ. ಬರುವವರನ್ನು ಕುರಿತು ಅನೇಕ ಊಹಾಪೋಹಗಳು ಗರಿಗೆದರಿ ನಿಂತವು-ಅವರ ಮುಖ ಹೇಗಿರಬಹುದು, ಅವರ ಅಭ್ಯಾಸಗಳು, ನಡವಳಿಕೆ ಹೇಗಿರಬಹುದು ಇವುಗಳ ಬಗೆಗೆ ವಿಮರ್ಶಾತ್ಮಕವಾಗಿ ಚರ್ಚೆ ನಡೆಯಲಾರಂಭಿಸಿತು. ಹಳಬರು ಹೋಗಿ ಹೊಸಬರು ಬರುವರು, ಯೋಚಿಸುತ್ತಿರುವಂತೆಯೆ ಮನಸ್ಸಿಗೆ

ಆನಂದವಾಗುತ್ತದೆ. ಆ ಆನಂದ ದಾಸ್ಯಮನೋಭಾವದ ಬದಲಾವಣೆಯಿಂದ ಉಂಟಾದದ್ದು. ವಿವರವಾಗಿ ವಿಶ್ಲೇಷಣೆಗೆ ಆ ಆನಂದದ ಸ್ವರೂಪ ಎಟುಕದ ಹಾಗಿರಬಹುದು. ಆದರೆ ಆನಂದದ ಕಾರಣ ಎಲ್ಲರಿಗೂ ಒಂದೇ ಆಗಿಲ್ಲ.

ಬದುಕಿನುದ್ದಕ್ಕೂ ದಬಾವಣೆಯಲ್ಲಿ ಸಿಲುಕಿಕೊಂಡಿರುವುದೂ ಕೆಲವರ ವೈಶಿಷ್ಟ್ಯ. ಬೇರೆಯವರ ಸ್ವೇಚ್ಛೆಯ ನಡವಳಿಕೆ ಅಥವಾ ಕಟ್ಟುಪಾಡುಗಳ ಹಿಡಿತಕ್ಕೆ ತಲೆಬಾಗಿಸಿ ಅವರ ಹಿಡಿತ ಮತ್ತು ಜಬರದಸ್ತಿನ ಮುಂದೆ ತಮ್ಮ ಸ್ವಂತಕ್ಕಾಗಿ ನಗಲು ಪ್ರಯತ್ನಿಸಬೇಕಾದರೂ ಬೇರೆ ಯಾರಾದರೂ ನೋಡಿಬಿಟ್ಟಾರೇನೊ ಅಂತ ಆಕಡೆ ಈಕಡೆ ತಲೆಯಾಡಿಸಿ ನೋಡುತ್ತಾರೆ. ಸ್ವಂತ ಬುದ್ಧಿಯಿಂದ ಯೋಚಿಸಬೇಕಾಗಿ ಬಂದಾಗ ಎಲ್ಲಿ ಹೊಟ್ಟೆಪಾಡಿನ ಶಾಸ್ತ್ರೀಯ ನಿಯಮಗಳ ಉಲ್ಲಂಘನೆಯಾಗಿ ಹೋಗುತ್ತದೊ ಅಂತ ಹೆಜ್ಜೆ ಹೆಜ್ಜೆಗೂ ಬೆದರಿ ನಡುಗುತ್ತಿರುತ್ತಾರೆ. ಬಂಡೆಯ ಅಡಿಗೆ ಸಿಕ್ಕಿ ಹಳದಿ ಬಣ್ಣಕ್ಕೆ ತಿರುಗಿದ ಹುಲ್ಲೂ ಹಳೆಯ ಬಂಡೆ ಚೆನ್ನಾಗಿತ್ತೊ, ಹೊಸಬಂಡೆ ಚೆನ್ನಾಗಿರುತ್ತದೊ ಅಂತ ಯೋಚನೆ ಮಾಡುವುದಿಲ್ಲ. ಅದೇ ರೀತಿಯಲ್ಲಿ ಅವರ ಮನಸ್ಸಿನೊಳಗಡೆ ಅದುಮಿಟ್ಟಿರುವ ಬಂಡಾಯದ ಕಿಚ್ಚು ಸುಮ್ಮನೆ ತನ್ನಲ್ಲೇ ಅಡಗಿ ಕುಳಿತಿರುತ್ತದೆ. ಇದು ಪರಿಸ್ಥಿತಿಯ ಬದಲಾವಣೆ.

ಆದ್ದರಿಂದಲೇ ಹೊಸ ಸಾಹೇಬರು ಬರುವುದಕ್ಕಿಂತ ಮುಂಚೆ ಅವರ ಬಗೆಗಿನ ಒಂದು ರೀತಿಯ ಆಶಾವಾದಿ ಭಾವನೆಯನ್ನು ತಾವೇ ಸಮರ್ಥಿಸಿಕೊಳ್ಳುತ್ತಾ ಎಲ್ಲರೂ ಬಗೆಬಗೆಯ ಭರವಸೆಗಳನ್ನು ತಳೆಯುತ್ತಿದ್ದರು.

ಹಳೆಯ ಸಾಹೇಬರ ಜೊತೆ ನಡೆದುಕೊಳ್ಳುವುದರಲ್ಲಿ ಈಗ ಎಲ್ಲರಲ್ಲೂ ಇನ್ನೂ ಹೆಚ್ಚಿನ ಭಯಭಕ್ತಿ ಮನೆಮಾಡಿತ್ತು. ಏಕೆಂದರೆ ಮನಸ್ಸಿನಲ್ಲಿ ಹೆದರಿಕೆ, ಇನ್ನೂ ಲೇಖನಿ ಅವರ ಕೈಯಲ್ಲೆ ಇದೆ. ಯಾವಾಗ ಏನಾಗುತ್ತದೊ, ಕಡೆಯ ಗಳಿಗೆಯವರೆಗೆ ಅದರಲ್ಲಿ ತಾಕತ್ತಿದ್ದೇ ಇರುತ್ತದೆ. ಹೋಗುವ ವೇಳೆಯಲ್ಲೇ ಕಾಗದದ ಮೇಲೆ ಎರಡು ಪಂಕ್ತಿ ಬರೆದು ಹೋಗಬಹುದು. ಅದರಿಂದಲೇ ಯಾರ ಬದುಕಾದರೂ ಮಣ್ಣು ಮುಕ್ಕುವಂತಾಗಬಹುದು.

ಮಿಸ್ಟರ್ 'ಶ' ಅದೇ ದರ್ಪದೊಂದಿಗೆ ಕೆಲಸ ಮಾಡುತ್ತಲೇ ಇದ್ದಾರೆ. ಇನ್ನೂ ಎರಡರಷ್ಟು ದರ್ಪದಿಂದ ಅಂತ ಬೇಕಾದರೂ ಅನ್ನಿ. ಅವರನ್ನು ದೂರದಿಂದ ನೋಡುತ್ತಲೆ ಶ್ರದ್ಧೆ ಹುಟ್ಟುತ್ತದೆ. ಈ ಮೇಲಿನ ಅಧಿಕಾರಿಗಳು ಎಷ್ಟು ನಿರ್ವಿಕಾರ ರಾಗಿರುತ್ತಾರೆ. ಸಹಿ ಹಾಕಿ ಚಾರ್ಜ್ ಕೊಟ್ಟು ನಡೆಯುತ್ತಿರುತ್ತಾರೆ. ಅಲ್ಲಿಯವರೆಗೂ ಎಲ್ಲ ನನ್ನದು ನನ್ನದು ಅನ್ನುತ್ತಿರುತ್ತಾರೆ, ಕೆಲಸದಲ್ಲಿ ಸ್ವಲ್ಪವೂ ಸಡಿಲವಾಗುವುದಿಲ್ಲ. ಉದಾಸೀನತೆ ತೋರುವುದಿಲ್ಲ, ಕಬ್ಬಿಣದ ಅಚ್ಚಿನಲ್ಲಿ ಎರಕ ಹೊಯ್ದ ಮನುಷ್ಯರು - ಉಕ್ಕಿನಂತೆ. ಬಲಿದತ್ತ ದಾಸ್ ತನ್ನ ಅಭಿಪ್ರಾಯವನ್ನು ಬೇರೆಯವರ ಅಭಿಪ್ರಾಯ ದೊಡನೆ ಹೋಲಿಸಿ ನೋಡುತ್ತಾನೆ. ಒಬ್ಬರ ಜೊತೆ ಒಬ್ಬರು ಸೇರಿ ಸಹಬಾಸಗಿರಿ ಪಡೆಯುತ್ತಾರೆ. ಹೇಳುತ್ತಾರೆ - ಹೀಗಿರೋದರಿಂದಲೇ ತಾನೇ ಕಂಪನಿಯ ಕೆಲಸ ತಲೆಮಾರಿನಿಂದ ನಡೆಯುತ್ತಾ ಬಂದಿರೋದು, ಮುಂದೆ ಬರುತ್ತಿದೆ, ಯಾವಾಗಲೂ ಕೆಲಸ ಕೆಟ್ಟಿಲ್ಲ, ಮನುಷ್ಯ ಅಂದರೆ ಹೀಗಿರಬೇಕು ನೋಡಿ. ಅಲ್ಲಾದರೇನು ಇಲ್ಲಾದರೇನು, ಎಲ್ಲಾ ಕಡೇಲೂ ಜವಾಬ್ದಾರಿ ಇದ್ದೇ ಇದೆ. ಕೆಲಸ ಮಾಡುವವರು

ಮತ್ತು ಮಾಡಿಸೋರು ಇವರಿಬ್ಬರ ನಡುವೆ ವ್ಯತ್ಯಾಸ ಇರೋದು ಈ ಜವಾಬ್ದಾರಿಯಲ್ಲೇ, ಕತ್ತೆ ಕೆಲಸ ಮಾಡೋದರಲ್ಲಲ್ಲ.

ಜನ ಟೊಂಕಕಟ್ಟಿ ಕೆಲಸ ಮಾಡುತ್ತಿದ್ದಾರೆ. ಮಿಸ್ಟರ್ 'ಶ' ಅವರ ಅನುಕೂಲ-ಅನನುಕೂಲಗಳ ಬಗ್ಗೆ ಎಲ್ಲರಿಗೂ ಕಾಳಜಿ. ತುಂಬಾ ದೂರ ಹೋಗಬೇಕು. ಅದರಿಂದಾಗಿ ಮಂಚ, ಬೀರು ಎಲ್ಲ ಹರಾಜು ಹಾಕುತ್ತಾರೆ. ತೊಗೊಂಡು ಹೋಗ ಬೇಕಾದ ಸಾಮಾನುಗಳನ್ನು ಪ್ಯಾಕ್ ಮಾಡಬೇಕು, ಮೋಟಾರು ಏರ್ಪಾಡಾಗಬೇಕು, ಕೂಲಿಗಳನ್ನು ನೋಡಬೇಕು, ಹೀಗೆಯೆ ಅನೇಕ ಕೆಲಸಗಳಿವೆ. ಇದೇ ಅಲ್ಲದೆ ಅವಕಾಶ ಸಿಕ್ಕಿದಾಗ ಅವರ ಸುತ್ತಮುತ್ತ ಇರಬೇಕು, ಕಣ್ಣಿಗೆ ಬೀಳುತ್ತಿರಬೇಕು, ಅವರಿಂದ ಬಹುಶಃ ಕಡೆಯಲ್ಲಿ ಶಿಫಾರಸು ಬರೆಯಬೇಕಾದಾಗ ನೆನಪಿಸಿಕೊಂಡಾರು.... ಮನಸ್ಸಿನಲ್ಲಿ ಇದೇ ಜಪ, ಯಾರೂ ಬಾಯಿ ಬಿಟ್ಟು ಹೇಳಲಾರರು.

ಈ ಪರಿಸ್ಥಿತಿ ಒಳಗಿನದು, ಹೊರಗೆ ಏನೂ ಕಾಣಿಸುವುದಿಲ್ಲ. ಮಾಮೂಲಿನಂತೆ ಕೆಲಸ ನಡೆಯುತ್ತಿದೆ.

ಆ ದಿನ ಬಂತು, ಹೊಸ ದೊಡ್ಡ ಸಾಹೇಬರು ಬಂದರು. ಬಿಳಿಯ ಎತ್ತರದ ಹರಯದ ವ್ಯಕಟ್ಟು ನಗುಮುಖ - ಮಿಸ್ಟರ್ ಶರ್ಮಾ. ಮಾತುಕತೆ, ವ್ಯವಹಾರಗಳಲ್ಲಿ ಎಲ್ಲ ವಿದೇಶಿ ಪಡಿಯಚ್ಚು, ಅವರ ಬಳಿ ಒಂದು ದೊಡ್ಡ ಮೋಟಾರು ಕಾರಿದೆ. ಸಾಯಂಕಾಲ ಹೊತ್ತಿಗೆ ಹೊಸಬರನ್ನು ಸ್ವಾಗತಿಸುವ, ಹಳಬರನ್ನು ಬೀಳ್ಕೊಡುವ ಒಂದು ಸಣ್ಣ ಸಮಾರಂಭ ಏರ್ಪಟ್ಟಿತು. ಅವರವರ ಹುದ್ದೆಗಳಿಗನುಗುಣವಾಗಿ ಕುರ್ಚಿಗಳ ಮೇಲೆ ಮುಂದೆ ಕುಳಿತು ಹಿಂದೆ ನಿಂತು ಫೋಟೊ ತೆಗೆಸಿಕೊಂಡರು. ಇಬ್ಬರು ಸಾಹೇಬರುಗಳ ಕುತ್ತಿಗೆಯಲ್ಲೂ ಭಾರಿಭಾರಿ ಹೂವಿನ ಹಾರ.... ಒನ್-ಟೂ-ತ್ರೀ-ಫೋಟೋ ಗ್ರಾಫರ್ ಕ್ಲಿಕ್ ಮಾಡಿದ - ನೆನಪು ಸಜ್ಜಾಗಿ ಅದರಲ್ಲಿ ಅಡಗಿ ನಿಂತಿತು. ಆದಾದ ಮೇಲೆ ಫೋಟೋವಿನ ಪ್ರತಿಗಳು ಬರುತ್ತವೆ, ಫ್ರೇಮಿನಲ್ಲಿ ಕಟ್ಟಿಹಾಕಿ ಗೋಡೆಗೆ ನೇತು ಹಾಕುತ್ತಾರೆ, ಕ್ರಮೇಣ ಅದರ ಮೇಲೆ ಹೊಗೆ ಸೇರುತ್ತದೆ, ಮಬ್ಬಾಗುತ್ತದೆ, ಧೂಳು ಕೂಡುತ್ತದೆ, ಗದ್ದಲು ಹಿಡಿಯುತ್ತವೆ - ಹುಳುಗಳು ಮನೆಕಟ್ಟುತ್ತವೆ.

ದಿನ ಕಳೆಯುತ್ತಿದ್ದಂತೆ ಎಂದೋ ಒಂದು ದಿನ ಅದೇ ಫೋಟೋ ಬಹುಶಃ ಪೂರ್ವಕಾಲದ ಸೊತ್ತಾಗುತ್ತದೆ. ಜನಗಳ ಗುಂಪಿನಲ್ಲಿ ತಾವೆಲ್ಲಿದ್ದೇವೆಂದು ಹುಡುಕಿಕೊಳ್ಳಬೇಕಾಗುತ್ತದೆ.

ಎಲ್ಲ ಅಷ್ಟೇ.

ಫೋಟೊ ಆದ ಮೇಲೆ ಇಬ್ಬರು ಸಾಹೇಬರ ಜೊತೆಯಲ್ಲೂ ಚಹಾಕೂಟ. ಅಲ್ಲೂ ಹುದ್ದೆ, ಮಾನ್ಯತೆಗಳಿಗೆ ತಕ್ಕಂತೆ ಹತ್ತಿರದ ಅಥವಾ ದೂರದ ಆಸನಗಳಲ್ಲಿ ಕುಳಿತುಕೊಳ್ಳುವ ಏರ್ಪಾಡು.

ಒಂದೆರಡು ಸಣ್ಣಪುಟ್ಟ ಭಾಷಣಗಳು. ಅದೇ ದಾಸ್ಯದ ಭಾವನೆಗಳಿಗೆ ಬಣ್ಣಹಚ್ಚಿ ಹೊರಗೆಡಹುವುದು - ಅದೇ ನರಸತ್ತ ಧ್ವನಿ -

ಒಂದು ಅಧ್ಯಾಯ ಮುಗಿಯುತ್ತದೆ - ಆದರೆ ಎಲ್ಲೂ ನಿಲುಗಡೆಯಿಲ್ಲ.

ಅದೇ ಸಂಕೋಲೆ - ಬರುಸು.... ತಣ್ಣಗ-

ಹೊಸ ಜಮಾನಾ - 'ಶ' ಹೋದರು, 'ಶರ್ಮಾ' ಬಂದರು.

ಪ್ರಾರಂಭದಲ್ಲಿ ಕೆಲವು ದಿನ ಅದೇ ಹೊಸ ಹುರುಪಿನಲ್ಲಿ ಕೆಲಸ. ಆಸೆಯಲ್ಲಿ ಬದುಕುವುದು ಮನುಷ್ಯನ ಸ್ವಭಾವ, ಅನುಮಾನದಲ್ಲಲ್ಲ.

ಮೊದಲು ಹೆಡ್‌ಗುಮಾಸ್ತರು ಶುರುಮಾಡಿದರು - ವಸಂತಬಾಬು, ಯಾವುದೇ ಶೀರ್ವಾನ ಅವರ ಟೇಬಲ್ ಬಳಿ ಹುಟ್ಟಿ, ಆಮೇಲೆ ಮೆಲ್ಲಗೆ ಇಡೀ ಆಫೀಸಿನಲ್ಲೆಲ್ಲ ಹರಡುತ್ತದೆ.

"ನೋಡಿ," ಹೆಡ್‌ಗುಮಾಸ್ತರು ನುರು ಬಾಬುಗಳ ಹತ್ತಿರ ಪಿಸುಗುಟ್ಟಿದರು, "ಕೃಷ್ಣಪಕ್ಷವಾದ ಮೇಲೆ ಶುಕ್ಲಪಕ್ಷ, ಹುಣ್ಣಿಮೆಯಾದ ಮೇಲೆ ಅಮಾವಾಸ್ಯೆ, ಇದೇ ಸೃಷ್ಟಿಯ ನಿಯಮ ನೋಡಿ. ಅಬ್ಬಾ, ಕಂಸ ಹೋದ ಮೇಲೆ ಭೂಭಾರವೇ ಇಳಿದಂತಾಯಿತು. ಏನಂತೀರಿ ?"

"ಆಹಾ ಹಾ! ಎಂಥ ಮನುಷ್ಯ ಅವನು ? ಮನುಷ್ಯ ಅಲ್ಲ, ಸಾಕ್ಷಾತ್ ರಾಕ್ಷಸ ಅಂದರೆ ರಾಕ್ಷಸ! ಯಾವಾಗಲಾದರೂ ಹೇಳಿ ಕಳಿಸಿದ ಅಂದರ ಮೈಯೆಲ್ಲ ನಡುಗಿಹೋಗುತ್ತಿತ್ತು. ಒಳ್ಳೆ ಮುಖದ ಮೇಲೆ ಹೊಡೆದ ಹಾಗೆ ಮಾತಾಡುತ್ತಿದ್ದ. ಆ ಮಾತೋ, ಮಾತೇ ಅದು, ಸಿಡಿಲು ಬಡಿದಂತಾಗುತ್ತಿತ್ತು. ಯಾರ ಮೇಲೆ ಯಾವಾಗ ಎಗರುತ್ತಾನೊ ಗೊತ್ತಾಗುತ್ತಿರಲಿಲ್ಲ. ಏನೋ, ಆದದ್ದೆಲ್ಲಾ ಒಳ್ಳೇದೆ ಆಯ್ತು."

"ಅಯ್ಯೋ, ಆದದ್ದೇನು ಕಡಮೆ ಅವಮಾನವೆ ?", ವಸಂತಬಾಬು ಹೇಳಿದರು, "ಏನೋ ಚಾಕರಿಗೆ ಸೇರಿದ್ದೇವೆ ಅಂದರೆ ತಲೆಮಾರಿಕೊಂಡಿದ್ದೇವೆಯೆ, ಎಲ್ಲ ಸಹಿಸಿಕೊಳ್ಳಬೇಕು ಅಂದ್ರೆ. ಆದರೆ ಒಟ್ಟಿನಲ್ಲಿ ದೇವರು ದೊಡ್ಡವನು. ಯಾವಾಗಲೂ ಒಂದೇ ತರಹ ಇರಲ್ಲ ನೋಡಿ. ಸದ್ಯ ಆ ಮನುಷ್ಯ ತೊಲಗಿದನಲ್ಲ. ಈಗಿನ ಸಾಹೇಬರಿದ್ದಾರಲ್ಲ, ತಮ್ಮ ಗತ್ತಿನಿಂದಲೇ ಮನಸ್ಸನ್ನು ಗೆದ್ದುಬಿಡ್ತಾರೆ, ಮನುಷ್ಯನನ್ನು ಕೊಂಡುಕೊಂಡು ಬಿಡ್ತಾರೆ. ಹಿಂದಿನಂತೆ ಅಪಮಾನ ಮಾಡಿಸಿಕೊಳ್ಳುವ, ಬೈಯ್ಗಳು ತಿನ್ನುವ ದಿನಗಳು ಹೋದವಲ್ಲ. ಈಗಲಾದರೂ ಸಮಾಧಾನದಿಂದ ಉಸಿರಾಡಬಹುದು."

"ಅವನು ಬಹಳ ಕೆಟ್ಟ ಮನುಷ್ಯ, ಮೃಗದಂತೆ ಆಡುತ್ತಿದ್ದ. ಇವರು ಎಷ್ಟು ಒಳ್ಳೆಯವರು."

"ಅವರು ಮತ್ತು ಇವರು" ವಸಂತ ಬಾಬು ಹೇಳಿದರು - "ಎಲ್ಲಿಂದ ಎಲ್ಲಿಗೆ ಲೆಕ್ಕ. ಛೆ ಛೆ! ಆನೆಗೂ ಆಡಿನ ಮರಿಗೂ ಹೋಲಿಸೋದುಂಟೆ ? ನಿಜ ಹೇಳ ಬೇಕೆಂದರೆ, ಮನುಷ್ಯನ ಆಟ ಏನು ಅಂತ ನೋಡಬೇಕು. ಇವರು ಒಳ್ಳೆಯ ವಂಶಸ್ಥರು, ನಡೆವಳಿಕೆಯಿಂದಲೆ ಗೊತ್ತಾಗಲ್ವೆ ? ಕೆಲಸಮಾಡೋದು ಒಂದು ಹವ್ಯಾಸ ಅಷ್ಟೆ. ಇವರು ಬಹಳ ದೊಡ್ಡ ಮನುಷ್ಯರು, ಹಾಲು ತುಪ್ಪದಲ್ಲಿ ಬೆಳೆದವರು."

"ಇವರು ತಿಂದು ಎಸೆದಿದ್ದಷ್ಟನ್ನೂ ಅವನು ಹುಟ್ಟಿದಾಗಿನಿಂದ ನೋಡಿರಲಾರ" ನೂರುಬಾಬು ಮಾತು ಸೇರಿಸಿದರು.

"ದೊಡ್ಡ ಮನುಷ್ಯರು ಅಂದರೆ ಮುಖ ನೋಡಿದರೆ ಸಾಕು,

ಗೊತ್ತಾಗಿಹೋಗುತ್ತೆ. ಆಹಾ, ಎಂಥ ಮುಖ, ಎಂಥ ಮಾತು, ಒಂದು ಬಾರಿ ನೋಡಿದರೆ ಸಾಕು, ಮೋಡಿಹಾಕಿದ ಹಾಗಾಗುತ್ತೆ. ಅವರ ಯೋಗ್ಯತೆಯೂ ಅಷ್ಟೆ. ಸಾಕಷ್ಟು ಓದಿ ಬರೆದಿದ್ದಾರೆ, ಇಲ್ಲದಿದ್ದರೆ ಇಷ್ಟು ಸಣ್ಣ ವಯಸ್ಸಿನಲ್ಲಿ ಇಷ್ಟೊಂದು ಜವಾಬ್ದಾರಿ ಹೊರೋಣ ಅಂದರೇನು!" ....ಇಲ್ಲ, ಈ ಗುಂಪಿನಲ್ಲಿ ಇನ್ನು 'ಶ' ಅವರಿಗೆ ಯಾವ ಜಾಗವೂ ಇಲ್ಲ. ಕೊಳೆತು ನಾರುವ ಪದಾರ್ಥವನ್ನು ಎಸೆದಾಗ, ಕೇವಲ ಅದರ ಕೆಟ್ಟ ವಾಸನೆ ಬಾಕಿ ಉಳಿದಿರುವಂತೆ ವಿಮರ್ಶೆ ನಡೆಯುತ್ತಿದೆ. ಸ್ವಲ್ಪ ದಿನಗಳಾದ ಮೇಲೆ ಆ ವಿಮರ್ಶೆಯೂ ಇರುವುದಿಲ್ಲ. ಯಾರೂ ಆ ಹೆಸರೆತ್ತುವುದಿಲ್ಲ.

ಈಗಿರುವವರು ಶರ್ಮಾ ಅವರು.

ಹರಿಬಾಬು ಶ್ಯಾಮಬಾಬುಗಳಿಗೆ ಹೇಳುತ್ತಾರೆ-

"ಹೊಸ ಸಾಹೇಬರು ಎಷ್ಟು ಬುದ್ಧಿವಂತರು ಗೊತ್ತಾ? ಅವನು ಕತ್ತೆಯ ಹಾಗಿದ್ದ. ಹಗಲು ರಾತ್ರಿ ದುಡಿದರೂ ಫೈಲಿನ ಕೆಲಸ ಮುಗಿಯುತ್ತಿರಲಿಲ್ಲ. ಇವರು ಮುಟ್ಟಿದರು ಅಂದರೆ ಕೆಲಸ ಮುಗಿದು ಹೋಗತ್ತೆ. ಆಫೀಸಿನಲ್ಲೆಲ್ಲ ಇದೇ ಮಾತುಕತೆ. ಫೈಲು ಹೋಯಿತೆಂದರೆ ಸಾಕು, ಛಟ್ ಅಂತ ವಾಪಸ್ಸು ಬಂದು ಬಿಡುತ್ತೆ, ಮಿಂಚಿನಂತೆ. ಇದನ್ನೇ 'ಗ್ರಾಫ್' ಅನ್ನೋದು. ಕೆಲವರಿಗೆ ಎಷ್ಟು ಬಡಕೊಂಡರೂ ಮಾತು ತಲೆಗೆ ಹತ್ತೋದಿಲ್ಲ, ಇನ್ನು ಕೆಲವರ ಹತ್ತಿರ ಬಾಯಿಂದ ಮಾತು ಹೊರ ಬೀಳುವಷ್ಟರಲ್ಲೇ ನಿನಗೆ ಏನು ಬೇಕು ಅಂತ ಅರ್ಥಮಾಡಿಕೊಂಡುಬಿಟ್ಟಿರುತ್ತಾರೆ?

"ಹೌದು, ಹಾಗೇ ಕಾಣುತ್ತೆ"- ಶ್ಯಾಮಬಾಬು ಹೂಂಗುಟ್ಟಿದರು, "ನೆನ್ನೆ ಇವರು ಟೆನ್ನಿಸ್ ಆಟ ಆಡೋದನ್ನ ನೋಡ್ತಾ ಇದ್ದೆ. ನಗುತ್ತಲೆ ಎಲ್ಲರನ್ನೂ ಸೋಲಿಸಿಬಿಡುತ್ತಿದ್ದರು. ಎಂಥ ಮಾಸ್ಟರ್ಲೀ ಸ್ಟ್ರೋಕ್ಸ್ ಅಂತೀರಿ."

ಬಲಿದತ್ತನೂ ಸರೋಜನಿಯ ಹತ್ತಿರ ಹೇಳಿದ -"ನೋಡು ಸರೋಜ, ನಮ್ಮ ಹೊಸ ಸಾಹೇಬರು ಬಂದಿದ್ದಾರಲ್ಲ, -ನೋಡಿದ್ದೀಯಾ ಅವರನ್ನ. ಇಷ್ಟು ಸಣ್ಣ ವಯಸ್ಸಿನಲ್ಲೇ ಎಷ್ಟೊಂದು ಕೆಲಸ ತಿಳಿದುಕೊಂಡಿದ್ದಾರೆ ಅಂತಿ - ತುಂಬಾ ಒಳ್ಳೆಯವರು, ಜಂಟಲ್‌ಮನ್. ಹೀಗೆ ಕೆಲಸವನ್ನೂ ತಿಳಿದುಕೊಂಡು ಬೇರೆಯವರ ಮನಸ್ಸನ್ನೂ ಅರ್ಥಮಾಡಿಕೊಳ್ಳುವ ಜನ ತುಂಬ ಅಪರೂಪ".

"ನಿಜ, ಅದು ಸರಿ." ಸರೋಜನಿ ತಮಾಷೆ ಮಾಡುತ್ತಾ ಹೇಳಿದಳು, "ಹಾಗಾದರೆ ಒಂದು ಸಾರಿ ಅವರನ್ನು ಮನೆಗೆ ಯಾಕೆ ಕರೆಯೊಲ್ಲ-ನಾವೇನು ಕಳೆದುಕೊಳ್ಳಬೇಕು ಅದರಲ್ಲಿ."

"ಓಹೋ, ನೀನೇನು ತಮಾಷೆ ಅಂದುಕೊಂಡು ಬಿಟ್ಟೆಯಾ. ಕರೆದರೆ ಬಂದು ಬಿಡುವಷ್ಟು ಸರಳ ಮನಸ್ಸಿನವರೇ ಅವರು. ನಾನೇನು ಸುಳ್ಳು ಹೇಳ್ತಾ ಇದ್ದೀನಿ ಅಂದುಕೊಂಡಿದ್ದೀಯಾ? ಅವರು ಜನಗಳ ಜೊತೆ ತುಂಬ ಹೊಂದಿಕೊಳ್ಳುತ್ತಾರೆ. ದಾರಿಯಲ್ಲೇ ಜನಗಳ ಕಷ್ಟಸುಖ ವಿಚಾರಿಸುತ್ತಾರೆ. ಇಷ್ಟು ಕೆಲವೇ ದಿನಗಳಲ್ಲಿ ಜನ ಅವರನ್ನು ಮೆಚ್ಚಿಕೊಂಡಿದ್ದಾರೆ-ನಿಜವಾಗಿಯೂ ಈ ಕೆಲಸದಲ್ಲೇ ಸುಖ ಇರೋದು ಅಂತ ಹೇಳ್ತಾರೆ."

"ಸರಿ ಹಾಗಾದರೆ, ಸಾಕಷ್ಟು ಕಷ್ಟಪಟ್ಟಿದ್ದೀರಿ. ಈಗ ವಿಶ್ರಾಂತಿ ತೊಗೊಳ್ಳಿ. ಲೋ

ಹರ್ಷ, ಸ್ವಲ್ಪ ಬುದ್ಧಿಯೋರ ಕಾಲು ಒತ್ತು ಬಾರೋ."

ಹಾಸಿಗೆಯ ಮೇಲೆ ಮಲಗಿರುವಂತೆಯೆ ಬಲಿದತ್ತ ಸುಖದ ಕನಸು ಕಾಣುತ್ತಿದ್ದ. ಅವನು ಸುಖಿ, ಅವನ ಭವಿಷ್ಯ ಉಜ್ವಲವಾಗಿದೆ. ಇನ್ನೂ ನೆನ್ನೆ ಮೊನ್ನೆ ಎಲ್ಲಿದ್ದ, ಈಗ ಎಷ್ಟು ಮುಂದೆ ಬಂದಿದ್ದಾನೆ. ಇಷ್ಟರ ಮೇಲೆ ಹೊಸ ಸಾಹೇಬರು, ನಯವಾದ ನಡವಳಿಕೆ, ಅದೂ ಆಸೆ ಹುಟ್ಟಿಸುತ್ತದೆ.

ಹಾಗೇ ಯೋಚನೆ ಮಾಡುತ್ತ ಅವನು ತನ್ನ ಭಾವನೆಗಳನ್ನು ಮೆಲುಕು ಹಾಕುತ್ತಿದ್ದ. ಕೆಲಸ ಮಾಡುವವನು ಏನು ಬಯಸುತ್ತಾನೆ? ಕೇವಲ ಹಣಕಾಸಿನ ದೃಷ್ಟಿಯಿಂದ ಬಡ್ತಿ ಸಿಕ್ಕಲೆಂದೆ? ಆರ್ಥಿಕವಾಗಿ ಬಡ್ತಿ ಸಿಗಬೇಕು, ಇಲ್ಲದಿದ್ದರೆ ಕೆಲಸ ಏಕೆ ಮಾಡುತ್ತಾನೆ. ಕಷ್ಟಕರವಾದ ಕೆಲಸಕಾರ್ಯಗಳನ್ನು ಮಾಡಿಕೊಂಡು ಸತ್ಯಸಂಧನಂತೆ ಬಾವುಟ ಹಾರಿಸುವುದಕ್ಕಾಗಿ ಬಲಿದತ್ತ ತನ್ನ ಮನುಷ್ಯತ್ವವನ್ನೇ ಉರುಳಿಗೆ ಸಿಕ್ಕಿಸಿಲ್ಲ. ಅದಕ್ಕಾಗಿಯೆ ಬದುಕು ಸವೆಸುತ್ತಿಲ್ಲ. ಈ ಮನುಷ್ಯ ಜನ್ಮ ದುರ್ಲಭ. ಅವನೇನು ಹೆದ್ದನಲ್ಲ, ದಾರಿತಪ್ಪಿದವನಲ್ಲ.

ಸಂಬಳ ಹೆಚ್ಚಾಗುವುದರ ಜೊತೆಗೆ ಅಧಿಕಾರ, ಸಾಮರ್ಥ್ಯ ಹೆಚ್ಚಾಗುತ್ತದೆ, ಎಲ್ಲರೂ ನೋಡುತ್ತಿರುವಂತೆಯೆ ಅವನು ಮುಂದುವರಿಯುತ್ತಿದ್ದಾನೆ..... ಎಲ್ಲರೂ ಆಶ್ಚರ್ಯದಿಂದ ನೋಡುತ್ತಿರುತ್ತಾರೆ. ಅವನು ಏಣಿಯ ಮೇಲೆ ಮೇಲೇರುತ್ತಾ ತನ್ನ ದಕ್ಷತೆಯನ್ನು ಸಾಬೀತುಪಡಿಸುತ್ತಲೆ ಮುಂದುವರಿಯುತ್ತಿದ್ದಾನೆ.

ಇದರೊಟ್ಟಿಗೆ ಮೇಲಿನವರ ಉತ್ತಮ ನಡವಳಿಕೆ, ವಿಶ್ವಾಸ, ಮರ್ಯಾದೆ..... ಇವುಗಳಿಂದಾಗಿ ಅವನು ಅನುಮಾನ ಆತಂಕಗಳನ್ನು ದೂರಮಾಡಿ ಸಮಾಧಾನ ಚಿತ್ತನಾಗಿದ್ದಾನೆ.

ಬಲಿದತ್ತ ಮಲಗಿದ್ದಾನೆ, ಹರ್ಷ ಕಾಲೊತ್ತುತ್ತಿದ್ದಾನೆ. ಸಾಯಂಕಾಲದ ಹೊತ್ತು ಅವನು ಪಡೆಯುವ ವಿರಾಮವೇಳೆಯ ಆನಂದವೆಂದರೆ ಇದೇ.

ಬಲಿದತ್ತನ ಒಳಮನಸ್ಸಿನಲ್ಲಿ ಅನುಭವಗಳು ತುಣುಕು ತುಣುಕಾಗಿ ಕಲಸಿ ದಂತಾಗುತ್ತಿದ್ದವು. ತನ್ನ ಸುಖವನ್ನು ತೂಗಿನೋಡುತ್ತಿದ್ದಂತೆ ಇನ್ನೊಬ್ಬರ ದುಃಖವೂ ಕಣ್ಣಮುಂದೆ ಸುಳಿಯುತ್ತಿತ್ತು. ಅವರನ್ನೆಲ್ಲ ಸಾಕಷ್ಟು ನೋಡಿಬಿಟ್ಟಿದ್ದಾನೆ ಅವನು. ಅವನ ನಿನ್ನೆ ಮತ್ತು ಇವತ್ತಿನ ನಡುವೆ ನಿರಾಶೆ, ಹತಾಶೆ, ನೋವು, ಬುಡಭದ್ರ ವಿಲ್ಲದಿರುವಿಕೆ ಎಲ್ಲ ಸ್ತರಗಳಲ್ಲೂ ಹರಡಿನಿಂತಿದೆ. ಕಣ್ಣುಮುಚ್ಚಿದರೆ ಸಾಕು ಅವುಗಳ ಧ್ವನಿಯೆ ಕಿವಿಗೆ ಅಡರುತ್ತಿರುತ್ತದೆ. ಅವು ದುಡಿಯುತ್ತಿವೆ, ಮೈಕೈ ನೋಯಿಸಿ ಕೊಳ್ಳುತ್ತಿವೆ, ಅವುಗಳಿಗೆ ಏನೂ ಸಿಕ್ಕಿಲ್ಲ. ಅನೇಕ ಮಂದಿ ಸೊಂಟ ಬಗ್ಗಿಸಿ ಕೆಲಸ ಮಾಡಿಕೊಂಡೇ ಹೋಗುತ್ತಿದ್ದಾರೆ. ಬದುಕಿನುದ್ದಕ್ಕೂ ಹೀಗೇ. ಆ ಕೆಲಸದಿಂದಲೇ ಉಜ್ವಲ ಭವಿಷ್ಯ ರೂಪುಗೊಳ್ಳುತ್ತದೆಂಬ ಆಸೆ ಹೊತ್ತಿರುತ್ತಾರೆ. ಅವುಗಳಿಗಾಗಿಯೆ ಯೋಜನೆಗಳನ್ನು ಮಾಡಿ ಕೈಚಳಕ ತೋರಿಸುವುದಕ್ಕೆ ಅವರಿಗೆ ಪುರುಸೊತ್ತಿಲ್ಲ. ಮನೆಯಲ್ಲಿ ಅದೇ ಬೊಂಬಿನ ಗಳುವಿನ ಕೋಲು, ಕುರ್ಚಿ, ಚಾಪೆ, ತಿನ್ನುವುದಕ್ಕೆ ಅದೇ ದಪ್ಪಕ್ಕಿ, ಅದೇ ಅಭಾವ. ಎಷ್ಟು ತಿಣುಕಿದರೂ ಐದನೇ ತಾರೀಖಿನವರೆಗೂ ತಿಂಗಳ ಸಂಬಳದಿಂದ ತಟಾಯಿಸಲು ಸಾಧ್ಯವಾಗುವುದಿಲ್ಲ. ಅದಾದ ಮೇಲೆ ಸಾಲಸೋಲ, ತಲೆಮೇಲೆ ಹಾರಾಡುತ್ತಿರುವ ಅದೇ ಎಣ್ಣೆಕಾಣದ ಕೂದಲು,

ಉಡುವುದಕ್ಕೆ ಅದೇ ಹಳೆಯ ತೇಪೆ ಹಾಕಿದ ಹರಕಲು ಬಟ್ಟೆ. ಕಣ್ಣು ಮುಚ್ಚಿದರೆ ಸಾಕು, ನಾಳೆಗೆ ಏನೆಂದು ಗೊತ್ತಾಗುವುದಿಲ್ಲ. ನೌಕರಿ ಅನ್ನೋದು ತಾಳೆಯಮರದ ನೆರಳಿನಂತಿರುತ್ತದೆ. ಹಾಗೆಯೆ ಬೇಕಾದಷ್ಟು ಮೋಸ, ಕೈಚಳಕ, ಥಳಕು ಬಳುಕು ಮಾಡಿಯೂ ಏನೂ ದಕ್ಕದಿರುವವರೂ ಇದ್ದಾರೆ. ಅಂಥ ಬೇಕಾದಷ್ಟು ಉದಾಹರಣೆಗಳು ಕಣ್ಣಿನ ಮುಂದಿವೆ. ಸೋಮಾಯಾ ಪಟ್ನನಾಯಕ ವಾಂತಿಭೇದಿಯಿಂದ ಸತ್ತ. ಮನೆಯನ್ನು ಕನ್ನಡಿಯಂತೆ ಸಿಂಗರಿಸಿ ಇಟ್ಟಿದ್ದ, ಯಾವಾಗಲೂ ಮನೆಯಲ್ಲಿ ಜನ ಸೇರಿರುತ್ತಿದ್ದರು. ಎಲ್ಲರಿಗೂ ಚೆನ್ನಾಗಿ ತಿನ್ನಿಸುತ್ತಿದ್ದ, ಕುಡಿಸುತ್ತಿದ್ದ. ಕಂಪೆನಿಯ ಹೆಡ್ ಆಫೀಸಿನಿಂದ ಯಾರೇ ಬಂದರೂ ಜಿಗಣೆಯಂತೆ ಅಂಟಿಕೊಂಡು ಸುತ್ತುತ್ತಿದ್ದ, -ಅವರಿಗೆ ತಿಂಡಿತೀರ್ಥ ಎಲ್ಲ ಏರ್ಪಾಟುಗಳನ್ನು ಮಾಡುತ್ತಿದ್ದ. ಒಬ್ಬರೇ ಯಾರಾದರೂ ಸಿಕ್ಕಿದಾಗ ಹೇಳುತ್ತಿದ್ದ....ಮೆಲ್ಲಗೆ ಕೇಳುತ್ತಿದ್ದ- "ನನ್ನ ಬಗ್ಗೆ ಏನಾದರೂ ಮಾತಾಡುತ್ತಿದ್ದಾರಾ? ಏನಾದರೂ ಕೇಳಿದರಾ? ಯಾವಾಗಂತೆ ನನಗೆ ಪ್ರಮೋಷನ್! ನನ್ನನ್ನು ಕುರಿತು ಯಾರಾದರೂ ಏನಾದರೂ ಅಂದರಾ? ನನ್ನ ಹೆಸರು ಹೋಗಿದೆಯಾ? ....ಇತ್ಯಾದಿ, ಇತ್ಯಾದಿ. ಕಣ್ಣಿನ ಮುಂದೆ ಮುದುಕ ಸೋಮಾಯಾ ಪಟ್ನನಾಯಕನ ಚಿತ್ರ ತೇಲಿಹೋಗುತ್ತದೆ. ತೆಳ್ಳಗೆ, ಸಣ್ಣ ಸಣ್ಣ ಕೈಕಾಲು, ಕೃಶವಾದ ಮುಖ. ಹರೆಯದಲ್ಲಿ ಹೊಲೆಸಿದ ಕೋಟು ಪ್ಯಾಂಟು ಅವನ ಮೈಯನ್ನು ಅಗಸನ ಅಂಗಡಿಯಲ್ಲಿ ಬಿದಿರಿನ ಮೇಲೆ ನೇತುಹಾಕಿದ ಬಟ್ಟೆಗಳಂತೆ ಮುಚ್ಚಿರುತ್ತಿದ್ದವು. ಮನೆಯಲ್ಲಿ ಎರಡನೆ ಹೆಂಡತಿ. ಸೊರಗಿದ ಮೈ -ಆದರೂ ಯಾವಾಗಲೂ ನೀಟಾಗಿರುತ್ತಿದ್ದ. ಸೋಮಾಯಾ ಪಟ್ನ ನಾಯಕನ ಜೊತೆ ಸ್ನೇಹ ಬೆಳೆಸಿ ಅವನ ಆಸೆಗಳಿಗೆ ನೀರೆರೆಯುವುದಕ್ಕಾಗಿ ಅನೇಕ ಮಂದಿ ಅವನ ಬಳಿ ಬಂದು ಮಾತಿಗೆ ಮಾತು ಸೇರಿಸಿ ಸಹಾನುಭೂತಿ ವ್ಯಕ್ತಪಡಿಸುತ್ತಿದ್ದರು. ಅವನ ಜೊತೆ ಸಂಬಂಧ ಇಟ್ಟುಕೊಳ್ಳುವುದು ಲಾಭದಾಯಕವಾಗಿತ್ತು. ಹಬ್ಬಹರಿದಿನಗಳಲ್ಲಂತೂ ಅಂಥವರಿಗೆ ಸುಗ್ಗಿ. ಓರಿಯ ಅಧಿಕಾರಿಗಳಿಗೆ ಸೋಮಾಯಾ ಪಟ್ನನಾಯಕ ಬುಟ್ಟಿತುಂಬ ತಿಂಡಿತೀರ್ಥ ಕಳಿಸುತ್ತಿದ್ದ -ಎಲ್ಲ ವಿಚಾರಗಳಲ್ಲೂ ಸೈ ಅನ್ನುತ್ತಿದ್ದ ಸೋಮಾಯಾ ಪಟ್ನನಾಯಕ. ಅವನ ಸವೆದ ಮೈಯನ್ನು ವಾಂತಿಭೇದಿ ನುಂಗಿಹಾಕಿತ್ತು. ಆಸೆಯ ಹಣತೆಯಿಂದ ಮಿನುಗುಟ್ಟುತ್ತಿದ್ದ ಅವನ ಕಡುಬಡತನದ ಬದುಕಿಗೆ ಈಗ ನೆಮ್ಮದಿ ದೊರೆತಿರಬೇಕು, ಅದೇ ಅವನ ಕೇಸ್ ಡಿಸ್ಪೋಸಲ್ ಆಗಿತ್ತು. ಆ ವಿಚಾರವನ್ನು ಕಲ್ಪಿಸಿಕೊಂಡರೂ ಸಾಕು, ಬಲಿದತ್ತನ ಮೈಯಲ್ಲಿ ಚಳಿ ಹುಟ್ಟುತ್ತದೆ.

ಸೋಮಾಯಾ ಪಟ್ನನಾಯಕ ಇನ್ನಿಲ್ಲ.

ಇನ್ನು ಸೋಮಾಯಾನ ಮಡದಿ - ಅವನ ಯಶಸ್ಸಿನ ಅಸ್ತ್ರಗಳಲ್ಲಿ ಅವಳೂ ಒಬ್ಬಳಾಗಿದ್ದಳು. ಅವಳಿಗೆ ಎಂಥ ಸ್ಥಿತಿ ಒದಗಿತು! ಈಗ ಅವಳು ಎಲ್ಲಿರಬಹುದು? ಅವಳ ಕೈಯಿಂದ ಊಟ ಮಾಡಿದವರು ಎಷ್ಟು ದಿನ ತಾನೆ ಅವಳನ್ನು ನೆನಸುತ್ತಾರೆ.

ಬಲಿದತ್ತ ಕೂಗಿದ - "ಸರೋಜ, ಸರೋಜ."

"ಏನ್ರೀ?"

"ಏನಿಲ್ಲ, ಏನಿಲ್ಲ."

ಒಡೆದು ಚೂರಾದ ಆಸೆಯಂತೆ ಪುಳಿವಾಂಸದ ಗೂಡು. ಮಸುಕಾದ ದೃಷ್ಟಿ. ಆ ಬೆಂಕಿ ಉರಿಯುವುದಿಲ್ಲ. ಹೊಗೆಯದ್ದು ಎದ್ದು ಇಂಗಿಹೋಗುತ್ತದೆ. ಒಳಗಿನಿಂದ ಖಾಲಿ ಮನುಷ್ಯ-ಟೊಳ್ಳು, ಖಾಲಿ ಮಡಕೆ ಎಂದೂ ತುಂಬುವುದಿಲ್ಲ. ಗಾಜಿನ ಬಾನೆ ಒಡೆದದ್ದು ಮತ್ತೆ ಸೇರುವುದಿಲ್ಲ. ತನ್ನ ಒಳಮನಸ್ಸಿನ ಹರಿವಿನಲ್ಲಿ ಏಳುತ್ತಾ ಮುಳುಗುತ್ತಾ ಬರುತ್ತವೆ. ಹಂಡೆಗಳು, ಕೊಡಗಳು - ಪರಿಯುತ್ತಾ ಹೋಗುತ್ತವೆ, ಒಂದಾದ ಮೇಲೊಂದರಂತೆ, ಒಂದಾದ ಮೇಲೆ ಒಂದು. ಮಳೆಯ ನೀರಿನ ಜೊತೆಯಲ್ಲಿ ಹರಿದು ಹೋಗುತ್ತಿರುತ್ತವೆ ಕೊಚ್ಚೆಯಂತೆ. ಅವುಗಳ ವಾಕರಿಕೆ ಬರಿಸುವಂಥ ಭಯಂಕರ ನೆನಪಿನಿಂದಲೇ ಕೂದಲು ಸೆಟೆದದ್ದು ನಿಲ್ಲುತ್ತದೆ. ಗಾಯಗೊಂಡ ರೋಗಿಗಳ ಅಡ್ಡಾದಿಡ್ಡಿಯಾದ ಮೆರವಣಿಗೆ.

ವೆಂಕಟರಾವ್, ಬನು-ಏನು ಮಾಡುತ್ತಿರಬಹುದು ಅವರು ? ರೂಪಾಯಿಗೆ ಒಂದೂವರೆ ಸೇರು ಅಕ್ಕಿ ಕೊಳ್ಳುತ್ತಿರಬಹುದೆ ? ಏಳಿಗೆಯ ಹಾದಿಯಲ್ಲಿ ಎಷ್ಟು ದೂರ ಬಂದಿದ್ದಾರೆ ಅವರು ?

ಈಗ ಸಾಯಂಕಾಲವಾಗಿದೆ. ಬನು ಕುಳಿತುಕೊಂಡೆ ಬೀಡಿ ಸೇದುತ್ತಿರಬಹುದು.... ಪರಿಸ್ಥಿತಿಯ ಬಗ್ಗೆ ಹುಚ್ಚನಂತೆ ನಿರ್ಲಕ್ಷ್ಯದಿಂದಿರುವ ಬನು. ಯಾವುದಾದರೂ ಪುಸ್ತಕ ಓದುತ್ತಿರಬಹುದು ಬನು. ಈ ಕತ್ತಲೆಯಲ್ಲಿ ಬನುವಿನ ಸಣ್ಣ ಕೋಣೆಯಲ್ಲಿ ದೀಪ ಉರಿಯುತ್ತಿರಬಹುದು.

ದೀಪ ಉರಿಯುತ್ತಿರಬಹುದು.

ಅವನ ಬಳಿ ಏನೂ ಇಲ್ಲ. ಆದರೂ ಅವನು ಸುಖದ ಬಗ್ಗೆ ತಪ್ಪು ಕಲ್ಪನೆಯನ್ನು ಇಟ್ಟುಕೊಂಡಿದ್ದಾನೆ. ಮರದ ಕೆಳಗೆ ಧೂಪ ಹಾಕಿಕೊಂಡು, ಮೈಮೇಲೆಲ್ಲ ಬೂದಿಬಳಿದುಕೊಂಡು ಸಾಧುಸಹ ಸುಖದ ಬಗ್ಗೆ ತಪ್ಪು ಕಲ್ಪನೆಗೆ ನೀರೆರೆದಿರುತ್ತಾನೆ. ಭಿಕಾರಿಗಳು ಮತ್ತು ತಿಳಿಗೇಡಿಗಳು ಸಹ ಹೀಗೆಯೆ ಅಂದುಕೊಂಡಿರುತ್ತಾರೆ.

"ಲೋ ಹರ್ಷ, ಇನ್ನೂ ಸ್ವಲ್ಪ ಜೋರಾಗಿ ಒತ್ರೊ."

ಕೊರತೆಗಳಿದ್ದರೆ ಯಾರಿಗಾದರೂ ಸುಖ ದೊರೆಯುತ್ತದೆಯೆ ? ಮತ್ತೆ ಮತ್ತೆ ಗಿಲೀಟಿನ ಪಾಲಿಶ್ ಹಾಕಿಸಿಕೊಳ್ಳುವುದು, ಪಾಲಿಶ್ ಹೋದರೆ ಮತ್ತೆ ಪಾಲಿಶ್. ಬಟ್ಟೆ ಹರಿದು ಹೋದರೆ ಅದರ ಮೇಲೆ ಇನ್ನೊಂದು ಮಡಿಕೆ. ಮಳೆ ಸುರಿಯುವಂತೆ ಬಲಿದತ್ತ ದಾಸನ ತಲೆಯಲ್ಲಿ ಬದುಕಿನ ಬಗೆಗಿನ ಅನೇಕ ಕತೆಗಳು ಸುರುಳಿ ಬಿಚ್ಚಿಕೊಳ್ಳುತ್ತಿವೆ. ಅವುಗಳಲ್ಲಿ ಯಾವುದನ್ನೂ ಬಣ್ಣಹಚ್ಚಿ ಸಿಂಗರಿಸಿಲ್ಲ, ಮೊಟಕು ಗೊಳಿಸಿಲ್ಲ. ಎಲ್ಲ ಜಡಿಮಳೆಯಂತೆ ಭೋರ್ಗರೆಯುತ್ತಿವೆ. ತನ್ನ ತಿಳುವಳಿಕೆಯಿಂದ ಪರೀಕ್ಷಿಸಿ ಅವುಗಳನ್ನು ಅಳೆಯುವ ಅಳತೆಗೋಲು ಸಿಕ್ಕಿದಂತಾಗಿದೆ. ಅವನು ಅಳೆಯುತ್ತಾ ಹೊರಟಿದ್ದಾನೆ. ಬನು ದಡ್ಡ, ಬರಿ ಹೊಟ್ಟೆಯಲ್ಲಿ ನಗುತ್ತಾ ಸಮಾಧಾನ ಪಟ್ಟುಕೊಳ್ಳುತ್ತಾನೆ. ಆದರೆ ಅನೇಕ ಮಂದಿ ಉಳ್ಳವರು, ಹೆಚ್ಚಿಗೆ ಸಂಪಾದಿಸಿರುವವರು ಇಲ್ಲವೆ ಕೂಡಿಟ್ಟಿರುವವರು ತಮ್ಮಲ್ಲಿ ಏನೂ ಇಲ್ಲವೆಂದೆ ತಿಳುದುಕೊಂಡಿರುತ್ತಾರೆ. ರಾಯ್ ಸಾಹೇಬರು, ಚಿಕ್ಕ ಸಾಹೇಬರು, ಇವರಿಗೆ ರಾತ್ರಿ ಹೊತ್ತು ನಿದ್ದೆ ಬರೋದಿಲ್ಲ, ಇನ್‌ಸಾಮ್ನಿಯ. ರಾತ್ರಿಯೆಲ್ಲ ವರಾಂಡದಲ್ಲಿ ಆರಾಮ ಕುರ್ಚಿಯ ಮೇಲೆ ಕುಳಿತು ಚಡಪಡಿಸುತ್ತಿರುತ್ತಾರೆ. ತುಂಬಿದ ಮುಖ ಬಾಡಿ ಹೋಗಿರುತ್ತದೆ. ಅವತ್ತು ಸಂಜೆ

ಬಲಿದತ್ತನ ಕೈಹಿಡಿದುಕೊಂಡು ಹೋಗುತ್ತಿರಬೇಕಾದರೆ ಅವರು ತಮ್ಮ ಗೋಳು ಹೇಳಿಕೊಂಡಿದ್ದರು. ಅವರಿಗೇನು ಕಡಮೆ ದುಃಖವೆ! ತಿಂಗಳಿಗೆ ಸಾವಿರದ ಮೂನ್ನೂರು ರೂಪಾಯಿ ಸಂಬಳ ಎಣಿಸುತ್ತಾರೆ, ಇನ್‌ಕಂಟ್ಯಾಕ್ಸ್ ತೆರುತ್ತಾರೆ. ಸಾಕಷ್ಟು ಹಣ ವಿಮೆ ಕಂತುಗಳಿಗೆಂದು ಹೋಗುತ್ತದೆ. ದೊಡ್ಡ ಕಾರನ್ನು ನೋಡಿಕೊಳ್ಳುವುದರಲ್ಲೆ ಇನ್ನೂರು ಕೈಬಿಡುತ್ತದೆ. ಒಂದು ಬಂಗಲೆ ಕಟ್ಟಿಸುತ್ತಿದ್ದಾರೆ. ಅದಕ್ಕೂ ಸಾಕಷ್ಟು ದುಡ್ಡು ಖರ್ಚಾಗುತ್ತಿದೆ. ಇಷ್ಟರ ಮೇಲೆ ಮನೆ ಖರ್ಚಿಗೆ ಎಲ್ಲಿಂದ ತರೋದು. ನಿಟ್ಟುಸಿರು ಬಿಟ್ಟು ಕಷ್ಟ ತೋಡಿಕೊಳ್ಳುತ್ತಿರುತ್ತಾರೆ..... ಯಾರ ಎದುರಿಗೆಂದರೆ ಅವರ ಎದುರಿಗೆ. ಅದೇ ಬಡತನದ ಪಂಚಾಕ್ಷರಿ ಮಂತ್ರ 'ಏನಪ್ಪಾ ಗತಿ'. ಇಷ್ಟರ ಮೇಲೆ ನೌಕರಿಯಲ್ಲೂ ತಲೆ ತಗ್ಗಿಸುವಂತಾಗಿದೆ. ಅವರ ಜೊತೆಯಲ್ಲೇ ಕೆಲಸ ಶುರುಮಾಡಿದ ಮೀರ್ ಮದನ್ ಖಾನ್ ಆಗಲೆ ಖಾನ್ ಬಹಾದುರ್ ಆಗಿಬಿಟ್ಟಿದ್ದಾನೆ. ದೊಡ್ಡ ಸಾಹೇಬರ ಕಚೇರಿಯಲ್ಲಿ ಆಫಿಷಿಯೇಟ್ ಮಾಡುತ್ತಿದ್ದಾನೆ. ಆದರೆ ಅವರು ಎಲ್ಲಿದ್ದಾರೋ ಅಲ್ಲಿಯೆ ಇದ್ದಾರೆ. ಇದರಿಂದಾಗಿ ರಾತ್ರಿ ಹೊತ್ತು ನಿದ್ದೆ ತಾನೆ ಹೇಗೆ ಬರುತ್ತೆ? ಮೃಗಗಳಾದರೆ ಗೊರಕೆ ಹೊಡೆಯುತ್ತಾ ನಿದ್ದೆ ಮಾಡಬಹುದು, ಮನುಷ್ಯ ಇವೆಲ್ಲವನ್ನು ಹೇಗೆ ತಾನೆ ಮರೆತಾನು?

ಚಿಕ್ಕ ಸಾಹೇಬರು ತಾವು ತುಂಬ ದುಃಖದಿಂದ ಕೂಡಿರುವವರೆಂದು ಭಾವಿಸಿಕೊಂಡಿದ್ದಾರೆ.

ಅವರ ಬಾಯಿಂದಲೆ ದುಃಖದ ವರ್ಣನೆಯನ್ನು ಕೇಳಿ ಬಲಿದತ್ತ ಅವರು ರಸ್ತೆಯಲ್ಲೇ ಕುಳಿತು ಅಳಲು ಶುರುಮಾಡಿದ್ದಾರೆ ಅಂದುಕೊಂಡ.

ಅಯ್ಯೋ, ಅವರಿಗೆ ಅಷ್ಟೊಂದು ದುಃಖವೇ. ಆದರೆ ಅವನು ನಗಲಿಲ್ಲ. ಅವಿಚಲಿತನಾಗಿ ಸಂಟೂದಾ ಅವರ ಭಾಷಣ ಕೇಳಬಲ್ಲ. ಸುಖವಾಗಿರುವುದೂ ಮೂರ್ಖತನವೆ.

ಅವನಿಗೆ ಏನೂ ಸಿಕ್ಕಿಲ್ಲ, ಈಗ ಸಿಗುತ್ತಿದೆ. ಅವನು ಬಡ್ತಿ ಪಡೆಯುತ್ತಾನೆ.

ಒಂದು ವೇಳೆ ಅದೃಷ್ಟ ಖುಲಾಯಿಸಿದರೆ.

ಹೊಸ ಸಾಹೇಬರನ್ನು ಖುಷಿಪಡಿಸಿದಾಗ ತಾನೇ ಆ ಮಾತು.

ಮೆಲ್ಲಗೆ ಹರ್ಷ ಅಲ್ಲಿಂದ ಜಾಗ ಖಾಲಿ ಮಾಡಿದ. ಯಜಮಾನರಿಗೆ ನಿದ್ದೆ ಬಂದಿದೆ. 'ಊಟ ತರ್ಲಾ' ಅಂತ ಕೇಳುವುದಕ್ಕೆ ಸರೋಜಿನಿ ಬಂದಳು. ನೋಡಿದಳು, ಬಲಿದತ್ತ ಮಲಗಿದ್ದಾನೆ. ಲಯಬದ್ಧವಾಗಿ ಎದೆ ಮೇಲೇರಿ ಇಳಿಯುತ್ತಿದೆ. ಗೊರ್‌ಗೊರ್ ಅಂತ ಗೊರಕೆ ಹೊಡೆಯುತ್ತಿದ್ದಾನೆ.

ಅವನ ತೋಳು ಹಿಡಿದು ಅಲ್ಲಾಡಿಸಿ ಎಬ್ಬಿಸಿ ಹೇಳಿದಳು- "ಏಳಿ..... ಊಟ ಮಾಡೋದಿಲ್ಲವೆ?"

ಹರೆಯದ ಮಿಸ್ಟರ್ ಶರ್ಮಾ ಅವರು ಎಲ್ಲರ ಗೌರವಾದರಗಳಿಗೆ ಪಾತ್ರರಾಗಿದ್ದರು. ಏಕೆಂದರೆ ಅವರು ಮನುಷ್ಯರು. ಬರೀ ಮನುಷ್ಯರಷ್ಟೆ ಅಲ್ಲ, ತಾರುಣ್ಯದಿಂದ ತುಂಬಿ ತುಳುಕುತ್ತಿರುವ ಮನುಷ್ಯರು.

ಮನಸ್ಸಿನ ತಾರುಣ್ಯ ಮತ್ತು ದೇಹದ ತಾರುಣ್ಯ ಇವೆರಡರಲ್ಲೂ ಸಮತೋಲನ, ಸರಿಯಾದ ಸಂಬಂಧ ಇಟ್ಟುಕೊಂಡಿರುವವರಿಗೆ ಬದುಕು ಸಂಪತ್ತೆನಿಸುತ್ತದೆ. ಕಣ್ಣಿನ

ಮುಂದೆ ಪರದೆ ಇರುವುದಿಲ್ಲ. ಮನಸ್ಸನ್ನು ಯಾವುದೇ ರೀತಿಯ ಆವರಣ ಕವಿದಿರುವುದಿಲ್ಲ. ಗಾಯದ ಗುರುತಿರುವುದಿಲ್ಲ, ಇಂದ್ರಿಯಗಳು ತೇಜಸ್ಸಿನಿಂದ ಕೂಡಿರುತ್ತವೆ-ಕೊಡುವುದಕ್ಕೂ ಅಷ್ಟೆ, ತೆಗೆದುಕೊಳ್ಳುವುದಕ್ಕೂ ಅಷ್ಟೆ. ಕಲ್ಲಿನ ರಾಶಿಯಮೇಲೆ ಮೊಳೆತ ರಸಭರಿತವಾದ ಮರ ಅದು. ಅದೇ ಅದಕ್ಕೆ ಇರುವ ಹೆಮ್ಮೆ ಗೌರವ.

ಅವರಿಗೆ ತಮ್ಮ ಬಗ್ಗೆ ಮೊದಲಿನಿಂದಲೂ ಅದೇ ಅಭಿಪ್ರಾಯವಿತ್ತು. ಯಾವುದೇ ರೀತಿಯ ಸಂಕಲ್ಪ, ಪ್ರಯತ್ನ, ದುಡಿಮೆಗಳಿಲ್ಲದೆ ಶ್ರೀಮಂತರ ಮನೆಯಲ್ಲಿ ಮಗನಾಗಿ ಹುಟ್ಟಿದ್ದರು. ಕಷ್ಟಕಾರ್ಪಣ್ಯ ಅಂದರೇನು ಅಂತ ಅವರಿಗೆ ಗೊತ್ತಾಗಲೆ ಇಲ್ಲ, ಗೊತ್ತು ಮಾಡಿಕೊಳ್ಳುವ ಅಗತ್ಯವೂ ಬೀಳಲಿಲ್ಲ. ಅವರು ತಮ್ಮ ಸ್ವಂತ ಕೈಯಲ್ಲೆ ಏನಾದರೂ ಮಾಡುವುದು ಅನ್ನುವುದು ಸಹ ದೂರದ ಮಾತೇ ಆಗಿತ್ತು.

ಆದಾದ ಮೇಲೆ ಬದುಕು ತನ್ನಷ್ಟಕ್ಕೆ ತಾನೇ ಒಂದೊಂದೇ ಮೆಟ್ಟಿಲನ್ನು ಏರತೊಡಗಿತು. ಅವರು ಅದಕ್ಕಾಗಿ ಎಂದೂ ಬಯಸಲಿಲ್ಲ, ಪ್ರಯತ್ನಮಾಡಲಿಲ್ಲ. ಯಾವುದೇ ವಿಧವಾದ ಒಲವು ಪ್ರತಿಭಟನೆಗಳಿಲ್ಲದೆ ಅವರು ವಿಧಿಯ ಲೀಲೆಯನ್ನು ಒಪ್ಪಿ ನಡೆದಿದ್ದಾರೆ. ಅದು ಮಂಗಳಕರವಾಗಿದೆ. ಎಲ್ಲರ ಉದ್ದೇಶವು ಒಂದೇ-ಆನಂದ.

ಹುಟ್ಟಿದಾಗಿನಿಂದಲೇ ಅವರು ಸಾಹೇಬರಾಗಬೇಕಾಯಿತು. ಅವರು ಹುಟ್ಟಿದ ಮನೆಯಲ್ಲಿ ತಂದೆಯನ್ನು ಡ್ಯಾಡಿ ಮತ್ತು ತಾಯಿಯನ್ನು ಮಮ್ಮಿ ಅಂತ ಕರೆಯುತ್ತಾರೆ. ಕೂರುವುದು, ಏಳುವುದು, ತಿನ್ನುವುದು, ಕುಡಿಯುವುದು, ಉಡುಗೆ-ತೊಡುಗೆ ಎಲ್ಲದರಲ್ಲೂ ಆ ಮನೆಯದು ಬೇರೆಯದೆ ಆದ ಸಂಸ್ಕೃತಿ, ಈ ರೀತಿಯ ಸಂಸ್ಕೃತಿಗೆ ಒಗ್ಗಿದ ಮೇಲೆ ಯಾರೂ ಕೇಳುವಂತಿಲ್ಲ, ಮನೆಯಲ್ಲೂ ಅಷ್ಟೆ, ಸಾಹೇಬರುಗಳ ಮಕ್ಕಳ ಶಾಲೆಯಲ್ಲೂ ಅಷ್ಟೆ. ಹಾಗಾಗಿ ಬಾಲ್ಯಕ್ಕೂ ಮುಂಚೆಯೆ ಈ ರೀತಿಯ ಶಿಕ್ಷಣ ಸಂಸ್ಕೃತಿಯನ್ನು ಒಪ್ಪಿಕೊಳ್ಳಬೇಕು. ಕಣ್ಣು ಕಿವಿ ಮುಚ್ಚಿಕೊಂಡು ಹೂಂ ಅನ್ನಬೇಕು; ಅದರ ಹೆಸರೇ ಡಿಸಿಪ್ಲಿನ್, ಇಷ್ಟು ಆದ ನಂತರ ಏನು ಬೇಕಾದರೂ ಮಾಡಿಕೊ, ಮಾತಿನಲ್ಲಿ ಆಚಾರ ನೀತಿನಿಯಮಗಳು, ಹೆಜ್ಜೆ ಹೆಜ್ಜೆಗೂ ನಡವಳಿಕೆಯಲ್ಲಿ ಮನಸ್ಸಿಗೆ ಬಂದಂತೆ ನಡೆಯುವುದು, ಇದನ್ನೇ ಸಂಸ್ಕೃತದಲ್ಲಿ ವ್ಯಕ್ತಿವಾದ ಅಂತ ಕರೆಯುತ್ತಾರೆ. ಹೊರಗಡೆ ಡಿಸಿಪ್ಲಿನ್ ಎಂಬ ಹೆಸರಿನಡಿಯಲ್ಲಿ ತಮಗೆ ಇಷ್ಟಬಂದಂತೆ ಜೀವನ ನಡೆಸುವುದು, ಇದನ್ನೇ ಸುಧಾರಿಸಿದ ಭಾಷೆಯಲ್ಲಿ 'ವ್ಯಕ್ತಿತ್ವದ ವಿಕಾಸ' ಅಂತ ಕರೆಯುತ್ತಾರೆ.

ಇವೆರಡು ಕೆಲಸಗಳೂ ಅವರ ಪಾಲಿಗೆ ತಮಗೆ ತಾವೇ ಆಗಿವೆ. ಹಣದ ಕೊರತೆ ಅವರ ಬದುಕಿನ ಸುಸಜ್ಜಿತವಾದ ಎಲ್ಲೆಕಟ್ಟಿನೊಳಗೆ ಎಂದೂ ಪ್ರವೇಶಿಸಿಲ್ಲ. ಆದ್ದರಿಂದಲೆ ಅವರು ತಮ್ಮ ಪಾಡಿಗೆ ತಾವು ಬದುಕಿನ ಏಳಿಗೆಯ ಹಾದಿಯಲ್ಲಿ ಮುಂದುವರೆದಿದ್ದಾರೆ.

ಉನ್ನತ ವಿದ್ಯಾಭ್ಯಾಸ, ಅದೂ ಅನಾಯಾಸವಾಗಿಯೇ ದೊರೆತಿದೆ-ಸಂಸ್ಕೃತಿಯ ಒಳಗೇ. ಅವರಿಗೆ ನಿಜವಾಗಿಯೂ ಜ್ಞಾನದ ದಾಹ ಇತ್ತೊ ಇಲ್ಲವೊ ಆ ಬಗ್ಗೆ ಅವರು ಎಂದೂ ತಲೆಕೆಡಿಸಿಕೊಳ್ಳಲು ಹೊರಟವರಲ್ಲ. ಉನ್ನತ ವಿದ್ಯಾಭ್ಯಾಸ ಅವರ ಸಮಾಜದ ಫ್ಯಾಷನ್, ಅದಕ್ಕೆ ತಕ್ಕಂತೆಯೆ ಅವರು ನಡೆಯಬೇಕಾಗಿದೆ. ಹಾಗಾಗಿ ಆ

ಓದಿಗೆ ಯಾವ ಅರ್ಥವೂ ಇಲ್ಲ. ಸಮಾಜದ ಗೊತ್ತುಪಾಡು ಹಾಗಿರದಿದ್ದರೆ ಅವರು ಓದುವ ಅವಶ್ಯಕತೆ ಇರುತ್ತಿತ್ತೊ ಇಲ್ಲವೊ. ಆ ಉನ್ನತ ವಿದ್ಯಾಭಾಸದ ಸ್ವರೂಪ ರಚನೆಗಳು ಸಹ ಉಡುವ ಬಟ್ಟೆಗಳಿದ್ದಂತೆ, ತಂದೆತಾಯಿಗಳು ಸಹ ಸಮಾಜ ಹೇಗೆ ಬಯಸುವುದೊ, ಹಾಗೆಯೆ ಬಯಸುತ್ತಾರೆ.

ಉದ್ಯೋಗ, ಅದೂ ಕಷ್ಟವಿಲ್ಲದೆ ದೊರೆತಿದೆ. ಇನ್ನೂ ಅವರು ಉದ್ಯೋಗದ ವಿಷಯ ಯೋಚಿಸಿಯೆ ಇರಲಿಲ್ಲ, ಅಷ್ಟರಲ್ಲಿ ಅದೇ ಸಿಕ್ಕಿತು. ತಂದೆಯವರ ಇಷ್ಟ; ಕಂಪನಿಯ ಮೇಲ್ಮಟ್ಟದ ವ್ಯವಹಾರಗಳಲ್ಲಿ ಅವರ ಪ್ರಭಾವ ಬಹಳವಾಗಿದೆ. ಉದ್ಯೋಗಕ್ಕೆ ಸೇರು ಅಂತ ತಂದೆ ಹೇಳಿದರು. ಏಕೆಂದರೆ ಸಮಾಜದಲ್ಲಿ ಅದನ್ನು ನೋಡಬೇಕಾಗುತ್ತದಲ್ಲ, ಮನುಷ್ಯ ಏನು ಅಂತ. ಹಾಗಾಗಿ ಅವರು ಉದ್ಯೋಗಕ್ಕೆ ಸೇರಿದರು - ಪ್ರಾರಂಭದಲ್ಲಿ ತಂದೆಯವರಿಂದ ಒಂದು ಶಿಫಾರಸಿನ ಮಾತು - ಅಷ್ಟೆ.

ಕಂಪನಿಯ ನಿಯಮಗಳಿಗನುಗುಣವಾಗಿ, ಶಿಸ್ತಿನ ಸೂತ್ರಗಳನ್ನು ಸಾರ್ಥಕಗೊಳಿಸುವುದಕ್ಕಾಗಿ, ಸಂದರ್ಶನಕ್ಕೆ ನೀಟಾಗಿ ಡ್ರೆಸ್ ಮಾಡಿಕೊಂಡು ಹೋಗಬೇಕಾಗಿತ್ತು. ಅಲ್ಲಿ ಐದು ಮಂದಿ ವಿದ್ವಾಂಸರು ಕುಳಿತಿದ್ದರು. ಅವರು ಇವರನ್ನು ಕಾಲಿನಿಂದ ತಲೆಯವರೆಗೆ ನೋಡಿದರು. ಕೆಲವು ಪ್ರಶ್ನೆಗಳನ್ನು ಹಾಕಿದರು, ಹಾಳೆಯ ಮೇಲೆ ನಂಬರು ಗುರುತು ಹಾಕಿಕೊಂಡರು. ಬಹುಶಃ ಆ ಪ್ರಶ್ನೆಗಳು ಕಷ್ಟವಾಗಿದ್ದಿರಲಾರದು, ಪ್ರೈಮರಿ ಶಾಲೆಯಲ್ಲಿ ಓದುವವರೂ ಬಿಡಿಸಲು ಸಾಧ್ಯವಿದ್ದಿರಬಹುದು - ಉದಾಹರಣೆಗೆ ಭೂಗೋಳದಲ್ಲಿ - 'ಆರು ಋತುಗಳು ಹೇಗೆ ಉಂಟಾಗುತ್ತದೆ ?', ಚರಿತ್ರೆಯಲ್ಲಿ- 'ಪೃಥ್ವೀರಾಜ ಏಕೆ ಸೋತುಹೋದ ?', ವಿಜ್ಞಾನದಲ್ಲಿ- 'ವಿದ್ಯುತ್ ಬಲ್ಬು ಹೇಗೆ ಉರಿಯುತ್ತದೆ ?', 'ನಲ್ಲಿಯಲ್ಲಿ ನೀರು ಹೇಗೆ ಬರುತ್ತದೆ ?', ಆರೋಗ್ಯಕ್ಕೆ ಸಂಬಂಧಪಟ್ಟಂತೆ - 'ನೊಣದಿಂದ ಎಂಥ ರೋಗಗಳು ಉಂಟಾಗುತ್ತವೆ ?', ಸಾಹಿತ್ಯದ ವಿಚಾರವಾಗಿ - 'ಇಕ್ಬಾಲ್ ಎಂಥ ಕವಿ ?'- ಪತ್ರಿಕೆಗಳಿಗೆ ಸಂಬಂಧಪಟ್ಟಂತೆ - 'ಸೆಣಬಿನ ಬೆಲೆ ಏರಿಕೆ ಹೇಗಾಗುತ್ತದೆ ?' ಇತ್ಯಾದಿ.

ಪ್ರಶ್ನೆಗಳು ಸುಲಭವಾಗಿದ್ದವು, ಆದರೆ ತಂದೆಯವರನ್ನು ಕೇಳಿದಾಗ ಅವರು ಗಂಭೀರವಾಗಿ ತಲೆ ಅಲ್ಲಾಡಿಸಿ ಹೇಳಿದರು - "ಅವರು ಬುದ್ಧಿಯ ಪರೀಕ್ಷೆ ಮಾಡಿದ್ದಾರೆ, ಸೈಕೊಲಾಜಿಕಲ್ ಟೆಸ್ಟ್ ಅದನ್ನು ಅಷ್ಟು ಲಘುವಾಗಿ ಕಾಣಬೇಡ." ಅದರಿಂದ ಸಾಕಷ್ಟು ಆತ್ಮವಿಶ್ವಾಸವೇನೊ ಮೂಡಿತು. ಆದರೂ ಮನಸ್ಸಿನ ಮೂಲೆಯಲ್ಲಿ ಸ್ವಲ್ಪ ಸಂದೇಹವೇನೋ ಉಳಿದಿತ್ತು. ಇದೊಂದು ತಮಾಷೆ, ಫಾರ್ಸ್ ಅಂತ.

ಕಂಪನಿಯ ಈ ಸಂದರ್ಶಕ್ಕೆ ಒಬ್ಬರಾದ ಮೇಲೆ ಒಬ್ಬರಂತೆ ಅನೇಕ ಮಂದಿ ಅಭ್ಯರ್ಥಿಗಳು ಬಂದರು. ವಿಶ್ವವಿದ್ಯಾನಿಲಯದ ದಿಗ್ಗಜ ಪಂಡಿತರು, ಫಸ್ಟ್-ಫರ್ಸ್ಟ್ ಕ್ಲಾಸ್‌ಫಸ್ಟ್-ಮೊದಲಿನಿಂದ ಕಡೆಯವರೆಗೂ ಫಸ್ಟ್. ಅವರೆಲ್ಲ ಬಿದ್ದುಹೋದರು. ಅವರ ಸೋಲಿನ ಕಾರಣಗಳನ್ನು ಕುರಿತು ಶರ್ಮಾ ಅವರು ವಿಮರ್ಶಿಸಿ ನೋಡಿದರು, -ಸೈಕಲಾಜಿಕಲ್ ಟೆಸ್ಟ್, ಪುಸ್ತಕ ಉರು ಹೊಡೆಯುವುದರಿಂದ ಕೆಲಸ ನಡೆಯುದಿಲ್ಲ. ಇಂಟರ್‌ವ್ಯೂ ಬೋರ್ಡಿನವರು ಕಣ್ಣುಗಳನ್ನು ನೋಡಿಯೆ ಪ್ರಶ್ನೆಗಳ ಉತ್ತರವನ್ನು ಕಂಡುಕೊಳ್ಳುತ್ತಾರೆ. ಅದರಿಂದಲೇ ಅಭ್ಯರ್ಥಿಗಳ ಮನಸ್ಸು, ಇಡೀ ಮನಸ್ಸಿನ

ಸ್ವರೂಪ ಹೇಗೆಂದು ಗೊತ್ತಾಗುತ್ತದೆ.

ಪಾಂಡೆಯ ಸೋಲಿನಿಂದ ಈ ನಂಬಿಕೆಗೆ ಪುಷ್ಟಿ ದೊರೆತಿತ್ತು. ಪಾಂಡೆ ಮೊದಲಿನಿಂದ ಕಡೆಯವರೆಗೂ ಶರ್ಮಾರವರ ಜೊತೆಯಲ್ಲೇ ಓದಿದವನು. ಓದಿನಲ್ಲಿ ಬಹಳ ಚುರುಕು, ಅಧ್ಯಾಪಕರಿಗೆಲ್ಲ ತುಂಬ ಅಚ್ಚುಮೆಚ್ಚು ಪರಿಣಾಮ ಬೀರುವಂತೆ ಮಾತಾಡುತ್ತಿದ್ದ, ಬರವಣಿಗೆಯೂ ಚೆನ್ನಾಗಿತ್ತು. ಆದರೆ ಬಡವ, ಪರಿಸ್ಥಿತಿಯ ವಿಕೋಪಕ್ಕೆ ಸಿಕ್ಕಿದ್ದ. ಪಾಂಡೆ ಶರ್ಮಾರಿಗಿಂತ ತೀರ ವಿರುದ್ಧ. ಅವನ ಉಪಾಯಗಳೂ ತಲೆಕೆಳಗಾಗಿದ್ದವು. ಅವನು ಹೇಳುತ್ತಿದ್ದ - "ಸೆಣಸಾಡುವುದರಿಂದಲೇ ಮನುಷ್ಯನ ಪರೀಕ್ಷೆಯಾಗುತ್ತದೆ. ಎದುರು ಬೀಳುವುದರಿಂದಲೇ ಬುದ್ಧಿ ಬೆಳೆಯುತ್ತದೆ. ತೆಪ್ಪಗಿರುವುದರಿಂದ ಎಲ್ಲ ಹಾಳಾಗಿ ಹೋಗುತ್ತದೆ." ಆಗ ಶರ್ಮಾ ನಗುತ್ತಾ ಹೇಳುತ್ತಿದ್ದರು- "ಕಲ್ಲು ನೆಲದಲ್ಲಿ ಬೆಳೆಯುವ ಗಿಡ ಯಾವಾಗಲೂ ಕೊರತೆಗಳಿಗೆ ಅಂಟಿಕೊಂಡು ಸೊರಗುತ್ತಲೆ ಬೆಳೆಯುತ್ತೆ. ಅದರ ಕುಗ್ಗಿದ, ಸೊಟ್ಟಂಬಟ್ಟವಾದ ಆಕೃತಿಯನ್ನು ನೋಡಿದರೆ ಯಾರ ಮನಸ್ಸಿಗೂ ಖುಷಿಯಾಗೋದಿಲ್ಲ. ಯಾರು ಅದಕ್ಕೆ ಗೌರವ ಕೊಡಲ್ಲ. ಅದು ಬಿಗುವಾಗಿದ್ದರೆ ಯಾರು ತಾನೆ ಕೇಳುತ್ತಾರೆ. ಪ್ರಕೃತಿಯ ನಿಯಮಗಳಿಗೆ ಅನುಗುಣವಾಗಿ ಪ್ರತಿಯೊಂದು ಜೀವಿಯೂ ಪ್ರತಿಯೊಂದು ಪರಿಸ್ಥಿತಿಗೂ ಒಗ್ಗಿಕೊಳ್ಳುತ್ತಾ ಹೋಗುತ್ತದೆ. ಅದಕ್ಕೆ ಪಾಂಡೆ ಹೇಳುತ್ತಿದ್ದ-"ಬದುಕನ್ನು ಉಗ್ರವಾಗಿ ನೋಡಬೇಕು. ತೀಕ್ಷ್ಣವಾದ ಅರಿವಿನ ಬಲದಿಂದ ಅದನ್ನು ಅನುಭವಿಸಬೇಕು. ಎಲ್ಲ ವಿಚಾರಗಳನ್ನೂ ಆಳವಾಗಿ ವಿಶ್ಲೇಷಿಸಿ ನೋಡಬೇಕು." ಶರ್ಮಾ ನಗುತ್ತಾ ಹೇಳುತ್ತಿದ್ದರು- "ಇದೆಲ್ಲ ರೋಗದ ಮನಸ್ಸಿನ ಲಕ್ಷಣಗಳು. ರೋಗದಿಂದ ಉಲ್ಬಣಗೊಂಡ ಮನಸ್ಸು ಮನುಷ್ಯನನ್ನು ಒಮ್ಮುಖಿಯನ್ನಾಗಿ, ಹುಚ್ಚನನ್ನಾಗಿ, ಅಸಹನೆಯುಳ್ಳವನನ್ನಾಗಿ ಮಾಡುತ್ತದೆ. ಆರೋಗ್ಯವಂತನಿಗೆ ಲಾಯಕ್ಕಾಗಿರುವುದೇನೆಂದರೆ ಅವನು ಕೆನೆ ತಿನ್ನಬೇಕು, ನೀರಿನಲ್ಲಿ ಮೇಲು ಮಟ್ಟದಲ್ಲೇ ಈಜಾಡಬೇಕು, ಸಹಜವಾಗಿ ಸರಳವಾಗಿ ಬದುಕು ಸಾಗಿಸಬೇಕು, ಯಾವ ವಿಚಾರಕ್ಕೂ ಹೆಚ್ಚು ಮಹತ್ವ ಕೊಡಬಾರದು......

ಆ ಇಂಟರ್‌ವ್ಯೂನಲ್ಲಿ ಪಾಂಡೆ ಪಲ್ಟಿ ಹೊಡೆದ - ಶರ್ಮಾ ತಮ್ಮಷ್ಟಕ್ಕೆ ತಾವೇ ಸೈಕಲಾಜಿಕಲ್ ಟೆಸ್ಟಿನ ಯಥಾರ್ಥತೆಯ ಬಗ್ಗೆ ಹೇಳಿಕೊಂಡು ಸಮಾಧಾನ ಪಟ್ಟುಕೊಂಡರು. ಪಾಂಡೆಯಲ್ಲಿದ್ದ ಅನೇಕ ಕಾಂಪ್ಲೆಕ್ಸ್‌ಗಳು ಅವರ ಕಣ್ಣ ಮುಂದೆ ಬಂದು ನಿಂತವು. ಅವನು ಹೋಗಲಿ - ರಾಜಕೀಯ, ಚಳವಳಿ ಮಾಡಲಿ, ಬಂಡಾಯ ಎಬ್ಬಿಸಲಿ - ಅವನದು ಆರಾಮ ಜೀವನಲ್ಲ.

ಆದರೂ ಮನಸ್ಸಿನ ಆಳದಲ್ಲಿ ಒಂದು ಸಣ್ಣವಿಚಾರ ನುಸುಳುತ್ತಿತ್ತು - ಒಂದು ವೇಳೆ ತನಗಿರುವ ಹಾಗೆಯೆ ಪಾಂಡೆಗೂ ಒಬ್ಬ ಅಪ್ಪ ಇದ್ದಿದ್ದರೆ.-

ಆದರೆ ಆತ್ಮವಿಶ್ವಾಸದ ಅಡಿಯಲ್ಲಿ ಆ ವಿಚಾರವೂ ಮುಚ್ಚಿಹೋಯಿತು. ಪ್ರಪಂಚದಲ್ಲಿ ಆಳುವುದು ಎಲ್ಲರ ಹಣೆಯಲ್ಲೂ ಬರೆದಿದ್ದಲ್ಲ ಅನ್ನುವ ನಂಬಿಕೆ ಮನಸ್ಸಿನಲ್ಲಿ ಆಳವಾಗಿ ಬೇರೂರಿತು. ಅದಕ್ಕಾಗಿಯೆ ಕೆಲವು ಮಂದಿ ಆಯ್ಕೆ ಮಾಡಿದ ಜನರಿದ್ದಾರೆ. ಕೆಲವರು ಮಾತ್ರ ಪಲ್ಲಕ್ಕಿಯ ಮೇಲೆ ಕುಳಿತುಕೊಳ್ಳಬಲ್ಲರು. ಯಾರಿಗೆ

ಆ ಯೋಗ್ಯತೆಯಿಲ್ಲವೊ ಅವರು ಪಲ್ಲಕ್ಕಿಗೆ ಹೆಗಲು ಕೊಟ್ಟು ಹೊರಬೇಕು.

ವಿಧಿಯ ನಿಯಮವೇ ಹೀಗೆ. ಬಂಡಾಯ ಎಬ್ಬಿಸುವವನು ಬರೀ ಮೂರ್ಖನೇ ಅಲ್ಲ. ಲಂಗುಲಗಾಮುಗಳಿಲ್ಲದವನು, ವಿದ್ರೋಹಿ, ಆಂಟಿ-ಸೋಷಿಯಲ್, ಸಮಾಜಕ್ಕೆ ಅವನೊಂದು ವಿಪತ್ತು.

ಶರ್ಮಾರವರ ವಿಚಾರಧಾರೆ ಬಹಳ ಸರಳವಾದುದು. ಅದೂ ಅವರ ಒಂದು ವೈಶಿಷ್ಟ್ಯ. ತಿಳುವಳಿಕೆಯಿಂದಲೆ ವಿಚಾರಧಾರೆ ಹುಟ್ಟುತ್ತದೆ ಅಂತ ಜಬರದಸ್ತಿನಿಂದ ಹೇಳುವವರು ಸಮಾಜಕ್ಕೆ ಕಿರೀಟ ಪ್ರಾಯವಿದ್ದಂತೆ. ಅಭಿಪ್ರಾಯ ಮೂಡುತ್ತದೆ, ಒಂದು ಬಾರಿ ಮೂಡಿತೆಂದರೆ ಸಾಕು, ಹಾಗೆಯೆ ಉಳಿದುಬಿಡುತ್ತದೆ. ಈ ಅಭಿಪ್ರಾಯಕ್ಕೆ ಕಳಂಕವಾಗದಂತೆ ನೋಡಿಕೊಳ್ಳುವುದೇ ಸಮಾಜದ ಭದ್ರವಾದ ಅಡಿಪಾಯ, ನೆಲೆಗಟ್ಟು.... ಎಲ್ಲವೂ. ಈ ಅಭಿಪ್ರಾಯಗಳನ್ನು ಬದಲಾಯಿಸುವ ಪ್ರಯತ್ನ ನಡೆಯಿತೆಂದರೆ ಸಾಕು, ಹೊಯಾಂಗ್ಹೊ ನದಿಯ ಪಾತ್ರ ಬದಲಾಯಿಸಿದಂತೆ ವಿರುದ್ಧವಾದ ಫಲವೇ ಸಿಕ್ಕುವುದು- 'ಧ್ವಂಸ'.

ಕಾಲೇಜಿನಲ್ಲಿ ಶರ್ಮಾ ಪಾಂಡೆಗೆ ಹೇಳುತ್ತಿದ್ದರು- "ನಿನಗೆ ಸ್ವಂತಿಕೆ ಹೆಚ್ಚು ಇಷ್ಟವೆ ? ನಮ್ಮ ಸಮಾಜದ ರಚನೆಯಲ್ಲಿ ಸ್ವಂತಿಕೆಗೆ ಏನು ಕೊರತೆಯಿದೆ ? ಸುಮ್ಮನೆ ಅತಿವಾದಿಯಾಗದೆ, ಈ ಹುಚ್ಚುತನ ಬಿಟ್ಟು ನೀನು ಆರೋಗ್ಯಕರವಾದ ದೃಷ್ಟಿ ಹರಿಸಿದರೆ ನಿನಗೇ ಗೊತ್ತಾಗತ್ತೆ, ಜನಗಳ ಕೈಯಲ್ಲಿ ಬೇಡಿಗಳಿಲ್ಲ, ಅವರನ್ನು ಯಾರೂ ಬಂಧಿಸಿಟ್ಟಿಲ್ಲ, ಬಾಯಿಗೆ ಬೀಗ ಜಡಿದಿಲ್ಲ, ಯೋಚನೆ ಮಾಡಲು ಯಾವ ಅಡ್ಡಿ ಆತಂಕಗಳನ್ನೂ ಒಡ್ಡಿಲ್ಲ, ಇಂಜೆಕ್ಷನ್ ಕೊಟ್ಟು ಯೋಚಿಸುವ ಅರ್ಥ ಮಾಡಿಕೊಳ್ಳುವ ಶಕ್ತಿಯ ಮೇಲೆ ದಬಾವಣೆ ಮಾಡಿಲ್ಲ. ಕಷ್ಟಸುಖ ಅನುಭವಿಸುತ್ತಾ ಮನೆಮಠ ಅಂತ ಕಟ್ಟಿಕೊಂಡು ಖುಷಿಯಾಗಿ ಜೀವನ ಮಾಡೋದಕ್ಕೆ ಎಲ್ಲರಿಗೂ ಅವಕಾಶವಿದೆ. ನೀನು ಹೊಟ್ಟೆ ತುಂಬ ತಿನ್ನಬಹುದು, ಯಾರೂ ಕಿತ್ತು ಕೊಳ್ಳೋದಿಲ್ಲ. ನಿನಗೆ ಇಷ್ಟಬಂದಂತೆ ಲವ್-ರೋಮಾನ್ಸ್ ಮಾಡಬಹುದು, ಯಾರೂ ಅಡ್ಡಿ ಬರೋದಿಲ್ಲ. ಹೊಡೆಯುವುದಕ್ಕೆ ಬರೋದಿಲ್ಲ. ನೀನು ಹಿಂದೇಟು ಹಾಕದೆ ಸಂಪಾದಿಸಬಹುದು, ಕೂಡಿ ಹಾಕಬಹುದು.'

ಯಾವ ವ್ಯಾಪಾರದ ಮೇಲಾದರೂ ಬಂಡವಾಳ ಹೂಡಬಹುದು. ಕಾನೂನಿನ ಕಟ್ಟಳೆಗಳನ್ನು ಒಪ್ಪಿಕೊಂಡು ದೇಶಕ್ಕೆ ಹೆಚ್ಚು ಒತ್ತಾಸೆಯಾಗಿ ನಿಲ್ಲಬಹುದು. ಎದುರಾಳಿಗಳು ಆಶ್ಚರ್ಯಪಡುವಷ್ಟರ ಮಟ್ಟಿಗೆ ನೀನು ಸಹ ಶಕ್ತಿಶಾಲಿಯಾಗಬಹುದು. ರಾಷ್ಟ್ರ ನಿನಗೆ ಸ್ವಾತಂತ್ರ್ಯ ನೀಡಿದೆ. ಹೆಚ್ಚಿಗೆ ಅಧಿಕಾರ ಬೇಕಿದ್ದರೆ ಮೈಬಗ್ಗಿಸಿ ಕೆಲಸಮಾಡು. ಜವಾಬ್ದಾರಿಗಳಿಂದ ದೂರಸರಿದು ಎಲೆಹಾಕಿ ಬಡಿಸೊ ಹೊತ್ತಿಗೆ ನನ್ನದು ನಿನ್ನದು ಅಂತ ಬಂದರೆ ಕೆಲಸ ನಡೆಯೋದಿಲ್ಲ. ನೀನು ಪ್ರಕೃತಿಗೆ ತಕ್ಕಂತೆ ನಡೆದುಕೊ, ಎಲ್ಲ ಸರಿಹೋಗುತ್ತೆ. 'ಗಾಡ್ ಇಸ್ ಇನ್ ಹಿಸ್ ಹೆವನ್, ಆಲ್‌ರೈಟ್ ವಿತ್ ದಿ ವರ್ಲ್ಡ್'. ಬರೀ ಇವತ್ತೇ ಅಲ್ಲ. 'ಆಲ್ ವಾಸ್ ರೈಟ್ ವಿತ್ ದಿ ವರ್ಲ್ಡ್'. ಮನುಷ್ಯನ ದುಃಖಕ್ಕೆ ಅವನೇ ಹೊಣೆ. ಮೈಕ್ರಾಸ್ಕೋಪಿನಲ್ಲಿ ನೋಡಿದರೆ ಹಾಕಿಕೊಂಡಿರೋ ಬಟ್ಟೆಯ ಭರ್ತಿ ತೂತುಗಳೇ ಕಾಣಿಸುತ್ತವೆ. ಇದರಲ್ಲಿ

ತಪ್ಪು ಯಾರದು? ದೊಡ್ಡವರು ಸಣ್ಣವರು ಅಂತ ವ್ಯತ್ಯಾಸ ಏಕೆ ಅಂತ ಕೇಳ್ತೀಯಾ? ಆದರೆ ನೀನು ಇದನ್ನು ಹೇಗ ಸರಿಪಡಿಸುತ್ತಿ? ಜೀವ ಜಗತ್ತು, ವೃಕ್ಷಜಗತ್ತು, ಕಲ್ಲು, ಆಕಾಶ ಎಲ್ಲಿ ನೋಡಿದರೂ ಅಸಮಾನತೆ ಇದ್ದೇ ಇದೆ, ಇಷ್ಟಲ್ಲದೆ ಮೇಲುಕೀಳು ಅಂತ ಇಲ್ಲದಿದ್ದರೆ ಉಪವಾಸ ಸಾಯಬೇಕಷ್ಟೆ. ನೀರು ಸಮತಟ್ಟಾದ ನೆಲ ಹುಡುಕಿಕೊಂಡು ಹೋಗುತ್ತದೆ. ಆದ್ದರಿಂದಲೇ ಮೇಲೆ ಕೆಳಗೆ ಅಂತಿರೋದರಿಂದಲೇ ನೀರಿಗೆ ಓಟ ಹರಿವು ಅಂತ ಇರುತ್ತೆ. ಇಲ್ಲದಿದ್ದರೆ ಅದಕ್ಕೆ ಚಲನೆಯೆ ಇರೋದಿಲ್ಲ. ಯಾರು ಅದನ್ನು ರೂಪಿಸಿದರೋ ಅವನಿಗೇ ಅದರ ಕಾರಣ ಗೊತ್ತು. ಕಷ್ಟವಿಲ್ಲದಿದ್ದರೆ ಸುಖ ಏನೆಂದು ಅರ್ಥಮಾಡಿಕೊಳ್ಳಲಾಗೋದಿಲ್ಲ. ಹಿಂದೂ ದರ್ಶನ ಶಾಸ್ತ್ರದ ತಳಹದಿ ಇರುವುದು ಇದರ ಮೇಲೆಯೆ. ಇದು ಯುಗ ಯುಗಗಳಿಂದ ನಡೆದುಬಂದದ್ದು, ಇವತ್ತಿನ ಹುಚ್ಚುತನವಲ್ಲ."

ಪಾಂಡೆಯೂ ಇದಕ್ಕೆ ಏನೋ ಬದಲು ಹೇಳಿದ್ದ. "ಇದು ಸಂಪ್ರದಾಯಸ್ಥರ ಹಿಡಿತಕ್ಕೆ ಸಿಕ್ಕಿರುವ ಕಟ್ಟುಪಾಡುಗಳು, ಬುದ್ಧಿಜೀವಿಗಳದಲ್ಲ." ಇನ್ನೂ ಏನೇನು ಹೇಳಿದ್ದನೊ ನೆನಪಿಲ್ಲ. ಅಪ್ರಿಯವಾದ ಮಾತುಗಳನ್ನು ಬುದ್ಧಿವಂತರು ನೆನಪಿನಲ್ಲಿ ಇಟ್ಟುಕೊಳ್ಳುವುದಿಲ್ಲ.

ಪ್ರಪಂಚ ಇರೋದು ಸುಖ ಅನುಭವಿಸುವುದಕ್ಕಾಗಿ, ಅಪ್ರಿಯವಾದ ವಿಚಾರಗಳಿಗಲ್ಲ.

ಪಾಂಡೆ ಸೋತಿದ್ದಾನೆ. ಸೋಲಲೇಬೇಕಾಗಿತ್ತು. ಹುಚ್ಚ ತನ್ನ ಮನಸ್ಸಿಗೆ ಬಂದದ್ದೆಲ್ಲವನ್ನೂ ಪ್ರಪಂಚದ ಹೊಟ್ಟೆಗೆ ತುರುಕಿ ಎಷ್ಟೇ ಕುಣಿದಾಡಲಿ - ಪ್ರಪಂಚ ತನ್ನಷ್ಟಕ್ಕೆ ತಾನೇ 'ಇವನು ಹುಚ್ಚಹುಚ್ಚ' ಅಂತ ಕೂಗುತ್ತಿರುತ್ತದೆ-ಹುಚ್ಚ, ಪದೇ ಪದೇ ಅವನಿಗೆ ಅದನ್ನೇ ನೆನಪಿಸುತ್ತಿರುತ್ತದೆ. ಪಾಂಡೆಯ ಪಾಡೂ ಅದೇ ಆಗಿರಬಹುದು. ತನ್ನ ಆದರ್ಶಗಳ ಬಾವುಟ ಹಿಡಿದು ಅವನು ಲಂಗೋಟಿ ಕಟ್ಟಿಕೊಂಡು ತನ್ನ ಹುಟ್ಟು ಗುಣವನ್ನು ಹಾಗೆಯೆ ಉಳಿಸಿಕೊಳ್ಳಲು ಬಯಸುತ್ತಿರಬಹುದು. ರಸ್ತೆಯಲ್ಲಿ ನಡೆಯುತ್ತಿರಬೇಕಾದರೆ - ಹೋಗುತ್ತಿರುವ ಕಾರು ಎದುರಾದಾಗ ಅವನ ಹುಟ್ಟು ಸ್ವಭಾವದ ಪರೀಕ್ಷೆಯಾಗುತ್ತದೆ. ಕೆಸರು ಹಾರುವುದರಿಂದ ತಪ್ಪಿಸಿಕೊಳ್ಳಲು ಬಟ್ಟೆ ಎತ್ತಿಕೊಂಡು ರಸ್ತೆ ಆ ಕೊನೆಗೆ ಹಾರಬೇಕಾಗುತ್ತದೆ ಅಷ್ಟೆ. ಆ 'ಹುಟ್ಟು ಸ್ವಭಾವ'ವನ್ನು ಉಳಿಸಿಕೊಳ್ಳಲು ಸಾಕಷ್ಟು ಅನುಭವಿಸಬೇಕು. ಅವನು ಅನುಭವಿಸಲೂಬಹುದು. ಎದೆಯೊಡ್ಡಿ, ಬೆನ್ನು ತೋರಿಸಿ ಲಾಠಿ ಏಟು ತಿಂದು ಅವನು ತನ್ನ ಶೌರ್ಯವನ್ನು ತೋರಿಸುತ್ತಾನೆ. ಆಮೇಲೆ ಅವನ ಶಕ್ತಿ ಕುಂದುತ್ತದೆ, ಹರಯದ ಹುರುಪು ಮಣ್ಣು ಮುಕ್ಕುತ್ತದೆ, ಮನಸ್ಸಿನಲ್ಲಿ ದೃಢತೆಯೂ ಇಲ್ಲವಾಗುತ್ತದೆ. ತನ್ನ ಮುರಿದ ಮೂಟೆಯ ಹಂದರದೊಳಗೇ ಅವನು ಬದುಕಿರುತ್ತಾನೆ. ಆದರೆ ಹೆಚ್ಚು ದಿನ ಬದುಕಿರಲಾರ. ಈ ಸಮಾಜದಲ್ಲಿ ಅವನ ಆದರ್ಶಗಳಿಗೆ ಕವಡೆ ಬೆಲೆಯೂ ಇಲ್ಲದಿರುವಂತೆ ಅವನಿಗೂ ಈ ಪ್ರಪಂಚದಲ್ಲಿ ಜಾಗವಿಲ್ಲ.

ಮಿ. ಶರ್ಮಾ ಹೀಗಿದ್ದಾರೆ. ತಮ್ಮ ವಿಚಾರಗಳಲ್ಲಿ ಬಹು ದೃಢವಾಗಿದ್ದಾರೆ,

ನಿಶ್ಚಿಂತೆಯಿಂದಿದ್ದಾರೆ, ಸ್ತಿಮಿತದಲ್ಲಿದ್ದಾರೆ.

ತಮ್ಮನ್ನೇ ವಿಶ್ಲೇಷಣೆ ಮಾಡಿಕೊಳ್ಳುತ್ತಾ ಅವರು ಹೀಗೆ ಯೋಚಿಸುತ್ತಾರೆ. ಮನಸ್ಸಿನ ಈ ಸಮತೋಲನ ಸ್ತಿಮಿತತೆಗಳನ್ನು ಹಾಗೆಯೇ ಉಳಿಸಿಕೊಂಡು ಬರಬೇಕಾದರೆ ಎರಡು ವಿಷಯಗಳು ತುಂಬ ಅಗತ್ಯ-ಕಾಮನ್‌ಸೆನ್ಸ್ ಅಂದರೆ ಪರಿಸ್ಥಿತಿಯ ಬಗ್ಗೆ ಜಾಗರೂಕರಾಗಿದ್ದುಕೊಂಡು ಕೆಲಸಮಾಡುವುದು ಮತ್ತು ಬೇರೆಯವರ ಬಗ್ಗೆ ಔದಾರ್ಯ-ಹೀಗೆಂದರೆ ತಮಗೆ ಸಾಧ್ಯವಾದಷ್ಟು ಮಟ್ಟಿಗೆ ಬೇರೆಯವರನ್ನು ಸಹಿಸಿಕೊಳ್ಳುವುದು, ಸಹಾನುಭೂತಿ ತೋರುವುದು - ಸ್ಥೂಲವಾಗಿ ಇದನ್ನು ದಯೆ ಅಂತ ಕರೆಯಬಹುದು.

ಅಂದಹಾಗೆ ಇವೆಲ್ಲ ಗುಣಗಳು ಅವರಲ್ಲಿವೆ. ಅದ್ದರಿಂದ ಅವರು ಭಿಕ್ಷುಕರಿಗೆ ಭಿಕ್ಷೆ ನೀಡುತ್ತಾರೆ. ತಮ್ಮ ಕಾಮನ್‌ಸೆನ್ಸ್‌ಗೆ ಧಕ್ಕೆ ಬರದ ಮಟ್ಟಿಗೆ ತಮಗೆ ಕೈಲಾದಷ್ಟು ಬೇರೆಯವರಿಗೆ ಕೈಯೆತ್ತಿ ಕೊಡುತ್ತಿರುತ್ತಾರೆ. ಬೇರೆಯವರ ಕಷ್ಟಸುಖ ನೋಡಿ ಅನುಕಂಪ ವ್ಯಕ್ತಪಡಿಸುತ್ತಾರೆ. ಇಷ್ಟು ಮಾತ್ರ ಮಾಡಿ ತಾವು ತಮ್ಮ ಕರ್ತವ್ಯ ಪೂರೈಸಿದ್ದೇವೆಂದು ಭಾವಿಸುತ್ತಾರೆ. ಯಾವಾಗಲೂ ಅವರದು ನಗುಮುಖ. ಅದರಲ್ಲಿ ಚಿಂತೆ ಮೂಡಿರುವುದಿಲ್ಲ.

ತಮ್ಮ ಕರ್ತವ್ಯ.

ಏನು ಅದರ ಅರ್ಥ.

ಪಾಂಡೆ ಹೇಳುತ್ತಾನೆ, ಅವನ ಗುಂಪಿಗೆ ಸೇರಿದ ಬೇರೆ ನತದೃಷ್ಟರು ಹೇಳುತ್ತಾರೆ - ಬಾಯಿಂದ ಸಹಾನುಭೂಮಿಯ ಮಾತುಗಳನ್ನು ಆಡುವುದಷ್ಟೇ ಕರ್ತವ್ಯ ಅಲ್ಲ. ಸಮಾಜದ ಕೆಲವು ಸಣ್ಣಪುಟ್ಟ ಕೊರತೆಗಳನ್ನು ದೂರಮಾಡುವುದು ಸಹ ಕರ್ತವ್ಯ ಎನಿಸಿಕೊಳ್ಳುವುದಿಲ್ಲ. ಭಿಕ್ಷುಕರಿಗೆ ಭಿಕ್ಷೆ, ತೊಂದರೆಯಲ್ಲಿರುವವರಿಗೆ ಸಮಾಧಾನ - ಇವೆಲ್ಲ ಸಮಾಜದ ಮೈಮೇಲಿರುವ ಹಲವಾರು ಗಾಯಗಳಲ್ಲಿ ಒಂದರ ತುದಿಗೆ ಮುಲಾಮು ಸವರಿದಂತೆ ಅಷ್ಟೆ, ಅದರಿಂದ ಗಾಯ ಮಾಯುವುದಿಲ್ಲ ಅಥವಾ ಹರಡುವುದೂ ನಿಲ್ಲುವುದಿಲ್ಲ. ಸಮಾಜದ ಎಲ್ಲ ಖಾಯಿಲೆಗಳಿಗೂ ಔಷಧಬೇಕು. ಸುಮ್ಮನೆ ತತ್ಕಾಲಕ್ಕೆ ದಯೆಯ ಮಾತಾಡುವುದು ಕೇವಲ ವ್ಯಕ್ತಿಯ ವ್ಯಕ್ತಿತ್ವಕ್ಕೆ ಅವಮಾನ ಮಾಡಿದಂತೆ ಅಷ್ಟೆ. ಇದು ದುಃಖವನ್ನು ಪರಿಹರಿಸದೆ ತಮ್ಮನ್ನು ತಾನೇ ಹಾಗೂ ಬೇರೆಯವರನ್ನು ಮೋಸಕ್ಕೆ ಈಡುಮಾಡಿದಂತೆ ಅಷ್ಟೆ.

ಈ ರೀತಿ ಹೇಳಿಯೆ ಅವರು ಒಮ್ಮುಖಿಗಳು, ಹುಚ್ಚರು ಮತ್ತು ಅತಿರೇಕದವರು ಅಂತ ಅನಿಸಿಕೊಳ್ಳುತ್ತಾರೆ. ಶರ್ಮಾ ನಗುತ್ತಾರೆ. ಸುಖದ ಮೋಹಾಲಿಂಗನವನ್ನು ತಳ್ಳಿಹಾಕುವವರು ಎಷ್ಟು ಮಂದಿತಾನೆ ಇದ್ದಾರೆ. ಸೊಗಸಾದ ಸುಪ್ಪತ್ತಿಗೆ, ನಿಶ್ಚಿಂತವಾಗಿರುವ ಮನಸ್ಸು, ಬಿಸಿಬಿಸಿ ಚಹಾ, ಗರಮಾಗರಂ ಕುರುಕುಲು ತಿಂಡಿ, ಸಿಗರೇಟು, ಹೊರಗೆ ಹೊರಟರೆಂದರೆ ನಮಸ್ಕಾರದ ಮೇಲೆ ನಮಸ್ಕಾರ, ತಮ್ಮದೇ ಆದ ಖಯಾಲಿನ ಬದುಕು, ಯಾವ ಎದುರಾಳಿಯೂ ಇಲ್ಲ......

ಹೆಣ್ಣು.

ಶರ್ಮಾ ನಗುತ್ತಾರೆ.

ಮನುಷ್ಯ ಪ್ರವೃತ್ತಿಗಳೆಲ್ಲ ಇರುವುದು ಸುಖ ಅನುಭವಿಸುವುದಕ್ಕಾಗಿ, ಇಲ್ಲದಿದ್ದರೆ ಹಸಿಯಾದುದನ್ನೇ ತಿನ್ನುತ್ತಿದ್ದ, ಬೆತ್ತಲೆಯಾಗಿ ಗುಹೆಗಳಲ್ಲಿ ಓಡಾಡಿಕೊಂಡಿರುತ್ತಿದ್ದ. ಮೆಲ್ಲಮೆಲ್ಲಗೆ ನಾಗರಿಕನಾಗಿ ಏಳುಪ್ಪರಿಗೆ ಮನೆ ಕಟ್ಟಿಕೊಂಡು ಇದ್ದಾನೆ! ಸ್ವತಃ ಪಾಂಡೆಯನ್ನೇ ತೆಗೆದುಕೊಳ್ಳಿ. ಒಂದು ವೇಳೆ ತನ್ನ ಆದರ್ಶಗಳಿಗೇ ಅಷ್ಟು ಅಂಟಿಕೊಂಡಿದ್ದ ಪಕ್ಷದಲ್ಲಿ ಕೆಲಸ ಕೇಳಿಕೊಂಡು ಇಂಟರ್‌ವ್ಯೂಗೆ ಹೋಗಿದ್ದೇಕೆ? ಶರ್ಮ ನಗುತ್ತಾರೆ- ಜನ ಉಪವಾಸ ಸತ್ಯಾಗ್ರಹ ಮಾಡುತ್ತಾರೆ, ಆದರೆ ಬಚ್ಚಿಟ್ಟುಕೊಂಡು ರೊಟ್ಟಿಗೆ ಜೇನು ಸವರಿ ಹೊಡೆಯುತ್ತಾರೆ. ಖಂಡಿತ ತಿನ್ನಬೇಕು - ತಿನ್ನುತ್ತಿದ್ದೇವೆಂದು ಒಪ್ಪಿಕೊಳ್ಳಬೇಕು. ಏಕೆಂದರೆ ಮನುಷ್ಯ ಯಾವಾಗಲೂ ಸುಖದ ಕಡೆಗೇ ಹೆಜ್ಜೆ ಹಾಕುವುದು.

ಹಾಗಾಗಿ ಜನರ ಕಲ್ಯಾಣ, ಮೋಕ್ಷ ಇವುಗಳ ಬಗ್ಗೆ ತಲೆಕೆಡಿಸಿಕೊಳ್ಳುವುದರಿಂದ ಏನು ಪ್ರಯೋಜನ? ಇದಕ್ಕಾಗಿ ಶ್ರೀರಾಮಚಂದ್ರನಿಂದ ಹಿಡಿದು, ಬುದ್ಧ ಗಾಂಧಿಯವರೆಗೆ ಅನೇಕರು ಪ್ರಯತ್ನ ಮಾಡಿದ್ದರು. ಅವರು ಅತಿಮಾನವರು, 'ಎಕ್ಸೆಪಷನ್ - ಎಕ್ಸೆಪಷನ್ ಪ್ರೂವ್ಸ್ ದ ರೂಲ್'. ಈ ಪಾಲಿಸಿಗಳೆಲ್ಲ ಅವರುಗಳು ಮತ್ತು ಅವರ ಆಕಾಲದ ಸ್ಥಿತಿಗತಿಗಳು ಮನುಷ್ಯ ಸುಖ ಬಯಸುತ್ತಾನೆ, ಸುಖ ಬಿಟ್ಟು ಇನ್ನೇನನ್ನೂ ಬಯಸುವುದಿಲ್ಲ ಎಂಬುದನ್ನು ದೃಢೀಕರಿಸಿದೆ. ತನ್ನ ಎಲ್ಲೆಕಟ್ಟಿನೊಳಗೆ ತಾನು ಓಡಾಡಬೇಕು, - ಅಡ್ಡಾಡಬೇಕು ಅಂತ ಮನುಷ್ಯ ಬಯಸುತ್ತಾನೆ, ಅವನಿಗೆ ಜಾಗ್ರತ ವರ್ತಮಾನ ಕಾಲ ಬೇಕು. ಅವನಿಗೆ ನಗು ತಮಾಷೆ ಬೇಕು, ಆಟ ಮೋಜು ಬೇಕು. ಅದೇ ಆನಂದದ ಗುಂಗಿನಲ್ಲಿ ಅವನು ಸಮಾಜವನ್ನು ಹುಡುಕುತ್ತಾನೆ, ಕುರಿಗಳ ಕೊಟ್ಟಿಗೆ. ಡಿಸಿಪ್ಲಿನ್ ಮತ್ತು ಅದರ ಉಸ್ತುವಾರಿ ನೋಡಿಕೊಳ್ಳುವ ಯಾರನ್ನಾದರೂ ಹುಡುಕಲು ತಡಕಾಡುತ್ತಾನೆ. ಪಾಂಡೆ-ಮುಂತಾದವರು ಬೇರೆ ರೀತಿಯಲ್ಲೇ ಯೋಚಿಸುತ್ತಾರೆ. ಅವರ ಮಿದುಳಿನಲ್ಲಿರುವ ಕೀಲುಗಳು ಸಡಿಲವಾಗಿವೆ. ಅಷ್ಟೆ, ಅದಕ್ಕಿಂತ ಹೆಚ್ಚು ತಿಳಿದುಕೊಳ್ಳುವ ಅಗತ್ಯವೇನೂ ಇಲ್ಲ.

ಆದ್ದರಿಂದ ಶರ್ಮಾ ಕಂಪನಿಯ ದೊಡ್ಡ ದೊಡ್ಡ ಕೆಲಸಗಳಿಗೆಲ್ಲ ಲಾಯಕ್ಕಾದ ಆಡಳಿತಗಾರರು.

ಕಬ್ಬಿಣದ ಹದ ನೋಡಿ ನೀರು ಸಿಂಪಡಿಸುತ್ತಾರೆ.

ವಿವೇಕದ 'ಏಕೆ', ಅಥವಾ ಎಂಥದೂ ಇಲ್ಲ.

ಅಗತ್ಯ ಬಿದ್ದರೆ? ಹೊಡಿ, ಬಡಿ, ಲಾಠಿ ಚಲಾಯಿಸು.... ಅಲ್ಲಿ ಕಠೋರವಾದ ಕರ್ತವ್ಯ ನಿಷ್ಠೆ. ಯಾವಾಗ ಯೋಚನೆ ಮಾಡಿದರೂ ಒಳದೃಷ್ಟಿ ಆ ಎರಡು ಪದಗಳ ಮೇಲೆ ಬಲವಾಗಿ ನಿಲ್ಲುತ್ತದೆ. "ಕಠೋರ ಕರ್ತವ್ಯ". 'ಒಂದು ವೇಳೆ' ಅನ್ನುವ ಮಾತಿಲ್ಲ. ಚಹಾ ತೊಗೊಂಡು ಬಾ, ಸಿಗರೇಟು, ಕುಳಿತುಕೊಳ್ಳಿ,.... 'ಹೌ ಡು ಯೂ ಡು ?' ಇಲ್ಲಿ ಇನ್ನೂ ಎರಡು ಪದಗಳ ಲೇಬಲ್ಲಿದೆ 'ಸಾಮಾಜಿಕ ಕರ್ತವ್ಯ'. 'ಮನುಷ್ಯ ಒಬ್ಬ ಸಾಮಾಜಿಕ ಪ್ರಾಣಿ' ಅಂತ ಪುಸ್ತಕಗಳಲ್ಲಿ ಬರೆದಿದೆ. ಕೆಲಸ ಮಾಡುತ್ತಿರ ಬೇಕಾದರೆ ಏನೋ ತಪ್ಪಾಯ್ತು, ಯಾರಿಗಾದರೂ ನಷ್ಟವಾಯಿತು ಅಂತ ಅಂದುಕೊಳ್ಳಿ. ಆ ವಿಚಾರವನ್ನು ಕೇವಲ ತರ್ಕದಿಂದಲೇ ನಿಭಾಯಿಸಿಕೊಳ್ಳಲು ಆಗೋದಿಲ್ಲ. ಕ್ಷಮಿಸಿ ಅಂತ ಏನಾದರೂ ಹೇಳಲೇಬೇಕು. ಅದಕ್ಕೆ ಶಾಸ್ತ್ರೀಯವಾದ

ಸೂತ್ರವೂ ಉಂಟು - 'ತಪ್ಪು ಮಾಡುವುದು ಮನುಷ್ಯನ ಸ್ವಭಾವ'. ಹುಟ್ಟಿನಿಂದ ಬಂದ ಸ್ವಭಾವಕ್ಕಾಗಿ ಸಂತಾಪ ಅಥವಾ ಪಶ್ಚಾತ್ತಾಪ ಪಡುವುದರಿಂದ ಏನು ಲಾಭ ? ಶಾಸ್ತ್ರ ಹೇಳುತ್ತದೆ- 'ಗತಸ್ಯ ಶೋಚನಾ ನಾಸ್ತಿ'. ಸರಿ, ಅದಾದ ಮೇಲೆ ಪೂರ್ಣವಿರಾಮ. ಮಧ್ಯಯುಗದ ಸಾಧುಗಳು ತಮ್ಮ ತಪ್ಪಿಗಾಗಿ ತಮ್ಮನ್ನು ತಾವೇ ಚಾವಟಿಯಿಂದ ಹೊಡೆದುಕೊಳ್ಳುತ್ತಿದ್ದರು. ಶರೀರಕ್ಕೆ ಅನೇಕ ಬಗೆಯಲ್ಲಿ ತೊಂದರೆ ಕೊಡುತ್ತಿದ್ದರು. ಉಪವಾಸ ಮಾಡುತ್ತಿದ್ದರು. ಅವೆಲ್ಲ ಮೂರ್ಖತನ. ಇಲ್ಲಿದಿದ್ದರೆ......

"ಕ್ಷಮಿಸಿ."

"ಪ್ಲೀಸ್ ಎಕ್ಸ್‌ಕ್ಯೂಸ್ ಮಿ".

"ಐಯಾಂ ಸಾರಿ"-ಹಾಗೇ-ಏನಾದರೂ.

ಫಾರ್ವರ್ಡ್ ಔಟ್‌ಲುಕ್ - ಅಗ್ರಗಾಮಿ ದೃಷ್ಟಿ- ಸಂಪೂರ್ಣವಾಗಿ ಸಂಸ್ಕೃತಿ ಹಚ್ಚಿದ ರುಚಿ, ಸಾಹೇಬರಿಗೆ ಲಾಯಕ್ಕಾದ ಮನಸ್ಸು ಮೊದಲಿನಿಂದಲೂ ಬೇಕು.

ಹುಟ್ಟಿನಿಂದ, ಕೆಲಸದಿಂದ ಆಲೋಚನೆಯಿಂದಲೂ ಸಾಹೇಬರು.

ಶರ್ಮಾರವರು ಕಳೆಯಿಂದ ಕೂಡಿದ್ದಾರೆ, ನೋಡಲು ಚೆನ್ನಾಗಿದ್ದಾರೆ. ಉಲ್ಲಾಸ, ತಾರುಣ್ಯ, ಒಳ್ಳೆಯ ಆರೋಗ್ಯ ಎಲ್ಲವೂ ಇದೆ. ಮನಸ್ಸು ಸ್ವಸ್ಥವಾಗಿದೆ.

ಆದ್ದರಿಂದ ಯಾವುದೇ ಸಂಕೋಚವಿಲ್ಲದೆ ಆನಂದ ಮತ್ತು ಖುಷಿಯನ್ನು ಹುಡುಕುವುದರಲ್ಲಿ ಅವರು ಪೂರ್ತಿಯಾಗಿ ಮಗ್ನರಾಗಿರುತ್ತಾರೆ. ಅದಕ್ಕಾಗಿ ಬದುಕೇ ಅವರಿಗೆ ಅವಕಾಶ ಒದಗಿಸಿದೆ. ಶರ್ಮಾರವರು ಕೈದೋಟದಲ್ಲಿ ಬೇಕಂತಲೆ ಪ್ರಯತ್ನಪೂರ್ವಕವಾಗಿ ಬೆಳೆಸಿರುವ ಕ್ರೋಟನ್ ಗಿಡದಂತೆ. ಆ ಗಿಡದ ಬೇರು ನಾಲ್ಕೂ ಕಡೆ ಕುಂಡದ ಗೋಡೆಯೊಡನೆ ಸೇರುತ್ತದಷ್ಟೆ. ಆದರೂ ಹುಟ್ಟಿನ ಕಾರಣದಿಂದಾಗಿ ಅದು ಚೌಕಟ್ಟಿನೊಳಗೇ ಸಿಕ್ಕಿ ಒದ್ದಾಡುವುದಿಲ್ಲ. ಒಬ್ಬರು ಹಳೆಯ ಬೇರುಗಳನ್ನು ಕಿತ್ತೆಸೆಯುತ್ತಾರೆ, ಹಳೆಯ ಮಣ್ಣನ್ನು ತೆಗೆದು ಹೊಸ ಮಣ್ಣು ಹಾಕುತ್ತಾರೆ, ನೀರು ಹೊಯ್ಯುತ್ತಾರೆ, ಅದನ್ನೂ ಕತ್ತರಿಸಿ ನೀಟಾಗಿ ಸಜ್ಜುಗೊಳಿಸುತ್ತಾರೆ. ಅಷ್ಟು ಮಾಡಲು ಯಾರ ಮನಸ್ಸಿನಲ್ಲೂ ಬೇಡದ ಭಾವನೆಯಿಲ್ಲ. ಯಾರೂ ಯೋಚಿಸುವುದಿಲ್ಲ, ಯೋಚಿಸಬೇಕಾದ ಅಗತ್ಯವೂ ಇರುವುದಿಲ್ಲ. ಎಲ್ಲವೂ ತನಗೆ ತಾನೇ ಆಗುತ್ತಿದೆ. ಏಕೆಂದರೆ ಅದು ಹಾಗೆ ಆಗಲೇ ಬೇಕು. ಕಾಂತಿಯಿಂದ ಕೂಡಿದ, ರಸತುಂಬಿದ ಸುಂದರ ಕುಂಡದ "ಪ್ರಿನ್ಸ್ ಆಫ್ ವೇಲ್ಸ್" ಕ್ರೋಟನ್ ಅಂಕುಡೊಂಕಾದ ಲಹರಿಯಲ್ಲಿ ಬಳುಕುತ್ತಾ ಉದ್ದುದ್ದದ ಎಲೆಗಳನ್ನು ಚಾಚುತ್ತಾ ಕೆಳಗಿರುವ ಹುಲ್ಲು, ಟೊಮೆಟೊ, ಬದನೆಗಿಡಗಳಿಗಿಂತ ಮೇಲೆ ನಿಂತು ತನ್ನ ಹೆಚ್ಚುಗಾರಿಕೆಯನ್ನು ತೋರ್ಪಡಿಸುತ್ತದೆ. ಅದೇನು ತರಕಾರಿ ಗಿಡವಲ್ಲ, ಸುವಾಸನೆ ಬೀರುವ ಹೂವಲ್ಲ, ಆದರೂ ಅದಕ್ಕೆ ಮನ್ನಣೆ ಸಿಗುತ್ತಿದೆ. ದೊಡ್ಡದಾಗಿರುವುದರಿಂದ ಅದು ಅಚ್ಚುಕಟ್ಟಾಗಿ ಬೆಳೆದುನಿಲ್ಲುತ್ತದೆ. ತೋಟದ ಸಮಾಜದಲ್ಲಿ ಅದರ ಸ್ಥಾನ ಮೇಲ್ಮಟ್ಟದಲ್ಲಿದೆ. ಮಣ್ಣಿನಲ್ಲಿ ಬಿದ್ದು ಹಾಳಾಗುವುದಾದರೆ, ಅದನ್ನು ಸರಿಪಡಿಸಲು ಯಾರಾದರೂ ಬರುತ್ತಾರೆ. ಕುಂಡವನ್ನು ಸರಿಯಾಗಿಡುತ್ತಾರೆ-ಅಕ್ಕಪಕ್ಕದ ಗಿಡಗಳನ್ನು ಕತ್ತರಿಸಿ ಸರಿಮಾಡುತ್ತಾರೆ. ಅವನ ಹೆಸರು ಏನೇ ಆಗಿರಲಿ, ತೋಟದ ಮಾಲಿ, ಅಥವಾ

ಸಮಾಜದಲ್ಲಿ ಅಪ್ಪ, ಮಾವ ಅಥವಾ ನೆಂಟ..... ಅದು ಸಮಾಜದ ದೃಷ್ಟಿ, ಎಲ್ಲಿಯವರೆಗೆ ಸಾಧ್ಯವೋ ಅಲ್ಲಿಯವರೆಗೆ ತೋಟವಿರುತ್ತದೆ, ಸಮಾಜವಿರುತ್ತದೆ, ದೇವರಿರುತ್ತಾನೆ, ಪ್ರಪಂಚ ಚೆನ್ನಾಗಿಯೇ ನಡೆದುಕೊಂಡು ಹೋಗುತ್ತಿರುತ್ತದೆ.

ಆದ್ದರಿಂದಲೇ ಹಾಗೆ 'ಆಗುವ ಭಾವನೆ' ಹಾಳಾಗದಂತೆ ಉಳಿಸಿಕೊಳ್ಳುವುದು ಅದರ ಧರ್ಮ ಮತ್ತು ಅಧರ್ಮದ ಸಂಸ್ಥಾಪನೆಗಾಗಿ ಸೆಣಸಾಡುವುದು ದೈವ ನಿಯಾಮಕವಾದ ಕರ್ತವ್ಯ.

ಬಿಳಿಯ ಚರ್ಮದ ಪರಂಗಿ ಜನರು ಸಭ್ಯರಾಗಿ ನಾಗರಿಕರಾಗಿ ಇದೇ ಕರ್ತವ್ಯದ ಪಾಲನೆಗಾಗಿ ದೇಶವಿದೇಶಗಳಿಗೆ ಹೋಗಿದ್ದಾರೆ-ಬೆನ್ನಿನ ಮೇಲೆ ಬಿಳಿ ಮನುಷ್ಯರ ಹೊರೆ ಹೊತ್ತು ನಡೆದಿದ್ದಾರೆ. ಈ ವಿಚಾರವನ್ನೇ, ಈ ತ್ಯಾಗದ ಮಹತ್ವವನ್ನು ಕಲಿ ಕಿಪ್ಲಿಂಗ್ ಕಂಡುಕೊಂಡ. ನಾಗರಿಕವೆನಿಸಿದ ದೇಶಗಳು ಅವನ ಹೃದಯವನ್ನು ಅರಿತು ಅವನಿಗೆ ಮನ್ನಣೆ ನೀಡಿದವು, ಸನ್ಮಾನ ಮಾಡಿದವು. ಬಿಳಿಯ ಜನರ ಹೊರೆಹೊತ್ತ ಆ ಮಂದಿ ಕತ್ತಲೆ ತುಂಬಿದ ಕಾಡುಗಳಲ್ಲಿ ದೀಪ ಹಚ್ಚಿದರು. ಕಾಡುಗಳನ್ನು ಕಡಿದು ಅಲ್ಲೆಲ್ಲ ಸಂಸ್ಕೃತಿಯ ಬಿಳಿ ಸ್ಮಾರಕಗಳನ್ನು ನಿರ್ಮಿಸಿದರು- ಆಲಸ್ಯದಿಂದ, ನಿದ್ದೆಯ ಭಾರದಿಂದ ಇದ್ದ ಭೂಮಿತಾಯಿ ಈ ಸಂಸ್ಕೃತಿಯಿಂದ ಅನೇಕ ಬಾರಿ ಎಚ್ಚರಿಕೆ ಪಡೆದಳು, ನಡುಗಿದಳು, ಆಕಳಿಸ ತೊಡಗಿದಳು, ಮೈಮುರಿದಳು, ಮಗ್ಗಲು ಹೊರಳಿದಳು, ಆದಾದಮೇಲೆ ಎದ್ದು ಕುಣಿಯ ತೊಡಗಿದಳು- ಯುಗದ ಶಿವತಾಂಡವ.

ಈ ಸಂಸ್ಕೃತಿಯ ಹಿರಿಮೆಯನ್ನು ಪ್ರತಿಯೊಂದು ನಾಡಿನಲ್ಲೂ ಪ್ರತಿಷ್ಠಿತರೆನಿಸಿದ, ಕುಲೀನರಾದ ಪ್ರತಿಪಾದಕರು ಉಳಿಸಿಕೊಂಡು ಬಂದಿದ್ದಾರೆ. ಅಂಥವರು ಆ ರಾಜ್ಯದ ಸಾಮಂತ ಜನರು. ಶರ್ಮಾ ಅವರಲ್ಲಿ ಒಬ್ಬರು. ಹಾಗಿರುವುದರಿಂದಲೇ ಅವರು ಮನ್ನಣೆಗೆ ಪಾತ್ರರಾಗಿದ್ದಾರೆ.

ಬಲಿದತ್ತ ಹೇಳಿದ, "ಶ್ಯಾಮ ಬಾಬೂ, ಸಾಹೇಬರು ಎಷ್ಟು ಕಲ್ಚರ್ಡ್. ಆಶ್ಚರ್ಯ. ಫೈಲು ತೊಗೊಂಡು ಬಂಗಲೆ ಹತ್ತಿರ ಹೋಗಿದ್ದೆ. ಒಳಕ್ಕೆ ಕರೆದು 'ಕುಳಿತುಕೊಳ್ಳಿ' ಅಂತ ಹೇಳಿದರು. ಗಂಭೀರವಾದ ಮಾತುಗಳು. ನಗು ಮುಖ. ಅಗತ್ಯವಿದ್ದಾಗ ಒಳಗೆ ಹೋದರು. 'ದಯವಿಟ್ಟು ಸ್ವಲ್ಪ ಕುಳಿತುಕೊಳ್ಳಿ. ಹಾಗೆಯೇ ಕಣ್ಣಾಡಿಯಿಸಿ, ನಿಮಗೆ ಸಂತೋಷ ತರುವಂಥ ಯಾವುದಾದರೂ ಪದಾರ್ಥ ಕಣ್ಣಿಗೆ ಬೀಳಬಹುದು' ಅಂತ ಹೇಳಿಹೋದರು. ಅಬ್ಬಾ, ಅದೆಷ್ಟು ಚೆನ್ನದಂಥ ನಡೆವಳಿಕೆ, ಅದೆಷ್ಟು ವಿನಯ, ನನಗೆ ತಲೆಬಗ್ಗಿಸುವಂತಾಯಿತು. ಬಹುಶಃ ಟಾಯ್ಲೆಟ್‌ಗೆ ಹೋಗಿದ್ದರು ಅಂತ ಕಾಣುತ್ತೆ. ಅದೆಷ್ಟು ನಮ್ರತೆ. ಅವರು ಏನು ಹೇಳಿದರೂ ಅದರಂತೆ ನಡೆದು ಕೊಳ್ಳೋಣ ಅಂತ ಅನಿಸಿತು. ಇಡೀ ಕೋಣೆಯಲ್ಲೆಲ್ಲ ಸುತ್ತಾಡಿದೆ. ಏನು ಹೇಳಲಿ, ಅದೊಂದು ಸ್ವಪ್ನ ಲೋಕ, ಭಾರಿಭಾರಿಯಾದ ಹೊಳೆಯುತ್ತಿರುವ ಗ್ರಂಥಗಳು, ಹುಟ್ಟಿದಾಗಿನಿಂದಲೂ ನೋಡಿರಲಿಲ್ಲ. ಗೋಡೆಯ ಮೇಲೆ ಶ್ರೇಷ್ಠ ದರ್ಜೆಯ ಪೇಂಟಿಂಗ್ಸ್. ನನಗೇನು ಗೊತ್ತಾಗತ್ತೆ ಅದು ಮಣ್ಣು. ಬಹುಶಃ ಸಾಹೇಬರು ಚಿತ್ರ

ಬಿಡಿಸುತ್ತಾರೆ ಅಂತ ಕಾಣತ್ತೆ. ನಾನು ನೋಡಿದ್ದರಲ್ಲೆಲ್ಲ ತುಂಬ ಆಶ್ಚರ್ಯದ ವಸ್ತು ಅಂದರೆ ಅಲ್ಲಿದ್ದ ಲೆಕ್ಕವಿಲ್ಲದಷ್ಟು ಮಣ್ಣಿನ ವಿಗ್ರಹಗಳು. ಎಷ್ಟು ಸೊಗಸಾಗಿವೆ ಆ ವಿಗ್ರಹಗಳು. ಕೊಳಕು ಬಟ್ಟೆ ಹಾಕಿಕೊಂಡಿರುವ ಸಾಧಾರಣ ಮನುಷ್ಯ, ಕೋಲು ಹಿಡಿದಿರುವ ಕುರುಡ, ಜೋಳಿಗೆ ಮುಂದೆ ಚಾಚಿರುವ ಭಿಕ್ಷುಕ. ಅಬ್ಬಾ, ಎಂಥ ಹೃದಯ, ಎಂಥ ಮನಸ್ಸು."

ಶ್ಯಾಮಬಾಬು ನಿಟ್ಟುಸಿರು ಬಿಟ್ಟರು. ಹೇಳಿದರು. "ಹೊಟ್ಟೆಪಾಡಿನ ಯೋಚನೆ ಯಿಲ್ಲದಿದ್ದರೆ ಇವೆಲ್ಲ ಶೋಕಿಮಾಡಲು ಸಾಧ್ಯ ನೋಡಿ. ಕ್ರಿಕೆಟ್ಟಿನಲ್ಲಿ ಒಳ್ಳೆ ಹೆಸರು ತೊಗೋಬೇಕೆಂದು ನನಗೂ ಇಷ್ಟವಿತ್ತು. ಒಂದು ಬಾರಿ ಆಸ್ಟ್ರೇಲಿಯಾ ನೋಡಬೇಕೆಂದಿದ್ದೆ. ಸುಳ್ಳು ಅಂದುಕೊಳ್ಳಬೇಡಿ. ಆ ಕಾಲದಲ್ಲಿ ನನಗೆ ಒಳ್ಳೆಯ ಹೆಸರಿತ್ತು. ನೀವೂ ಕೇಳಿದ್ದಿರಬಹುದು. ಆಹಾ, ಆದಿನಗಳು ಎಷ್ಟು ಚೆನ್ನಾಗಿದ್ದವು. ಈಗ ಹೇಗಿದೆ. ಏನೂ ಕೈಗೆ ಹತ್ತಲಿಲ್ಲ. ಈಗ ಬರೀ ಕಂಪನಿ ಹೆಸರಿನಲ್ಲಿ ದುಡೀಬೇಕು ನೋಡಿ."

"ಹಂ! ಹಂ! ನೀವು ಸರಿಯಾದ ಜಾಗದಲ್ಲಿ ಪಟ್ಟು ಹಿಡೀಲಿಲ್ಲ ಅಂತ ಕಾಣತ್ತೆ. ಅಂದರೆ ಅವಕಾಶ ಎದುರಾದಾಗ ತಬ್ಬಿಬ್ಬಾದಿರೇನೊ-"

"ಹಾಗಂದರೆ ಏನರ್ಥ ?" ಶ್ಯಾಮಬಾಬು ಆಕಳಿಸುತ್ತಾರೆ, "ಇವೆಲ್ಲ ಜಟಿಲವಾದ ವಿಷಯಗಳು ಅಂತ ನಾನು ಅಂದುಕೊಂಡಿಲ್ಲ. ನೋಡಿ ಬಲಿದತ್ತಬಾಬು, ಸುತ್ತು ಬಳಸಿದ ಮಾತುಗಳನ್ನು ಅಥವಾ ಉದ್ದವಾದ ಲೆಕ್ಚರನ್ನು ಕೇಳಿದರೆ ನನಗೆ ತಲೆನೋವು ಬಂದುಬಿಡುತ್ತದೆ. ನಾನು ಏನು ಹೇಳೋದು ಅಂದರೆ ಸೀಸಿ ಹೊಡೆಯೋದು ಬೇಕಾಗಿದೆ ಅಂದರೆ ಯಾವಾಗಲೂ 'ಬೆಣ್ಣೆ ಹಚ್ಚಿ', ಅಂದರೆ ಮೈಬಗ್ಗಿಸಿ ಮೈಗೆಲ್ಲಾ ಬೆಣ್ಣೆ ಸವರಿ, ತೋಳುಗಳಲ್ಲಿ ಎಷ್ಟು ಬಲವಿದೆ ಅಂತ ತೋರಿಸಿ. ಸುಮ್ಮನೆ ಹೀಗೆ ವಟಗುಟ್ಟುತ್ತಿದ್ದರೆ ಏನು ಪ್ರಯೋಜನ ? ಪರದೆಯ ಹಿಂದೆ ನಿಂತುಕೊಂಡು ಸುಮ್ಮನೆ ವಟಗುಟ್ಟುವ ಸಿಪಾಯಿಗಳ ಮಾತಲ್ಲಿ ನನಗೆ ನಂಬಿಕೆಯಿಲ್ಲ. ಏನಾದರೂ ಹೇಳಬೇಕಾದರೆ ದೊಡ್ಡಧ್ವನಿಯಲ್ಲಿ ರಾಜಾರೋಷವಾಗಿ ಹೇಳಿ ಹಲ್ ಶರ್ಮಾ-"

"ಛೆ ಛೆ, ನೀವು ಏನೇನೋ ಅಂದುಕೊಂಡು ಬಿಟ್ಟರಲ್ಲ. ಇದು ಬೆಣ್ಣೆ ಹಚ್ಚೊ ವಿಷಯದಲ್ಲ, ನಿಜವಾಗಲೂ ಖಂಡಿತವಾದ ಮಾತು. ಸಾಹೇಬರು ಆರ್ಟಿಸ್ಟ್, ಒಳ್ಳೆಯ ರಸಿಕರು."

ಕಿವಿಯಲ್ಲಿ ಆ ಮಾತು ಝುಣಝುಣಗುಟ್ಟುತ್ತಿತ್ತು. ಗೋಪಾಲಬಾಬು ಕಂಕುಳಲ್ಲಿ ಫೈಲು ಹಿಡಿದುಕೊಂಡು ಕಾಯುತ್ತಲೆ ನಿಂತಿದ್ದರು. ಸಾಹೇಬರು ಆರ್ಟಿಸ್ಟ್, ಲಂಕೆಯಲ್ಲಿ ರಾಮನಾಮ!

ಖಂಡಿತ ನಿಜವೆ! ಸಾಹೇಬರು ಕಲಾವಿದರೆ ? ಅವರಿಗೆ ಅರ್ಥವಾಗುತ್ತದೆಯೆ ?

ಬಹಳ ಹಿಂದೆಯೆ ಮುಚ್ಚಿಹೋದ ಬಾಗಿಲನ್ನು ಸ್ವಲ್ಪ ಪ್ರಯತ್ನದಲ್ಲಿಯೆ ತೆಗೆಯುವ ಸಾಧ್ಯತೆ ಇದೆಯೆ ? ಇಲ್ಲ, ಖಂಡಿತ ಸಾಧ್ಯವಿಲ್ಲ, ಬಾಗಿಲಿನ ಕೀಲುಗಳಿಗೆಲ್ಲ ಚೆನ್ನಾಗಿ ತುಕ್ಕು ಹಿಡಿದಿದೆ. ಅವು ತೆರೆಯೋದಿಲ್ಲ.

ತನ್ಮಯರಾಗಿ ಬಲಿದತ್ತನ ಮುಖ ನೋಡುತ್ತಿದ್ದಾರೆ ಗೋಪಾಲಬಾಬು. ಗುಂಡುಮುಖದ ಮೇಲೆ ಒಂದಡೆ ಗಲ್ಲ ಇಳಿಜಾರಿನಂತಿದೆ. ಎಲೆ ಜಗಿಯುವುದರಿಂದ

ಆ ಕಡೆಯಲ್ಲಿ ಗುಮ್ಮಟದಂತೆ ಉಬ್ಬಿದೆ. ಇನ್ನೊಂದು ಕೆನ್ನೆ ಹಾಗೆಯೆ ಇದೆ. ಸಿಗರೇಟು ಪ್ಯಾಕಿನಿಂದ ಸಿಗರೇಟು ಹೊರಗೆಳೆದು ಪ್ಯಾಕೆಟ್ಟನ್ನು ಮೇಜಿನ ಆ ಕಡೆ ಕುಳಿತಿದ್ದ ಶ್ಯಾಮ ಬಾಬುವಿನ ಕಡೆ ಎಸೆದು ಕೈಯಲ್ಲಿ ಬೆಂಕಿಕಡ್ಡಿ ಹಿಡಿದು ಬಲಿದತ್ತ ಹೇಳತೊಡಗಿದ - "ಸಾಹೇಬರಿಗೆ ಪೇಂಟಿಂಗ್ ಬಗ್ಗೆ ಚೆನ್ನಾಗಿ ಗೊತ್ತಿದೆ. ಅವರ ಮನೆಯಲ್ಲಿ ಬೇಕಾದಷ್ಟು ಪೇಂಟಿಂಗ್‌ಗಳಿವೆ. ಮನಸ್ಸು ಅಷ್ಟು ದೊಡ್ಡದಾಗಿರದಿದ್ದರೆ ಇಷ್ಟೊಂದು ಕೆಲಸಗಳ ನಡುವೆ ಮನುಷ್ಯನಿಗೆ ಇವೆಲ್ಲ ತಲೆಗೆ ಹಚ್ಚಿಕೊಳ್ಳಲು ಸಾಧ್ಯವಾಗುವುದಿಲ್ಲ. ಆಳು ಏನು ಹೇಳಿದ ಗೊತ್ತೆ? ಸಾಹೇಬರು ಸಿತಾರು ಬಾರಿಸುತ್ತಾರಂತೆ."

ಸಿತಾರು! ಗೋಪಾಲ ಬಾಬುವಿನ ಎದೆಯಲ್ಲಿ ಮಿಡಿದಂತಾಯಿತು. ಅದರಲ್ಲೂ ತಾವು -

"ಸುಮ್ಮನಿರು ಸಿತಾರ್, - ಮೀರಾಬಾಯಿಯ ಹೃದಯದ -"

ಸಿತಾರಿನ ವಿಚಾರ ಬಾಯಿಂದ ಹೊರಗಡವಿ ಬಲಿದತ್ತ ಗೆದ್ದವನಂತೆ ಮುಖಮಾಡಿದ. ಹೆಮ್ಮೆಯಿಂದ ಶ್ಯಾಮಬಾಬುವಿನ ಮುಖ ನೋಡಿದ. ನೋಟ ಹೀಗೆ ಹೇಳುತ್ತಿದೆಯೇನೊ ಎಂಬಂತಿತ್ತು-ಈಡಿಯೆಟ್, ನಿನಗೇನು ಗೊತ್ತಾಗತ್ತೆ, ನೋಡಿಲ್ಲಿ, ಸಿಗರೇಟನಿಂದ ಉಫ್ ಉಫ್ ಅಂತ ಹೇಗೆ ಬಿಡುತ್ತಿದ್ದೇನೆ. ನೋಡ್ತಾ ಇದ್ದೀಯಲ್ಲ."

ಶ್ಯಾಮಬಾಬುವಿನ ಗಮನ ಸಿಗರೇಟು ಪ್ಯಾಕಿನ ಮೇಲಿರುವ ಅಕ್ಷರಗಳ ಮೇಲೆ ನಟ್ಟಿದೆ. ಬೇರೆ ಬೇರೆ ದಿಕ್ಕುಗಳಲ್ಲಿ ತಿರುಗಿಸಿ ತಿರುಗಿಸಿ ಅದರ ಮೇಲೆ ಬರೆದಿರುವುದನ್ನು ನೋಡುತ್ತಿದ್ದಾರೆ.

ಗೋಪಾಲ ಬಾಬು ಯೋಚನೆ ಮಾಡುತ್ತಿದ್ದಾರೆ. ಬಹಳ ಹಿಂದಿನ ದಿನಗಳ ಮಾತು.

ಆಗ ಗೋಪಾಲಬಾಬು ಪೇಂಟಿಂಗ್ ಮಾಡುತ್ತಿದ್ದರು, ಸಿತಾರು ಕೂಡ ಬಾರಿಸುತ್ತಿದ್ದರು.

ಯಾರೂ ಹೇಳಿಕೊಟ್ಟಿರಲಿಲ್ಲ. "ಆರ್ಟ್" ಬಗ್ಗೆ ಓದಿರಲಿಲ್ಲ. ಆದರೂ ಅವರು ಚಿತ್ರ ಬರೆಯುತ್ತಿದ್ದರು. ಹುಡುಗನಾಗಿದ್ದಾಗ ಬದನೆಕಾಯಿ, ಹೂವು ಮುಂತಾದವುಗಳಿಂದ ಹಿಡಿದು ಮನೆಯ ದೃಶ್ಯ, ಹಳ್ಳಿ, ಹೊಳೆ ದಡದಲ್ಲಿ ಆಲದ ಮರದ ಮರೆಯಲ್ಲಿ ಸಂಜೆ, ಹಸುವಿನ ಬಳಿ ಓಡಿಬರುತ್ತಿರುವ ಕರು, ಜಗಳವಾಡುತ್ತಿರುವ ಕಪ್ಪೆಗಳು ಹಾಗೂ ವಿವಿಧ ರೀತಿಯ ಮನುಷ್ಯ ಭಂಗಿಗಳವರೆಗೂ ಬರೆಯುತ್ತಿದ್ದರು. ಹಾಗೆಯೆ ಮೆಲ್ಲಗೆ ಮಾಡೆಲ್ ಹುಡುಕಿಕೊಂಡು ಚಿತ್ರ ಬರೆಯಲು ಆರಂಭಿಸಿದರು. ಈಗಲೂ ಮಕ್ಕಳ ಹಾವಳಿಯಿಂದ ಬಚಾವಾಗಿ ಬಂದಿರುವ ಕೆಲವು ಚಿತ್ರಗಳು ಇವೆ. ಬಗೆಬಗೆಯ ಉಡುಗೆ ತೊಡುಗೆಗಳಲ್ಲಿ ಮಡದಿಯ ಚಿತ್ರ ಬಿಡಿಸಿದ್ದಾರೆ. ಚೆನ್ನಾಗಿ ಸಿಂಗರಿಸಿಕೊಂಡು, ಕೈಯಲ್ಲಿ ವೀಳೆಯದಲೆ ಅಡಕೆ ಹಿಡಿದುಕೊಂಡು, ನಗುತ್ತಿರುವ ಮುಖ, ವಿಶೇಷ ರೀತಿಯಲ್ಲಿ ಸೀರೆಯುಟ್ಟುಕೊಂಡು, ಹಾರಾಡುತ್ತಿರುವ ಮುಂಗುರುಳು, ತರಕಾರಿ ಹೆಚ್ಚುತ್ತಿರುವುದು, ನೀರು ಸೇದುತ್ತಿರುವುದು-ಹೀಗೇ ಅನೇಕ ಭಂಗಿಗಳು. ಕೆಳಗಡೆ ಯಾವುದೋ ಮೂಲೆಯಲ್ಲಿ

ಸಣ್ಣಸಣ್ಣ ಅಕ್ಷರಗಳಲ್ಲಿ ಹೆಸರು ಬರೆದಿರುವುದು ಈಗಲೂ ಕಂಡುಬರುತ್ತದೆ -ಗೋ.ಕೃ.ಮಿ.

ಆಮೇಲೆ ಕಲೆ ಕಮರಿಹೋಯಿತು.

ಕಡೆಯ ಚಿತ್ರದಲ್ಲಿ ಬಡಪಾಯಿ ಮನೆಯಾಕೆ ಕೋಪದಲ್ಲಿ ಬೈಯುತ್ತ ಮುಖ ಎಡಗಡೆ ತಿರುಗಿಸಿಕೊಂಡು ಪೊರಕೆ ಹಿಡಿದು ಮಗುವನ್ನು ಹೊಡೆಯಲು ಹೊರಟಿರುವ ನೋಟ,-

ಬಹಳ ದಿನಗಳಿಗೆ ಮೊದಲು, ಆಗ ಕೇವಲ ನಾಲ್ಕು ಮಂದಿ ಮಕ್ಕಳಿದ್ದರು. ಕೇವಲ ಸ್ಕೆಚ್ ಮಾತ್ರ ಹಾಕಿದ್ದರು. ಅಂದು ಘೋಷಣೆ ಮಾಡಿದ್ದರು, - "ಹೀಗಾದರೆ ನಾನು ಕಣಗಲೆ ಬೀಜದಂತೆ-"

ಹಾಗೆಯೆ ಎರಡು ಹೊತ್ತೂ ಸಿತಾರು ಹಿಡಿದುಕೊಂಡು ಉಸ್ತಾದರ ಬಳಿ ಓಡಿಹೋಗುವುದು, ಅಂದು ಸಹ ಹೋದರು. ಇವತ್ತು ಸಿಕ್ಕಿರುವ ಸಾಹೇಬರಾದರೂ, ಕಲೆಯನ್ನು ನಿಜವಾಗಿ ಬಲ್ಲವರಾದರೆ ಎಷ್ಟು ಚೆನ್ನ!

ವಾಸ್ತವವಾಗಿ ಅವರು ಕಲೆಯನ್ನು ಕುರಿತು ಚರ್ಚೆ ನಡೆಸುತ್ತಿದ್ದಾಗ, ಚಿತ್ರ ಬಿಡಿಸುತ್ತಿದ್ದಾಗ, ಸಿತಾರನ್ನು ನುಡಿಸುತ್ತಿದ್ದಾಗ ಜನ ಇವೆಲ್ಲವನ್ನು ತಿಳಿಯಲಿ, ಹೊಗಳಲಿ ಅಂತ ಯಾವತ್ತೂ ಬಯಸಿರಲಿಲ್ಲ. ಆಗ ಸಾಧನೆಯನ್ನು ಮುಚ್ಚಿಡುವ ಪ್ರಮೇಯವಿರಲಿಲ್ಲ. ಸುಮ್ಮನೆ ತಮಗೆ ಬೇಕೆನಿಸಿತು, ಮನಸ್ಸಿಗೆ ಖುಷಿಯಾಯಿತು, ಮಾಡಿದರು. ಸಾಧನೆಯೆನ್ನುವುದೂ ಮತ್ತು ಹಿಡಿದಂತೆ. ಅದೆಷ್ಟು ಸಮಯ ಅದರಲ್ಲೇ ಕಳೆದಿದೆ. ಗಡ್ಡ ಬೋಳಿಸೋದರಿಂದ ಹಿಡಿದು ಮಾರ್ಕೆಟ್ಟಿಗೆ ಹೋಗಿ ಸಾಮಾನು ತರುವವರೆಗೆ ಎಷ್ಟೋ ಅಗತ್ಯವಾದ ಕೆಲಸಗಳು ಮರೆತುಹೋಗುತ್ತಿದ್ದವು. ಎಲ್ಲ ಮರೆತು ಕೆಲಸ ಮಾಡಬೇಕಾಗಿ ಬಂತು. ಮನೆ ಕಡೆ ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು. ಆ ನಷ್ಟಕ್ಕೆ ಕೊನೆಯೆ ಇಲ್ಲ. ಸುಸ್ತಾದರೂ, ಮೈಮರೆತರೂ ಆನಂದ ಉಕ್ಕಿ ಬರುತ್ತಿತ್ತು. ಕೆಲಸ ನಡೆದುಕೊಂಡು ಹೋಗುತ್ತಿತ್ತು. ಅದಕ್ಕಾಗಿ ಬೇರೆಯವರಿಂದ ಶಹಬಾಸಗಿರಿ ಸಿಗಲಿ ಅಂತ ಮನಸ್ಸಿಗೆ ಯಾವಾಗಲೂ ಅನಿಸಿರಲಿಲ್ಲ.

ಆದರೆ ಅಭ್ಯಾಸಬಿಟ್ಟು ಹೋದಾಗಿನಿಂದ, ಸೃಜನ ಶಕ್ತಿ ಬಂಜೆಯಂತಾಗಿದೆ, ತನ್ನ ಒಳಗಿರುವ ಕಲಾವಿದ ಸತ್ತುಹೋಗಿದ್ದಾನೆ. ಒಂದೊಂದುವೇಳೆ ಅನಿಸುತ್ತದೆ - ಯಾರಾದರೂ ಈ ಕಲೆಯನ್ನು ಗುರುತಿಸುವವರೂ ಬೆನ್ನು ತಟ್ಟುವವರೂ ಇದ್ದಿದ್ದರೆ!

ಆದರೆ ಪ್ರಪಂಚ ಬೆಲೆ ಕೊಡೋದಿಲ್ಲ, ಕಾಯೋದರಲ್ಲೇ ದಿನಗಳ ಮೇಲೆ ದಿನಗಳು ಉರುಳಿವೆ. ಯಾರೂ ಬಂದು ವಿಚಾರಿಸಲಿಲ್ಲ-"ಕಲಾವಿದ ಗೋ.ಕೃ.ಮಿ. ಯಾರು? ಚೆನ್ನಾಗಿ ಚಿತ್ರ ಬಿಡಿಸುತ್ತಿದ್ದರು." ಆಮೇಲೆ ಆ ನಿರೀಕ್ಷೆ ಅಳಿಯುತ್ತಾ ಹೋಯಿತು. ಇವತ್ತು ಇದ್ದಕ್ಕಿದ್ದಂತೆ!-

ಬೆವರಿನಿಂದ ತೊಯ್ದು ಗೋಪಾಲಬಾಬು ಕಂಕುಳಲ್ಲಿ ಫೈಲು ಹಿಡಿದು ನಿಂತಿದ್ದಾರೆ. ಒಂದೆರಡು ಮಾತಾಡೋಣ ಅಂತ ಮನಸ್ಸಿನಲ್ಲೇ ಅನ್ನಿಸುತ್ತಿತ್ತು. ಅಷ್ಟರಲ್ಲೇ ರಣಜಿತ ಬಾಬು ಬಂದುಬಿಟ್ಟರು. "ಓಹೋ! ಬನ್ನಿ, ಕುಳಿತುಕೊಳ್ಳಿ. ಸರಿ, ಗೋಪಾಲ ಬಾಬು,

ನೀವು ಸ್ವಲ್ಪ ಹೊತ್ತಾದ ಮೇಲೆ ಬನ್ನಿ".

"ಅಯ್ಯೋ, ನೀವು ಕೂತುಕೊಳ್ಳಲೆ ಇಲ್ಲವಲ್ಲ. ಅದೇ ಶರ್ಮಾ ಸಾಹೇಬರ ಬಗ್ಗೆ ಮಾತಾಡಿಕೊಳ್ಳುತ್ತಿದ್ದವು." ರಣಜಿತಬಾಬು ಪೈಪನ್ನು ಕಚ್ಚಿ ತೋಳನ್ನು ಮೇಲೆತ್ತಿ ನಿಂತಿದ್ದರು. ಶರ್ಮಾ ಅವರ ಹೆಸರು ಕೇಳುತ್ತಲೆ ಕಣ್ಣುಮಿಂಚಿತು, ಮುಖದ ಮೇಲೆ ನಗೆ ತೇಲಿಬಂತು. ನಿಂತುಕೊಂಡೆ ಹೇಳತೊಡಗಿದರು-

"ದೊಡ್ಡ ದೊಡ್ಡವರ ವಿಚಾರವನ್ನು ಹಾಗೆ ಒಂದೇ ಬಾರಿಗೆ ಆಡಿ ಮುಗಿಸಲು ಸಾಧ್ಯವೆ ?"

"ಇಲ್ಲ, ಇಲ್ಲ, ಹಾಗೆ ಹೇಳುತ್ತಿರಬೇಕು - ನೀವೇನಂತೀರಿ, -" ಶ್ಯಾಮಬಾಬು ತೆಪ್ಪಗಿದ್ದರು.

"ಮೋಸ್ಟ್ ಸ್ಪೋರ್ಟಿಂಗ್ ಪರ್ಟ್", ರಣಜಿತಬಾಬು ಹೇಳಿದರು. ಆಮೇಲೆ ಕುರ್ಚಿಯ ಮೇಲೆ ಕುಳಿತುಕೊಂಡು ಒಂದು ದಂ ಜೋರಾಗಿ ಹೊಗೆಯೆಳೆದರು. ಸ್ವಲ್ಪ ಹೊತ್ತು ರಣಜಿತಬಾಬುಗಳನ್ನು ಹಾಗೆಯೆ ನೋಡುತ್ತಾ ಎಲ್ಲರೂ ಶರ್ಮಾ ಸಾಹೇಬರನ್ನು ಸುಮ್ಮನೆ ನೆನೆಸಿಕೊಳ್ಳತೊಡಗಿದರು. ಆಮೇಲೆ ಕೀರ್ತನೆ ಶುರುವಾಯಿತು. ರಣಜಿತಬಾಬು ಹೇಳಿದರು - "ಬಹಳ ವಿಚಿತ್ರ ಮನುಷ್ಯರು ಅವರು. ಇದೇ ತಾನೆ ಅವರ ಜೊತೆಯಲ್ಲಿ ಶಿಕಾರಿಗೆ ಹೋಗಿದ್ದೆ. ಇವತ್ತು ಬೆಳಗ್ಗೆ ವಾಪಸ್ಸು ಬಂದೆ-"

ಬಲಿದತ್ತ ಕೂಗಿದ - "ನಿಜವಾಗಿಯೂ!" ಅವನ ಕಣ್ಣಿಗೆ ಮುಂಚೆ ವಿಚಿತ್ರವಾಗಿ ಕಂಡಿದ್ದ ರಣಜಿತಬಾಬು ಹೊಸ ಸಾಹೇಬರು ಕಾಲಿಡುವ ಹೊತ್ತಿಗೆ ಅವರ ಜೊತೆ ಶಿಕಾರಿಗೂ ಹೊರಟುಬಿಟ್ಟಿದ್ದಾರೆ.

"ಶಿಕಾರಿ!"-ಶ್ಯಾಮಬಾಬು ಅವಾಕ್ಕಾಗಿ ಕೇಳಿದರು- "ನನಗೇಕೆ ಹೇಳಲಿಲ್ಲ ? ಅದೇ, ನನ್ನ ಉಸ್ತುವಾರಿಯಲ್ಲಿ ಮೈನಿಂಗ್ ಕೆಲಸ ನಡೆಯೋದರಲ್ಲಿದೆಯಲ್ಲ, ಅಲ್ಲಿ ಸೊಗಸಾದ ಅರಣ್ಯವಿದೆ, ಬೇಕಾದಷ್ಟು ಪ್ರಾಣಿಗಳಿವೆ, ನಮ್ಮ ಕೈಯಲ್ಲಿ ಒಳ್ಳೊಳ್ಳೆ ಜನರೂ ಇದ್ದಾರೆ. ಅಯ್ಯೊ ಒಂದು ಮಾತು ಹೇಳಿದ್ದರೆ-"

"ನೀವು ಹೇಳಿದ ಕಡೆಗಲ್ಲ, ಸಾಹೇಬರು ಪಕ್ಕಿ ಶಿಕಾರಿ ಮಾಡಲು ಹೋಗಿದ್ದರು. ಎಲ್ಲೋ ಕೆಲವು ನೀರಹಕ್ಕಿಗಳು, ಉಲ್ಲಂಗಿಗಳು ಸಿಕ್ಕಿದವಷ್ಟೆ. ಅವರ ಉದ್ದೇಶವೂ ಅದೇ ಆಗಿತ್ತು. ಪ್ರಶಾಂತವಾದ ಜಾಗಗಳಲ್ಲಿ ಅಲ್ಲಿ ಇಲ್ಲಿ ಸುಮ್ಮನೆ ಅಡ್ಡಾಡುವುದೇ ಅವರ ನಿಜವಾದ ಉದ್ದೇಶವಾಗಿತ್ತು-"

"ಏನಂದಿರಿ ? ಏನಂದಿರಿ ?" ಎಲ್ಲರ ಕಿವಿಗಳೂ ಅತ್ತಕಡೆಗೇ. ರಣಜಿತಬಾಬು ನಗುತ್ತಾ ಹೇಳಿದರು- "ಸರಿ, ಒಟ್ಟಿನಲ್ಲಿ ಅವರನ್ನು ಹತ್ತಿರದಿಂದ ನೋಡುವ ಅವಕಾಶ ನನಗೆ ನಿಜವಾಗಿಯೂ ಸಿಕ್ಕಿತ್ತು. ಆದರೆ-"

ಬಲಿದತ್ತ ಇನ್ನೂ ಹತ್ತಿರ ಕುರ್ಚಿ ಎಳೆದುಕೊಂಡ. ಬಿಲ್ಲಿನಂತೆ ಮೈ ಬಗ್ಗಿಸಿದ್ದಾನೆ. ಶ್ಯಾಮಬಾಬು ತಮ್ಮ ಅಗಲವಾದ ಮುಖವನ್ನು ಎರಡೂ ಕೈಗಳಿಂದ ಒತ್ತಿಹಿಡಿದುಕೊಂಡಿದ್ದಾರೆ. ಎಲ್ಲರೂ ಆ ಕಡೆಗೇ ಮುಖ ಮಾಡಿದ್ದಾರೆ.

ಹೊಗೆಯುಗುಳುತ್ತಾ ರಣಜಿತಬಾಬು ಹೇಳಿದರು- "ತುಂಬಾ ಹೊಂದಾಣಿಕೆಯವರು, ಮನಸ್ಸು ಬಿಚ್ಚಿ ಮಾತಾಡುತ್ತಾರೆ. ಆದರೆ ಆ ಮಾತುಗಳಲ್ಲೆಲ್ಲ ಇರೋದು

ಒಂದೇ ಮನಸ್ಸು. ಒಂದೇ ಹೃದಯ. ಅದಕ್ಕೆ ಬೆಲೆಕಟ್ಟಲು ಆಗೋದಿಲ್ಲ. ಆಧುನಿಕ ಅಭಿರುಚಿ ಅಂದರೆ ಅವರದು. ಎಲ್ಲರೂ ಆಟವಾಡಲಿ, ಕ್ಲಬ್ ಸೇರಲಿ, ಚಟುವಟಿಕೆಯಿಂದಿರಲಿ, ಖುಷಿಯಾಗಿರಲಿ ಅಂತ ಇಷ್ಟಪಡುತ್ತಾರೆ. ಇಷ್ಟು ದಿನಗಳಾದ ಮೇಲೆ ಕೆಂಪುಪಟ್ಟಿಯ ಸರಪಳಿಯ ಬಿಗಿಯನ್ನು ಅಳ್ಳಕ ಮಾಡುವಂಥ ಮತ್ತು ಸಮಾಜದ ಕೊಳಕನ್ನು ದೂರಮಾಡಿ ಸಮಾಧಾನ ಹೊಂದಬಯಸುವಂಥ ನಿಜವಾದ ಮನುಷ್ಯ ಸಿಕ್ಕಿದ್ದಾರೆ. ಅವರ ಪ್ರೋಗ್ರಾಂ ಏನು ಗೊತ್ತೆ ? ದೊಡ್ಡವರಿಂದ ಹಿಡಿದು ಸಣ್ಣವರವರೆಗೆ ಎಲ್ಲರನ್ನೂ ಪರಿಚಯ ಮಾಡಿಕೊಳ್ಳುವುದು. ಎಲ್ಲರ ಮನೆಗೂ ಒಂದೊಂದು ಸಂಜೆ ಅತಿಥಿಯಾಗಿ ಬರುವುದು. ಹೋ-ಹೋ-ಹೋ-ಹೋ-"

ಎಲ್ಲರೂ ಆ ನಗುವಿನ ಅಲೆಯಲ್ಲಿ ನಗುತ್ತಾ ಜೊತೆಗೂಡಿಸುತ್ತಾರೆ.

ಸಭೆ ಮುಗಿಯಿತು.

ಕಾಗದದ ಮೇಲೆ ಕರಕರ ಅಂತ ಲೇಖನಿ ಓಡುತ್ತಿದೆ. ಸಾಹೇಬರು ಸಭ್ಯರು, ಒಳ್ಳೆಯ ಮನುಷ್ಯರು.

"ರೋಜಾ, ನೀನೂ ಸಿಗರೇಟು ಸೇದು ನೋಡೋಣ-" ಮಿಲಿ ಮುಂದೆ ಸರಿದು ಕೈಹಿಡಿದು ಹೇಳಿದಳು.

-"ನೀನು ನಿಜವಾಗಿಯೂ ಬದಲಾಯಿಸಿದ್ದಿ, ಆದರೂ ಅನೇಕ ವಿಚಾರಗಳಲ್ಲಿ, ತುಂಬ ಹಿಂದೆಯೇ ಉಳಿದಿದ್ದಿ."

ಕಾರು ಹೋಗುತ್ತಲೆ ಇತ್ತು. ಸರೋಜಿನಿ ಮುಗುಳ್ನಗೆ ಬೀರಿ ಹೇಳಿದಳು- "ನಿನ್ನ ಬಾಯಿಗೆ ಬೀಗಗೀಗ ಏನೂ ಇಲ್ಲ ಅಂತ ಕಾಣುತ್ತೆ, ಯಾಕೆ ?"

"ಹೌದು, ನೀನು ಹೇಳೋದು ಅದೇ, 'ಒನ್ ಥಿಂಗ್ ಲೀಡ್ಸ್ ಟು ಅನೆದರ್' ಅಂತ. ನಿನಗಿನ್ನೂ ಗೊತ್ತಿಲ್ಲ. ಒಂದು ವಿಚಾರ ಶುರುವಾಯಿತೆಂದರೆ ಸಾಕು, ಮನಸ್ಸು ಇನ್ನೊಂದು ವಿಚಾರದ ಕಡೆ ಹೊರಳುತ್ತದೆ. ನೀನು ಸಿಗರೇಟು ಒಂದು ದಂ ಎಳೆದುನೋಡು, ಏನಾಗತ್ತೆ ಅಂತ-"

"ಏನಾಗೋದು ? ಬಹುಶಃ ಎರಡು ರೆಕ್ಕೆ ಮೂಡಬಹುದು, ಪುರ್ ಅಂತ ಹಾರಿಹೋಗಬಹುದು. ಇನ್ನೇನಾಗತ್ತೆ ?"

ಸರೋಜಿನಿ ಕಿಲಕಿಲನೆ ನಕ್ಕಳು. ಸ್ಟಿಯರಿಂಗ್ ಹಿಡಿದಿದ್ದ ಡ್ರೈವರ್ ಸಹ ನಕ್ಕುಬಿಟ್ಟ. ಆಮೇಲೆ ಕೆಮ್ಮುವ ನೆಪಮಾಡಿ ನಗೆ ಅಡಗಿಸಿಕೊಳ್ಳತೊಡಗಿದ.

ಅದೇ ಅವನ ಪಾಲಿಗೆ ದುಃಖದ ವಿಚಾರ. ಅವನು ಕಾರಿಗೆ ಡ್ರೈವರ್ ಅಷ್ಟೆ. ಕಾರಿನ ಒಂದು ಅವಯವದಂತಿದ್ದಾನೆ ಅಷ್ಟೆ, ಅದಕ್ಕಿಂತ ಹೆಚ್ಚಿಲ್ಲ. ಅವನಿಗೂ ಕಣ್ಣಿದೆ, ನೋಡುತ್ತಾನೆ. ಕಿವಿಯಿದೆ, ಕೇಳುತ್ತಾನೆ. ಅದಕ್ಕಿಂತ ಹೆಚ್ಚಿಗೆ ಏನೂ ಇಲ್ಲ. ಕಾರಿನ ಒಳಗಿರುವವರ ಕಡೆಗೆ ಬೆನ್ನು, ಮುಂದೆ ನೀಳವಾದ ರಸ್ತೆ ಚಾಚಿದೆ.

"ನೋಡು, ಎಷ್ಟೊಂದು ಥಂಡಿ, ಡ್ರೈವರಿಗೂ ಕೆಮ್ಮು ಬಂದಿದೆ. ಅಕ್ಕ ಆಗಲೇ ತೂಕಡಿಸುತ್ತಿದ್ದಾಳೆ. ಮನಸ್ಸಿನಲ್ಲೇ ಬಿಸಿಯಾಗುತ್ತಿದ್ದಾಳೆ ಅಂತ ಕಾಣತ್ತೆ. ನನ್ನನ್ನು ನೋಡು, ಪ್ರಪಂಚ ಮಲಗಿರೋವಾಗ ನಾವು ಎದ್ದಿರೋದು, ಬೆಚ್ಚಗೆ

ಮಾಡಿಕೊಳ್ಳದಿದ್ದರೆ ಕೆಲಸ ಹೇಗೆ ಮಾಡೋದು ? ತೂಗೋ, ಸಿಗರೇಟು ಹಚ್ಚು."

ಒಂದೇ ದಾರಿಯಲ್ಲಿ ಕಾರು ನಡೆಸುತ್ತಿದ್ದಾನೆ ಡ್ರೈವರ್ - ಹಾರ್ನ್-ಕ್ಲಚ್-ಸ್ಟಿಯರಿಂಗ್-ಗೇರ್, ಜೊತೆಗೆ ನೀಳವಾದ ರಸ್ತೆ. ಐದು ವರ್ಷಗಳಿಂದ ತಲೆಮಾರಿಕೊಂಡಿದ್ದಾನೆ. ಬರೀ ಹೊಟ್ಟೆ ಪಾಡಿನ ಬವಣೆ. ಉಳಿದಿದ್ದೆಲ್ಲ ಮನಸ್ಸಿನ ಯಾವುದೋ ಮೂಲೆಯಲ್ಲಿ ಗುನುಗುಟ್ಟುತ್ತಿರಬಹುದು. ಅವನಲ್ಲಿ ಮನುಷ್ಯತ್ವ ಎಚ್ಚರವಾಗಿದೆ. ಅದು ಏಕಾಂತದ ವಿಚಾರ. ಗುನುಗುಟ್ಟುತ್ತಾ ಮುಂದೆ ಹೆಜ್ಜೆಯಿಡುತ್ತಾನೆ. ಯಾರ ಹತ್ತಿರವೂ ಬಾಯಿ ಬಿಡೋದಿಲ್ಲ ಅಂತ ಗೆಳೆಯರ ಹತ್ತಿರ ಆಣೆ ಪ್ರಮಾಣ ಮಾಡಿಸಿಕೊಂಡು ಗುಟ್ಟಾಗಿ ಎಲ್ಲಾ ಬಾಯಿಬಿಡುತ್ತಾನೆ. ಎಲ್ಲ ಕಡೆ ತುತ್ತೂರಿ ಊದಿದಂತಾಗುತ್ತದೆ.

ಮಿಲಿ ಕಿಲಕಿಲ ಅಂತ ನಗುತ್ತಾಳೆ. ನಕ್ಕಾಗಲೆಲ್ಲ ಅವಳು ಎಷ್ಟು ಅಸ್ತವ್ಯಸ್ತಳಾಗುತ್ತಾಳೆಂದರೆ, ಮೈಮೇಲೆ ಅವಳಿಗೆ ನಿಗಾ ಇರುವುದಿಲ್ಲ. ಡ್ರೈವರನ ಕಣ್ಣುಗಳು ರಸ್ತೆ ನೋಡುತ್ತಿರುತ್ತವೆ, ಆದರೆ ಮನಸ್ಸು ಅದನ್ನೇ ಮೆಲುಕು ಹಾಕುತ್ತಿರುತ್ತದೆ.

ನೀರಿನಂತೆ ನೆನಪು ಉಕ್ಕಿಬರುತ್ತದೆ. ಮನಸ್ಸಿಗೆ ಖುಷಿಯಾದಾಗ ಪ್ರವಾಹದಂತೆ ನೊರೆಗಟ್ಟಿ ಮೇಲೇರಿ ಬರುತ್ತದೆ, ಆ ಗಳಿಗೆ, ಎಷ್ಟೊಂದು ತನ್ನದೇ ಆಗಿರುತ್ತದೆ.

ಇದಾದ ಮೇಲೆ, ಪ್ರವಾಹ ಇಳಿಯುತ್ತದೆ, ಮತ್ತೆ ಹಿಂದಿರುಗಿ ನೋಡುವುದಿಲ್ಲ.

ನಿಟ್ಟುಸಿರುಬಿಟ್ಟು ಡ್ರೈವರ್ ರಸ್ತೆಕಡೆ ಮುಖ ಮಾಡಿಕೊಂಡು ಕಾರು ನಡೆಸುತ್ತಿದ್ದ. ಬದುಕು ಇದೇ ರೀತಿ ಮಾಸಲು ಮಾಸಲಾಗಿರುತ್ತದೆ, ಇದೇ ರೀತಿ ನೀರಸ - ಏನೋ ನಡೆದುಕೊಂಡು ಹೋಗುತ್ತಿರುತ್ತದೆ.

"ರೋಜ, ಕೇಳಿಲ್ಲಿ"- ಮಿಲಿ ಸರೋಜಿನಿಗೆ ಹೇಳಿದಳು, "ನಿನ್ನ ಹೆಸರು ಸರೋಜ. ಯಾರಾದರೂ ನಿನ್ನ ಹೆಸರು ಹಿಡಿದು ಕರೆದಾಗ ಸಾರೋಸ್ ಅಂತ ಕೇಳಿಸುತ್ತೆ. ಇಂಗ್ಲಿಷಿನಲ್ಲಿ ಹಾಗಂದರೆ ದುಃಖ ಅಂತ ಅರ್ಥ, ಅದಕ್ಕೇ 'ಸ' ಅನ್ನೋ ಅಕ್ಷರ ಕಿತ್ತುಹಾಕಿಬಿಟ್ಟೆ ನೋಡು. ಉಳಿದಿದ್ದು 'ರೋಜ್' ಅಂದರೆ ಗುಲಾಬಿ ಅರಳಿತು. ಏನು ಗಂಟು ಹೋಗುತ್ತದೆ ? ಇದೇ ರೀತಿ ಎಲ್ಲ ಸಂಸ್ಕಾರಗಳನ್ನೂ ಕತ್ತರಿಸಿ ಬಿಸಾಡುತ್ತಿರಬೇಕು. ಎಲ್ಲ ಸಂಪ್ರದಾಯ ಪರಂಪರೆ ದೂರವಾಗಬೇಕು, ಆಗ ನಿಜವಾಗಿಯೂ ಗುಲಾಬಿ ಅರಳುತ್ತದೆ. ಇಷ್ಟಾದರೂ ನಿನಗೆ ಇನ್ನೂ ನಾಚಿಕೆ, ಸಂಕೋಚ, ಅನುಮಾನದ ಸ್ವಭಾವ! ನೀನೊಂದು ರತ್ನವಿದ್ದಂತೆ. ಚೆನ್ನಾಗಿ ಸಿಂಗರಿಸಿಕೊಂಡರೆ ಅದೆಷ್ಟು ಚೆನ್ನಾಗಿ ಕಾಣುತ್ತಿ. ಈಗ ನೋಡು, ನೀನು ಸಿಗರೇಟು ಸೇದೋದಕ್ಕೆ ಒಪ್ಪಿಕೊಳ್ಳಲ್ಲ, ಡ್ಯಾನ್ಸ್ ಮಾಡೋದಕ್ಕೂ ಒಪ್ಪಿಕೊಳ್ಳೋದಿಲ್ಲ. ನಿನ್ನ ಈ ಫಿಗರ್, ಈ ಕಟ್, ಎಷ್ಟು ಚೆನ್ನಾಗಿ ಡ್ಯಾನ್ಸ್ ಮಾಡಬಹುದು ಗೊತ್ತಾ ?"

"ಏನು ಪ್ರಯೋಜನ ?"

"ಚೆನ್ನಾಗಿ ಕಾಣೋದರಿಂದ ಏನು ಪ್ರಯೋಜನ ಅಂದರೆ ? ಅದಕ್ಕೆ ತನ್ನದೇ ಆದ ಪ್ರಯೋಜನವಿದೆ. ಲಾಭ ಸೌಂದರ್ಯದ್ದು. ನಿನ್ನ ಒಳಗಡೆ ಏನಿದೆ ? ಅದು ಅರಳುವ ಹಾಗಾಗುವುದಿದ್ದಿದ್ದರೆ, ಆಗ ನಿನಗೇ ಚೆನ್ನಾಗಿ ಗೊತ್ತಾಗುತ್ತಿತ್ತು. ಪರಿಪೂರ್ಣ ಬದುಕು ಅಂದರೇನು, ಒಂದು ಸೊಗಸಾದ ಕಾದಂಬರಿಯಂತೆ ನೀನು ಹೊರಗೆ ಬರುತ್ತಿ,

ಆರ್ಡರ್ದಾರಿ ಬಂದ ಕೂಡಲೇ ಮತ್ತೆ ಹಿಂದೇಟು ಹಾಕುತ್ತಿ. ನಾವು ಹೊಸ ಪೀಳಿಗೆಯವರು, ಬದುಕು ದುಃಖದಿಂದ ಕೂಡಿದ್ದು, ಅನಿಶ್ಚಿತವಾದದ್ದು, ಆದ್ದರಿಂದಲೇ ನಾವು ನಮ್ಮ ಹಳೆಯ ಪದ್ಧತಿಗಳನ್ನು ಸಂಸ್ಕಾರಗಳನ್ನೂ ಒಪ್ಪಲು ತಯಾರಿಲ್ಲ. ನಮ್ಮ ಪಾಲಿಗಿರೋದು ಈ ಕ್ಷಣ, ಎಷ್ಟು ಸಾಧ್ಯವೊ ಅಷ್ಟು ಸುಖ ಅನುಭವಿಸೋಣ. ಈ ಕ್ಷಣ ಹೊರಟುಹೋಯಿತೆಂದರೆ ಬಹುಶಃ ಮತ್ತೆಂದೂ ಹಿಂದಕ್ಕೆ ಬರಲ್ಲ".

ಮಿಲಿಯ ಫಿಲಾಸಫಿ ಏನೆಂದು ಸರೋಜಿನಿಯ ತಲೆಗೆ ಹತ್ತಲಿಲ್ಲ. ಆದರೂ ಸ್ವಲ್ಪ ಕೈಗೆ ಸಿಕ್ಕಿದೆ, ಮುಟ್ಟಿದ್ದಾಳೆ, ಮುಟ್ಟಿದಾಗ ಮೆತ್ತನೆಯ ಅನುಭವವಾಗತೊಡಗಿದೆ. ಒದ್ದೆ ಒದ್ದೆಯಾಗಿ ಬೇರೆಯವರ ಆಳಲು ತನ್ನನ್ನು ಬಂದು ಮುಟ್ಟಿದಂತಾಗಿದೆ. ಈ ಸ್ಪರ್ಶವಾದೊಡನೆಯ ಸರೋಜಿನಿಯ ಮನಸ್ಸಿನಲ್ಲಿ ಪ್ರಶ್ನೆಯೊಂದು ಇಣಕಿತು. ಕೇಳಿದಳು-

"ಅದು ಸರಿ, ನೀನು ಮದುವೆ ಏಕೆ ಮಾಡಿಕೊಳ್ಳಲಿಲ್ಲ ?"

ನಗುನಗುತ್ತ ಮಾತು ತಿರುಗಿಸಿ ಮಿಲಿ ಕೇಳಿದಳು- "ಹಾಗಾದರ ಹೇಳು, ನೀನೇಕೆ ಮದುವೆ ಮಾಡಿಕೊಂಡೆ-?"

"ಇಲ್ಲ, ನಿಜಹೇಳಬೇಕೆಂದರೆ-" ಸರೋಜಿನಿ ಹೇಳಿದಳು, "ನೀವಿಬ್ಬರೂ ನಿಜವಾಗಿಯೂ ಎರಡು ಮೃದುವಾದ ಹೂವುಗಳಂತಿದ್ದೀರಿ. ಅಯ್ಯೋ, ನನಗೆ ಸರಿಯಾಗಿ ಹೇಳೋದಕ್ಕೂ ಬರೋದಿಲ್ಲ -ನೀವು- ಅಂದರೆ ಎಲ್ಲವನ್ನೂ ಇಷ್ಟಪಡುತ್ತೀರಿ, ಅದೆಷ್ಟೊಂದು ಯೋಚಿಸುತ್ತೀರಿ. ನಿಮ್ಮ ಮನಸ್ಸು ಎಷ್ಟೊಂದು ದೊಡ್ಡದು. ನೀವಿಬ್ಬರೂ ಮದುವೆ ಯಾಕೆ ಮಾಡಿಕೊಂಡಿಲ್ಲ ? ನಿಮ್ಮಂಥವರಿಗೆ ಗಂಡು ಸಿಗೋದು ಕಷ್ಟವೆ ? ಗಂಡ, ಮನೆ-ಮಠ, ಮಕ್ಕಳು ಇವೆಲ್ಲ ಚೆನ್ನಾಗಿರುತ್ತೆ ಅಂತ ನಿಮಗೆ ಅನಿಸೋದಿಲ್ಲವೆ ?"

ಮಿಲಿ ನಗು ತಡೆದುಕೊಂಡಳು. ಎಲ್ಲರೂ ಇದ್ದಿದ್ದರೆ ಅವರೆದುರಿಗೆ ಈ ಪ್ರಶ್ನೆ ಅವಳ ಪಾಲಿಗೆ ತಣ್ಣನೆಯ ಕತ್ತಿಯಿಂದ ಚುಚ್ಚಿದಂತಾಗುತ್ತಿತ್ತು! ನಗುನಗುತ್ತಾ ಅವಳು ಸರೋಜಿನಿಯ ಕಡೆ ಬಾಗಿದಳು. ಅದೇ ನಗು ಮುಖದಿಂದ ಮಿಲಿ ಅಳೆದು ಸುರಿದು ಮಾತಾಡಿದಳು-

"ನಿನಗೊಂದು ಕತೆ ಗೊತ್ತಾ ? ಹೇಳ್ತೀನಿ ಕೇಳು. ಅಯ್ಯೋ, ಕತೆ ಏನಂತ ಬಿಡು. ಯಾರು ಹೆಚ್ಚು ದೂರ ಓಡುತ್ತಾರೊ, ಅವರು ಅಷ್ಟೇ ಸಾರಿ ಮುಗ್ಗರಿಸುತ್ತಾರೆ. ಇಷ್ಟಾದರೂ ಗೊತ್ತಲ್ಲ. ಯಾರು ಹೆಚ್ಚಿಗೆ ಬೇಡುತ್ತಾರೊ, ಅವರಿಗೆ ಅಷ್ಟೇ ತಡವಾಗಿ ಅದು ದೊರೆಯುತ್ತದೆ."

"ಈ ಮಾತನ್ನು ನಾವು ತಾತ ಮುತ್ತಾತಂದಿರ ಕಾಲದಿಂದಲೂ ಕೇಳುತ್ತಾ ಬಂದಿದ್ದೇವೆ. ಆದರೂ ನಾವು ಈ ಪರಂಪರಾಗತವಾದ ದಾರಿಯಲ್ಲಿ ಏಕಿದ್ದೇವೆ ? ಹೂವು ಕೊಯ್ಯೋಣ ಅಂತ ಕೈ ಮುಂದೆ ಚಾಚಿದರೆ ಸಿಗೋದು ಮುಳ್ಳೇ, ಬೀಳೋದು ಏಟೇ. ಪ್ರಪಂಚದಲ್ಲಿ ಎಲ್ಲರೂ ಮುಳ್ಳನ್ನೋ ಏಟನ್ನೋ ಇಷ್ಟಪಡುತ್ತಾರೆ ಅಂತ ತಿಳಿದುಕೊಂಡಿದ್ದೀಯಾ ? ಯಾರಿಗಾದರೂ ಇಷ್ಟವಾಗಲಿಲ್ಲ ಅಂದರೆ ?"

"ಹಾಗಾದರೆ ಹೂವು ಚೆನ್ನಾಗಿರೋದಿಲ್ಲವೆ ?"

"ಇಲ್ಲ ಅಂತ ಯಾರು ಹೇಳಿದರು ? ಯಾರಿಗೆ ಗೊತ್ತಿಲ್ಲವೊ, ಅವರು ಸ್ವಲ್ಪ ಗಾಯ ಮಾಡಿಕೊಳ್ಳುತ್ತಾರೆ. ಆಮೇಲೆ ಹೂವು ಸಿಗುತ್ತದೆ. ಅಲ್ಲಿಯವರೆಗೆ ಏಟು ತಿಂದು ಮೈಕೈ ನೋಯಿಸಿಕೊಳ್ಳುತ್ತಿರಬೇಕು. ಯಾರಿಗೆ ಗೊತ್ತೊ ಅವರು ಮೆಲ್ಲಗೆ ಹೂವನ್ನು ಮೂಗಿನ ಬಳಿ ಹಿಡಿದು ವಾಸನೆ ನೋಡುತ್ತಾರೆ. ನಾನು ನಿನ್ನ ವಾಸನೆ ನೋಡುತ್ತಿದ್ದೇನಲ್ಲ, ಹಾಗೇ. ಅಬ್ಬಬ್ಬಾ, ಎಷ್ಟು ಸೊಗಸಾದ ವಾಸನೆ ಬರುತ್ತಿದೆ ನಿನ್ನಲ್ಲಿ ಮಿಸ್ಟರ್ ದಾಸ್ ಈಗೇನಾದರೂ ಇಲ್ಲಿದ್ದಿದ್ದರೆ, ಅವರ ಮೇಲೆ ನನಗೆ ಹೊಟ್ಟೆಕಿಚ್ಚು ಬಂದುಬಿಡುತ್ತಿತ್ತು."

"ಥೂ", ಮಾತನ್ನು ಮರೆಸುತ್ತಾ ಸರೋಜಿನಿ ಹೇಳಿದಳು, "ಮನೆಮಠ ಅಂದರೆ ಯಾರಿಗೆ ತಾನೆ ಇಷ್ಟವಾಗಲ್ಲ ?"

"ಯಾರಿಗೆ ನಂಬಿಕೆ ಇದೆಯೊ ಅವರಿಗೆ ಇಷ್ಟವಾಗಬಹುದು. ಈ ಕಾಲದಲ್ಲಿ ಯಾರಿಗೆ ತಾನೆ ನಂಬಿಕೆ ಇರುತ್ತೆ ? ಯಾರಿಗೆ ಗೊತ್ತಿಲ್ಲವೊ ಅವನು ಗವಾರ, ಪೆದ್ದ, ಇದು ಕಲಿಯುಗ ಅಂತ ಮರೆತೇ ಬಿಟ್ಟೆಯಾ ? ಈ ಕಾಲದಲ್ಲಿ ಸತ್ಯ, ನಂಬಿಕೆ ಏಂಥಾದ್ದೂ ಇಲ್ಲ-"

ಸರೋಜಿನಿ ಎರಡು ಕೈಗಳನ್ನೂ ಮಿಲಿಯ ಕುತ್ತಿಗೆಗೆ ಹಾಕಿ ಹೇಳಿದಳು- "ಸರಿ, ಇರಲಿ ಬಿಡು, ನಾನು ಇನ್ನೇನೂ ಹೆಚ್ಚಿಗೆ ಕೇಳೋದಿಲ್ಲ." ಮಿಲಿಯ ಮಾತುಗಳು ಅವಳಿಗೆ ಎಡಬಿಡಂಗಿಯಾಗಿ ಕಾಣುತ್ತವೆ, ಆದರೂ ಅವಳು ಮಾತಾಡುವ ಭಂಗಿ, ಅವಳ ಧ್ವನಿ, ಮಾತಾಡಬೇಕಾದರೆ ಅವಳ ನೋಟ, ಮುಖಭಾವ ಎಲ್ಲ ಸೇರಿ ಒಂದು ರೀತಿಯ ವಿಚಿತ್ರವಾದ ಕರುಣೆಯ ಭಾವನೆಯನ್ನು ಹುಟ್ಟಿಸುತ್ತವೆ. ಕ್ಷಣಕ್ಷಣಕ್ಕೂ ಹೊಸ ರೂಪ, ಈ ಮಿಲಿ ಈ ಗಳಿಗೆಯವಳಲ್ಲ, ಹಿಂದಿನ ದಿನಗಳ ಯಾವುದೋ ಆರ್ತನಾದ ಅಂತ ಅನಿಸುತ್ತದೆ.

"ಇರಲಿ ಬಿಡು, ಮಿಲಿ. ನನಗೆ ಇನ್ನೂ ಹೆಚ್ಚಿಗೆ ಕೇಳೋದಕ್ಕೂ ಬರಲ್ಲ. ನೀನೇನೋ ವಿದ್ಯಾವಂತೆ, ಅದೇನು ಹೇಳುತ್ತೀಯಾ ನನಗಂತೂ ಅರ್ಥವಾಗಲ್ಲ." ಆದರೆ ಕಣ್ಣು ಮಿಟುಕಿಸುವಷ್ಟರಲ್ಲಿ ಮಿಲಿ ಹೇಗೆ ಬದಲಾಯಿಸಿ ಹೋದಳು. ಅವಳ ಬಾಯಿಂದ ಜ್ವಾಲಾಮುಖಿಯು ಹೊಟ್ಟೆಯಲ್ಲಿ ಅಡಗಿರುವ ಲಾವಾರಸದಂತೆ ಮಾತು ಹೊರಬೀಳುತ್ತದೆ, ಆದರೆ ಅರ್ಥವಾಗುವುದಿಲ್ಲ, ಆದರೂ ನೋವು ತುಂಬಿದ ಖಾರವಾದ ಮಾತುಗಳು. ಮಿಲಿ ಮಾತಾಡುತ್ತಲೇ ಇದ್ದಾಳೆ-

"ನಮ್ಮ ಸಮಾಜದ ಹೊಣೆಗಾರಿಕೆಯೆಲ್ಲ ಬರಿ ತೊಗೊಳ್ಳುವುದು ಕೊಡುವುದು ಇಷ್ಟರಲ್ಲೆ ಇದೆ. ಅದಕ್ಕಾಗಿ ಇಷ್ಟೊಂದು ಆಟ ಹೂಡುವುದೇಕೆ ? ರಸ್ತೆಯಲ್ಲಿ ಯಾರಾದರೂ ಸಿಕ್ಕಿ ಅವರಿಗೆ ನೀವು ಮರ್ಯಾದೆ ಕೊಟ್ಟರೆ ಅವರು ಒಂದೆರಡು ಮಾತಾಡೋದಿಲ್ಲವೆ ? ಯಾವ ವಿಚಾರಕ್ಕಾದರೂ ತಲೆಬುಡ ಇಲ್ಲ ಅಂದ ಮಾತ್ರಕ್ಕೆ ಮನುಷ್ಯ ಅಳುತ್ತಾ ಕೂಡುತ್ತಾನೆಯೆ ? ಮೊದಲು ಸಮಾಜ ಆರೋಗ್ಯವಾಗಿರಬೇಕು, ಒಂದು ಕೆಲಸ ಆದಮೇಲೆ ಇನ್ನೊಂದು ಕೆಲಸ ಆಗುತ್ತೆ ಅಂತ ನಂಬಿಕೆ ಇರಬೇಕು. ಹಾಗೆಯೆ ಕಾಲ ಬದಲಾಯಿಸಿದೆ, ಋತುಗಳು ಬದಲಾಯಿಸುತ್ತದಲ್ಲಾ ಹಾಗೇ. ಜನ ಮನೆಯಲ್ಲಿ ಮಲಗಿರುತ್ತಾರೆ, ಅವರ ಪಾಲಿಗೆ ಗಂಟೆ ಬಾರಿಸುವುದಿಲ್ಲ, ಆದರೆ ಒಂದು

ದಿನ ಸುಡುಬಿಸಿಲು, ಭಯಂಕರ ಸೆಖೆ. ಒಂದಾದ ಮೇಲೊಂದು ಯುದ್ಧ ನಡೆಯಿತು. ನಿನ್ನೆ ವೈಭವದಿಂದ ಕಂಗೊಳಿಸುತ್ತಿದ್ದ ನಗರ ಇವತ್ತು ಬೂದಿಯ ರಾಶಿ. ಹಾಗೆಯೆ ಹಳೆಯ ಸಮಾಜ, ಹಳೆಯ ದೇವಸ್ಥಾನಗಳು ನೆಲಸಮವಾದವು. ಅಲ್ಲಿ ಇಲ್ಲಿ ಅಂಡಲೆಯುತ್ತಿರುವ ಜನ ಮಾತ್ರ ಕುದಿಯುತ್ತಿದ್ದಾರೆ. ಇದು ಕ್ಷಾಮವಲ್ಲ, ಬರಗಾಲಕ್ಕಿಂತಲೂ ಭಯಂಕರವಾದುದು. ಬರಗಾಲ ಕೇವಲ ಕೆಲವು ದಿನಗಳ ಮಟ್ಟಿಗೆ ಇರುತ್ತದೆ. ಋತು ಬದಲಾಯಿಸುತ್ತದೆ, ಕ್ಷಾಮ ಇಲ್ಲವಾಗುತ್ತದೆ ಅಂತ ಎಲ್ಲರಿಗೂ ಗೊತ್ತು, ಆದರೆ ಇದು, ಇದು ಎಂದಾದರೂ ಅಳಿಯುವುದುಂಟೆ ? ಈ ಯುಗ ಬದಲಾಯಿಸಿದರೆ ನೀನೇನು ಮಾಡುತ್ತಿ ? ಭೂಕಂಪವಾದರೆ ನೀನೇನು ಮಾಡಬಲ್ಲೆ ? ಕಾಲಿಟ್ಟಿರುವ ನೆಲವೇ ಅಲುಗಾಡತೊಡಗಿದರೆ ಆಗೇನು ಮಾಡುತ್ತಿ ?"

"ಇದೆಲ್ಲ ತುಂಬ ದೊಡ್ಡ ದೊಡ್ಡ ಮಾತಾಯ್ತು, ಮಿಲಿ. ಅರ್ಥ ಮಾಡಿಕೊಳ್ಳೋಕೆ ನಾನು ಓದಿರೋದೇನು ?"

"ಯಾಕೆ ಅರ್ಥವಾಗಲ್ಲ ? ಕಣ್ಣಿಂದ ನೋಡುತ್ತಿದ್ದರೂ ಅರ್ಥಮಾಡಿಕೊಳ್ಳದೆ ಕಣ್ಣು ಮುಚ್ಚಿಕೊಳ್ತೀಯ ? ಸಾವಿರಾರು ವರ್ಷಗಳ ಹಿಂದೆ ಜನಗಳಿಗೆ ರೀತಿನೀತಿ ಅಂತ ಎಲ್ಲಿರುತ್ತಿತ್ತು ? ಮನೆಮಠ ಕಟ್ಟಿಕೊಳ್ಳುತ್ತಿದ್ದರು, ಮಕ್ಕಳಿಗೆ ಮೊಮ್ಮಕ್ಕಳಿಗೆ ಆಸ್ತಿಪಾಸ್ತಿ ಬಿಟ್ಟು ಹೋಗುತ್ತಿದ್ದರು. ಸರಿಯಾಗಿ ಹೇಳಬೇಕೆಂದರೆ ಮಣ್ಣಲ್ಲಿ ಅವರ ಬೇರುಗಳೆ ಕಂಡುಬರಲ್ಲ. ಇಷ್ಟರ ಮೇಲೆ ಅವರು ಇದ್ದದ್ದು ಕಸಕಡ್ಡಿ ಹಾಗೆ, ಯಾವ ಕಡೆ ಗಾಳಿ ಬೀಸಿದರೆ ಆ ಕಡೆ ಹಾರಿ ಹೋಗುವ ಹಾಗೆ. ಈ ಕಾಲದ ಹಣೆಬರಹ ಹೀಗೆ. ಮನೆಬಾಗಿಲು ಅಂತ ಇಲ್ಲ, ಯಾರ ಮೇಲೂ ನಂಬಿಕೆ ಇಲ್ಲ, ರಸ್ತೇಲಿ ಯಾರಾದರೂ ಸ್ನೇಹಿತರು ನಂಬಿಕೆಯವರು ಅಂತ ಸಿಕ್ಕಿದರೂ ಹಾಲಲ್ಲಿ ವಿಷ ಬೆರೆಸೋ ಜನ. ಇವತ್ತು ಇರ್ತಿ ನೀನು, ನಾಳೆ ಇರಲ್ಲ-"

"ನೀನು ಅದೆಷ್ಟೊಂದು ಯೋಚನೆ ಮಾಡ್ತಿ, ಮಿಲಿ. ಪಟಪಟ ಅಂತ ಅರಳು ಹುರಿದಂತೆ ಮಾತಾಡ್ತೀಯ, ನಗ್ತಾ ಇರ್ತೀಯ. ಇಷ್ಟೊಂದು ಯೋಚನೆಗಳೇನಾದರೂ ನನ್ನ ಹೊಟ್ಟೆಯಲ್ಲಿ ಸೇರಿದ್ದರೆ ಎರಡು ತುತ್ತು ಅನ್ನ ತಿನ್ನೋದೂ ಕಷ್ಟವಾಗಿ ಬಿಡುತ್ತಿತ್ತು. ನಿಜವಾಗಿಯೂ ಇಷ್ಟೊಂದು ಯೋಚನೆ ಮಾಡಿದ್ರೆ, ಮನುಷ್ಯನಿಗೆ ತನ್ನ ಮೇಲೇ ಜುಗುಪ್ಸೆ ಬಂದು ಬಿಡುತ್ತೆ. ನಿಜ ಹೇಳಬೇಕೆಂದರೆ, ಪ್ರಪಂಚದಲ್ಲಿ ಸಂಕಟ ಪಡೋರಿದ್ದಾರೆ, ಬಡವರಿದ್ದಾರೆ, ಅವರ ವಿಚಾರವನ್ನೇ ಯಾವಾಗಲೂ ಯೋಚಿಸೋದು, ಅವರ ಜೊತೆ ಸೇರೋದಕ್ಕೆ ಆಗಲಿಲ್ಲ ಅಂದರೆ ಕಾಡಿಗೆ ಹೋಗಿ ಸನ್ಯಾಸ ತೊಗೊಳ್ಳೋದು. ನಮ್ಮ ಮಿಲಿದೇವಿಯೂ ಸನ್ಯಾಸಿನಿ ಆಗ್ತಾಳೆ! ಒಬ್ಬ ಸನ್ಯಾಸಿ ಜೊತೆಗೆ ಸಿಕ್ಕಾಗ ತಾನೇ. ಅಯ್ಯೋ ಬಿಡು! ಇನ್ನೇನಾದರೂ ಒಳ್ಳೇ ಮಾತಾಡು-"

"ಅದೇ ನಿನ್ನ ತಪ್ಪು ಅನ್ನೋದು. ಸನ್ಯಾಸಿ ಯಾಕಾಗಬೇಕು ? ಯಾರಿಗಾದರೂ ದುಃಖವಾದರೆ ಪ್ರಪಂಚ ಬಿಟ್ಟು ಹೋಗೋಣ ಅಂತ ಅನಿಸಬಹುದು, ಆದರೆ ಯಾರಿಗೆ ಯಾವಾಗಲೂ ದುಃಖ ಆಗ್ತಾ ಇರುತ್ತೆ, ಅವರು ಆ ದುಃಖವನ್ನೇ ಸುಖ ಅಂತ ಭಾವಿಸಿಕೊಂಡು ಯಾವ ರೀತಿ ಬದುಕೋದು ಅಂತ ಯೋಚನೆ ಮಾಡ್ತಾರೆ, ನಾವು ಸೊಪ್ಪುಸೆದೆ ತಿಂದುಕೊಂಡು ಸನ್ಯಾಸಿಗಳಾಗುವುದಕ್ಕೇನು ಈ ಪ್ರಪಂಚದಲ್ಲಿ

ಹುಟ್ಟಿರೋದು ? ಖುಷಿಯಾಗಿ ಜುಂ ಅಂತ ಇರೋದಕ್ಕಲ್ಲವಾ ? ನಮಗೆ ಎಷ್ಟು ಸಾಧ್ಯವೋ ಅಷ್ಟು ಖುಷಿಯಾಗಿರೋಣ."

"ಸಾಕು ಹಾಗಾದರೆ, ನಾನು ಮತ್ತೆ ಅದನ್ನೇ ಹೇಳ್ತೀನಿ. ಮದುವೆ ಮಾಡಿಕೊಂಡು ಬಿಡು. ನಾನು ರಣಜಿತ ಬಾಬುಗಳಿಗೆ ಹೇಳ್ತೀನಿ ಬೇಕಾದರೆ". ಆ ಹೆಸರು ನಾಲಿಗೆಯ ತುದಿಯಲ್ಲಿ ಬರುತ್ತಿದ್ದ ಹಾಗೆಯೆ ಸರೋಜಿನಿಯ ಮುಖವೆಲ್ಲ ಕೆಂಪಾಯಿತು. ಮುಖ ಆ ಕಡೆ ತಿರುಗಿಸಿ ಹೇಳಿದಳು - "ಅಬ್ಬಬ್ಬಾ, ನಮ್ಮ ನೀಲಿಯುವರ ನಿದ್ದೆ ಹೇಗೆ ಸಾಗಿದೆ ? ಆರಾಮವಾಗಿ ನಿದ್ದೆ ಹೊಡೀತಿರೊ ಹಾಗಿದೆಯಲ್ಲ".

ಮಿಲಿ ಹೇಳಿದಳು-"ಈ ಕಾಲಕ್ಕೆ ಇಂಥ ಆರಾಮವೇ ಎಲ್ಲರಿಗೂ ಬೇಕು. ಯಾವಾಗ ಅವಕಾಶವಾದರೂ ಸರಿ, ಆರಾಮವಾಗಿರಬೇಕು. ಮೇಲುಗಡೆಯಿಂದ ಆಟಂಬಾಂಬ್, ಕೆಳಗಡೆ ಯುದ್ಧ, ಬರಗಾಲ. ನಿಜವಾಗಿಯೂ ಆರಾಮವಾಗಿ ಇರೋದಕ್ಕೆ ಆಗುತ್ತದೆಯೊ ಇಲ್ಲವೊ... ಆರಾಮವಾಗಿ ಇದ್ದುಬಿಡು. ಮನೆ ಕಟ್ತೀನಿ, ವಾಸಮಾಡ್ತೀನಿ ಅಂತ ಯೋಚನೆ ಮಾಡ್ತಾ ಇದ್ದರೆ, ಆ ಚಿಂತೆಯಲ್ಲೇ ಎಲ್ಲ ಹಾಳಾಗಿ ಹೋಗುತ್ತೆ. ಈ ಕಾಲಕ್ಕೆ ತಕ್ಕ ಹಾಗೆ ನಾವು ಈ ಕ್ಷಣದಲ್ಲಿ ಹೇಗಪ್ಪಾ ಏನೋ ಜನ. ಈ ಕಾಲದಲ್ಲಿ ಹುಟ್ಟಿದ ನಾವು ಈ ಕ್ಷಣದ ಉಪಾಸನೆ ಮಾಡುವವರು. ಗರಿಗೆದರಿ ಮನಸ್ಸಿಗೆ ಬಂದಷ್ಟು ಖುಷಿಯಾಗಿ ಹಾರಾಡಬೇಕು. ಈ ಕಾಲದಲ್ಲಿ ನಿಶ್ಚಿತವಾದದ್ದು ಅಂತ ಯಾವುದೂ ಇಲ್ಲ. ಈ ಕಾಲವನ್ನು ಗಜಕಡ್ಡಿಯಿಂದ ಅಳೆಯುವ ಅಗತ್ಯವೇನಿಲ್ಲ."

ಸರೋಜಿನಿ ಗಪ್ಪುಚಿಪ್ಪಾಗಿ ಕೇಳುತ್ತಾ ಕುಳಿತಿದ್ದಾಳೆ - "ಆಮೇಲೆ ? ಮಾತುಮುಗಿಸಿಬಿಡು, ಏನೂ ಬಾಕಿ ಇಡೋದು ಬೇಡ."

"ಹೇಳ್ತೀನಿ, ಅದೇ ಮಾತು. ಮುಂದೆ ನಡಿ, ಕಾಲಕ್ಕೆ ತಕ್ಕಹಾಗೆ ಹೆಜ್ಜೆ ಹಾಕು. ಎಲ್ಲರೂ ಒಂದು ವೇಳೆ ಸತ್ತು ಹೋದರು ಅಂತ ಇಟ್ಟುಕೊಳ್ಳೋಣ. ಅಂಥ ಸಮಯದಲ್ಲಿ ಒಬ್ಬಳೇ ಬದುಕೋದಕ್ಕೆ ನಿನಗೇನು ಅಧಿಕಾರ ? ಎಲ್ಲರೂ ಉರಿದು ಬೂದಿಯಾಗೋದಾದರೆ ನೀನಿದ್ದು ಮಾಡೋದೇನು ? ಹೊಸಬಳಾಗು, ಲಂಗರು ಮೇಲೆತ್ತು."

"ಆಮೇಲೆ ?"

"ಕೇಳುಗರ ಅಪಾರ ಧೈರ್ಯ ಮತ್ತು ಸಹನೆಗಾಗಿ ನನ್ನ ವಂದನೆಗಳು. ಆದರೆ ನಾನು ಹೇಳೋದಿಷ್ಟು ನಿಮ್ಮ ಧೈರ್ಯ ಸಹ ಈ ಕಾಲಕ್ಕೆ ತಕ್ಕದ್ದಲ್ಲ. ಈ ಕಾಲಕ್ಕೆ ಧೈರ್ಯ ಬೇಕಿಲ್ಲ, ಅಂಜುಕುಳಿತನವನ್ನೇ ಎಲ್ಲರೂ ಇಷ್ಟಪಡುತ್ತಾರೆ. ಪುಸ್ತಕ ಓದೋದಾದರೆ ಹಾರಿಸಿಕೊಂಡು ಓದುತ್ತಾ ಹೋಗಿ, ಬೈಯ್ಯೋದು ಇದ್ದೇ ಇದೆ. ಭಾಷಣ ಕೇಳಬೇಕಾದರೆ ಹಾಹಾ ಹೋಹೋ ಅಂತ ಗಲಾಟೆ ಮಾಡಿ ಕೊಳೆತ ಮೊಟ್ಟೆ, ಬಾಳೆಹಣ್ಣು, ಟೊಮೆಟೊ ಎಲ್ಲ ಎಸೆಯದಿದ್ದರೆ ನೀವೆಲ್ಲ ಸ್ವತಂತ್ರರು ಅಂತ ಹೇಗೆ ಗೊತ್ತಾಗತ್ತೆ ? ನಿಮ್ಮ ವ್ಯಕ್ತಿತ್ವ, ವೈಶಿಷ್ಟ್ಯ ಹೇಗೆ ಬೆಳಕಿಗೆ ಬರುತ್ತೆ ? ಸಭೆ ನಡೆಯುವ ಸ್ಥಳದಲ್ಲಿ ಗಲೀಜು ಮಾಡಿದರೆ ಇನ್ನೂ ತಕ್ಕ ಹಾಗಿರುತ್ತೆ. ಆದರೆ ನಾನು ಹೇಳೋದೇನೆಂದರೆ ಲಿಪ್‌ಸ್ಟಿಕ್, ರೋಸ್ ಪೌಡರ್, ವ್ಯಾನಿಟಿಬ್ಯಾಗ್, ಹೈಹೀಲ್ಡ್ ಚಪ್ಪಲಿ ಇವೆಲ್ಲ ನಮ್ಮ ಮನಸ್ಸಿಗೆ ಅಂಟಿಕೊಂಡಿರೋ ಚರ್ಮ ಅಲ್ಲ, ಇವೆಲ್ಲ ಈ

ಕಾಲದ ಉಡುಗೆ ತೊಡುಗೆಗಳು. ಹಿಂದೆ ಹೆಣ್ಣುಮಕ್ಕಳು ನಾರುಬಟ್ಟೆ ತೊಡುತ್ತಿದ್ದರು, ಇವತ್ತು ಇದೆಲ್ಲ ಹಾಕಿಕೊಳ್ತಾರೆ. ಈ ಉಡುಗೆತೊಡುಗೆಗಳಿಗೂ ಮನೋಧರ್ಮಕ್ಕೂ ಯಾವ ಸಂಬಂಧವೂ ಇಲ್ಲ. ಇನ್ನು ನಮ್ಮ ಪ್ರಾಣ, ಅದು ನಿತ್ಯ, ಸನಾತನ."

"ಕ್ಯಾಪಿಟಲ್, ಕ್ಯಾಪಿಟಲ್-" ನೀಲಿ ಜೋರಾಗಿ ಚಪ್ಪಾಳೆ ತಟ್ಟಿದಳು.

"ಅದೆಲ್ಲ ಸರಿ-" ನೀಲಿ ಹೇಳಿದಳು, "ಕ್ಯಾಪಿಟಲ್ ಅಂದರೆ ಬಂಡವಾಳ, ಮುಂದೆ ಬಂಡವಾಳ, ಹಿಂದೆ ಬಂಡವಾಳ. ಉದ್ದೇಶವೂ ಬಂಡವಾಳ, ನಾವು ಹೋಗುತ್ತಿರುವುದೇ ಬಂಡವಾಳಕ್ಕಾಗಿ, ನಮ್ಮ ಕ್ಲಬ್ಬಿಗಾಗಿ ಚಂದಾ ವಸೂಲು ಮಾಡಲು ಮನೆ ಮನೆ ಅಲೆದರೆ ತಾನೆ ಕೆಲಸ ಆಗೋದು."

"ನಿನ್ನ ಭಾಷಣ ಬಹಳ ಜೋರಾಗಿತ್ತು-" ನೀಲಿ ಹೇಳಿದಳು.

ಸರೋಜಿನಿ ಕೇಳಿದಳು. "ಇಷ್ಟು ಹೊತ್ತು ನೀನು ಏನು ಭಾಷಣ ಮಾಡುತ್ತಿದ್ದಿ ಮಿಲಿ ?"

"ಶೂರ್, ಇಲ್ಲದಿದ್ದರೆ ದಾರಿ ಹೇಗೆ ಸಾಗೋದು ? ತಮಾಷೆ ಏನೆಂದರೆ, ಯಾರನ್ನಾದರೂ ಅವರ ಮನೆ ವಿಚಾರ ಕೇಳು, ಲೆಕ್ಚರ್ ಹೊಡೆಯೋದಕ್ಕೆ ಶುರು ಮಾಡ್ತಾರೆ. ಮತ್ತೆ ಮತ್ತೆ ಹೃದಯದ ವಿಚಾರ ಕೇಳಲು ನೀನು ಹಾತೊರೆಯಬಹುದು. ಆದರೆ ಹೃದಯ ಎಲ್ಲಿದೆ ? ಬರಿ ಕಟ್ಟಿಗೆ ಅಷ್ಟೆ. ಸರಿಯಾಗಿ ಬಾರಿಸೋದು ಗೊತ್ತಿದ್ದರೆ ಅದನ್ನು ಕುಟ್ಟಿ ಬಡಿದು ಸೊಗಸಾದ ವಾದ್ಯ ಮಾಡಬಹುದು. ಕೇಳಲೂ ಇಂಪಾಗಿರುತ್ತೆ."

"ಅಮ್ಮಮ್ಮ ನೀಲಿ, ನೀನೂ ನಿಜವಾಗಿ ಮಲಗಿರಲಿಲ್ಲವೆ ?"

"ಯಾವುದು ಹೇಗೆ ಕಾಣುತ್ತದೊ ಯಾವಾಗಲೂ ಹಾಗೇ ಇರಲ್ಲ". ನೀಲಿ ಹೇಳಿದಳು, "ಅದೇ ನಿನ್ನನ್ನೇ ನೋಡಿಕೊ. ನೋಡೋದಕ್ಕೆ ನೀನು ಕಿಡ್ಡಿ, ಆದರೆ ಇರೋದು ನೋಡಿದರೆ ಬಡ್ಡಿ".

"ಕಿಡ್ಡಿ, ಬಡ್ಡಿ, ಹಾಗೆಂದರೇನು ?

ಅಕ್ಕತಂಗಿಯರು ಒಬ್ಬರ ಮುಖ ಒಬ್ಬರು ನೋಡಿಕೊಂಡು ಮುಸಮುಸ ನಕ್ಕರು. ಮಿಲಿ ಬಿಡಿಸಿ ಹೇಳಿದಳು; "ಕಿಡ್ಡಿ ಅಂದರೆ ತುಂಬಾ ಬುದ್ಧಿವಂತೆ ಅಂತ ಅರ್ಥ, ಬಡ್ಡಿ ಅಂದರ ಇನ್ನೂ ಬಚ್ಚಾ, ಪಳಗದವಳು ಅಂತ ಅರ್ಥ, ನೀನು ನೋಡೋದಕ್ಕೆ ಬುದ್ಧಿವಂತೆ ಹಾಗಿದ್ದೀಯ, ಆದರೆ ಒಳಗೆ ನೋಡಿದರೆ ತುಂಬ ಭೋಳೆ, ಪ್ರಪಂಚದ ಅನುಭವ ಸ್ವಲ್ಪವೂ ಇಲ್ಲ. ಬಹಳ ಸಿಂಪಲ್ ನೀನು."

"ಅಂದರೆ ಗಿನಿಪಿಗ್ ಇದ್ದಂತೆ, ಸಾಕಿದ ಹಾಗೆ ಇರುತ್ತೆ," ನೀಲಿ ಹೇಳಿದಳು, ಸರೋಜಿನಿಗೆ ತಮಾಷೆಯೆನಿಸಿತು. ಹೇಳಿದಳು, "ನೀವು ಓದಿಬರೆದ ಹುಡುಗಿಯರು. ಈ ಪೇಟೆಯಲ್ಲಿ ಕೊಂಡು ಆ ಪೇಟೆಯಲ್ಲಿ ಮಾರಿ ಹಾರಿಬರ್ತೀರಿ."

ಎಲ್ಲರೂ ನಕ್ಕರು, ಮಿಲಿ ಹೇಳಿದಳು-"ಈಗೇನು ಎಲ್ಲಾ ಕಡೆ ವ್ಯಾಪಾರ ತಾನೇ ನಡೆಯೋದು-"

ಕಾರು ನಿಂತಿತು. ವಿಷ್ಣುಬಾಬುವಿನ ಮನೆ. ವಿಷ್ಣುಬಾಬು ಒಬ್ಬ ಉದ್ಯೋಗಿ. ಲುಂಗಿ ಉಟ್ಟು ಬೀಡಿ ಸೇದುತ್ತ ಅಡ್ಡಾಡುತ್ತಿದ್ದಾರೆ. ಮೂವರೂ ಕೈಯಲ್ಲಿ ಚರ್ಮದ ಚೀಲ ಹಿಡಿದು ಇದ್ದಕ್ಕಿದ್ದಂತೆ ಮನೆಯ ಒಳಗೆ ನುಗ್ಗಿದರು. ಇಲ್ಲಿಂದಲೇ ಚಂದಾ ಎತ್ತೋದು

ಶುರುವಾಗಲಿ. ಸ್ವಲ್ಪ ಹೊತ್ತಿನ ಮೇಲೆ ಮನೆಯೊಳಕ್ಕೆ ಬರುವಂತೆ ವಿಷ್ಣುಬಾಬುವಿಗೆ ಕರೆಬಂತು. ಅವರು ಒಳಗೆ ಹೋಗಬೇಕಾಯಿತು.

ಸಂಘಟನೆ ಬೇಕು, ಸಂಘಟನೆ.

ಅದಕ್ಕಾಗಿ ಸಹಕಾರ ಅಗತ್ಯ.

ಎಲ್ಲರೂ ಒಂದಾದಾಗ ತಾನೆ ಅದು ಸಾಧ್ಯ.

ಎಷ್ಟೊಂದು ಶ್ರಮ, ಎಷ್ಟು ಕೆಲಸ, ಅಬ್ಬಾ!

ರಸ್ತೆಯಲ್ಲಿ ದಾರಿಹೋಕ ಹೆಜ್ಜೆಹಾಕುತ್ತಿದ್ದಾನೆ. ಪಿಚ್ ಅಂತ ಅಗಿದ ವೀಳೆಯದೆಲೆಯನ್ನು ಹೊರಕ್ಕೆ ಉಗಿಯುತ್ತಾನೆ. ಮನೆಯಾಕೆ ಬಾಗಿಲು ತೆಗೆದು ರಸ್ತೆ ಮಧ್ಯಕ್ಕೆ ಕಸದ ರಾಶಿ ಎಸೆಯುತ್ತಾರೆ. ಕಸಕಡ್ಡಿ, ಕೊಳಕು, ಮುಸುರೆ, ನೀರು ಎಲ್ಲ ಸುರಿಯುತ್ತಾರೆ. ಇಡೀ ರಸ್ತೆಯಲ್ಲಿ ಎಷ್ಟು ಕೊಳಕು, ನೊಣಗಳು ಝುಂಯ್ ಅಂತ ಮುತ್ತುತ್ತಿವೆ-ಛಿಛಿ.

ಕೂಲಿಗಳ ಕಾಲೋನಿ ಎಷ್ಟು ಕೊಳಕು. ಹೊಲಸು ಅಂದರೆ ಹೊಲಸು, ಗಾರೆ ಉದುರಿದ ಗೋಡೆಗಳು, ಅರ್ಧ ಮೇಲ್ಛಾವಣಿ ಇದ್ದರೆ ಅರ್ಧ ಇಲ್ಲ. ಒಡೆದ ಬಾಗಿಲಿಗೆ ಹೊಲಿದ ಗೋಣಿತಾಟನ್ನೊ, ತಾಳೆ ಎಲೆಯ ತಟ್ಟನ್ನೊ ಅಥವಾ ಇನ್ನೇನನ್ನಾದರೂ ಅಡ್ಡ ಹೊಚ್ಚಿ ಕೆಲಸ ಸಾಗಿಸುತ್ತಾರೆ. ನಾಲ್ಕು ಕಡೆ ಕಸದ ಗುಪ್ಪೆಗಳು, -ಅಬ್ಬಾ, ಅದೆಷ್ಟು ಕೊಳಕು, ದುರ್ವಾಸದಿಂದ ಮೂಗು ಒಡೆದುಹೋಗುತ್ತದೆ. ಯಾವ ಕಡೆ ತಿರುಗಿದರೂ ಹೇಲು, ಉಚ್ಚೆ, - ಛೆ, ಛೆ.

ಮನುಷ್ಯ. ಮಗುವಿನ ಗೊಣ್ಣೆ ಒರೆಸುತ್ತಿದ್ದಾನೆ. ಬೆವರು ಅಸಹ್ಯವಾಗಿ ಮೈಯಿಂದ ಹರಿಯುತ್ತಿದೆ. ತಲೆಬಾಚಿಕೊಳ್ಳುತ್ತಾರೇನೂ ಅಂದರೆ? ಛೆ, ತಲೆಯಲ್ಲ, ಹೇನಿನ ಗೂಡು, ಒಂದು ಹನಿ ಎಣ್ಣೆನೂ ಸಿಗೋದಿಲ್ಲವೆ ತಲೆಗೆ? ಹೆಂಗಸರು ಇನ್ನೂ ಕೊಳಕು. ಹರಿದ ಬಟ್ಟೆ, ಪರಪರ ಹಾರಾಡುತ್ತಿರುವ ಬಿರುಗೂದಲು, ಮೈಮೇಲೆಲ್ಲ ಧೂಳು ತುಂಬಿದೆ, ಉಗುರು ಇದ್ದಿಲಿನಂತೆ ಕಪ್ಪಾಗಿದೆ. ಮೈಯಿನ ಹೊಳಪು-ಗಂಜಿ ಕುಡಿಯೋದಕ್ಕೂ ಒಂದು ಕ್ಷಣ ಪುರುಸೊತ್ತಿಲ್ಲವೆ? -ಹಾಗಲ್ಲ, ಹೊತ್ತು ಗೊತ್ತಿಲ್ಲದ ಊಟ, ಆರೋಗ್ಯವನ್ನು ಕುರಿತ ಸಾಧಾರಣ ವಿಷಯಗಳ ಬಗೆಗೂ ಉದಾಸೀನತೆ, ಒಬ್ಬರಿಗೆ ಕಾಯಿಲೆ ಬಂದು ಅಂಟಿತು ಅಂದರೆ ಎಲ್ಲರಿಗೂ ಬಂದಂತೆಯೆ. ಅಬ್ಬಾ ಎಷ್ಟು ಬೇಜವಾಬ್ದಾರಿ ಜನ, ಜನಗಳಲ್ಲ, ಪಶುಗಳು.

ಇನ್ನು ದೇಶ, ರಾಷ್ಟ್ರ -ಅದರ ಚಹರೆಪಟ್ಟಿಯೂ ಬದಲಾಯಿಸಿದ್ದರೆ. ಸೊಗಸಾದ ಮನೆಮಠ, ತೆರವಾದ ಮೈದಾನ, ಕೊಳಕು ಕಾಡಿಗೆ ಬದಲಾಗಿ ಸೊಂಪಾದ ಉದ್ಯಾನ, ತೋಟ, ದಷ್ಟಪುಷ್ಟವಾದ ಜನ ಜಾನುವಾರು - ಹೂವು, ಹಣ್ಣು. ನಾಡಿನಲ್ಲೆಲ್ಲ ಲಕ್ಷ್ಮೀ ವಿಜೃಂಭಿಸುತ್ತಿದ್ದಳು.

ಆದರೆ ಹಾಗೆಲ್ಲಿ ಸಾಧ್ಯ? ಜನ ತೂಕಡಿಸುತ್ತಾ ಹೆಜ್ಜೆಹಾಕುತ್ತಿದ್ದಾರೆ. ಹಿಂದೆ ಮುಂದೆ ಅಂತ ನೋಡುತ್ತಿಲ್ಲ. ಅಬ್ಬಬ್ಬಾ ಯೋಚನೆ ಮಾಡುತ್ತಾರಪ್ಪಾ ಅಂದರೂ ಮಾಡೋದು ಚೋಟುದ್ದ ಹೊಟ್ಟೆಯ ಯೋಚನೆ ಅಷ್ಟೆ. ಕಾಲಚಕ್ರ ತಿರುಗುತ್ತಿರುತ್ತದೆ. ಆದರೆ ಮೂಢನಂಬಿಕೆ ದೂರವಾಗೋದಿಲ್ಲ, ಏನೂ ಬದಲಾವಣೆಯಾಗೋದಿಲ್ಲ.

ಹಾಗಾಗಿ ಸಂಘಟನೆ ಬೇಕು, ಸಹಕಾರ ಬೇಕು.

ಸರೋಜಿನಿ ಯೋಚನೆ ಮಾಡುತ್ತಿದ್ದಾಳೆ. ಪಂಜರದಿಂದ ಹೊರಗೆ ಬಂದು ಮರದ ಕೊಂಬೆಯ ಮೇಲೆ ಕುಳಿತು ನಾಲ್ಕೂ ಕಡೆ ದೃಷ್ಟಿ ಹರಿಸುತ್ತಾ ಪಕ್ಷಿಯಂತೆ ಯೋಚನೆಮಾಡುತ್ತಿದ್ದಾಳೆ. ಇದಕ್ಕೆ ಮೊದಲು ಸಂಘಟನೆಯ ಪ್ರಪಂಚವನ್ನು ಅವಳು ಹೊಕ್ಕವಳಲ್ಲ. ಈಗತಾನೇ ಕಾಲಿಡುತ್ತಿದ್ದಾಳೆ. ಕ್ಲಬ್ಬಿಗೆ ಕಟ್ಟಡವಾಗುತ್ತದೆ, ಅದರೊಟ್ಟಿಗೆ ಮಹಿಳಾ ಕಲ್ಯಾಣ ಸಮಿತಿಯೂ ಇರುತ್ತದೆ. ಒಂದೆಡೆ ಸಂಘಟನೆಯ ವಿಷಯ ಕುರಿತು ಯೋಚನೆ ಮಾಡುತ್ತಿದ್ದರೆ ಸುತ್ತಲೂ ಇರುವ ಪದಾರ್ಥಗಳೆಲ್ಲ ಕಣ್ಣಿಗೆ ಬೀಳುತ್ತವೆ. ಸುತ್ತಲೂ ಎಷ್ಟೊಂದು ಪದಾರ್ಥಗಳು ದಂಡವಾಗುತ್ತಿವೆ, ಬೇಕಾದ ಪದಾರ್ಥಗಳಿಗೆ ಎಷ್ಟೊಂದು ಅಭಾವ. ಅವಳು ಹೊಸದಾಗಿ ಕೆಲಸ ಶುರುಮಾಡಿದ್ದಾಳೆ, ಆದ್ದರಿಂದ ಅವಳಲ್ಲಿ ಉತ್ಸಾಹ ತುಂಬಿ ತುಳುಕುತ್ತಿದೆ. ಭಾವನೆಯಲ್ಲಿ ಬಿಸಿ, ಕೆಲಸ ಮಾಡುವುದರಲ್ಲೂ ಅಷ್ಟೆ,-ಚಂದಾ ಕೇಳುವುದರಲ್ಲೆ ಆಗಲಿ, ಪ್ಯಾಂಪ್ಲೆಟ್ ಹಂಚುವುದರಲ್ಲೆ ಆಗಲಿ ಅಥವಾ ಕಾರ್ಯಕ್ರಮಗಳ ಬಗ್ಗೆ ಒಂದೆರಡು ಗಂಟೆಗಳ ಕಾಲ ಮಾತಾಡುವುದರಲ್ಲೆ ಆಗಲಿ ಅವಳ ಪಾಲಿಗೆ ಶೌರ್ಯಪ್ರದರ್ಶನದಂತೆ ಕಂಡುಬರುತ್ತದೆ. ತಾನು ತುಂಬ ದೊಡ್ಡ ಕೆಲಸ ಮಾಡುತ್ತಿದ್ದೇನೆ ಅಂತ ಅನಿಸುತ್ತದೆ. ಜೋರಾಗಿ ಭಾಷಣ ಮಾಡಬೇಕು ಅಂತಲೂ ಮನಸ್ಸಾಗುತ್ತದೆ,-ಅವಳು ಏನು ತಾನೆ ಮಾಡಲಿಲ್ಲ.

ಸಂಘಟನೆಯ ಹಲವಾರು ಮುಖಗಳನ್ನು ಕುರಿತು ಯೋಚನೆ ಮಾಡುತ್ತಾಳೆ.

ಬೆನ್ನಿನ ಮೇಲೆ ಖಾದಿಬಟ್ಟೆಯ ದೊಡ್ಡ ಮೂಟೆ ಹೊತ್ತು ಬೆನ್ನುಬಗ್ಗಿಸಿ ಬರಿಗಾಲಲ್ಲೇ ಯಾರೋ ಹೋಗುತ್ತಿದ್ದಾರೆ, ಹಳ್ಳಿಯ ಬೀದಿಗಳಲ್ಲಿ ಯಾರೋ ಬಿಸಿಲಿನಲ್ಲಿ ಹೆಜ್ಜೆ ಹಾಕುತ್ತಿದ್ದಾರೆ, ದಪ್ಪಪಂಚೆ ಮಂಡಿಯವರೆಗೆ ಅಥವಾ ಮೀನಖಂಡದವರೆಗೆ ಮಾತ್ರ ಮುಚ್ಚಿದೆ, -ಬೆವರು ಹರಿದು ಮೈಯೆಲ್ಲ ಒದ್ದೆಯಾಗುತ್ತಿದೆ, ತಿನ್ನುವ ಕಡೆ ಮಲಗುವ ಕಡೆ ಗಮನವಿಲ್ಲ. ಖದ್ದರು ಮಾರುತ್ತಾನೆ, ಚರಕದಿಂದ ನೂಲು ತೆಗೆಯುವಂತೆ ಪ್ರಚಾರ ಮಾಡುತ್ತಿದ್ದಾನೆ. 'ಗ್ರಾಮೋದ್ಯೋಗಕ್ಕಾಗಿ ಅಡಿಪಾಯ ಹಾಕಿ ಅಂತ ಪ್ರಚಾರ ನಡೆದಿದೆ. ಅಹಿಂಸಾವಾಣಿ. ಮನೆ ಬಿಟ್ಟದ್ದಾಯಿತು, ಮೈ ಅಲಸಿಕೆ ಆರೋಗ್ಯಗಳ ಕಡೆ ಗಮನವಿಲ್ಲ. ಅದು ಭಾವನೆಯ ಒಂದು ರೂಪಕದಂತಿದೆ.

ಹೆಸರು ಸಂಪಾದಿಸುವ ಗೊಡವೆ ಇಲ್ಲ, ಸಾಮರ್ಥ್ಯ ಹೆಚ್ಚಿಸಿಕೊಂಡು ಭೇಷ್ ಅನಿಸಿಕೊಳ್ಳುವ ಕಡೆ ಗಮನವಿಲ್ಲ. ಸುಖ ಬೇಡವೇ ಬೇಡ. ಸುಮ್ಮನೆ ರಾಮರಾಜ್ಯ ಹುಡುಕಿಕೊಂಡು ಅಲೆಯುತ್ತಿರುತ್ತಾನೆ. ರಾಮರಾಜ್ಯದ ಕನಸು ಕಾಣುತ್ತಿರು ವಂತೆಯೇ ಯಾವ ಬೆಂಗಾಡಿನಲ್ಲಿ ತನ್ನ ಗೇಣುದ್ದ ಅಸ್ಥಿಪಂಜರವನ್ನು ಎಸೆದು ಓಡುತ್ತಾನೆಯೋ ಗೊತ್ತಿಲ್ಲ.

ಅದು ಕೈಗೂಡುವಂತಿಲ್ಲ. ಬರೀ ಆ ಹಿರಿದಾದ ಭಾವನೆಯಷ್ಟೇ ಉಳಿಯುವುದು. ಆ ಹಿರಿದಾದ ಭಾವನೆಯನ್ನು ರಕ್ತಗತವನ್ನಾಗಿ ಮಾಡಿಕೊಂಡು ಇನ್ನೂ ಎಷ್ಟುಮಂದಿ ಕಾರ್ಯಕರ್ತರು ಸದ್ದಿಲ್ಲದ ಕೆಲಸದಲ್ಲಿ ತೊಡಗಿದ್ದಾರೋ. ಮೈಮೇಲೆಲ್ಲ ಧೂಳು ಕೆಸರು ಮೆತ್ತಿಕೊಂಡು, ಪ್ರವಾಹದಲ್ಲೊ, ಬಿರುಗಾಳಿಯಲ್ಲೊ; ಕಲ್ಲೇಟು

ಇಟ್ಟಿಗೆಯೇಟು ಬೈಗಳನ್ನು ತಿನ್ನುತ್ತಾ ಎಲ್ಲ ಸಹಿಸಿಕೊಂಡಿರಬಹುದು. ಅವರಿಗ ಯಾವುದೇ ಹೆಸರಿಲ್ಲ, ತ್ಯಾಗಮೂರ್ತಿಗಳು.

ಸರೋಜಿನಿ ಯೋಚಿಸುತ್ತಾಳೆ, ಮಿಲಿ ಕೂಡ. ಆದರೆ ಇಬ್ಬರೂ ತಮ್ಮದೇ ಆದ ಧಾಟಿಯಲ್ಲಿ ಯೋಚಿಸುತ್ತಾರೆ.

ಅಚ್ಚು ಕಟ್ಟಾದ ಬಟ್ಟೆ ಧರಿಸಿ ಒಳಗಡೆ ಕೈಬಾಂಬು ಬಚ್ಚಿಟ್ಟುಕೊಂಡು ಯಾರೋ ಬೆಕ್ಕಿನ ಹೆಜ್ಜೆ ಇಡುತ್ತಾ ಎಚ್ಚರಿಕೆಯಿಂದ ಮಾತ್ತಾಡುತ್ತಿದ್ದಾರೆ. ಬಾಂಬು ಬೀಳುತ್ತದೆ, ಮನುಷ್ಯರು ಸಾಯುತ್ತಾರೆ, ರೈಲು ಹಳಿತಪ್ಪಿ ತಲೆಕೆಳಗಾಗುತ್ತದೆ. ಜನ ಅಳಿದು ಹೋಗುತ್ತಾರೆ, ಪ್ರಪಂಚ ನುಚ್ಚು ನೂರಾಗುತ್ತದೆ. ಕಣ್ಣೆದುರಿಗೆ ಹಿಂಸೆಯ ತಾಂಡವ, ಎಲ್ಲೆಲ್ಲೂ ಬೆಂಕಿ ಹೊಗೆ-ತಾಜಾ ರಕ್ತದ ಹೊಳೆ. ಅವನ ಹಾದಿ ಕಠಿಣವಾದದ್ದು, ಬದುಕು ಅಶಾಂತ ಅನಿಶ್ಚಿತ. ಕಳ್ಳನಂತೆ ಮರೆಯಲ್ಲಿ ಅಡಗಿಕೊಳ್ಳುತ್ತಾನೆ. ಇವತ್ತು ಇಲ್ಲಿದ್ದರೆ ನಾಳೆ ಇನ್ನೊಂದೆಡೆ. ಬಳುವಳಿಯಾಗಿ ಗುಂಡೇಟು ಇಲ್ಲವೆ ನೇಣುಗಂಬ! ಯಾವ ನೆಲೆಯೂ ಇಲ್ಲ, ಯಾವಾಗ ಏನು ಸಿಗುತ್ತದೋ?

ಅವಳೂ ಒಂದು ಕನಸು ಕಾಣುತ್ತಾಳೆ.

ಪ್ರಪಂಚದ ಗೊತ್ತುಪಾಡು ಬದಲಾಗುವ ಕನಸು ಕಾಣುತ್ತಾಳೆ. ಹೊಟ್ಟೆಗಿಲ್ಲದ ಬಡರೈತರು ಸಾಲುಗಟ್ಟಿ ಪುರಾಣಗಳ ಚರ್ಚೆಯಲ್ಲಿ ಭಾಗವಹಿಸಲು ಹಾತೊರೆಯುತ್ತಿರುವಂತೆ ಕನಸು ಕಾಣುತ್ತಾಳೆ. 'ಕಲ್ಕಿಯ ಅವತಾರ,-ಇನ್ನೆಷ್ಟು ದಿನಗಳ ಮಾತು? ಇದಾದ ಮೇಲೆ ಹತ್ತು ಕೈಗಳಲ್ಲೂ ಕತ್ತಿ, ಕುಂಕುಮ ಬಳಿದುಕೊಂಡ ಹುಚ್ಚು ಮೊಸಳೆ... ಕಂಟ್ರೋಲ್ ಕಾಲ, ರೂಪಾಯಿಗೆ ಒಂದೂವರೆ ಸೇರು ಅಕ್ಕಿ. ಬರಗಾಲದಲ್ಲೂ ಇದಕ್ಕಿಂತ ಅಗ್ಗವಾಗಿತ್ತು, ಸತ್-ತ್ರೇತಾ-ದ್ವಾಪರ ಮತ್ತು ಈಗ ಕಲಿ, ಕಲ್ಕಿಗೆ ಇನ್ನೆಷ್ಟು ಹೊತ್ತು?'

ಬದಲಾಗುತ್ತಿರುವ ಈ ಕಾಲದಲ್ಲಿ ವ್ಯಾಪಾರಿಗಳ ಗುಂಪು ಕನಸು ಕಾಣುತ್ತಿದೆ. ನದಿಯ ಹರಿವಿಗೆ ಲಗಾಮು ಹಾಕಿ ವಿದ್ಯುತ್ ತಯಾರಾಗುತ್ತಿದೆ, ಆಮೇಲೆ ನೀರಾವರಿ. ಕಾಡನ್ನು ಕಡಿದು, ನೆಲ ಅಗೆದು ಖನಿಜಗಳನ್ನು ತೆಗೆಯುತ್ತಾರೆ. ಯಂತ್ರಗಳು ಕೆಲಸ ಮಾಡುತ್ತವೆ, ಯಂತ್ರದಿಂದ ಬೇಸಾಯ ನಡೆಯುತ್ತದೆ, ಯಂತ್ರಗಳ ಉತ್ಪಾದನೆಯಿಲ್ಲದಿದ್ದರೆ ಕೊರತೆ ತಪ್ಪುವಂತಿಲ್ಲ. ಆದ್ದರಿಂದ-

ಪೂಜಾರಿ ಉಪಾಯ ಹೇಳಿಕೊಡುತ್ತಾನೆ. ಮಂಗಳಾರತಿಯ ಜೊತೆಯಲ್ಲೇ ಶುಭ ಹಾರೈಸುತ್ತಾನೆ-'ಸರ್ವೇ ಭವಂತು ಸುಖಿನ, ಸರ್ವೇ ಸಂತು ನಿರಾಮಯಾ'-ಹಳ್ಳಿಹಳ್ಳಿ ಗಳಲ್ಲಿ ಪಟ್ಟಣಗಳಲ್ಲಿ ಒಂದು ವೇಳೆ ಇಂಥ ಶಾಂತಿಗೃಹಗಳಿದ್ದಿದ್ದರೆ, ಪಾಪ ದೂರವಾಗುತ್ತಿತ್ತು. ಭೂಮಿಯ ಮೇಲೇ ಸ್ವರ್ಗವನ್ನು ತಂದಿಳಿಸುವ ಒಂದೇ ಒಂದು ಉಪಾಯವೆಂದರೆ-ಕೀರ್ತನೆ, ಯಜ್ಞ-ಹೋಮ.

ಕಣ್ಣುಮುಚ್ಚಿ ಧ್ಯಾನಮಗ್ನನಾಗಿ ಭಾವುಕ ಉಪಾಯ ಹುಡುತ್ತಾನೆ, - 'ಇಷ್ಟೊಂದು ದುಃಖ! ಏಕೆ ಇದಲ್ಲ? ಪ್ರಪಂಚದಲ್ಲಿ ತಿನ್ನುವುದಕ್ಕೆ ಇಲ್ಲವೆ? ಪಸುವಿನ ಆಕಾರವೇ ಈ ವಸುಧೆ ಅಲ್ಲವೆ? ಹಂಚಿಕೆಯ ತಪ್ಪಿನಿಂದಲೇ ಈ ತಾಪತ್ರಯಗಳು, ಈ ನೋವುನರಳಾಟ. ಹಣದ ಹಾಹಾಕಾರವನ್ನು ದೂರಮಾಡಲು ಸಾಧ್ಯವಾದರೆ, ಹಂಚಿಕೆಯಲ್ಲಿ ಸುಧಾರಣೆ ಉಂಟುಮಾಡಲು ಸಾಧ್ಯವಾದರೆ, ಪ್ರಪಂಚ

ಒಂದು ದಿನದಲ್ಲಿ ಬದಲಾಯಿಸುವಂತಾದರೆ, ಹಾಗಾಗಿ ಕಟ್ಟುಬಡತನ ಅಂಜುಗುಳಿತನ ಇಲ್ಲವಾಗುವಂತಾದರೆ, ಹಾಗಾಗಿಯೆ-'

ಸಂಘಟನೆ ಮತ್ತು ಸಹಕಾರ. ಎಲ್ಲರ ಮನಸ್ಸಿನಲ್ಲಿರುವುದೂ ಇದೇ ಅಸ್ತ್ರ ಆದರೆ ಮಾರ್ಗಗಳು ಮಾತ್ರ ಬೇರೆ ಬೇರೆ.

ಸರೋಜನಿಯ ಉದ್ದೇಶ ಚಂದಾ ಸಂಗ್ರಹಿಸುವುದು, ತರ್ಕ ತುಂಬ ಸಹಜವಾಗಿತ್ತು. ಎಲ್ಲರೂ ಒಂದುವೇಳೆ ಚಂದಾ ಕೊಟ್ಟರೆ, ಒಂದು ಬಾರಿ ಮಾತ್ರವಲ್ಲ, ನಿಯಮಿತವಾಗಿ ಕೊಟ್ಟರು ಅಂದರೆ ಆಗ ಬಂಡವಾಳ ಹೆಚ್ಚಾಗುತ್ತದೆ, ಆ ಬಂಡವಾಳದಿಂದಲೇ ಮಹಿಳಾ ಕಲ್ಯಾಣ ಸಮಿತಿಯ ಕೆಲಸಕಾರ್ಯಗಳು ನಡೆದುಕೊಂಡು ಹೋಗುತ್ತವೆ. ಕೆಲಸವಾದರೂ ಏನು ? ಕಲ್ಲು ಕುಟ್ಟಬೇಕೆ ? ಗಾಣ ಹೊಡೆಯಬೇಕೆ ? ಹಿಟ್ಟು ಬೀಸಬೇಕೆ ? ಇಲ್ಲ, ಸುಮ್ಮನೆ ಎಲ್ಲರೂ ಕ್ಲಬ್ಬಿನಲ್ಲಿ ಸೇರುತ್ತಾರೆ. ಒಬ್ಬರನ್ನೊಬ್ಬರು ಭೇಟಿ ಮಾಡುತ್ತಾರೆ. ಸ್ವಲ್ಪ ಕಲಿಯುತ್ತಾರೆ, ಸ್ವಲ್ಪ ಕಲಿಸುತ್ತಾರೆ. ಹಾಗೆ ಮಾಡಿದರೆ ತಾನೆ ನಯನಾಜೂಕು, ನಡೆವಳಿಕೆ ಅಂದರೇನು ಅಂತ ಅರ್ಥವಾಗೋದು.

ಬಟ್ಟೆ ತೊಡುವುದು ಅಚ್ಚುಕಟ್ಟಾಗಿರಬೇಕು. ಸಂಗೀತ, ನೃತ್ಯ ಕಲೆ, ಹೊಲಿಗೆ, ಕಸೂತಿ - ನಮ್ಮ ಮನೆಗಳಲ್ಲಿ ಇವಲ್ಲ ಇಲ್ಲದೆ ಏನೋ ಶೂಬಚುತನ ಮೂಡಿ ಹೋಗಿದೆ. ಇವುಗಳಿಂದ ಮನಸ್ಸಿಗೆ ಸ್ಫೂರ್ತಿ ಬರುತ್ತದೆ, ಮನೆಯಲ್ಲಿ ಆನಂದ ತುಂಬಿತುಳುಕಾಡುತ್ತದೆ. ಮನಸ್ಸು ಹುರುಪಿನಿಂದಿದ್ದರೆ ಮೈಯಲ್ಲಿ ಜೀವ ಇರುತ್ತದೆ, -ಏಕೆಂದರೆ ಮನಸ್ಸಿಗೆ ಮೈಯಿಗೆ ತುಂಬಾ ಸಂಬಂಧವಿದೆ. ಮನಸ್ಸು ಮತ್ತು ಮೈಹಸನಾಗಿದ್ದರೆ ಇಡೀ ಮನೆಯೆ ಹಸನಾಗಿ ಕಾಣುತ್ತದೆ. ಆರೋಗ್ಯವನ್ನು ಕಾಪಾಡಿಕೊಳ್ಳುವ ಬಗ್ಗೆ ಮಾತುಕತೆ ನಡೆಯುತ್ತದೆ. ಏನು ತಿನ್ನುವುದರಿಂದ ಶಕ್ತಿ ಬರುತ್ತದೆ ? ಹೇಗೆ ಇರೋದರಿಂದ ರೋಗವನ್ನು ತಡೆಗಟ್ಟಬಹುದು ? ಕೂಲಿಗಳ ಕಾಲೋನಿಯಲ್ಲಿ ಎಲ್ಲರೂ ಸೊಳ್ಳೆಪರದೆ ಕಟ್ಟಿಕೊಂಡರೆ, ಬಿಸಿನೀರನ್ನು ಬಳಸಿದರೆ ಅವರಿಗೆ ಮಲೇರಿಯ ಎಲ್ಲಿಂದ ಬರುತ್ತೆ ? ಕಾಲಕಾಲಕ್ಕೆ ಡಾಕ್ಟರ ಹತ್ತಿರ ಪರೀಕ್ಷೆ ಮಾಡಿಸಿಕೊಳ್ಳುತ್ತಿದ್ದರೆ ರೋಗ ಇಷ್ಟೊಂದು ಉಲ್ಬಣಿಸುತ್ತದೆಯೆ ? ಮಾಮೂಲಿ ತಿಳುವಳಿಕೆಯ ಮಾತುಗಳು, ದೇಶವಿದೇಶಗಳ ವಿಚಾರಗಳು, ಒಟ್ಟಾರೆಯಾಗಿ ಹೇಳುವುದಾದರೆ ಹೆಣ್ಣಿನ ಏಳಿಗೆ, ಹೆಣ್ಣುಜಾತಿ ಮುಂದೆ ಬರುವುದರಿಂದ ಇಡೀ ನಾಡಿಗೇ ಒಳ್ಳೆಯದಾಗುತ್ತದೆ. ಏಕೆಂದರೆ ಅವಳೇ ಗೃಹಿಣಿ, ಅನಂತರ ತಾಯಿ. ಅವಳ ಮಡಿಲ ಮುಂಬರುವ ಯುಗ ಆಟವಾಡುತ್ತಾ ಬೆಳೆಯುತ್ತದೆ. ಕ್ಲಬ್ಬಿನ ಸಣ್ಣ ಕೊಠಡಿಯಿಂದ ಹೊರಟ ಈ ವಿಚಾರಗಳು ನಾಡಿನಲ್ಲೆಲ್ಲ ಹರಡುತ್ತವೆ. ಇದಕ್ಕಾಗಿ ಚಂದಾ ಅಗತ್ಯ. ಯಾರು ಒಂದು ರೂಪಾಯಿ ಕೊಟ್ಟರೂ ಅದರಿಂದ ಕೋಟ್ಯಂತರ ಜನರಿಗೆ ಒಳಿತಾಗುತ್ತದೆ.

ಸರಿ, ಕೊಟ್ಟುಬಿಟ್ಟರೆ ಎಲ್ಲ ಕೆಲಸ ನಡೆದುಬಿಡುತ್ತದೆಯೆ ?

ಹೊಸ ಹುರುಪಿನಲ್ಲಿ ಯಾವುದೂ ಅಸಂಭವ, ಅಸಾಧ್ಯ ಅಂತ ಅವಳು ಅಂದುಕೊಳ್ಳುವುದಿಲ್ಲ.

ಹಾಗಾಗಿ ಎಲ್ಲವನ್ನೂ ಕೇಳಿದಮೇಲೂ ಬಲಿದತ್ತ ಸುಮ್ಮನೆ ಹೂಂಗುಟ್ಟಿದ್ದರಿಂದ

ಸರೋಜನಿಗೆ ಸಿಟ್ಟು ಬಂತು. ಕಾಲುನೆಲಕ್ಕೆ ಝಾಡಿಸಿ ಸೀದಾ ಮಹಡಿ ಹತ್ತಿದಳು. ಅವಳು ಎಷ್ಟು ಯೋಚನೆ ಮಾಡಿದರೂ ಬಲಿದತ್ತನ ಅಯೋಗ್ಯತನದ ಹೊರತಾಗಿ ಇನ್ನೇನೂ ಕಾಣುವುದಿಲ್ಲ. ತನ್ನ ಸ್ವಂತಕ್ಕೆ ನ್ಯಾಯ ಬೇರೆಯವರ ಬಗೆಗೆ ಅನ್ಯಾಯ, ನೆನೆಸಿಕೊಂಡಷ್ಟೂ ಅವಳಿಗೆ ಮೈಯೆಲ್ಲ ಉರಿಯುತ್ತದೆ. ಚಪ್ಪಲಿ ಬಿಚ್ಚಿ ಎಸೆಯುವಾಗ, ರಿಸ್ಟ್‌ವಾಚ್ ಕೈಯಿಂದ ಕಳಚಿ ಪಕ್ಕಕ್ಕೆ ಇಡುವಾಗ, ಸೀರೆ ಬದಲಾಯಿಸುವಾಗ ಅದೇ ವಿಚಾರ ತಲೆಯಲ್ಲಿ. ಈ ಮನುಷ್ಯ ಅವಳ ದಯೆಗೂ ಲಾಯಕ್ಕಾಗಿಲ್ಲ.

ಸುಮ್ಮನೆ ಕುಳಿತಿದ್ದಾಳೆ. ಬಲಿದತ್ತ ಬಂದ. ಮಾತಿಗೆ ಶುರುಮಾಡಿದ,- "ತುಂಬಾ ಸೀರಿಯಸ್ಸಾಗಿ ಕುಳಿತಿದ್ದೀಯಲ್ಲ ಸರೋಜ ?"

"ಯೋಚನೆ ಮಾಡುವವರು ಸೀರಿಯಸ್ಸಾಗೇ ಇರ್ತಾರೆ. ಯೋಚನೆ ಮಾಡದೆ ಇರುವವರಿಗೆ ಏನೂ ಅರ್ಥವಾಗಲ್ಲ."

"ಓಹೋ, ಹಾಗಾದರೆ ನೀನು ಯೋಚನೆ ಮಾಡುತ್ತಿದ್ದಿ, ಮಾಡು," ಸರೋಜನಿ ಮರುಮಾತಾಡಲಿಲ್ಲ.

"ಏನು ಯೋಚಿಸುತ್ತಿದ್ದಿ ಅದಾದರೂ ಹೇಳು."

"ಹೇಳಿದರೂ ನಿಮಗೇನೂ ಅರ್ಥವಾಗಲ್ಲ."

ಬಲಿದತ್ತ ಅವಳ ಮುಖದ ಕಡೆ ನೋಡಿದ. ಕಣ್ಣುಮುಚ್ಚಿ ಹೇಳಿದ-

"ಏನು, ಮಕ್ಕಳುಮರಿ ಮಾತು ತಾನೆ ? ಅದು ದೇವರು ಕೊಟ್ಟರೆ ಉಂಟು. ಬಡವರ ಮನೆಗಳಲ್ಲಿ ತಿನ್ನೋದಕ್ಕೆ ಏನೂ ಇರಲ್ಲ, ಅಲ್ಲಿ ಡಜನ್ ಡಜನ್ ಮಕ್ಕಳು ಹುಟ್ಟುತ್ತವೆ. ಅದೇ ಎರಡುಕಾಸಿರೋ ಮನೇಲಿ, - ಒಂದೂ ಇರೋದಿಲ್ಲ. ಬಹಳ ದಿನಗಳಿಂದ ನೋಡ್ತಾ ಇದ್ದೀನಿ. ನೀನು ತುಂಬ ಯೋಚನೆ ಮಾಡ್ತಾ ಇದ್ದೀಯೆ. ಇದರಲ್ಲಿ ಯೋಚನೆ ಮಾಡೋದು ಏನಿದೆ ? ಏನು ಹಣೇಲಿ ಬರೆದಿರುತ್ತೊ ಹಾಗೇ ಆಗೋದು."

ಆದರೆ ಮಾತಾಡಿದ್ದು ತಲೆಕೆಳಗಾದಂತಾಯಿತು. ಬಿರುಗಾಳಿಯಂತೆ ಬೀಸಿಕೊಂಡು ಸರೋಜನಿ ಎದ್ದು ಹೊರಟುಹೋದಳು. ತನ್ನ ಸೋಲನ್ನು ಮುಚ್ಚಿಟ್ಟುಕೊಳ್ಳುತ್ತಾ ಬಲಿದತ್ತ ಏರಿಸಿದ ದನಿಯಲ್ಲಿ ಹೇಳಿದ-"ಏನೇ ಅದು, ನಾಚಿಕೊಂಡು ಬಿಟ್ಟೆಯಾ ? ಹೊಟ್ಟೇಲಿ ಹಸಿವು, ಮುಖದಲ್ಲಿ ನಾಚಿಕೆ! ಆದರೆ ನೋಡು, ಮಕ್ಕಳುಮರಿ ಅಂತ ಆದಮೇಲೆ ಈ ರೀತಿಯ ಮುಖ ಇರಲ್ಲ, ಈ ರೀತಿಯ ಮಕ್ಕಳ ಮನಸ್ಸೂ ಇರಲ್ಲ. ಆಗೋ ಕಾಲಕ್ಕೆ ಎಲ್ಲ ಆಗತ್ತೆ, ಅಷ್ಟು ತಿಳಿದುಕೊಂಡರೆ ಸಾಕು."

ಹೋಗುತ್ತಿದ್ದ ಸರೋಜನಿ ತಿರುಗಿದಳು-"ನೀವು ಏನಂತ ಅಂದುಕೊಂಡಿದ್ದೀರಿ, ಸ್ವಲ್ಪ ಅದಾದರೂ ಹೇಳಿ."

"ಎಲ್ಲ ನನಗೆ ಅರ್ಥವಾಗತ್ತೆ."

"ಹಾಗಲ್ಲ ನಾನು ಹೇಳಿದ್ದು, ನಿಮಗೆ ಸ್ವಲ್ಪವೂ ಸಹಾನುಭೂತಿ ಇಲ್ಲ. ನೀವು ಮನುಷ್ಯರ ?"

"ನೀನು ಹೇಗೆ ಅಂದುಕೊಂಡರೆ ಹಾಗೆ. ಸರಿ, ಅದೆಲ್ಲ ಇರಲಿ, ಏನು ಮಾಡಬೇಕು ಅಂತ ಹೇಳು. ಕಂಬ ಹೂಳೋದು, ಗುಡಾರ ಹಾಕೋದು ಅಥವಾ ದೀಪ ಸಿಕ್ಕಿಸೋದು, ಇದೆಲ್ಲ ನಾನು ನೋಡಿಕೊಳ್ತೀನಿ. ಚಂದಾ ಪಟ್ಟಿ ನನಗೆ ಕೊಡು,

ಚಂದಾನೂ ಉದ್ಧಾರವಾದ ಹಾಗಾಗುತ್ತೆ. ಹಾಗೆಯೆ, -ಹೂವಿನ ಜೊತೆಗೆ ನಾರು ಸ್ವರ್ಗಕ್ಕೆ ಹೋದ ಹಾಗಾಗುತ್ತೆ. ಈ ವಿಚಾರದಲ್ಲೆಲ್ಲ ನನ್ನ ಒಪ್ಪಿಗೆ ಇದೆಯಲ್ಲ."

"ಇಂಥ ಒಪ್ಪಿಗೆ ಎಲ್ಲ ನಿಮ್ಮ ಹತ್ತಿರವೇ ಇಟ್ಟುಕೊಳ್ಳಿ. ನನ್ನ ಅಭಿಪ್ರಾಯ ನಿಮ್ಮ ಅಭಿಪ್ರಾಯ ಇಂಥ ವಿಚಾರಗಳಲ್ಲಿ ಒಂದಾಗಲ್ಲ."-ಮಧ್ಯದಲ್ಲೇ ಬಲಿದತ್ತ ಬಾಯಿ ಹಾಕಿದ.- "ನಾನು ಅದನ್ನು ಮರೆತು ಬಿಡುತ್ತೇನೆ ಅಂತಲ್ಲವೆ ನೀನು ಹೇಳೋದು! ಅಬ್ಬಾ, ಸರೋಜ, ಅಭಿಪ್ರಾಯಕ್ಕೋಸ್ಕರ ಯುದ್ಧಕ್ಕೇ ಶುರುಮಾಡಿಬಿಟ್ಟಿದ್ದೀಯಲ್ಲ ನೀನು, ನೀನಂತೂ ಪೂರ್ತಿ ಮಾಡರ್ನ್ ಆಗಿಹೋಗಿದ್ದೀಯ! ಓಹೋ, ನಿನ್ನೆ ಮೊನ್ನೆ ತಾನೇ ಅ...ಆ....ಅಂತ ಶುರುಮಾಡಿದ್ದೆ. ಈಗಾಗಲೆ ಇಷ್ಟು ಮೇಲೇರಿ ಬಿಟ್ಟೆ. ಹೆಣ್ಣುಜಾತಿ ರಾಕ್ಷಸರಂತೆ ಬೆಳೆಯುತ್ತದಂತೆ. ನಿಜನಿಜ. ಅದರಲ್ಲೇನು ಆಶ್ಚರ್ಯ."

ಸರೋಜಿನಿಗೆ ಕೋಪದಲ್ಲೂ ನಗುಬಂತು,- "ಒಳ್ಳೇ ಮೋಡಿ ಹಾಕೋ ಹಾಗೆ ಮಾತಾಡ್ತೀರ ನೀವು-"

"ನಾನು ಮೊದಲೇ ಹೇಳಿದ್ದೇನಲ್ಲ, ಬಾಯಿಂದ ವಶೀಕರಣ ಮಾಡಿಕೊಳ್ಳೋದು ಸಾಧ್ಯ ಅಂತ".

"ಇಷ್ಟು ವಶೀಕರಣದಿಂದ ಏನಾಗತ್ತೆ? ನಮ್ಮ ವಿಚಾರಗಳಲ್ಲಿ ನಿಮಗೆ ನಂಬಿಕೆಯಿಲ್ಲವಲ್ಲ."

"ಚಂದಾ ಎತ್ತಿ ಪ್ರಪಂಚ ಉದ್ಧಾರ ಮಾಡುವುದರಲ್ಲೆ? ತುಂಬಾ ನಂಬಿಕೆಯಿದೆ. ನೀನು ಚಂದಾ ಎತ್ತು, ಸಭೆಗಳನ್ನು ನಡೆಸು, ಹೆಸರು ನಿನಗೆ ಬರುತ್ತೆ. ಇಂಥವಳ ಗಂಡ ಯಾರು? ಅದೋ ನೋಡಿ, ಅಲ್ಲಿ ಹೋಗುತ್ತಾ ಇದ್ದಾನಲ್ಲ, ಕೆಲಸಕ್ಕೆ ಬಾರದವನು, ದೊಡ್ಡ ಸರದಾರ ಅಂತಾರೆ. ಆ ಚಂದಾ ವಿವರಗಳ ಒಂದು ಕಾಪಿ ನನಗೆ ಕೊಡು. ಆಮೇಲೆ ನೋಡು ಏನು ಮಾಡ್ತೀನಿ ಅಂತ."

"ನೀವು ನಿಜವಾಗಲೂ....."

"ಕುರಿ ಅಂತ ತಾನೇ? ಸರಿಯಾಗಿ ಹೇಳಿದೆ. ಹೊರಗೆ ನೋಡೋದಕ್ಕೆ ಕುರಿಗಳಂತಿರುವವರೇ ಬುದ್ಧಿವಂತರು. ಆದರೆ ನೆನಪಿಟ್ಟುಕೊ, ಎಲ್ಲರೂ ನಕ್ಕು ನಕ್ಕು ಸುಸ್ತಾದಾಗ ಅವರು ನಗಲು ಶುರು ಮಾಡ್ತಾರೆ. ಗೊತ್ತಾಯ್ತಾ?"

ಸರೋಜಿನಿ ಇನ್ನೊಂದು ಕೊಠಡಿಯೊಳಕ್ಕೆ ಹೊರಟುಹೋದಳು. ಬಲಿದತ್ತ ಹಿಂದಿನಿಂದ ನೋಡಿದ. ಮನಸ್ಸಿಗೆ ಖುಷಿಯೆನಿಸಿತು-ನಿಜ, ತುಂಬ ಆಶ್ಚರ್ಯ. ಮಾತುಮಾತಿಗೂ ಬಾಯಿ ಮುಚ್ಚಿಸುತ್ತಾಳೆ. ಮಾತುಮಾತಿಗೂ ಆಧಾರ, ವಿವರಣೆ ಕೊಡ್ತಾಳೆ. ಗೊತ್ತಿಲ್ಲದವರು ಇವಳು ಬಿ.ಎ.-ಎಂ.ಎ. ಮಾಡಿದ್ದಾಳೆ ಅಂತ ಅಂದುಕೊಳ್ಳಬೇಕು. ಎಷ್ಟು ಬೇಗ. ಆಲದ ಮರದ ಸಣ್ಣ ಬೀಜದಲ್ಲೂ ಇನ್ನೊಂದು ದೊಡ್ಡ ಆಲದಮರ ಅಡಗಿ ಕುಳಿತಿರುತ್ತದಲ್ಲವೆ. ಪ್ರಪಂಚದ ತುಂಬ ಆಶ್ಚರ್ಯಗಳೇ ಆಶ್ಚರ್ಯಗಳು. ಎಲ್ಲಕ್ಕಿಂತ ದೊಡ್ಡ ಅಚ್ಚರಿಯೆಂದರೆ ಅದರಲ್ಲಿರುವ ಹೆಣ್ಣು.

ಸರೋಜಿನಿ ಆ ಕಡೆಯ ಕೋಣೆಯಲ್ಲಿದ್ದಾಳೆ.

ಅವಳು ಕೇವಲ ಒಂದೇ ವಿಚಾರವನ್ನು ಕುರಿತು ಯೋಚನೆ ಮಾಡುತ್ತಿದ್ದಳು, -ಗಂಡ ಏನು ಯೋಚನೆ ಮಾಡಿ ಹೀಗೆ ಹೇಳಿದ? ಅವನು ಆಮೇಲೆ ನಕ್ಕ, ಯಾಕೆ?

ಅವನಿಗೆ ಹಾಗಾದರೆ ಏನಾದರೂ ಕೇಳಿಸಿತಾ ? -ಏನಾದರೂ ಗೊತ್ತಾಗಿ ಹೋಗಿದೆಯಾ ?

ಸರೋಜಿನಿ ಸುಮ್ಮನೆ ಶೂನ್ಯದತ್ತ ದೃಷ್ಟಿಬೀರಿ ತನ್ನ ಒಳಮನಸ್ಸನ್ನು ಕೆದಕಿಕೊಳ್ಳುತ್ತಿದ್ದಳು. ಹಣೆಯ ಮೇಲೆ ಬೆವರಿನ ಹನಿಗಳು ಮೂಡಿದ್ದವು. ತುಟಿಗಳ ಮೇಲೆ ಎಂದೂ ಕಾಣದ ಡೊಂಕು ಕಂಡುಬರುತ್ತಿತ್ತು.

ಸಂದೇಹ ಮೂಡುತ್ತದೆ, ಮರೆಯಾಗುತ್ತದೆ. ಆಕಾಶದಲ್ಲಿ ಮೋಡಗಳು ಸಣ್ಣ ತುಂಡುಗಳಾಗಿ ಗುಂಪುಗಟ್ಟಿವೆ. ಎಂದಿನಂತೆ ಸೊಂಯ್ ಅಂತ ಗಾಳಿ ಬೀಸತೊಡಗಿದೆ.

ಭಾವನೆಗಳು ಎಷ್ಟು ತೀಕ್ಷ್ಣವಾಗಿವೆಯೊ, ಗಾಳಿಯೂ ಹಾಗೆಯೆ ಮನಸ್ಸಿಗೆ ಬಂದತ್ತ ಬೀಸುತ್ತಿದೆ. ಒತ್ತಾದ ಮೋಡಗಳು ಘರ್ಜಿಸುತ್ತಿವೆ. ತಮ್ಮ ಅಸ್ತಿತ್ವವನ್ನು ತಾವೇ ಇಲ್ಲವಾಗಿಸಿಕೊಳ್ಳುತ್ತವೆ. ಬಂಧನ ಅಂದರೆ ಅವುಗಳ ಪಾಲಿಗೆ ಆಟದ ಸಾಮಾನುಗಳಂತೆ.

ತಾನೇ ಎಬ್ಬಿಸಿಕೊಂಡ ಗಾಳಿಯಲ್ಲಿ ಸರೋಜಿನಿ ಗಾಳಿಯ ರೂಪವನ್ನೇ ಎತ್ತಿದಂತಿದ್ದಳು.

ಬಲಿದತ್ತನ ಆಜುಬಾಜಿನಲ್ಲಿ, ಅವನ ನೆಲೆಯಲ್ಲಿ, ಅವನ ಕತ್ತಲು ಗುಹೆಯಲ್ಲಿ ಆ ಗಾಳಿಗೆ ವೇಗವಿಲ್ಲ-ಸುಮ್ಮನೆ ಸೋಮಾರಿಯಂತೆ ಸುಳಿದಾಡುತ್ತದೆ. ಹೊರಗೆ ಹೋಗುವುದಕ್ಕಾಗಿ, ಇಲ್ಲವೆ ಔಟಿಂಗ್‌ಗಾಗಿ ದಾರಿ ಕಾಯುತ್ತದೆ. ಒಂದು ಸಾರಿ ಹೊರಗೆ ಕಾಲಿಟ್ಟರೆ ಸಾಕು, ಅಲ್ಲಿ ತನ್ನ ವೇಗ ಹೇಗೆಂಬುದನ್ನು ತೋರಿಸುತ್ತದೆ. ಸರೋಜಿನಿ ತಾನೇ ಗಾಳಿಯಂತಾಗುತ್ತಾಳೆ.

ಶುಭದಿನ ಕಾಲಿಟ್ಟಿತು.

ಅನೇಕ ಮಹನೀಯರು ಮತ್ತು ಮಹಿಳೆಯರು ಆಹ್ವಾನಕ್ಕೆ ಓಗೊಟ್ಟು ಬಂದಿದ್ದಾರೆ. ಮುಖ್ಯ ಅತಿಥಿಗಳೆಂದರೆ ಕಂಪನಿಯ ದೊಡ್ಡ ಸಾಹೇಬರಾದ ಮಿಸ್ಟರ್ ಶರ್ಮಾ.

ಅವರು ಬರುತ್ತಾರೆ.

ಕಾರ್ಯಕರ್ತರಲ್ಲಿ ಅಪಾರ ಉತ್ಸಾಹ, ಪುಟಿಯುತ್ತಿರುವ ಆಸೆಗಳು.

ಐತಿಹಾಸಿಕವೆನಿಸುವಂತಹ ಘಟನೆ.

ಗುಂಪುಗುಂಪಾಗಿ ಬರುತ್ತಿದ್ದಾರೆ.

ಮಹಿಳೆಯರು ಅನ್ನುವ ಮಾತೇ ಸಾಕು.

ಏನಾದರೂ ಆಗುತ್ತದೆ ? ಕಾದು ನೋಡುವುದು ಗಂಡಸರ ಸ್ವಭಾವ.

ಎಲೆಯಡಿಕೆ, ಬೀಡಿ, ಸಿಗರೇಟುಗಳ ತಟ್ಟೆಗಳು ಓಡಾಡುತ್ತಿವೆ. ಕೆಲವರ ಕೈಯಲ್ಲಿ ಬೆತ್ತವಿದ್ದರೆ, ಕೆಲವರದು ಬರಿಗೈ. ಕೆಲವರ ಕೈಯಲ್ಲಿ ಟಾರ್ಚು. ಪಂಚೆ ಸೂಟು, ಕಾಲು ನಡಿಗೆಯಲ್ಲಿ ಬಂದವರು, ಕಾರಲ್ಲಿ ಬಂದವರು. ಜೋಡಿಗಳು, ಒಬ್ಬಂಟಿಗರು,

ಅವಿವಾಹಿತರು. ಜೋಳಿಗೆ ತುಂಬಿರುವವರು, ಖಾಲಿಯಿರುವವರು. ಟಿಕೆಟ್ಟಿರುವವರು ಇಲ್ಲದಿರುವವರು, ಆಹ್ವಾನಿತರು ಆಹ್ವಾನಿತರಲ್ಲದವರು, ಎಲ್ಲ ತರ ಮಂದಿ ಜಮಾಯಿಸುತ್ತಲೆ ಇದ್ದಾರೆ. ಇವತ್ತು ಉದ್ಘಾಟನೆ ನಡೆಯುವ ಸಂಜೆ. ಮನಸ್ಸಿನಲ್ಲಿ ಹೆಣ್ಣು ತುಂಬಿಹೋಗಿದೆ. ಯಾವುದೋ ಕಾಲದಿಂದ ನಡೆದುಬಂದ ಯೋಚನೆ, ಯಾವುದೋ ಕಾಲದಿಂದ ಸಾಗಿಬಂದ ಕೊರತೆ.

ಎಷ್ಟು ಸಿಕ್ಕರೂ ತಟ್ಟೆ ತುಂಬುವುದಿಲ್ಲ.

ಭಗವಂತ ಕಪ್ಪುನಾಯಿಯ ರೂಪ ತಳೆದು ಅಲೆದಾಡಿದ್ದನಂತೆ.*

ಹಾಗೆಯೆ ಅಂಡಲೆಯುತ್ತಿದೆ ಅವನ ಸಂತಾನ - ಮನುಷ್ಯ.

ಉದ್ಘಾಟನೆಯ ಸಂಜೆ. ಬಾಗಿಲು ತೆರೆಯುತ್ತದೆ, ಪರದೆ ಮೇಲೇಳುತ್ತದೆ. ಕಾಯುತ್ತಿರುವ ಕಣ್ಣುಗಳು, ರಂಗದ ಆಕಡೆ ವಿಸ್ಮಯ, ಬರೀ ವಿಸ್ಮಯ.

ಮನಸ್ಸಿನಲ್ಲಿ ಹೆಣ್ಣು, ಬಾಯಲ್ಲಿ ಕೆಲಸಕ್ಕೆ ಬಾರದ ಮಾತುಗಳು. ಮುದುಕ ಖೋಬಾಖಾನ್ ಪರದೆಯ ಕಡೆ ಹೊಳಪುಗಣ್ಣುಗಳಿಂದ ನೋಡುತ್ತಿದ್ದಾನೆ, ಕನ್ನಡಕ ಮೇಲೆ ಕೆಳಗೆ ಮಾಡುತ್ತಿದ್ದಾರೆ. ಪಕ್ಕದಲ್ಲಿ ನಿಂತಿರುವ ಕೈಕೆಳಗಿನವನನ್ನು ಬಲವಾಗಿ ತರಾಟೆಗೆ ತೆಗೆದುಕೊಂಡಿದ್ದಾರೆ- "ಏನಂದಿ ದೀನಬಂಧು, ನಿನಗೆ ಏನು ಹೇಳಿದ್ದೆ ಮಾಡಿದೆಯಾ? ನಿನ್ನ ಕೈಲಿ ಹರಿಯೋದಿಲ್ಲ, ಸುಮ್ಮನಿರು, ನಿನಗೆ ಬುದ್ಧಿಕಲಿಸುತ್ತೇನೆ." ಕಾಲಿನ ಮೇಲೆ ಕಾಲು ಹಾಕಿ ಕುಳಿತರು. ಮುದಿ ಮೈಯಿಗೆ ಆರಾಮ ಸಿಗುತ್ತದೆ, ಏನೋ ಒಂದು ರೀತಿಯಾಗಿತ್ತು. ಪರದೆಯ ಕಡೆ ನೋಡುತ್ತಾ ಬೈಯ್ಯುವುದನ್ನು ಮರೆಯುತ್ತಾರೆ, "ಅಂದ ಹಾಗೆ ನಾನು ಏನಂತಾ ಇದ್ದೆ?"

ಯುವಕ ದೀನಬಂಧು ಗಂಟಲಲ್ಲಿ ಎರಡು ವೀಳೆಯದೆಲೆ ತುರುಕಿದ್ದ. ಬೈಯ್ಗಳು ಕಿವಿಯ ಮೇಲೆ ಬೀಳುತ್ತಿದ್ದಂತೆ ಮೈಯಲ್ಲಿ ಬೆವರೊಡೆಯಿತು. ಎಲಾ ಇವನ, ಖೋಬಾ ಖಾನ್. ನಿಂತಂತೆಯೇ ಬಾಯಲ್ಲಿ ಬೈಯ್ಗಳ ಮಳೆ ಸುರಿಯುತ್ತಿದ್ದಂತೆ ಕಣ್ಣುಗಳು ಪರದೆಯ ಕಡೆ ತಿರುಗುತ್ತವೆ, ಕಾಲಿನ ಮೇಲೆ ಕಾಲು ಹಾಕಿ ಒಂದುಕಾಲು ಅಲ್ಲಾಡಿಸುತ್ತಿದ್ದಾನೆ. "ಸರಿ ಸರಿ, ಈ ಬೈಯ್ಗಳಿಗೂ ಒಂದು ಕೊನೆಯಿದೆ. ಖೋಬಾ ಖಾನ್ ಯಾವತ್ತಿಗೂ ಇರೋದಿಲ್ಲವಲ್ಲ."

ಗಿಡ್ಡಮೈಯ್ಯಿನ ಅಗಣಿ ರಾವುತರು ಒಂದು ತರಹ ಮುಖ ಮಾಡಿಕೊಂಡು ಸಿಗರೇಟು ಹೊಗೆಬಿಡುತ್ತಿದ್ದಾರೆ. ಪೇಟೆಬೆಲೆಗಳ ಬಗ್ಗೆ ಸಣ್ಣ ಭಾಷಣ ಬಿಗಿಯುತ್ತಿದ್ದಾರೆ. ಆದರೆ ಮುಖ ಇರೋದು ಪರದೆ ಕಡೆಗೆ.

ಸ್ಥೂಲಕಾಯದ ಶ್ಯಾಮಬಾಬುಗಳಿಗೆ ತುಂಬ ಸೆಕೆ ಹುಟ್ಟಿದೆ. ಆಕಡೆ ಈಕಡೆ ಅಡ್ಡಾಡುತ್ತಿದ್ದಾರೆ. ಹಸಿವಾಗಿದೆಯೆಂದು ಎಲ್ಲರಿಗೂ ಹೇಳಿಕೊಂಡು ತಿರುಗಾಡುತ್ತಿದ್ದಾರೆ. ನೌಕರಿಯ ಬಗ್ಗೆ ಅಲ್ಲಲ್ಲಿ ವಿಮರ್ಶೆ ನಡೆದಿದೆ. ನಿತ್ಯದ ತಾಪತ್ರಯ, ನೋವು ನಲಿವು. ಒಂದೆಡೆ ಕೆಲವರು ಹೊಗಳುತ್ತಿದ್ದಾರೆ, ತೆಗಳುತ್ತಿದ್ದಾರೆ. ನಾಲ್ಕೈದು ಮಂದಿ ಸುಮ್ಮನೆ ತಲೆಬಗ್ಗಿಸಿ ಕೇಳುತ್ತಿದ್ದಾರೆ. ಆಗಾಗ ತಿರುಗಿ ಅತ್ತಇತ್ತ ನೋಡುತ್ತಿದ್ದಾರೆ.

---

* ಈಶ್ವರನ ಮಹಾಪ್ರಸಾದವನ್ನು ಪಡೆಯುವುದಕ್ಕಾಗಿ ಒಮ್ಮೆ ಜಗನ್ನಾಥ ನಾಯಿಯ ವೇಷ ತಳೆದು ಹೊರಟಿದ್ದನೆಂಬ ಜನಶ್ರುತಿಯಿದೆ.

ಬೆಳಕು ಕೋರೈಸುತ್ತಿದೆ. ಕಾಗದದ ಹೂವು, ಕಾಗದದ ಹಾರ ಸುರುಳಿ ಸುರುಳಿಯಾಗಿ ಬಳುಕುತ್ತಿವೆ. ಪರದೆ ಅಲ್ಲಾಡುತ್ತಿದೆ. ಮೇಲೇಳುತ್ತಿಲ್ಲ, ಕುರ್ಚಿಗಳೆಲ್ಲ ಭರ್ತಿಯಾಗಿವೆ.

-ಸ್ವಲ್ಪ ಹೊತ್ತಿನ ಮೇಲೆ ಗುಸುಗುಸು ಶುರುವಾಯಿತು-"ಸಾಹೇಬರು ಬರುತ್ತಿದ್ದಾರೆ, ಸಾಹೇಬರು ಬರುತ್ತಿದ್ದಾರೆ." ಇದ್ದಕ್ಕಿದ್ದಂತೆಯೆ ಯೋಚನೆ ಶುರುವಾಯಿತು. ಸಾಹೇಬರು-ಅವರ ಕಂಪೆನಿಯ ಅಧಿಕಾರಿಗಳು-ಹಣೆಬರಹ ಬರೆಯುವವರು. ಎಲ್ಲ ಆಸೆಗಳಿಗೆ ಎಲ್ಲ ಭಯಕ್ಕೆ ಮೂಲ.

ನಲಿದಾಡುತ್ತಿದ್ದ ಭೂತ ಎಲ್ಲರ ಮೈಯಿಂದಲೂ ಇಳಿಯಿತು. ಇದಾದ ಮೇಲೆ ಎಲ್ಲರಿಗೂ ಕರ್ತವ್ಯ ಪ್ರಜ್ಞೆ ಮೂಡುತ್ತದೆ. ಗುಂಪುಗುಂಪಾಗಿ ಕೆಲಸಕ್ಕೆ ಹೊರಟು, ಕತ್ತು ಬಗ್ಗಿಸಿ ದುಡಿದು ಹಕ್ಕಿಗಳು ಗೂಡು ಸೇರುವ ವೇಳೆಗೆ ಮನೆಗೆ ಮರಳಿ ಬರುವ ಜನ. ಇದ್ದಕ್ಕಿದ್ದಂತೆ ಯಾರೋ ಚಾಟಿಯಿಂದ ಹೊಡೆದಂತಾಗಿ ಎಲ್ಲರೂ ಎದ್ದು ನಿಂತರು. ಸಾಹೇಬರ ಹತ್ತಿರ ನಿಂತುಕೊಳ್ಳಲು ಅಧಿಕಾರವಿದ್ದವರು ಮೇಲಿನ ರಸ್ತೆಯ ಕಡೆ ಹೆಜ್ಜೆ ಹಾಕಿದರು. 'ಸಾಹೇಬರು, ಸಾಹೇಬರು' ಅಂತ ಮುಲುಗುತ್ತಾ ಖೋಬಾಖಾನ್ ಓಡಿದರು. ಗುಂಡಿಗಳು ಬಿಚ್ಚಿಹೋಗಿವೆ. ಮುದಿ ಮೈಯನ್ನು ಬಗ್ಗಿಸಿ ಅಡ್ಡಡ್ಡಲಾಗಿ ಸಾಹೇಬರು ಬರುತ್ತಿದ್ದ ರಸ್ತೆಯ ಬಳಿ ಬಂದು ನಿಂತರು. ಪರೇಡಿಗೆ ಹೋಗುವ ಹವಾಲ್ದಾರನಂತೆ ವೇಗವಾಗಿ ಹೆಜ್ಜೆ ಹಾಕುತ್ತಿದ್ದರು ಶ್ಯಾಮುಬಾಬುಗಳು. ಆಗಣಿ ರಾವುತರು ಸಣಕಲು ಕಾಲುಗಳನ್ನು ಮುಂದಿಡುತ್ತಾ ಜಿಂಕೆಯಂತೆ ಎಗರುತ್ತಾ ಮುಂದೆ ಸಾಗುತ್ತಿದ್ದಾರೆ. ಅವರ ನಡಿಗೆಯಲ್ಲಿ ಒಂದು ರೀತಿಯ ಸೊಗಸಿದೆ. ಬಲಿದತ್ತ ಮೊದಲೇ ಅಂದಾಜು ಮಾಡಿಕೊಂಡು ಮಂಟಪದ ಬಾಗಿಲಲ್ಲಿಯೆ ಜಾಗ ಹಿಡಿದು ಸಿದ್ಧನಾಗಿ ನಿಂತಿದ್ದಾನೆ. ಮೊದಲೇ ಸ್ವಲ್ಪ ಬುದ್ಧಿ ಖರ್ಚುಮಾಡಿದ್ದರಿಂದ ನೂಕುನುಗ್ಗಲಿನಿಂದ ಬಚಾವಾಗಿದ್ದಾನೆ. ಗಿಜಿಬಿಜಿ, ಜನ ಸಾಲುಗಟ್ಟುತ್ತಿದ್ದಾರೆ. ಒಬ್ಬರ ಹೆಗಲ ಮೇಲೊಬ್ಬರು ಭಾರ ಹಾಕಿ ಹಿಮ್ಮಡಿಯ ಮೇಲೆ ನಿಂತುಕೊಂಡು ಕುತ್ತಿಗೆ ಮೇಲೆತ್ತುವ ಸಾಹಸ ನಡೆಸಿದ್ದಾರೆ. ಜನರ ಗಲಾಟೆ ಬಹಳವಾಗಿದೆ- "ಸಾಹೇಬರು, ಸಾಹೇಬರು."

ಒಳಾಂಗಣದಲ್ಲಿ ಬಾಗಿಲ ಕಡೆ ಮುಖ ಮಾಡಿಕೊಂಡು ಕಾರ್ಯಕರ್ತೆಯರು ನಿಂತಿದ್ದಾರೆ. ಸರೋಜಿನಿ ಎಲ್ಲರಿಗಿಂತ ಮುಂದೆ ನಿಂತಿದ್ದಾಳೆ. ಸಾಹೇಬರ ಕಾರು ಗುರುಗುಟ್ಟುತ್ತಾ ಮೆಲ್ಲಗೆ ಮುಂದೆ ಸಾಗುತ್ತಿದೆ. ಅದರ ಹಿಂದೆ ರಣಜಿತಬಾಬುಗಳ ಕಾರು, ಅದಕ್ಕಿಂತ ಹಿಂದೆ ಬೇರೆಯವರು. ನಿಜವಾಗಿಯೂ ಅದೆಷ್ಟು ಬೆಳಕು. ಕಾರುಗಳ ಕೋರೈಸುವ ಬೆಳಕಿನಲ್ಲಿ ಸರೋಜನಿಯ ಮೈ ಸಮುದ್ರದ ನೀಲಿನೀರಿನಿಂದ ಎದ್ದು ಬರುತ್ತಿದೆಯೇನೊ ಅನ್ನುವ ಹಾಗೆ ಕಾಣುತ್ತಿದೆ. ಹತ್ತಿರದಲ್ಲೇ ಮಿಲಿ, ನೀಲಿ, ಬಿಂದು ಮತ್ತು ಹಲವಾರು ಹೆಂಗಸರು - ವ್ಯವಸ್ಥಿತವಾದ ಫ್ಯಾಷನ್ ಪರೇಡ್ ಎಂಬಂತಿದೆ. ಸರೋಜಿನಿಯ ಕೈಯಲ್ಲಿ ದೊಡ್ಡ ಹೂವಿನ ಹಾರ ಆಕಡೆ ಈಕಡೆ ತೂಗಾಡುತ್ತಿದೆ. ಶರ್ಮಾ ಅವರ ಕುತ್ತಿಗೆಯನ್ನು ಹಾವಿನಂತೆ ಬಳಸಿಕೊಳ್ಳುವ ಆತುರ ಅದಕ್ಕಿದ್ದ ಹಾಗಿದೆ, ಹಾರವನ್ನು ಸರಿಯಾಗಿಟ್ಟುಕೊಳ್ಳುವ ಭಂಗಿಯಲ್ಲಿರುವ ಸರೋಜಿನಿ ಮೆಲ್ಲಗೆ ಮುಗುಳ್ನಗೆ ಬೀರುತ್ತಿದ್ದಾಳೆ. ಕಾರು ನಿಂತಿತು. ಬಾಗಿಲಲ್ಲಿ ಸಣ್ಣ ಗುಂಪು.

ಮೇಲಿರುವವರು ಕೈಮುಗಿದರು. ಸಾಹೇಬರು ಕೆಳಗಿಳಿದರು. ಕೂಡಲೇ ಶಂಖ ಮತ್ತು ತುತ್ತೂರಿಯ ಶುಭಧ್ವನಿ. ಆ ಧ್ವನಿಯಲ್ಲೇ ಶರ್ಮಾ ಸಾಹೇಬರು ಮೆಲ್ಲಮೆಲ್ಲಗೆ ಮುಂದೆ ಹೆಜ್ಜೆಹಾಕಿದಾಗ ಪಕ್ಕದಲ್ಲಿದ್ದ ರಣಜಿತ ಬಾಬು ನಗುನಗುತ್ತಾ ಅರಿಕೆ ಮಾಡಿಕೊಂಡರು-

"ಇದು ಭಾರತೀಯ ಸಂಪ್ರದಾಯದ ಸ್ವಾಗತ ಸಾರ್, ಈ ಪ್ರಾಂತದಲ್ಲಿ ಇದೇ ಹೆಚ್ಚು."

"ಒಳ್ಳೆಯದು, ತುಂಬಾ ಒಳ್ಳೆಯದು!" ಶರ್ಮಾ ಸಾಹೇಬರೆಂದರು. ಕಣ್ಣಿನ ಮುಂದೆ ಒಂದು ಅಲೆ ಬಳುಕಿದಂತಾಯಿತು. ಎದುರಿಗೆ ಸರೋಜಿನಿ ನಿಂತಿದ್ದಳು. ಪರಸ್ಪರ ನಮಸ್ಕಾರ ಮಾಡಿದ ಮೇಲೆ ಹೂವಿನ ಹಾರ ಮೇಲೆತ್ತಿದಳು. ಹಿಂಬದಿಯಲ್ಲಿ ಮಿಲಿ, ನೀಲಿ, ಬಿಂದು. ಸಾಹೇಬರು ಕುತ್ತಿಗೆ ಬಗ್ಗಿಸಿದರು. ಸರೋಜಿನಿ ಮಂತ್ರ ಮುಗ್ಧಳಾದವಳಂತೆ ಹಾರ ಹಾಕಿದಳು. ಅದು ಸಾಹೇಬರ ಎರಡೂ ತೋಳುಗಳನ್ನು ಬಳಸಿತು. ಆಮೇಲೆ ಅವರು ಸರಿಯಾಗಿ ನಿಂತರು. ಸರೋಜಿನಿಯ ಎದೆ ತಿದಿಯೊತ್ತತೊಡಗಿತು. ಅದೆಷ್ಟು ಯೋಚಿಸಿದ್ದಳು, ಆದರೆ ಏನೂ ಬಾಯಿಂದ ಹೊರಡಲಿಲ್ಲ. ಅನ್ಯಮನಸ್ಕತೆಯ ಗುಂಗಿನಲ್ಲಿರುವಂತೆಯೆ ಶರ್ಮಾ ಅವರಿಗೆ ಹತ್ತಿರದಲ್ಲೇ ಯಾರೋ ಮಾತಾಡುತ್ತಿದ್ದಾರೆ ಅಂತ ಅನಿಸಿತು. ಬಲಿದತ್ತ ಇನ್ನೂ ನೆಲಕ್ಕಿಳಿದವನಂತ ಗಡಿಬಿಡಿಗೊಂಡು ಸರೋಜಿನಿಯ ಕಡೆ ಬೆರಳು ಮಾಡಿ ಹೇಳುತ್ತಿದ್ದಾನೆ "ಮೈ ವೈಫ್ - ನನ್ನ ಹೆಂಡತಿ."

ಪರಿಸ್ಥಿತಿ ಮಾಮೂಲು ಮಟ್ಟಕ್ಕೆ ಬಂತು. ರಣಜಿತ ಬಾಬು ಆತುರಾತುರವಾಗಿಯೆ ಎಲ್ಲರ ಪರಿಚಯ ಮಾಡಿಸಿದರು. ಕುತ್ತಿಗೆಯಲ್ಲಿ ಜೋಲಾಡುತ್ತಿದ್ದ ಹಾರವನ್ನು ಸರಿಪಡಿಸಿಕೊಳ್ಳುತ್ತಾ ಸಾಹೇಬರ ಗತ್ತಿನಲ್ಲಿ ಶರ್ಮಾ ಹೇಳಿದರು-

"ತಮಗೆಲ್ಲ ತುಂಬ ವಂದನೆಗಳು. ತಾವೆಲ್ಲ ನನ್ನನ್ನು ತುಂಬಾ ಗೌರವಿಸಿದ್ದೀರಿ."

ಸಾಹೇಬರನ್ನು ಸ್ಟೇಜಿನ ಮೇಲೆ ಕರೆದುಕೊಂಡು ಹೋದರು. ಕಾರ್ಯಕ್ರಮ ಶುರುವಾಯಿತು.

ಸ್ನೇಹಿತರು ದಾರಿಯಲ್ಲೇ ಅಭಿವಂದನೆ ಸಲ್ಲಿಸಿದರು-"ಮಿಸ್ಟರ್ ದಾಸ್, ನೀವು ತುಂಬ ಅದೃಷ್ಟವಂತರು."

ರಣಜಿತ ಬಾಬು ಬಾಯಿ ತುಂಬಾ ಹೊಗಳಿದರು - "ನನ್ನ ಪರವಾಗಿ ಅಭಿನಂದನೆಗಳನ್ನು ದಯವಿಟ್ಟು ತಿಳಿಸಿಬಿಡಿ. ನಾನೇ ಯಾಕೆ ಸ್ವತಃ ಹೇಳೋದಿಲ್ಲ ಅಂತ ನಿಮಗೆ ಅನ್ನಿಸಬಹುದು. ನಿಜ ಹೇಳಬೇಕೆಂದರೆ ನಾನು ಯಾರನ್ನೂ ಅವರ ಎದುರಿಗೇ ಹೊಗಳೋದಿಲ್ಲ. ಇದು ನನ್ನ ಒಂದು ದೌರ್ಬಲ್ಯ ಅಂತ ಬೇಕಾದರೂ ಅನ್ನಿ."

ಕೈಕೆಳಗಿನವರು, ಸಣ್ಣಪುಟ್ಟ ಕೆಲಸಗಾರರು, ಪರಿಚಯವಿರುವ ಆಂಗ್ಲೊ ಇಂಡಿಯನರು - ಎದುರಿಗೆ ಸಿಕ್ಕ ಪ್ರತಿಯೊಬ್ಬರೂ ಏನೋ ಹೇಳಲ್ಲು ಇಷ್ಟಪಡುತ್ತಿರುವಂತೆ ನಗುತ್ತಾರೆ. ದೂರದಿಂದ ಅವನ ಕಡೆ ಬೆಟ್ಟು ಮಾಡಿ ಏನೋ ಮಾತಾಡಿಕೊಳ್ಳುತ್ತಿದ್ದಾರೆ. ಬಲಿದತ್ತ ಯೋಚಿಸಿದ, - ಅವರು ಏನು ಮಾತಾಡಿಕೊಳ್ಳುತ್ತಿರಬಹುದು. ಬಹುಶಃ ಸರೋಜಿನಿಯ ಕೆಲಸಕಾರ್ಯಗಳನ್ನು

ಕುರಿತೇ ಹೊಗಳಿಕೆಯ ಮಾತುಗಳನ್ನು ಆಡುತ್ತಿರಬಹುದು. ಸರೋಜಿನಿಯ ಸಮಾಜ, ಆ ರಾತ್ರಿಯ ಸಮಾರಂಭದ ವ್ಯವಸ್ಥೆ, -ಇವೆಲ್ಲ ವಿಚಾರಗಳೂ ಎಲ್ಲರಿಗೂ ಬಿರುಸಿನ ಚರ್ಚೆಯ ಮಾತಾಗಿದೆ. ಹಾಗಾಗಿ ದೊಡ್ಡವರು, ಸಣ್ಣವರು ಎಲ್ಲರೂ ಏನಾದರೂ ಮಾತಿಗೆ ಇಳಿದು ಒಂದೆರಡು ಮಾತು ಸೇರಿಸಲು ಹಾತೊರೆಯುತ್ತಿದ್ದಾರೆ. ಅಂತಹ ಕಡೆಗಳಲ್ಲಿ ಅವನು ಸ್ವಲ್ಪ ರಿಸರ್ವ್ ಆಗುತ್ತಾನೆ. ಯಾರ ಜೊತೆಯಲ್ಲೂ ಹೆಚ್ಚು ಮಾತಾಡುವುದಿಲ್ಲ. ಸಣ್ಣವರಿಗೆ ಎದುರಿಗೇ ಹೊಗಳಲು ಅವಕಾಶ ಕೊಟ್ಟರೆ ಕಂಪನಿಯ ಕೆಲಸ ಹಾಳಾಗಿಹೋಗುತ್ತದೆ ಅಂತ ಯೋಚಿಸುತ್ತಾನೆ. ಅದಕ್ಕೆ ಅವನು ಉತ್ತೇಜನ ನೀಡುವುದಿಲ್ಲ.

ಮಾರನೆಯ ದಿನ ಸಾಹೇಬರ ಸ್ಟೆನೋ ಬಂದಿದ್ದರು. ಅವರು ದಕ್ಷಿಣ ಭಾರತದವರು, - ಗೋಪ್ಯವಾದ ವಿಷಯಗಳೆಲ್ಲ ಅವರ ಸುಪರ್ದಿನಲ್ಲೇ ಇರುತ್ತವೆ. ಹಾಗಾಗಿ ಸುಮ್ಮನೆ ಮುಗುಳ್ನಗೆ ನಗುತ್ತಿರುತ್ತಾರೆ, ಅಷ್ಟೆ. ಅವರ ಬಾಯಿಂದ ಮಾತು ಹೊರಡುವುದು ಅಷ್ಟು ಸುಲಭವಲ್ಲ. ಅಂಥ ಮಹನೀಯರು ತಮ್ಮಷ್ಟಕ್ಕೆ ತಾವೇ ಹೇಳಿದರು. -ಅದೂ ಗುಸು ಗುಸು ಮಾತಿನಲ್ಲಿ, - "ಸಾಹೇಬರು ತುಂಬ ಇಂಪ್ರೆಸ್ಡ್ ಆಗಿದ್ದಾರೆ."

ಮನುಷ್ಯನಿಗೆ ಇನ್ನೇನು ತಾನೆ ಬೇಕು ?

ಉದ್ಯೋಗ ಹಿಡಿದಿರುವವರ ಪಾಲಿಗೆ ಇದೇ ಸ್ವರ್ಗ.

ಆದರೆ ಇಂಥ ಸ್ವರ್ಗಸದೃಶವಾದ ಸಂತೋಷವನ್ನು ಸರೋಜಿನಿಯ ಜೊತೆ ಹಂಚಿಕೊಳ್ಳಲು, ಅದರ ಬಗ್ಗೆ ಮನಸ್ಸುಬಿಚ್ಚಿ ಮಾತಾಡಲು ಅವಕಾಶವೇ ದೊರಕುತ್ತಿಲ್ಲ. ಆ ರಾತ್ರಿ ಕಳೆದ ಮೇಲೆ ಈಚೆಗೆ ಸರೋಜಿನಿಯ ಗಂಭೀರವಾದ ಆಲೋಚನಾಮಗ್ನವಾದ ಮುಖವೇ ಅವನಿಗೆ ಕಂಡುಬರುವುದು - ಅವಳು ಏನೋ ಯೋಚಿಸುತ್ತಿದ್ದಾಳೆ. ಹೊಣೆಗಾರಿಕೆ ಅನ್ನುವುದು ಕೇವಲ ಗೌರವದ ತಿಲಕ ಮಾತ್ರವಲ್ಲ, ಯೋಚನೆಯ ಕಾಡಿಗೆ ಸಹ ಅಂತ ಅವಳು ಯೋಚಿಸುತ್ತಾಳೆ. ಮೊದಲು ಅದೆಷ್ಟು ಯೋಚನೆ ಮಾಡುತ್ತಿದ್ದಳು, - ಮನೆಯ ಕೆಲಸಗಳು, ಅದೇ ಒಂದು ದೊಡ್ಡ ಹೊರೆ, ತರಕಾರಿ ಹೆಚ್ಚುವುದು, ಒಲೆ ಹೊತ್ತಿಸುವುದು, ಅಡುಗೆ ಕೆಲಸ, ಎಲ್ಲ ಒಂದು ಹೊರೆಯೆ. ಜಂಬ ಕೊಚ್ಚಿಕೊಳ್ಳುತ್ತಿದ್ದಳು- "ನಮ್ಮ ಕೆಲಸ, ಒಂದು ಕ್ಷಣ ನಿಭಾಯಿಸಲು ಬರುತ್ತಾ ನಿಮಗೆ ? ಅಕ್ಕಿ ಹೇಗೆ ಅನ್ನ ಆಗುತ್ತೆ ? ನಿಮ್ಮ ಗಂಡು ಜಾತಿಗೆ ಇದೆಲ್ಲ ಏನು ಗೊತ್ತು ? ಒಲೆ ಹಚ್ಚಿದರೆ ಮನೆಯಲ್ಲೆಲ್ಲ ಹೇಗೆ ನಗೆ ಅರಳುತ್ತೆ ಅಂತ ಎಂದಾದರೂ ಯೋಚನೆ ಮಾಡಿದ್ದೀರಾ ? ಒಲೆ ಉರೀಲಿಲ್ಲ ಅಂದರೆ, ಪ್ರಪಂಚವಲ್ಲ ತಣ್ಣಗೆ, ಅದು ಅಗ್ನಿದೇವನ ಮನೆ. ಅದರ ಮಹಿಮೆ ಗಂಡಸರಾದ ನಿಮಗೇನು ಗೊತ್ತು ?" ಗಂಡಸರ ಬಳಿ ಬೆಂಕಿ ಇಲ್ಲ, ಹೆಂಗಸರ ಬಳಿ ಇದೆ. ಸರಿ, ನಿನ್ನ ಬೆಂಕಿ ಮೈಗೆ ತಟ್ಟುತ್ತದೆ, ಹ ಹ ಹ, ಹೆಂಗಸರು ಬೆಂಕಿಯಲ್ಲ. ಶಾಸ್ತ್ರಗಳು ಏನು ಹೇಳುತ್ತವೆ ? ಅವರಲ್ಲಿ ಬೆಂಕಿ ಇದೆ, ಆದರೆ ಆ ಬೆಂಕಿಯಿಂದ ಬೀಜಗಳು ಮೊಳೆಯುವುದಿಲ್ಲ. ಹಾಗಾದರೆ, - ಎಷ್ಟು ದಿನಗಳಾದವು ? ಹಣೆಯಲ್ಲಿ ಬರೆದಿದ್ದರ ತನಗೆ ತಾನೇ ಆಗುತ್ತೆ. ಏನೇ ಇರಲಿ, ತನ್ನ ಅಡುಗೆಮನೆಯ ಕಡೆ ಅವಳು ಈಗ ಹೆಮ್ಮೆಯಿಂದ ನೋಡುತ್ತಿದ್ದಾಳೆ. ನಿಜವಾಗಿಯೂ ಜವಾಬ್ದಾರಿ ಅಂದರೇನು ?

ಏನೋ ಯೋಚಿಸುತ್ತಿದ್ದಾಳೆ. ಬಹುಶಃ ಹೊಸ ಯೋಜನೆಯ ಬಗ್ಗೆ ಇರಬಹುದು. ಅವಳ ಗಂಭೀರವಾದ ಮುಖಭಾವ ಬಲಿದತ್ತನ ಹಿರಿಮೆಯನ್ನು ಹೆಚ್ಚಿಸುತ್ತದೆ ಅಲ್ಲವೆ.

ಪ್ರಪಂಚ ನಗುತ್ತಿದೆ. ಬಲಿದತ್ತ ದಾಸ, ನೀನು ತುಂಬ ಅದೃಷ್ಟವಂತ ಅನ್ನುತ್ತಿದೆ.

ಮನಸ್ಸಿನಲ್ಲಿ ಆನಂದ ಹೀಗೆ ಉಕ್ಕಿಬರುತ್ತಿರಬೇಕಾದರೆ ಅಂತರಾಳದಲ್ಲಿ ಒಂದು ಹೊಸಬೆಳಕು ಕಣ್ಣಿಗೆ ಬೀಳುತ್ತದೆ. ಆ ಬೆಳಕಿನಲ್ಲಿ ಸಾಧಾರಣವಾದ ವಿಚಾರಗಳೂ ಬೇರೆಯಾಗಿಯೆ ಕಾಣುತ್ತಿವೆ. ತಾನು ಮುಂಚೆ ಕಾಣದಿದ್ದುದನ್ನು ಬಲಿದತ್ತ ಈಗ ಕಾಣುತ್ತಿದ್ದಾನೆ. ತೋಟದ ಹೂವುಗಳು - ಎಷ್ಟು ಸೊಗಸಾಗಿವೆ. ಮನೆಯ ಮುಂದೆ ನಿಂತು ದೂರದಲ್ಲಿ ದೃಷ್ಟಿ ನೆಟ್ಟಾಗ ಭೂಮಿ ಎಷ್ಟು ತುಂಬಿತುಳುಕುತ್ತಿರುವಂತೆ ಕಾಣುತ್ತದೆ, -ಅದೇನು ಸೊಬಗು. ಬಾವಿಯ ಬಳಿ ಹುಲ್ಲು ಬೆಳೆದಿದೆ. ಒದ್ದೆ ಹುಲ್ಲಿನ ಮೇಲೆ ಸುಡುಬಿಸಿಲು ಎಷ್ಟು ಸಹಜವಾಗಿ ಮೋಹಕವಾಗಿ ಕಂಡುಬರುತ್ತಿದೆ. ಕಣ್ಣಿಗೆ ಅದೇ ಒಂದು ಹಬ್ಬ. ಅಂಗಳದ ಆಚೆ ಯಾರ ಎತ್ತದು ನಿಂತಿರುವುದು. ಅದೆಷ್ಟು ಎತ್ತರ, ಎಷ್ಟು ದಷ್ಟಪುಷ್ಟವಾಗಿದೆ, ಮೈಯೆಷ್ಟು ನುಣುಪಾಗಿದೆ. ಮೇಲೆ ಕುಳಿತ ನೊಣವೂ ಜಾರುವಂತಿದೆ. ಮನಸ್ಸು ಮುದಗೊಂಡಾಗ ಔದಾರ್ಯ, ದಯೆ ಮೇಲೇಳುತ್ತವೆ, - "ಭಿಕ್ಷುಕ ಅದೆಷ್ಟು ಹೊತ್ತಿನಿಂದ ಅರಚಿಕೊಳ್ಳುತ್ತಿದ್ದಾನೆ. ಲೋ ಹರ್ಷ, ಒಂದು ಹಿಡಿ ಅಕ್ಕಿ ತಂದು ಹಾಕಬಾರದೇನೊ."

ಎರಡು ದಿನಗಳು ಕಳೆದವು. ಬೆಳಗ್ಗೆ ಚಹಾ ಕುಡಿಯುತ್ತಿರುವಾಗ ಯಾವುದೋ ಒಂದು ಹೊಸ ಸುದ್ದಿಯ ಸಾರಾಂಶ ಓದುತ್ತಿರುವಾಗ, ದೃಷ್ಟಿ ಇನ್ನೊಂದು ಸುದ್ದಿಯ ಮೇಲೆ ನೆಡುತ್ತಿದ್ದಂತೆಯೆ ಜೋರಾಗಿ ಕೂಗಿದ, "ಸರೋಜ, ಸರೋಜ, -ನೋಡು ಬೇಗ ಬಾ, ಪೇಪರಲ್ಲಿ ಏನು ಬಂದಿದೆ ನೋಡು."

ಆರಾಮಕುರ್ಚಿಯ ಮೇಲೆ ಲಘುವಾಗಿ ಮೈಯೂರಿದ ಸರೋಜಿನಿ ಓದಿ ನೋಡಿದಳು. ಬಲಿದತ್ತ ಉತ್ತೇಜಿತವಾಗಿ ಹೇಳುತ್ತಿದ್ದ- "ಇದು ನೋಡಿದೆಯಾ, ನೋಡಿಲ್ಲಿ,- 'ಇ' ಕಾರವನ್ನೇ ಬಿಟ್ಟು ಬಿಟ್ಟಿದ್ದಾರೆ ಈ ಪತ್ರಿಕೆಯವರು, ಸರೋಜಿನಿ- 'ಸರೋಜನಿ'- ಉಳಿದಿದ್ದೆಲ್ಲ ಸರಿಯಾಗಿದೆ. ನಿನ್ನ ದೆಸೆಯಿಂದ ನನ್ನ ಹೆಸರೂ ಪೇಪರಿನಲ್ಲಿ ಬಂದುಬಿಟ್ಟಿದೆ, ಸರೋಜ! ತುಂಬಾ ಚೆನ್ನಾಗಿ ಬರೆದಿದ್ದಾರೆ. ಎಲ್ಲ ಸರಿಯಾಗಿದೆ."

"ಈ ತರಹದ ಬೇಕಾದಷ್ಟು ಪೇಪರುಗಳು ಬರುತ್ತವೆ. ಯಾರೋ ಕೆಲಸಕ್ಕೆ ಬಾರದ ಹೆಂಗಸರ ಹೆಸರುಗಳೆಲ್ಲ ಬರ್ತಾ ಇರುತ್ತದೆ. ನೀವು ಹೀಗೇಕೆ ಹೇಳುತ್ತಿದ್ದೀರಿ? ಪೇಪರಿನಲ್ಲಿ ಹೆಸರು ಬಂದರೇನಂತೆ? ಬಂದಿದೆ, ಏನೋ ಬಂದಿದೆ ಅಷ್ಟೆ-"

"ಹಾಗೆ ದೊಡ್ಡ ಸಾಹೇಬರ ಹೆಸರೂ ಇದೆ ನೋಡು. ನಿಜ ಹೇಳಬೇಕೆಂದರೆ ಅವರೇ ಇದಕ್ಕೆ ಕಾರಣ. ಅವರಿಲ್ಲದಿದ್ದರೆ ಇದು ಬರೋದಕ್ಕೆ ಸಾಧ್ಯವಾಗುತ್ತಿತ್ತಾ? ಯಾರು ಕೇಳಬೇಕು? ಎಲ್ಲಾ ದೇಶಗಳಲ್ಲೂ ದರ್ಪ ಅನ್ನೋದು ರಾಜಾಶ್ರಯದಲ್ಲಿರುತ್ತೆ. ರಾಜನ ಪ್ರೋತ್ಸಾಹ ಅಥವಾ ಮನ್ನಣೆಯಿಲ್ಲದೆ ಏನೂ ನಡೆಯೊಲ್ಲ. ವಿನಾಶ್ರಯೇ ನವರ್ತಂತೇ ಕವಿತಾ, ವನಿತಾ, ಲತಾ-"

ಸರೋಜಿನಿ ಹುಸಿಕೋಪವನ್ನು ಪ್ರದರ್ಶಿಸುತ್ತಾ ಹೇಳಿದಳು-"ಏನು, ಬಾಯಿಗೆ ಬಂದಂತೆ ಹೇಳುತ್ತಿದ್ದೀರೀ. ಯಾವನು ರಾಜ? ಯಾರಿದ್ದಾರೆ ಆ ರಾಜನಿಗಾಗಿ, ಎಂಥ

ಕವಿತ, ವನಿತ, ಲತ? ಅಯ್ಯೋ ಹಣ ಬರೆಹವ? ನಿಮಗೇನಾಗಿದೆ, ಹೀಗೆಲ್ಲ ಬಡಬಡಿಸುತ್ತಿದ್ದೀರಿ?"

ಬಲಿದತ್ತ ಎಲ್ಲ ಅರಿತವನಂತೆ ಗಂಭೀರ ಮುಖಭಾವದಿಂದ ತಲೆದೂಗುತ್ತಾ ಹೇಳಿದ-"ನೋಡಿಲ್ಲಿ ಸರೋಜ, ನಿನಗೆ ಗೊತ್ತಾಗಲ್ಲ. ಇದೊಂದು ಐತಿಹಾಸಿಕ ಘಟನೆ. ಪೇಪರಿನಲ್ಲಿ ಹೊಗಳಿಕೆ,-ಇದನ್ನು ಜುಜುಬಿ ಅಂತ ಅಂದುಕೊಂಡಿದ್ದೀಯ ನೀನು? ಇದು ಒಬ್ಬರ ಬಾಯಿಂದ ಬಂದ ಮಾತಲ್ಲ. ಎಲ್ಲರ, ಈ ನಾಡಿನ ಅಭಿಪ್ರಾಯ. ಈ ರೀತಿಯ ಮನ್ನಣೆ, ಇಷ್ಟು ಪಡೆಯೋದಕ್ಕೆ ಜನ ಏನೆಲ್ಲ ಖರ್ಚುಮಾಡ್ತಾರೆ? ಎಷ್ಟು ತ್ಯಾಗ ಮಾಡ್ತಾರೆ? ನಮಗ ಅದು ತನ್ನಷ್ಟಕ್ಕೆ ತಾನೆ ದೊರೆತಿದೆ. ಸ್ವಲ್ಪ ಯೋಚಿಸಿ ನೋಡು, ಎಷ್ಟು ಜನ ಇದನ್ನು ಓದುತ್ತಿರಬಹುದು. ಅಯ್ಯೋ, ಒಂದು ಎರಡು ಕಡೆ ಅಲ್ಲ, ಎಲ್ಲ ಕಡೆಗಳಲ್ಲೂ ಜನ ಇದನ್ನು ಓದುತ್ತಿರಬಹುದು. ನಮ್ಮ ಭಾಷೆಯಿಂದ ಭಾಷಾಂತರಗೊಂಡು ವಿದೇಶಿ ಭಾಷೆಗಳಲ್ಲೂ ಈ ಸುದ್ದಿ ಪ್ರಕಟವಾಗುತ್ತಿರಬಹುದು. ಇಡೀ ಪ್ರಪಂಚದಲ್ಲೆಲ್ಲ ಹರಡಿ ಹೋಗುತ್ತೆ. ಆಫ್ರಿಕ ಅಮೆರಿಕದಲ್ಲಿ ಕುಳಿತ ಜನ ಸಹ ಯೋಚಿಸುತ್ತಿರುತ್ತಾರೆ-ಬಲಿದತ್ತ ದಾಸ್, ಸರೋಜಿನಿ ದಾಸ್, -ಹೇಗಿರಬಹುದು ಅವರು? ಎಂಥ ಜನರಿರಬಹುದು? ಗೊತ್ತಾಯ್ತಾ ಪರೋಲರ, ಪತ್ರಿಕೆಗಳು ಅಂದ್ರೆ ಅಷ್ಟು ಅಗ್ಗ ಅಂತ ತಿಳೀಬೇಡ."

"ಅಗ್ಗ ಅಲ್ಲದೆ ಇನ್ನೇನು ದುಬಾರಿಯೇ? ನಾಲ್ಕು ಕಾಸಿನ ಪೇಪರು, ಅಗ್ಗ ಅಲ್ಲದೆ ಮತ್ತೇನು? ಒಂದು ಸಾರಿ ಓದಿ ಎಸೆದರಾಯಿತು, ಒರಸೋದಕ್ಕೆ ಬಳಿಯೋದಕ್ಕೆ, ಪೊಟ್ಟಣ ಕಟ್ಟೋದಕ್ಕೆ ಬರುತ್ತೆ, ಅದೂ ಇಲ್ಲ ಅಂದ್ರೆ ಒಲೆಹೊತ್ತಿಸಬಹುದು. ಜನ ನೆನಪಿಟ್ಟುಕೊಂಡಿರುತ್ತಾರೆ ಅಂತ ನೀವು ಇದಕ್ಕೇನಾ ಹೇಳೋದು! ನಿಮ್ಮ ಈ ಹುಚ್ಚು ಮಾತುಗಳು-"

"ನೋಡು, ನೋಡು."

ಆದರೆ ನಿಜವಾಗಿಯೂ ನೋಡಿದ್ದು ಅವನೇ, -ಕನಸಿನ ಗುಂಗಿನಲ್ಲಿ ತೂಕಡಿಸುತ್ತಿದ್ದಂತೆಯೆ ಅರ್ಧ ಜಾಗೃತಾವಸ್ಥೆಯಲ್ಲಿ ನೋಡಿದ,-ಅದೇ ದೊಡ್ಡ ಮೋಟಾರು ಕಾರು, ಒಂದು ಬಾರಿ ನೋಡಿದ ಮೇಲೆ ಮತ್ತೆಂದೂ ಅಪರಿಚಿತ ಎನ್ನಿಸುವಂತಿಲ್ಲ, ಅದೇ ಅವರ ಮನೆಬಾಗಿಲಿನತ್ತ ಸಾಗಿಬರುತ್ತಿದೆ, ಖಾಲಿ ಇಲ್ಲ, ದೊಡ್ಡ ಸಾಹೇಬರು -ಮಿಸ್ಟರ್ ಶರ್ಮಾ ಇಳಿಯುತ್ತಾರೆ. ಅರೆ, -ದಾರಿಹೋಕರೆಲ್ಲ ಎಲ್ಲಿದ್ದರೂ ಅಲ್ಲಿಯೆ ನಿಂತುಬಿಡುತ್ತಾರೆ. ಮುಖಗಂಭೀರ. ಅಕ್ಕಪಕ್ಕದವರು ಮಿಸ್ಟರ್ ಶರ್ಮಾ ಅವರಿಗೆ ನಮಸ್ಕಾರ ಮಾಡುವುದಕ್ಕಾಗಿ ಓಡಿ ಬರುತ್ತಿದ್ದಾರೆ. ಈ ಕಡೆ ಕೈತೋರಿಸುತ್ತಾ ಪಿಸುಗುಟ್ಟುತ್ತಿದ್ದಾರೆ. ಬಂದರೆ ಈ ಕಡೆಗೇ ಬರೋದು? -ಈಗೇನು ಮಾಡುವುದು?

"ಸರೋಜ, ಸರೋಜ-" ಒಳಗೆ ಹೋಲಾ ಹುಚ್ಚನಂತೆ ಈ ಕೋಣೆಯಿಂದ ಆಫೀಸಿಗೆ ಓಡಾಡುತ್ತಿದ್ದಾನೆ. ಅಂಗಿಯನ್ನು ಕಳಚಿ ಆ ಕಡೆ ಎಸೆಯುತ್ತಾನೆ-ಇದು ಕೊಳಕು. ಆಮೇಲೆ ಕಾಲುಚೀಲ ಎತ್ತಿ ವಾಸನೆ ನೋಡಿ ರೊಯ್ಯಾಂತ ಬಿಸಾಡುತ್ತಾನೆ.

ಬಾಗಿಲಿನ ಮೇಲೆ ಹಗ್ಗಕ್ಕೆ ಬಟ್ಟೆಗಳನ್ನು ತೂಗಿ ಹಾಕಿದ. ಬಟ್ಟೆಗಳನ್ನೆಲ್ಲ ಎಳೆದು ಒಟ್ಟಾಗಿ ಒಂದು ಮೂಲೆಯಲ್ಲಿ ಅಡಗಿಸಿಡುತ್ತಿದ್ದಾನೆ. ಒಳಗಡೆ ನಡುಮನೆಯಲ್ಲಿ ಕಸ ಬಿದ್ದಿದೆ-ಪೊರಕೆ ಕೈಯಲ್ಲಿ ಹಿಡಿದು ಗುಡಿಸುತ್ತಿದ್ದಾನೆ, ಆಮೇಲೆ ಹೌಹಾರಿ ಎತ್ತರಿಸಿದ ದನಿಯಲ್ಲಿ ಅರಚುತ್ತಾನೆ-"ಸರೋಜ! ನನ್ನ ಪ್ಯಾಂಟು, ಶರ್ಟು-" ಆಮೇಲೆ "ಹರ್ಷ-ಹರ್ಷ-ಹರ್ಷ-ನಿತಾಯಿ-!" ಕುರ್ಚಿ ಹಿಡಿದು ಆಕಡೆಯಿಂದ ಈಕಡೆ. ತಲೆ ಬಾಚಿಕೊಂಡಿಲ್ಲವೆಂದು ನೆನಪಿಗೆ ಬರುತ್ತದೆ. ಕನ್ನಡಿಯ ಮುಂದೆ ಒಂದೇ ಹಾರಿಗೆ ಹಾರುತ್ತಾನೆ. ಗಡ್ಡ ಕೆರೆದುಕೊಳ್ಳಲು ಆಗಲಿಲ್ಲವಲ್ಲ, ಏನು ಮಾಡೋದು, ಮುಖದಲ್ಲಿ ಬೆವರು ಮೂಡಿತು. ಪ್ಯಾಂಟು ಏರಿಸಿದಾಗ ಒಳಗಡೆ ಏನೂ ಹಾಕಿಕೊಂಡಿಲ್ಲ ಅಂತ ನೆನಪಾಯಿತು. ಬಾತ್‌ರೂಮಿನಿಂದ ಸರೋಜಿನಿ ಹೊರ ಬಂದಳು, "ಏನು, ಏನಾಯಿತು" ಅಂದಳು.

"ಸಾಹೇಬರು, -ಸಾಹೇಬರು, -ನನ್ನ ಬಟ್ಟೆ ಎಲ್ಲಿ?" ಸರೋಜಿನಿ ಬೀರು ತೆಗೆದು ಅವನ ಬಟ್ಟೆಗಳನ್ನು ತಂದು ಮುಂದಿಟ್ಟಳು. ಅವಸರದಲ್ಲಿ ಮೈಮೇಲೆ ಹಾಕಿಕೊಳ್ಳುತ್ತಿದ್ದಂತೆಯೇ ಸಿಪಾಯಿ ಬಂದು ಹೇಳಿದ,

"ಸಾಹೇಬರು ಬಂದವ್ರೆ, ದೊಡ್ಡ ಸಾಹೇಬರು ತಾವೇ ಬಂದವ್ರೆ. ಬುದ್ಧ್ಯೋರನ್ನ ಹುಡುಕ್ತಾ ಅವ್ರೆ. ಹೊರಗಡೆ ಸುತ್ತಾಡ್ತಾ ಅವ್ರೆ."

"ಅಯ್ಯಯ್ಯೋ, ಕೂತುಕೋಳ್ಳೋದಿಕ್ಕೆ ಕುರ್ಚಿ ಯಾರೂ ಕೊಡ್ಲಿಲ್ವೆ ಈಡಿಯೆಟ್?"

ಬಲಿದತ್ತ ಆಶ್ಚರ್ಯದಿಂದ ಹೇಳಿದ -"ಏನು, ಕೂತುಕೊಳ್ಳೋದು ಬೇಡ ಅಂದ್ರು ಸಾಹೇಬರು, ತೋಟ ನೋಡುತ್ತಿದ್ದಾರಾ?" ಹಾಗೂ ಹೀಗೂ ಏದುಸಿರು ಬಿಡುತ್ತಾ ತರಾತುರಿಯಲ್ಲಿ ಬಲಿದತ್ತ ಸಿದ್ಧನಾದ. ಪ್ಯಾಂಟನ್ನು ಸರಿಯಾಗಿ ಸೊಂಟಕ್ಕೆ ಏರಿಸಲಾಗಲಿಲ್ಲ. ಷರ್ಟು ಹಿಂದುಗಡೆ ಮೇಲೆದ್ದು ಅವಸ್ಥೆಯಾಗಿ ಕಾಣುತ್ತಿತ್ತು. ಅಸ್ತವ್ಯಸ್ತವಾದ ಕಾಲರಿನ ಮೇಲೆ ಟೈಯಿನ ಗಂಟು ಮಲಗಿತ್ತು. ಅದರ ಮೇಲೆ ಕೋಟು. ಅವನು ವಿಶ್ವಪ್ರಯತ್ನ ಮಾಡಿ ತಯಾರಾಗಿದ್ದಾನೆ. ಸರೋಜಿನಿ ಬಂದು ಹೇಳಿದಳು, "ಯಾಕೆ ಇನ್ನೂ ಹೋಗ್ಲಿಲ್ಲ, ಪೇಟ ಸುತ್ತ್ಕೋದರಲ್ಲೇ ಕಚೇರಿಯೆಲ್ಲ ಖಾಲಿಯಾಗಿತ್ತಂತೆ." ಯಾರೋ ಟಪಾರ್ ಅಂತ ಚಾಟಿಯಿಂದ ಹೊಡೆದಂತಾಯಿತು. ಆ ಪೆಟ್ಟಿನಿಂದಲೇ ಅವನು ಮುಂದೆ ಓಡಿದ. ಹೆಜ್ಜೆ ಹಾಕುತ್ತಿದ್ದ ಹಾಗೆಯೆ ಬೂಟಿನ ಲೇಸು ಅಳ್ಳಕವಾಗಿದೆ, ಕೋಟಿನ ಗುಂಡಿಗಳು ಮೇಲೆ ಕೆಳಗಾಗಿವೆ ಅನಿಸಿತು. ಕೈಗೆ ಗಡಿಯಾರ ಕಟ್ಟಿಕೊಳ್ಳಲು ಆಗಲಿಲ್ಲ. ಗುಂಡಿ ಸರಿಪಡಿಸಿಕೊಂಡು ಕಾಲಿನ ಹರಡನ್ನು ಅಗಲಿಸಿಕೊಂಡು ಬೂಟನ್ನು- ಸರಿಪಡಿಸಿಕೊಂಡು ಹೊರಕ್ಕೆ ಓಡಿದ. ಮನಸ್ಸಿನಲ್ಲಿ ಸುಮ್ಮನೆ ಗಡಿಬಿಡಿ, ಅಬ್ಬಾ! ಏನಪ್ಪಾ ಗತಿ!-ನೆಮ್ಮದಿಯೆ ಇಲ್ಲ, -ಈಗ ತಾನೆ ಕೆಲಸಮಾಡುತ್ತಲೆ ಹಾಗೇ ಎದ್ದು ಬಂದಿದ್ದೇನೆ, ಟೀಕುಟಾಕಾಗಿ ಬರಲಾಗಲಿಲ್ಲ. ವೇಳೆಯೆ ಇಲ್ಲ ಅನ್ನುವ ದೌಲು. ಮಿಸ್ಟರ್ ಶರ್ಮಾ ಬೂಟಿನ ತುದಿಯಿಂದ ಒಂದು ಬದನೆಕಾಯಿ ಗಿಡದ ಬುಡವನ್ನು ಕೆರೆದು ಏನೋ ನೋಡುತ್ತಿದ್ದರು. ಬಲವಂತವಾಗಿ ಏದುಸಿರುಬಿಡುತ್ತಾ ಅವರ ಹಿಂದೆ ಬಂದುನಿಂತ ಬಲಿದತ್ತ ಅರಚಿದ, "ಗುಡ್‌ಮಾರ್ನಿಂಗ್ ಸರ್, -ಬ್ರಿಂಜಾಲ್ ಸರ್-"

ಆಶ್ಚರ್ಯ ತುಂಬಿದಂತೆ ಶರ್ಮಾ ಸಾಹೇಬರು ಹಿಂದಿರುಗಿ ನೋಡಿದರು. ಅವನನ್ನು ನೋಡುತ್ತಲೆ ಗೊತ್ತಿಲ್ಲದ ಹಾಗೆಯೆ ಅವರ ಬಾಯಿಂದ ಹೊರಬಂತು, "ಗುಡ್‌ಮಾರ್ನಿಂಗ್". ಹಾಗ ಹೇಳಿದ ಮೇಲೂ ಅವನ ಕಡೆ ಅವರು ತಿರುಗಿ ನೋಡಲಿಲ್ಲ. ಬಲಿದತ್ತ ಯಾವುದೋ ವರದಿ ಒಪ್ಪಿಸುವಂತೆ ಹುರುಪಿನಿಂದ ಹೇಳುತ್ತಾ ಹೋಗುತ್ತಿದ್ದಾನ, "ಇದು ಬೋಡು ಬದನಕಾಯಿ ಅಂತ, ಬೇಕಾದಷ್ಟು ಬಿಡುತ್ತದೆ. ನಿಜ ಹೇಳಬೇಕೆಂದರೆ ಸಾಸಿವೆ ಹಿಂಡಿ ಗೊಬ್ಬರವೇ ಇದರ ಬಂಡವಾಳ, ಗೊಬ್ಬರ ಕೊಳೆತಷ್ಟು ಫಸಲು ಚೆನ್ನಾಗಿ ಬರುತ್ತೆ."

ನಗುತ್ತಾ ನಗುತ್ತಾ ಶರ್ಮಾ ಹತ್ತಿರ ಬಂದು ಬಗ್ಗಿ ಅವರ ಭುಜ ತಟ್ಟಿ ಹೇಳಿದರು, "ಎಕ್ಸಲೆಂಟ್, ನೀವು ಬಹಳ ವಿಲಕ್ಷಣ ಸ್ವಭಾವದವರು!"

ಆಮೇಲೆ, "ಅಂದಹಾಗೆ ನಿಮ್ಮ ಮಿಸೆಸ್ ಎಲ್ಲಿದ್ದಾರೆ?"

ಸಮ್ಮೋಹನಗೊಂಡಂತೆ ದೂರದಲ್ಲಿ ದೃಷ್ಟಿ ನೆಟ್ಟಿದ್ದಾನೆ ಬಲಿದತ್ತ. ಹೊರಗಡೆ ಗೇಟಿನ ಬಾಗಿಲು ತೆಗೆದಿದೆ. ಮೋಟಾರು ಕಾರಿಲ್ಲ. ಯಾರೂ ಇಲ್ಲ. ಎಷ್ಟು ಬಾರಿ ಯೋಚನೆ ಮಾಡುತ್ತಾನೋ, ಅಷ್ಟು ಬಾರಿ ಕಾಣಿಸಿಕೊಳ್ಳುತ್ತಿದೆ-ಮೋಟಾರು ಕಾರು ಹೋಗುತ್ತಿದ್ದಂತೆ, ದೂರ ಸರಿಯುತ್ತಾ ಸರಿಯುತ್ತಾ ಸಣ್ಣಗಾಗುತ್ತಿದ್ದಂತೆ. ಆಮೇಲೆ ಮುಂದಿನ ನೋಟ, ಸರೋಜಿನಿ ಬೆಲೆಬಾಳುವ ಬಟ್ಟೆಗಳನ್ನು ಹಾಕಿಕೊಂಡು ವ್ಯಾನಿಟಿಬ್ಯಾಗ್ ಅಲ್ಲಾಡಿಸುತ್ತಾ ಕಾರಿನಲ್ಲಿ ಹತ್ತಿ ಕುಳಿತುಕೊಳ್ಳುತ್ತಿದ್ದಾಳೆ. ಆಮೇಲೆ-ಮಾತುಕತೆ ಶುರುವಾಗಿರಬಹುದು. ಆ ಸಮಿತಿಯ ವಿಚಾರವಾಗಿ ಸರೋಜಿನಿ ತನ್ನ ಯೋಜನೆಯನ್ನು ಕುರಿತು ಮಾತಾಡುತ್ತಿರಬಹುದು. ಯಾವಾಗಲೂ ಸಿದ್ಧ, ಎಲ್ಲ ವಿಚಾರಗಳಲ್ಲೂ ಪಳಗಿದವಳಂತೆ, ಅನುಮಾನ ಸಂಕೋಚ ಸ್ವಲ್ಪವೂ ಇಲ್ಲ. ಅದನ್ನು ನೋಡಿದಾಗ ಅವರೆಂದರು, -"ಹಾಗಾದರೆ ನಡೀರಿ ಮಿಸೆಸ್ ದಾಸ್, ನಿಮ್ಮ ಸಮಿತಿಯ ಸ್ಥಿತಿಗತಿಗಳನ್ನು ನೋಡಿಕೊಂಡು ಬರೋಣ".

ಅವಳು ಏಳಿಗೆ ಪಡೆಯುತ್ತಿದ್ದಾಳೆ. ಅದಕ್ಕಾಗಿ ಪುರಸ್ಕಾರ ಸಿಗುತ್ತಿದೆ. ಇದರಿಂದ ತನಗೆ ತಾನೇ ಅವಳು ಮುಂದಿನ ಮೆಟ್ಟಿಲುಗಳನ್ನು ಹತ್ತಬಹುದು.

ಆದರೂ ಹಳೆಯ ಸಂಸ್ಕಾರಗಳು ಎಲ್ಲಿಂದಲೋ ಬಂದು ಅವನನ್ನು ಹಿಡಿದೆಳೆಯುತ್ತದೆ. ಮನಸ್ಸು ಸಪ್ಪೆಯಾಗುತ್ತದೆ. ಆಲೋಚನೆಯ ಸರಣಿ ಗಲಿಬಿಲಿಗೊಳ್ಳುತ್ತದೆ. ಹಿಂದೆ ಹಿಂದೆ ಹೆಜ್ಜೆಹಾಕುತ್ತಾ ಯಾವುದೋ ಗೋಡೆಗೆ ಭುಜಕೊಟ್ಟು ನಿಲ್ಲುತ್ತಾನೆ. ಯೋಚಿಸುತ್ತಾನೆ-ಸುಖ ಯಾವುದು, ದುಃಖ ಯಾವುದು ? ಒಮ್ಮೊಮ್ಮೆ ಬೆನ್ನುಹುರಿಯಿಂದ ಹಿಡಿದು ತಲೆಯವರೆಗೂ ಬೆಂಕಿಯ ಝಳ ಹರಿದಂತಾಗುತ್ತದೆ. ಆಮೇಲೆ ಅದು ಇದು ಅಂತ ಹಳು-ಹನ್ನೊಂದರ ವಿಚಾರ ಬರುತ್ತದೆ, ಭವಿಷ್ಯದ ಆಸೆಗಳ ಕನಸು, ಹೊಟ್ಟೆಪಾಡಿನ ಹೋರಾಟದಲ್ಲಿ ಗೆದ್ದು ನೆಮ್ಮದಿಯಿಂದ ಬದುಕುವ ಕನಸು. ಬಾಯಿಬಿಟ್ಟುಕೊಂಡು ಬಾಗಿಲಿನಾಚೆ ನೋಡುತ್ತಿದ್ದಾನೆ. ಕಣ್ಣುಬಿಟ್ಟಾಗ ಗೇಟು ಸದ್ದಾಗುತ್ತದೆ. ನಿತಾ ಗೇಟು ಹಾಕುತ್ತಿದ್ದಾನೆ.

ನಿತಾಯಿಯನ್ನು ಕಂಡಕೂಡಲೇ ಕೆಂಡವಾಗಿ ಅಧಿಕಾರಿಯ ದರ್ಪದಿಂದ ಬಲಿದತ್ತ ಬೈಯ್ಯತೊಡಗಿದ.

"ರ್‍ಯಾಸ್ಕಲ್, ಎಲ್ಲದರಲ್ಲೂ ಸೋಮಾರಿತನ. ಗೇಟು ಹಾಗೆ ಹಾರೊಡೆದರೆ ಯಾವುದಾದರೂ ದನ ನುಗ್ಗಿ ತೋಟ ಹಾಳು ಮಾಡೋದಿಲ್ಲವೆ? ನಿಮ್ಮಪ್ಪ ನೋಡಿಕೊಳ್ತಾನಾ? ನಾನ್‌ಸೆನ್ಸ್! ಎಲ್ಲಾದ್ರೂ ಒಂದು ಕಡೆ ಹೋದ ಅಂದ್ರೆ ಹೂರಟೇ-ಹೋದ. ನೀವೆಲ್ಲ ಯಾಕಿರೋದು ಮತ್ತೆ ಕತ್ತೆ ಕಾಯೋದಿಕ್ಕೆ?-"

"ಬುದ್ಧಿ-" ಕೈಯುಜ್ಜುತ್ತಾ ನಿತಾ ಕೈತೊಳೆದುಕೊಳ್ಳುವ ಭಂಗಿಯಲ್ಲಿ ಹೇಳುತ್ತಿದ್ದಾನೆ- "ಬುದ್ಧಿ, ಇದ್ರಲ್ಲಿ ನಂದೇನು ತಪ್ಪೈತೆ ಬುದ್ಧಿ."

"ಬ್-ಆ-ಯ್-ಮುಚ್ಚು ಹಾಳಾದವನೆ! ಮತ್ತೆ ಬಾಯ್ ತೆಗೀತಾನೆ. ನಾನು ಯಾರಂತ ಗೊತ್ತಿಲ್ವಾ?" ಪಟಪಟ ಅಂತ ಕಾಲು ಜಾಡಿಸುತ್ತಾ ಬಲಿದತ್ತ ಮನೆಯ ಒಳಗಡೆ ಹೊರಟು ಹೋಗುತ್ತಾನೆ.

ಗೊತ್ತಿದ್ದೊ ಗೊತ್ತಿಲ್ಲದೆಯೊ ಸ್ವಂತ ವಿಮರ್ಶೆ ಮಾಡಿಕೊಳ್ಳಬೇಕಾದರೆ ಬೇರೆಯವರೂ ನೆನಪಿಗೆ ಬರುತ್ತಾರೆ. ಸೇರು-ಪಾವು-ಚಟಾಕುಗಳು, ತೂಕದ ಬಟ್ಟುಗಳಂತೆ. ಬದುಕಿನಲ್ಲಿ ನಿಶ್ಚಿಂತೆಯಿಂದ ಹೆಜ್ಜೆ ಹಾಕುತ್ತಿರಬೇಕಾದರೆ ಪ್ರತಿಯೊಬ್ಬ ಮನುಷ್ಯನೂ ಕಾಲು ನಡುಗುತ್ತಿದ್ದಂತೆಯೆ ತನ್ನ ಒಳಿತು ಕೆಡಕುಗಳನ್ನು ಯೋಚಿಸುತ್ತಾನೆ. ಈ ನಿಟ್ಟಿನಲ್ಲಿಯೆ ಅನೇಕ ಮಂದಿ ಅಳತೆಗೋಲುಗಳಂತೆ ನೆನಪಿನಲ್ಲಿ ಮೂಡುತ್ತಾರೆ. ಅವರೆಲ್ಲ ಅವನಿಗೆ ಗೊತ್ತಿರುವ ಪರಿಚಯವಿರುವ ಜನ. ಸಣ್ಣ ತೂಕದ ಬಟ್ಟಿನೊಡನೆ ಹೋಲಿಸಿ ಅವನು ತನ್ನ ಏಳಿಗೆಯನ್ನು ಅಳೆದು ಅಂದಾಜುಮಾಡುತ್ತಾನೆ. ಆಳು ನಿತಾ ಹರ್ಷನನ್ನು ಕಣ್ಣಮುಂದೆ ತಂದುಕೊಂಡಾಗ ತನ್ನ ದೊಡ್ಡತನಕ್ಕಾಗಿ ತುಂಬ ಖುಷಿಪಡುತ್ತಾನೆ. ದೊಡ್ಡ ತೂಕದ ಬಟ್ಟನ್ನು ಮುಂದಿರಿಸಿಕೊಂಡಾಗ-ಬಲಿದತ್ತನ ಕಡೆ ನೋಡಿದಾಗ-ಅವನಿಗೆ ತನ್ನ ನೆಲೆ ಎಲ್ಲಿ ಎಂದೇ ಗೊತ್ತಾಗುವುದಿಲ್ಲ. ಸೂಜಿ ಮುನ್ನುಗ್ಗಿ ತಾಳೆಮರದ ಎತ್ತರವನ್ನು ಅಳೆದಂತಾಗುತ್ತದೆ ಅವನಿಗೆ. ಸಾಧಾರಣ ಮನುಷ್ಯ ತನ್ನ ಮಟ್ಟದ್ದೇ ಆದ ಅಳತೆಗೋಲನ್ನು ಆರಿಸಿಕೊಳ್ಳುತ್ತಾನೆ. ಅದರಿಂದ ಅಳೆದುಕೊಂಡಾಗ ಒಮ್ಮೊಮ್ಮೆ ದೊಡ್ಡವನಾಗಿ ಕಾಣುತ್ತಾನೆ. ಇದು ಹಾಗೋ ಹೀಗೋ ಅನ್ನುವ ತಾಕಲಾಟದಲ್ಲಿ ಯಾವಾಗಲೂ ಅರೆಮನಸ್ಸಿನವನಾಗಿರುತ್ತಾನೆ. ಅಳುಕು ಇದ್ದೇ ಇರುತ್ತದೆ. ಬಲಿದತ್ತ ಬನುವನ್ನೂ ಶರ್ಮಾ ಅವರು ಪಾಂಡೆಯನ್ನು ನೆನೆಸಿಕೊಳ್ಳುತ್ತಾರೆ.

ಪಾಂಡೆ, -ಯೋಚಿಸುತ್ತಿದ್ದಂತೆಯೇ ಕುತ್ತಿಗೆ ಹಿಚುಕಿದ ಹಾಗಾಗುತ್ತದೆ.

ಚಿಂತೆಯ ಹೊರೆ ನೆನಪಿನಲ್ಲಿಳಿಯುತ್ತದೆ, -ಆಳವಾದ ದರ್ಶನ, -ಮನುಷ್ಯನ ಬುದ್ಧಿಯ ಭಗವಂತ ಸೃಷ್ಟಿಯ ಸಾರಸರ್ವಸ್ವ, - ಬದುಕಿಗೊಂದು ಉದ್ದೇಶವಿದೆ, -ಬದುಕಿರುವುದರಿಂದ ಭವಿಷ್ಯದ ಬಗ್ಗೆ ಸಹ ಹೊಣೆಗಾರಿಕೆಯಿದೆ, ಇಂದಿನ ಆಗುಹೋಗುಗಳ ಬಗ್ಗೆ ಇದ್ದೇ ಇರುತ್ತದೆ, ಬದುಕು ಸೋಮಾರಿತನಕ್ಕೆ, ವಿಷಾರಾಮಗಳಿಗೆ ಬಲಿಯಾಗುವುದಕ್ಕಲ್ಲ ಇರುವುದು, ಅದೊಂದು ಸಾಧನ.

ಮನುಷ್ಯನ ಬದುಕು ಪ್ರಾಣಿಗಳ ಬದುಕಿನಂತೆ ದೈವನಿಯಾಮಗಳಿಗೆ ಬದ್ಧವಾಗಿಲ್ಲ.

ಶರ್ಮಾ ಆರಾಮ ಕುರ್ಚಿಯಿಂದ ತಟ್ಟನೆ ಎದ್ದು ಚಡಪಡಿಸಿ ವರಾಂಡದಲ್ಲಿ ಒಂದು ಸುತ್ತು ಹಾಕುತ್ತಾರೆ. ಪಾಂಡೆಯ ಹೆಸರು ಯಾವಾಗ ನೆನಪಿಗೆ ಬಂದಿತ್ತು ? ಗೊತ್ತಿಲ್ಲ, ಆದರೆ ಮನಸ್ಸು ಉತ್ಸಾಹಗುಂದಿದೆ. ಬದುಕಿನುದ್ದಕ್ಕೆ ಬೇರೆಯವರ ಕೈಯಿಂದ ತಿನ್ನುತ್ತಾ ತಿನ್ನುತ್ತಾ ಇವತ್ತು ತಮ್ಮ ಕೈಯೆ ನಡುಗುತ್ತಾ ತಳಮಳ. ಎಂಥ ಪಶ್ಚಾತ್ತಾಪ. ಕೆಲಸಕ್ಕೆ ಬಾರದ ನಿಟ್ಟುಸಿರು. ಹೆಜ್ಜೆ ಹೆಜ್ಜೆಗೂ ಸಾಯುವ ಗೋಳು,-ಆಕಳಿಕೆ. ನೆನಪಿಗೆ ಬರುತ್ತದೆ, ಈ ಭೂಮಿಯಲ್ಲಿ ಬದುಕನ್ನೆಲ್ಲ ಒಂದೆಡೆ ಬಲವಂತವಾಗಿ ತುರುಕಿ ದಂತಿದೆ. ಹಕ್ಕಿಗಳು ಹಾರುತ್ತಿವೆ, ಅವುಗಳ ಪ್ರಪಂಚದಲ್ಲಿ ಅವುಗಳಿಗೆ ತಮ್ಮದೇ ಆದ ಸ್ಥಾನಮಾನಗಳಿವೆ. ಮಣ್ಣುಹುಳ ತೆವಳುತ್ತಾ ಹರಿಯುತ್ತದೆ, -ತನ್ನದೇ ಆದ ಪ್ರಪಂಚದಲ್ಲಿ ಅದಕ್ಕೂ ಸ್ಥಾನವಿದೆ. ಹುಲ್ಲಿನಿಂದ ಮುಚ್ಚಿದ ಸಣ್ಣ ಜಾಗದಲ್ಲೂ ರೂಪ ಮತ್ತು ವಿನ್ಯಾಸಗಳ ವೈಷಮ್ಯದ ದೆಸೆಯಿಂದಾಗಿ ಅನೇಕ ರೀತಿಯ ಸೃಷ್ಟಿಕಾರ್ಯ ನಡೆದಿದೆ. ಅದೇ ಬೆಟ್ಟದಿಂದ ತೂಗಿನೋಡಿದಾಗ ಸಣ್ಣ ಹುಲ್ಲು, ಎಲೆಗಳಿಂದ ತುಂಬಿದ ಆಲದಮರವನ್ನೂ ನೋಡಬಹುದು. ಹುಲ್ಲಿನ ಎತ್ತರ ಒಂದು ಇಂಚೇ ಆಗಲಿ, ಏನಂತೆ. ಬಹುಶಃ ಒಂದು ಮಟ್ಟದ ಪ್ರಪಂಚಕ್ಕೆ ಇನ್ನೊಂದು ಮಟ್ಟದ ಅರಿವಿರುವುದಿಲ್ಲ, ಆದರೂ ಹೋರಾಟದ ಫಲವನ್ನು ಉಣ್ಣಲೇ ಬೇಕು. ಮಣ್ಣು ಹುಳುಗಳ ಪ್ರಪಂಚ ಇಟ್ಟಿಗೆ ತುಂಡುಗಳ ಬುಡದಲ್ಲಿ ಹೂತುಹೋಗುತ್ತದೆ. ಆರನೇ ನಂಬರಿನ ಸಣ್ಣಗುಂಡಿನ ಪೆಟ್ಟು ಹಕ್ಕಿಗಳ ಪ್ರಪಂಚಕ್ಕೇ ಪ್ರಳಯಾಂತಕವಾಗುತ್ತದೆ. ಪಾಂಡೆಯ ಭಾವರಾತ್ರಿಯ ಪ್ರಪಂಚ ಶರ್ಮಾರವರ ಅರಮನೆಯ ಮೇಲೆ ಹಾರುತ್ತಿರುವಂತೆಯೆ ಇದ್ದಕ್ಕಿದ್ದ ಹಾಗೆ ಜೇನುಹುಟ್ಟಿನ ಮೇಲೆ ಡಿ.ಡಿ.ಟಿ. ಮಳೆಗರೆ ದಂತಾಗುತ್ತದೆ. ಶರ್ಮಾ ಸಾಹೇಬರು ಬೆಚ್ಚುತ್ತಾರೆ, -ಒಳಮನಸ್ಸಿನ ಆವರಣದ ಮೇಲೆ ನೆರೆಹರಿದಂತಾಗುತ್ತದೆ. ಪಾಂಡೆ, - ಗ್ರಂಥಗಳು, - ಬದುಕಿನ ಗೊತ್ತುಗುರಿಗಳು, - ಅವೆಲ್ಲ ಎಷ್ಟು ದೂರ, ಅದೆಷ್ಟು ದೂರ ?

ಹಾರುತ್ತಿರುವ ಮೋಡಗಳು ಮರೆಯಾಗುತ್ತದೆ.

ಸಾಹೇಬರ ಬಂಗಲೆ ಅರಮನೆಯಂತಿದೆ.

ವಿಶಾಲವಾದ ತೋಟ. ಓರಣವಾಗಿಟ್ಟಿರುವುದರಲ್ಲಿ ಒಳ್ಳೆಯ ಅಭಿರುಚಿ ಕಂಡುಬರುತ್ತದೆ.

ಧೂಳಿಲ್ಲ, ಗಲಾಟೆಯಿಲ್ಲ, ಕಣ್ಣು ಚುಚ್ಚುವ ಬಡತನವಿಲ್ಲ.

ಜನರು ಸಹ ಇಲ್ಲ, ಬಂಗಲೆಯ ಬುಡದಲ್ಲಿ ಬೆವರು ಒಣಗಿಹೋಗುತ್ತದೆ.

ಮೂಳೆಗಳ ಗೊಬ್ಬರದಿಂದ ಹೂವು ಚೆನ್ನಾಗಿ ಅರಳುತ್ತದೆ. ಗುಲಾಬಿಯ ಒಂದೊಂದು ಎಸಳಿನಲ್ಲೂ ರಕ್ತ ತುಂಬಿ ಹೋಗುತ್ತದೆ.

ಬೆವರಿನ ಗೊಬ್ಬರದಲ್ಲೇ ಇಡೀ ಪ್ರಪಂಚದ ಚಟುವಟಿಕೆ, ಎಲ್ಲ ಕೈಚಳಕ ಅಡಗಿರುವುದು. ಇದೊಂದು ಅನಿವಾರ್ಯವಾದ ಸಂಸ್ಕಾರ.

ಪೂಜೆಗಾಗಿ ಬಲಿಕೊಡುವುದು, ಅದೂ ಒಂದು ಸಂಸ್ಕಾರವಲ್ಲವೆ ?

ಎಲ್ಲ ರೂಢಿಗಳು, ನಡವಳಿಕೆಗಳು. ಇದ್ದವು, ಇವೆ, ಇರುತ್ತವೆ-ಇರುವುದಿಲ್ಲ ಅನ್ನುವ ಪ್ರಶ್ನೆಯೇ ಏಳುವ ಸಂಭವವಿಲ್ಲ.

ಉದ್ಯೋಗ-ಹಲ್ಲುಗಿಂಜುವಿಕೆ ಈ ವಿಕೃತ ಪ್ರಪಂಚದೊಳಗಡೆ ಇರುವ ಅಲಕಾಪುರಿ ಇದು. ಎಷ್ಟು ಸೊಗಸಾಗಿದೆ!

ಇದೊಂದು ಸುಂದರವಾದ ಕಲೆ, ಕಲೆಯಿಲ್ಲದಿದ್ದರೆ ಎಂಥ ಸಂಸ್ಕಾರ ?

ಪಾಂಡೆ, -ಅವನಿಗೆ ಕಲೆ ಅಂದರೇನು ಗೊತ್ತು ?

ಬದುಕಿನ ಬಗೆಗೆ ಜನ ಭಾಷಣ ಬಿಗಿಯುತ್ತಾರೆ. ಆದರೆ ಅವರೆಲ್ಲ ಸರಿಯಾದ ಬಾಳನ್ನು ಬಾಳುತ್ತಾರೇನು ? ಪಾಂಡೆಗೆ ಎಂದಾದರೂ ಬದುಕಲು ಅವಕಾಶ ದೊರೆತಿದೆಯೆ ? ಸುಮ್ಮನೆ ಕೊರತೆಗೀಡಾದವರು ಅನುಭವಿಸುವ ಹಿಂಸೆಯ ವಿಷದ ಅನುಭವ. -ಜನ ಅದನ್ನೇ ತಾವು ಕಂಡುಕೊಂಡ ಹೊಚ್ಚ ಹೊಸ ದರ್ಶನ ಅನ್ನುವ ಹಣೆಪಟ್ಟಿ ಕಟ್ಟುತ್ತಾರೆ.

ಕಾಂತಿಯಿಂದ ಕೂಡಿದ ಮುಖ, ತುಟಿಯಂಚಿನಲ್ಲಿ ನಗೆ, ಮೆಲ್ಲಗೆ ಸೀಟಿ ಹೊಡೆಯುತ್ತಾ ನಾಲ್ಕೂ ಮೂಲೆಗಳನ್ನು ಸುತ್ತಿಬರುತ್ತಾರೆ. ಇಲ್ಲಿ ಎಲ್ಲಕ್ಕೂ ಒಂದು ಉದ್ದೇಶವಿದೆ, ಗುರಿಯಿದೆ, ತೋಟ ಹೇಳುತ್ತದೆ-ನೋಡು, ನನ್ನ ಕಡೆ ನೋಡು, ಗುಲಾಬಿ ತನ್ನನ್ನು ಯಾರಾದರೂ ಕೊಂಡೊಯ್ಯಲಿ ಅಂತ ಹುಡುಕಾಡುತ್ತದೆ. ಜಾಜಿ ಬಳ್ಳಿಗಾಗಿ ಕಾಯುತ್ತದೆ. ನೇಸರು ಮುಳುಗಿದ ಮೇಲೆ ಅದರ ನೆರಳಡಿಯಲ್ಲಿ ಯಾವುದೋ ಕಂಪು ಅಡಗಿ ಕುಳಿತಿದ್ದು ಯಾರದೋ ರೂಪವನ್ನು ನೆನಪಿಸು ತ್ತದೆಯೇನೋ ಎಂಬಂತಿರುತ್ತದೆ. ಕೆಂಪು, ಹಳದಿ,-ಮನಸೆಳೆಯುವ ಬಗೆಬಗೆಯ ವಿದೇಶಿ ಹೂವುಗಳು, ಬಣ್ಣದ ಹೆಮ್ಮೆಯಲ್ಲಿ ತಲೆಯೆತ್ತಿ ನಿಂತಿವೆ, -ನಾಚಿಕೆ ಕಾಣದ ಕಣ್ಣಿಗೆ ತಂಪು ನೀಡುವ ಭೋಗಭೂಮಿಯಲ್ಲಿ ಬೆಳೆದು ನಿಂತಿವೆಯೇನೊ ಎಂಬಂತಿರುತ್ತವೆ. ಎಲ್ಲದಕ್ಕೂ ಏನೋ ಒಂದು ಉದ್ದೇಶವಿದೆ. ಹಿತವಾಗಿ ಕಚಗುಳಿಯಿಡುವ ಸೋಫಾ, ಏಕಾಂತವಾಗಿರುವ ಕೊಠಡಿ, ಸೊಗಸಾದ ಪರದೆಗಳು, ತೋಟದ ಕಡೆಗೆ ಒಯ್ಯುವ ಅಗಲವಾದ ರಸ್ತೆ, ಹಾಗೆಯೆ ಮುಂದುಗಡೆ ತೆರೆದ ಬಯಲು. ಎಲ್ಲವೂ ಬದುಕಿನಲ್ಲಿ ಆನಂದ ಅನುಭವಿಸುವುದಕ್ಕಾಗಿ, ಮೋಜಿಗಾಗಿ, -ಪಾಂಡೆ ಹಾಗೂ ಅವನಂತಿರುವ ಜನರು, -ಅವರೆಲ್ಲ ಮೂರ್ಖರು, ಅವರಿಗೆ ಇದಲ್ಲ ಏನೂ ಗೊತ್ತಿಲ್ಲ.

ಗೊತ್ತಾದರೆ ಕಾವಿ ನಿಲುವಂಗಿ ಮೈಯಿಂದ ಕೆಳಗಿಳಿಯುತ್ತದೆ.

ಗೊತ್ತಾಗುವುದಿಲ್ಲ ಅಂದರೆ ಅನ್ವೇಷಣೆ, ಕಚ್ಚಾಟ, ತಪ್ಪುತಿಳಿವಳಿಕೆ, ಇಬ್ಬಂದಿ ಮನಸ್ಸು. ಜನ ಇವುಗಳಲ್ಲೇ ಬಿದ್ದು ತೊಳಲಾಡುತ್ತಾರೆ.

ಹಾಗಾಗಿಯೆ, -ಮೊದಲು ತಿಳಿವಳಿಕೆ ತುಂಬ ಅಗತ್ಯ. ಬೊಗಳುವ ನಾಯಿಗಿರುವ ತಿಳುವಳಿಕೆ, ಕಡೇಪಕ್ಷ ಎರಡು ಹೊತ್ತು ಹೊಟ್ಟೆ ತುಂಬಾ ಊಟ.

ಜನ ಏನೇ ಹೇಳಲಿ, ವಿಮರ್ಶೆ ಮಾಡಲಿ, ಸುಖ ಕೇಳಿಕೊಂಡು ಬಂದ ಜನ ಸುಖ ಅನುಭವಿಸಿಯೆ ಹೋಗುವರು. ರಾಜ ರಾಜ್ಯವಾಳುತ್ತಾನೆ, ಸಾವಿರಾರು ನಾಯಿಗಳು ಬೊಗಳಿದರೇನಂತೆ. ಪ್ರಕೃತಿಯ ಮಡಿಲಲ್ಲಿ ಸುಖ ಅನುಭವಿಸುವ ಪ್ರಾಣಿಗಳು ಕಣ್ಣಿನಲ್ಲಿ ನಾಚಿಕೆ ತುಂಬಿಕೊಂಡಿರುವುದಿಲ್ಲ. ಮೂರ್ಖರು ಕೂಗಾಡುತ್ತಾರೆ, ನತದೃಷ್ಟರು ಗಲಾಟೆ ಮಾಡುತ್ತಾರೆ, ಅವರನ್ನು ಕೇಳುವವರು ತಾನೆ ಯಾರು ?

ಇವೆಲ್ಲ ಯೋಚಿಸುತ್ತಿದ್ದಂತೆ ಮೈಯಲ್ಲಿ ರಕ್ತ ಉಕ್ಕೇರುತ್ತದೆ. ಕುತ್ತಿಗೆಯ ಸುತ್ತಲೂ ಮಾಂಸಖಂಡಗಳು ಉಬ್ಬಿ ಸೆಟೆದುಕೊಳ್ಳುತ್ತವೆ. ಚೂಪು ನೋಟ ಇನ್ನೂ ದೃಢವಾಗುತ್ತದೆ. ತುಟಿಯ ಕಮಾನು ಕಲ್ಲಿನಂತೆ ಬಿಳುಪು. ದೊಡ್ಡ ಕನ್ನಡಿಯಲ್ಲಿ ಅದರ ನೆರಳು ಬೀಳುತ್ತದೆ. ಗಂಡು, ಜೋರಾದ ಗಂಡು. ಮುಷ್ಟಿಯಲ್ಲೇ ಹಿಡಿದುಕೊಳ್ಳುವ, ಹಿಚುಕಿ ಹಾಕುವ ಬಯಕೆಯಾಗುತ್ತದೆ. ಹಿಂಡಿ, ತಿರುಚಿ ರೋಯ್ ಅಂತ ಎಸೆಯೋಣವೆನಿಸುತ್ತದೆ. ಹಿಂದಿನ ಕಾಲದಿಂದ ತಲೆತಲಾಂತರಗಳ ಮೂಲಕ ಅದೆಷ್ಟೊ ಯುಗಗಳ ಗುಣಗಳು ಮಾನವ ಜಾತಿಯ ಬೆಳವಣಿಗೆಯ ಹಾದಿಯಲ್ಲಿ ಕಾಲಕಾಲಕ್ಕೆ ಅಗತ್ಯಕ್ಕನುಗುಣವಾಗಿ ಮನಸ್ಸಿನಲ್ಲೇ ಹುಟ್ಟಿಕೊಂಡಿವೆ, -ಅದರ ಅಂಶವೇ ಮನಸ್ಸಿನಾಳದಲ್ಲಿ ಮತ್ತೆ ಹುಟ್ಟಿಕೊಳ್ಳುತ್ತವೆ. ಆದಿಮಾನವನ ಅವತಾರವಾಗುತ್ತದೆ. ಅವನಿಗೆ ಭೋಗ ಬೇಕು, ಏಕಾದಶಿಯ ನೀರಿಲ್ಲದ ಉಪವಾಸವಲ್ಲ. ಅವನು ತನ್ನ ಗುರಿಯಲ್ಲಿ ಗೆಲುವನ್ನು ಕಾಣಬಯಸುತ್ತಾನೆ, ಆದರೆ ಅನುಸರಿಸುವ ಹಾದಿಯ ಒಳಿತು ಕೆಡಕುಗಳನ್ನು ಲಕ್ಷಿಸುವುದಿಲ್ಲ. ಅಡ್ಡಿ ಆತಂಕಗಳು ಎದುರಾದರೆ ಸಹಿಸುವುದಿಲ್ಲ, ಪೂಜೆಯ ಸಮಯಕ್ಕೆ ಪ್ರತ್ಯಕ್ಷಳಾದ ದೇವಿಯ ನೆರಳಿನಂತೆ ಚಾಟಿಯಿಂದ ಹೊಡೆದು ಬಡಿದು ಅಡಚಣೆಯನ್ನು ದೂರಮಾಡುವುದು ಸ್ವಾಭಾವಿಕ, -ಏಟುಕೊಟ್ಟು ಅಡ್ಡಿಯನ್ನು ಹಿಂದಿಕ್ಕಿ ನೇರಗೊಳಿಸಿ, ಎರಡೂ ತೊಡೆಗಳಿಂದ ಬಲವಾಗಿ ಅದುಮಿ ಕುದುರೆ ಓಡಿಸುವುದು, ಕುದುರೆ ದಣಿದರೂ ಪರವಾಗಿಲ್ಲ, ಅದರ ಮೈಯಿಂದ ಬೆವರು ಹರಿದರೂ ಸರಿಯೆ, ಅದರ ಬಾಯಿ ನೊರೆಗಟ್ಟಿದರೂ ಸರಿಯೆ. ಕುದುರೆ ಸವಾರ ಉನ್ಮತ್ತನಾಗಬಲ್ಲ. ಮಂಗಳಗ್ರಹದ ರಕ್ತವರ್ಣದ ಮನುಷ್ಯ, -ನೆಪೋಲಿಯನ್ ಅಥವಾ ಹಿಟ್ಲರಿಗಿಂತ ಅವನ ಸ್ಥಿತಿ ಬೇರೆಯಾಗಿದ್ದುದು ಅವಕಾಶದ ಅಭಾವದಿಂದಲೆ ಹೊರತು ಸಾಮರ್ಥ್ಯದ, ಚಾಣಾಕ್ಷತೆಯ ಕೊರತೆಯಿಂದಲ್ಲ. ಅವನ ಹಿಂದೆ ಅವರು ಕೂಡಿಟ್ಟಿದ್ದ ಐಶ್ವರ್ಯ, ಸೈನ್ಯಬಲ, ಬೆಂಬಲಿಗರು ಎಲ್ಲ ಇದ್ದರು. ಅದು ಅವರಿಗೆ ಹುಟ್ಟಿನಿಂದಲೇ ಬಂದದ್ದು ಅಷ್ಟೆ. 'ಸಂಭವಾಮಿ ಯುಗೇ ಯುಗೇ'. ಶರ್ಮಾಸಾಹೇಬರು ತೋಟದಲ್ಲಿ ಅಡ್ಡಾಡುತ್ತಿದ್ದಾರೆ.

ರೆಕ್ಕೆ ಕತ್ತರಿಸಿದ ಜ್ವಾಲಾಮುಖಿ ಅಡ್ಡಾಡುತ್ತಿದೆ.

ಅವರ ಎದ್ದು ಕಾಣುವ ದೃಢವಾದ ಮೈಕಟ್ಟು, ಸೊಗಸಾದ ಪೋಷಾಕು.

ಬದುಕು-ಅದು ಎಲ್ಲ ಸೊಬಗುಗಳನ್ನು ನೀಡಿದೆ, ನೀಡುತ್ತದೆ. ಬದುಕು ಸುಂದರ.

ಮೈಯೊಳಗಿನ ಬಯಕೆಯ ಧಗಧಗಿಸುವ ಬೆಂಕಿ, ಅದರ ಹಸಿವು ಎಂದೂ ಇಂಗುವಂತಿಲ್ಲ-

ಅದೇ ಅವರ ಮೈಕಾಂತಿ, ಯೌವನ.

ಅದೂ ಹುಟ್ಟಿಸಿದ ಆ ದೇವರ ಆಶೀರ್ವಾದವೇ.

ಯಂತ್ರ ಚಲಿಸುತ್ತಿದೆ. ಜೀವ ಭೋಗವನ್ನು ಅನುಭವಿಸುತ್ತದೆ, ಯಾವ ಕ್ಷೋಭೆಯೂ ಇಲ್ಲ.

"ಕಣ್ಣಿಲ್ಲ, ಕಿವಿಯಿಲ್ಲ, ಅಂಟಿತೆಂದರೆ ಅದರಲ್ಲಿ ನನ್ನ ತಪ್ಪಿಲ್ಲ."

ಆದರೂ, -ಜಬರದಸ್ತು, ದಬಾವಣೆ, ಆರೋಪಗಳ ಗೊಡವೆಗೆ ಬಿದ್ದಿಲ್ಲ. ಎಲ್ಲ

ತನಗೆ ತಾನೇ ಹುಡುಕಿಕೊಂಡು ಬಂದಿದೆ. ಅವರು ಎಷ್ಟೋ ವೇಳೆ ತಮಗೆ ತಾವೇ ಅಂದುಕೊಂಡಿದ್ದಾರೆ, ಉಪಯೋಗಿಸಿದ್ದನ್ನು ಹಿಂದಕ್ಕೆ ಕೊಟ್ಟರೆ ಮನಸ್ತಾಪ, ಕಹಿ ಉಂಟಾಗುತ್ತದೆ.

ಅವರ ಹೃದಯ ವಿಶಾಲವಾಗಿದೆ,- ಹೊಯ್ದಾಟವಿಲ್ಲ, ದುಃಖವಿಲ್ಲ, ಯಾವ ರೀತಿಯ ಪಶ್ಚಾತ್ತಾಪವೂ ಇಲ್ಲ.

ಸಿಕ್ಕಿದ್ದೆಲ್ಲ ಅವರಿಗೆ ಸಿಗಬೇಕಾದ್ದೇ. ಅವರ ಯೋಗ್ಯತೆಗೆ ಅವೆಲ್ಲ ಸರಿಯಾದ ಕಾಣಿಕೆಗಳೇ. ದೀಪದ ಹುಳುಗಳು ಮುತ್ತಿಕೊಂಡರೆ ದೀಪದ್ದೇನು ತಪ್ಪು ?

ಆ ಮೊದಲ ದಿನಗಳು ನೆನಪಿನಲ್ಲಿ ಮೂಡುತ್ತವೆ, -ಆಗ ಅವರಿಗಿನ್ನೂ ಹದಿನೈದು ವಯಸ್ಸು. ಮನೆ ಕೆಲಸದಾಳು ವಿಲಾಸಿಯಾ. ಕೆಲಸದವಳಂತಿರಲಿಲ್ಲ ಅವಳು. ಶುಭ್ರವಾದ ಅಣಿ ಮಾಡಿದ ಉಡುಗೆತೊಡುಗೆ ಧರಿಸುತ್ತಿದ್ದಳು. ತಲೆ ಬಾಚಿಕೊಂಡಿರುತ್ತಿದ್ದಳು. ಮೇಲೊಂದು ಬಿಳಿಬಟ್ಟೆ. ಒಳ್ಳೆಯ ಇಂಗ್ಲಿಷ್ ಮಾತಾಡುತ್ತಿದ್ದಳು. ಅವಳ ನಡಿಗೆಯಲ್ಲಿ ಆತ್ಮವಿಶ್ವಾಸ ಮತ್ತು ಮುಖದಲ್ಲಿ ಒಂದು ತರಹದ ಕಳೆ ಮನೆಮಾಡಿದ್ದವು. ವಿಲಾಸಿಯಾ ಯಾವಾಗಲೂ ನಗುತ್ತಿದ್ದಳು.

ವಿಲಾಸಿಯಾ ಆ ದೊಡ್ಡ ಮನೆಗೆ ಶೋಭೆ ತರುವಂತಿದ್ದಳು. ಅವಳು 'ಆಯಾ' ಆಗಿದ್ದಳು.

ಅವರು ನೀಟಾಗಿರುವಂತೆ ನೋಡಿಕೊಳ್ಳುವ ಹೊಣೆಗಾರಿಕೆ ವಿಲಾಸಿಯಾದಾಗಿರುತ್ತಿತ್ತು.

ವಿಲಾಸಿಯಾ ಮುಖ ತೊಳೆಸುತ್ತಿದ್ದಳು, ಬಟ್ಟೆ ತೊಡಿಸುತ್ತಿದ್ದಳು. ವಿಲಾಸಿಯ ಅವರಿಗೆ ಸ್ನಾನಮಾಡಿಸುತ್ತಿದ್ದಳು. ಸರಿಯಾಗಿ ಹದಿನೈದು ವರ್ಷಗಳು ಕಳೆದಿದ್ದವು. ಮೈಯಲ್ಲಿ ಕೆಲವು ಜಾಗಗಳು ರೇಡಿಯೊ ಸ್ವಿಚ್ ಹಾಕಿದಂತೆ ಜುಂ ಅಂತ ಪ್ರತಿಕ್ರಿಯೆ ಸೂಚಿಸುತ್ತಿದ್ದವು. ಕಾಡುಮೃಗದ ಸಹಜ ಸ್ವಭಾವ ಸಾಮಾಜಿಕವಾಗಿ ಬಟ್ಟೆಬರೆಗಳ ಸೋಗಿನಲ್ಲಿ ಅಡಗಿ ಕುಳಿತಿತ್ತು. ಹೇಗೋ ಏನೋ ಗೊತ್ತಿಲ್ಲ, -ಒಂದು ದಿನ, -ಮೃಗದ ಸ್ವಭಾವ ತಲೆಯೆತ್ತಿಬಿಟ್ಟಿತು. ವಿಲಾಸಿಯಾ ಇಷ್ಟೆಲ್ಲ ನೋಡಿಕೊಳ್ಳುತ್ತಾಳೆ, ಎಷ್ಟಾದರೂ ಅವರ ಸ್ವಂತ ಪರಿಚಾರಿಕೆ ತಾನೆ!

ವಿಲಾಸಿಯಾ ನಕ್ಕಿದ್ದಳು, ಅವಳ ಧ್ವನಿ ನೆನಪಿಗೆ ಬರುತ್ತದೆ. ಎರಡು ಸಣ್ಣ ಸಣ್ಣ ಹಲ್ಲಿನ ಸಾಲುಗಳು, ಸಣ್ಣಸಣ್ಣ ಕೆನ್ನೆಗಳ ಮುಖ, ಹಣೆಯ ಮೇಲೆ ಸುಳಿದಾಡುವ ಮುಂಗುರುಳು, ತಲೆಯ ಮೇಲೊಂದು ವಸ್ತ್ರ. ಅವಳ ಕಣ್ಣು ಮೂಗುಗಳು ಹೇಳಿಕೊಳ್ಳುವ ಹಾಗೇನಿರಲಿಲ್ಲ. ಅಂಥ ಸೆಳೆತವೇನಿರಲಿಲ್ಲ. ನೆನಪಿಸಿಕೊಂಡಂತೆಲ್ಲ ಅವಳ ಮುಖ ಮನಸ್ಸಿನ ಪಟಲದ ಮೇಲೆ ಮೂಡುತ್ತದೆ, ಮುಖ ಮರೆಯಾಗಿ ಒಂದು ಗೊತ್ತಿಲ್ಲದ ಅಲೆ ತೇಲಿಬರುತ್ತದೆ. ವಿಲಾಸಿಯಾ ಕೇವಲ ಕೆಲಸದವಳು ಮಾತ್ರವೇ ಅಲ್ಲ ಅಂತ ಅದು ಸಾರಿ ಹೇಳುತ್ತದೆ. ಅವಳಿಗೂ ಒಂದು ವ್ಯಕ್ತಿತ್ವವಿದೆ, ಅವಳೂ ಮನುಷ್ಯಳು.

ಹದಿನೈದರ ಹರಯದಲ್ಲೇ ವಿಲಾಸಿಯಾ ಪರಿಚಯ ಮಾಡಿಸಿದ್ದಳು, -

ಮನುಷ್ಯ ಶರೀರ, ಆಶ್ಚರ್ಯ! ಅಬ್ಬಬ್ಬಾ!

ವಿಲಾಸಿಯಾ ಅವರಿಗೆ ಆಟದ ಬೊಂಬೆಯಾದಳು. ಮನದಾಳದ ಹೊನ್ನ

ಹೊಳೆಯ ಹರಿವಿನಲ್ಲಿ ಬರೆದ ಮೊದಲ ಮಾತು, ಮನುಷ್ಯನ ಬೊಂಬೆ, -ಅದೇ ಎಲ್ಲಕ್ಕಿಂತ ಚೆನ್ನ.

ಕಿಶೋರಾವಸ್ಥೆಗೆ ಸಹಜವಾದ ಗೋಪನ ಪ್ರಿಯತೆ ಮತ್ತು ಕುತೂಹಲಗಳೊಡನೆ ಹರೆಯದ ಹುಟ್ಟಿನ ವೇಳೆಯ ಕಾಮನಬಿಲ್ಲಿನ ಕಿರಣಜಾಲ ಒಬ್ಬಂಟಿಯಾಗಿದ್ದಾಗ ಸಮಯ ಸಾಧಿಸಿ ತನ್ನ ವಿಚಿತ್ರ ವಾಸ್ತವತೆಗಳ ಬಗೆಗೆ ಅವರು ಆಲೋಚನೆ ಮಾಡುವಂತೆ ಪ್ರೇರಣೆ ನೀಡುತ್ತಿತ್ತು. ಆದರೆ ಅವರು ನೋಡಿದ್ದೇನೆಂದರೆ ಅದರಲ್ಲಿ ಯಾವ ಹೊಸ ವಿಚಾರವೂ ಇಲ್ಲ, ಬಚ್ಚಿಡುವಂತಹದೇನೂ ಇಲ್ಲ, ಎಲ್ಲರಿಗೂ ಗೊತ್ತಿರುವ ವಿಚಾರ. ದುಡಿದು ದಣಿವಾರಿಸಿಕೊಳ್ಳುವ ಈ ಸಮಾಜದಲ್ಲಿ ಮೆಲ್ಲಮೆಲ್ಲನೆ ಗುಟ್ಟಾಗಿ ಪ್ರಯೋಗ ನಡೆಸುವುದಕ್ಕೆ ಎಲ್ಲರಿಗೂ ಸಮಯ ಮತ್ತು ಅವಕಾಶ ಸಿಕ್ಕದೆ. ಜನ ಹೇಳುವುದಿಲ್ಲ ಅಷ್ಟೆ, ಆದರೆ ಗೊತ್ತು, ಅರ್ಥ ಮಾಡಿಕೊಳ್ಳುತ್ತಾನೆ.

ಹೊರಗಿನಿಂದ ಕುತ್ತಿಗೆ ಬಿಗಿದಂತಿರುವ ಮನೆಯ ಸಣ್ಣ ಜುಜುಬಿ ವಿಷಯವನ್ನು ಮುಚ್ಚಿಟ್ಟುಕೊಳ್ಳುತ್ತಾರಲ್ಲ, ಅದನ್ನೇ ದೊಡ್ಡಸ್ತಿಕೆ ಅನ್ನುವುದು. ಅದೇ ಡಿಸಿಪ್ಲಿನ್, ಮತ್ತೇನು ?

ಇದಾದ ಮೇಲೆ ಕಾಲ ಉರುಳಿತು. ಆ ದಿನಗಳನ್ನೆಲ್ಲ ನೆನೆಸಿಕೊಂಡರೆ ನೆನಪಿನ ಆಳದಲ್ಲಿ ಅದೆಷ್ಟೊ ಮುಖಗಳು ತೇಲುತ್ತವೆ, ಮುಳುಗುತ್ತವೆ, ಮತ್ತೆ ತೇಲುತ್ತವೆ. ಅವರು ತುಂಬ ಆಟವಾಡಿದ್ದಾರೆ, ಆಟದ ಸಾಮಾನು ಹಿಡಿದು ಎಸೆದಿದ್ದಾರೆ, ಕಳೆದುಕೊಂಡಿದ್ದಾರೆ, ಮತ್ತೆ ಕೈಯಲ್ಲಿ ಹಿಡಿದಿದ್ದಾರೆ. ಒಟ್ಟಿನಲ್ಲಿ ಒಂದು ವಿಚಾರ ಅರ್ಥಮಾಡಿಕೊಂಡಿದ್ದಾರೆ-ಮನುಷ್ಯರ ನಡುವಣ ಸಂಬಂಧ ಕೇವಲ ಒಂದು ಆಟದಂತೆ ಅಷ್ಟೆ, ತಲೆಕೆಡಿಸಿಕೊಂಡು ಪ್ರಯೋಜನವಿಲ್ಲ. ಎಲ್ಲ ನಿಭಾಯಿಸಿಕೊಂಡು ಹೋಗುತ್ತೇನೆ ಅನ್ನುವುದೂ ಸುಳ್ಳು. ಆಟವೇ ಬದುಕು, 'ದ ಪ್ಲೇ ಇನ್ ದ ಥಿಂಗ್'. ದೊಡ್ಡ ಮನುಷ್ಯರ ಮಗನಾದ ಶರ್ಮ ಮೇಲೇರುತ್ತಲೆ ಹೊರಟರು, ಕೆಳಕ್ಕಿಳಿಯಲಿಲ್ಲ.

ಯಾರೋ ಬರುತ್ತಿದ್ದಾರೆ ?

"ಓಹೋ! ಮಿಸೆಸ್ ದಾಸ್! ಏನ್ಸಮಾಚಾರ ? ಬನ್ನಿ, ಬನ್ನಿ. ನಾನು ನಿಮ್ಮ ವಿಚಾರವೆ ಯೋಚಿಸುತ್ತಿದ್ದೆ ಅಂದ್ರೆ ನಿಮಗೆ ನಂಬಿಕೆ ಬರಲ್ಲ. ಭಾವನೆ ಅನ್ನೋದು ಮನುಷ್ಯನ ಸ್ವಂತ ಅಧಿಕಾರ ವಿಷಯವಲ್ಲವೆ, ಏನಂತೀರಿ ? ಯೋಚಿಸದೆ ಮನುಷ್ಯನಿಗೆ ಬದುಕುವುದಕ್ಕಾಗುತ್ತದೆಯೆ ? ನನಗೇ ಆಶ್ಚರ್ಯವಾಗುತ್ತದೆ.

ಸಾಯಂಕಾಲದ ಹೊತ್ತು ಟೆನ್ನಿಸ್. ಒಂದು ಕಡೆ ಶರ್ಮಾ ಸಾಹೇಬರು ಮತ್ತು ಸರೋಜನಿ, ಮತ್ತೊಂದು ಕಡೆ ರಣಜಿತ ಮತ್ತು ಶ್ಯಾಮಬಾಬು. ಪ್ರೇಕ್ಷಕರೆಂದರೆ ಮಿಲಿ, ನೀಲಿ ಮತ್ತು ಕಂಟ್ರಾಕ್ಟರ್ ಸಕಲತವಾಲಾ.

ರಣಜಿತ ಬಾಬು ಸೋಲುತ್ತಿದ್ದರು.

ರಣಜಿತ ಬಾಬುವಿಗೆ ಸಿಟ್ಟು ನೆತ್ತಿಗೇರುತ್ತಿತ್ತು.

ಅಂದಹಾಗೆ ಅದಕ್ಕೆ ಯಾವ ಗೊತ್ತಾದ ಕಾರಣವೂ ಇರಲಿಲ್ಲ. ಶ್ಯಾಮಬಾಬು ಕಾಲೇಜು ದಿನಗಳಿಂದಲೂ ಒಳ್ಳೆಯ ಆಟಗಾರರು. 'ಸ್ಪೋರ್ಟ್ಸ್‌ಮನ್' ಅಂತಲೇ ಅವರಿಗೆ ಅಡ್ಡ ಹೆಸರು ಬಿದ್ದಿತ್ತು. ಅಗಲವಾದ ಮುಖ ಮತ್ತು ಭರ್ಜರಿ ಆಟದಿಂದ ಅವರು ಆ ಸಿಮೆಂಟಿನ ಟರ್ಫ್ ಮೇಲೆ ತಮ್ಮ ಮೇಲುಗೈ ಪಡೆದುಕೊಳ್ಳುತ್ತಿದ್ದರು. ರಣಜಿತಬಾಬು ಸಹ ಪಳಗಿದ ಆಟಗಾರರು.

ಆದರೂ ಮಾತುಗಳು ಕೇಳಿಬರುತ್ತಿವೆ, ಮಿಲಿ-ನೀಲಿ ತಮಾಷೆ ಮಾಡುತ್ತಿದ್ದಾರೆ. ಅವರು ಲೇವಡಿ ಮಾಡುತ್ತಾ ನಕ್ಕಾಗಲೆಲ್ಲ ರಣಜಿತಬಾಬುರಿಗೆ ಮೆಣಸಿನಪುಡಿ ಎರಚಿದಂತಾಗುತ್ತದೆ. ಸಕಲತವಾಲಾನ ಪಾಲಿಗಾದರೆ ವರ್ಷದ ಕಂಟ್ರಾಕ್ಟುಗಳನ್ನೆಲ್ಲ ನುಂಗಿಹಾಕುವ ದಿನಗಳು ಹತ್ತಿರ ಬಂದಿವೆ. ಅವರು ಈಗ ರಣಜಿತ ಬಾಬುವಿನ ಶಿಫಾರಸಿನ ಮಟ್ಟವನ್ನು ಮೀರಿ ಶರ್ಮಾ ಸಾಹೇಬರ ಶಿಫಾರಸಿನ ಮಟ್ಟ ತಲಪಿದ್ದಾರೆ. ಹುಮ್ಮಸ್ಸಿನಿಂದ ಅವರ ಆಟಕ್ಕೆ ಜಯಕಾರ ಹಾಕುತ್ತಿದ್ದಾರೆ.

ಶರ್ಮಾ ಸಹ ಮನಸ್ಸಿಟ್ಟು ಆಟವಾಡುತ್ತಿದ್ದಾರೆ. ಆತನ ವ್ಯಕ್ತಿತ್ವಕ್ಕೆ ತಕ್ಕ ವಿಸ್ತಾರವಾದ ನಿಲುವು. ಜೋರಾದ ಸರ್ವಿಸ್, ಮಿಂಚಿನ ಓಟ ಮತ್ತು ಸರಿಯಾದ ಪ್ಲೇಸಿಂಗ್ ಎಲ್ಲ ಸೇರಿ ಆ ಗುಂಡನೆಯ ಚೆಂಡಿನಲ್ಲಿ ಜಾದೂ ಮೂಡಿಸಿವೆ. ತಮಗೆ ಇಷ್ಟ ಬಂದ ಕಡೆ ಚೆಂಡು ಹೊಡೆದು ಎದುರಾಳಿ ಪರದಾಡಿ ಪೇಚಿಗೆ ಸಿಕ್ಕಿಹಾಕಿಕೊಳ್ಳುವಂತೆ ಮಾಡುತ್ತಾರೆ. ಹೆಜ್ಜೆಹೆಜ್ಜೆಗೂ ಎದ್ದು ಕಾಣುವ ಸ್ಟೈಲ್, ಅವರದೇ ವಿಶೇಷ ಭಂಗಿಗಳು, ಟೆನ್ನಿಸ್ ರ್‍ಯಾಕೆಟ್ ಕೈಯಲ್ಲಿ ಹಿಡಿದು ತ್ರಿಭಂಗಿ, ಒಂದೊಂದು ಬಾರಿ ಒಂದೇ ಕಾಲಲ್ಲಿ ನಿಂತು ಆಡುವುದು, ದಬಾದಬಾ ಸ್ಟ್ರೋಕ್ಸ್. ಚೆಂಡು, ರ್‍ಯಾಕೆಟ್, ದೇಹ ಮತ್ತು ಗಾಳಿ ಒಂದರೊಳಗೆ ಒಂದು ಸೇರಿಕೊಂಡು ಸಹಜವಾಗಿ ಆಡುತ್ತಿವೆ ಅನಿಸುತ್ತದೆ. ಬಿಚ್ಚು ಮನಸ್ಸಿನಿಂದ ಆಟ ಸಾಗುತ್ತಿದೆ. ಸರೋಜಿನಿ ಜೊತೆಯಲ್ಲಿ ಆಡುತ್ತಿದ್ದಾಳೆ,-ಕಣ್ಣುಗಳನ್ನು ಅಗಲಿಸಿ, ಮೂಗರಳಿಸಿ, ತುಟಿಕಚ್ಚಿ ಬಿರುಗಾಳಿಯಂತೆ ಅವಳು ಮುನ್ನುಗ್ಗಿದಾಗ ರಣಜಿತ ಬಾಬುವಿನ ತಲೆಯಲ್ಲಿ ಚಳಿ ಹತ್ತಿದಂತಾಗಿ ಒಂದು ವಿಚಾರ ಸುಳಿದಾಡುತ್ತದೆ-'ನಥಿಂಗ್ ಸಕ್ಸೀಡ್ಸ್ ಲೈಕ್ ಸಕ್ಸೆಸ್'. ನಿಜಕ್ಕೂ ಶರ್ಮಾ ಗೆಲ್ಲುತ್ತಿದ್ದಾರೆ. ಮಿಲಿಯ ಕೂಗಾಟ ಸಾಗಿದೆ-"ಇನ್ನೂ ಸ್ವಲ್ಪ ಜೋರಾಗಿ ಅಣ್ಣಯ್ಯಾ, ಇನ್ನೂ ಸ್ವಲ್ಪ, ಇನ್ನೂ."

ರಣಜಿತ ಬಾಬು ಸರೋಜಿನಿಯನ್ನು ನೋಡುತ್ತಿದ್ದಾರೆ. ಅವಳು ಅದೆಷ್ಟು ಚೆನ್ನಾಗಿ ಶರ್ಮರವರ ಮೇಲೆ ಅವಲಂಬಿಸುವುದನ್ನು ಕಲಿತಿದ್ದಾಳೆ. ಅವರ ಆಟಗಾರಿಕೆಯ ಬಗ್ಗೆ ಅವಳಿಗೆ ಪೂರ್ತಿಯಾಗಿ ನಂಬಿಕೆಯಿದೆ. ಹೆಸರಾಂತ ಆಟಗಾರರೆನಿಸಿದ ಶ್ಯಾಮಬಾಬು ಸಹ ಅವರ ಎದುರಿಗೆ ತಡಬಡಾಯಿಸಿಹೋಗುತ್ತಿದ್ದಾರೆ, ಶ್ಯಾಮ ಬಾಬು ಅವರಿಗೇನಾಗಿದೆ ?

ಶ್ಯಾಮಬಾಬುವಿಗೆ ಸಂಕೋಚ. ಅವರ ಆಟಗಾರನ ವ್ಯಕ್ತಿತ್ವದ ಮೇಲೆ ನೌಕರಿಯ ಬಂಧನದ ಬೇಡಿಯಿದೆ. ಆ ಕಡೆ ಆಡುತ್ತಿರುವ ಮನುಷ್ಯ ಬರೀ ಎದುರಾಳಿ ಮಾತ್ರವಲ್ಲ, ಮೇಲಧಿಕಾರಿ ಕೂಡ. ಆಟಗಾರರ ಮನೋಭಾವನೆ ಅಂತಾರಲ್ಲ ಅದೂ ಸರಿಯೆ.

ಹೌದು, ಅದೇನೋ ಸರಿ. ಆದರೆ ಪರಿಸ್ಥಿತಿಯನ್ನು ನೋಡಿ ವ್ಯವಸ್ಥೆ ಏರ್ಪಡುತ್ತದೆ.

ಮಳೆ ಬರುವುದನ್ನು ನೋಡಿ ಛತ್ರಿ ಬಿಚ್ಚುತ್ತಾರೆ. ಹೊಟ್ಟೆಪಾಡು. ಆದ್ದರಿಂದಲೇ ಟೆನಿಸ್ ಆಡುವ ಅಗತ್ಯವಿದೆ. ಅದರಿಂದ ದೊಡ್ಡ ಮನುಷ್ಯರೊಡನೆ ಹತ್ತಿರದ ಸಂಪರ್ಕ ದೊರೆಯುತ್ತದೆ. ಆ ಸಂಪರ್ಕದಿಂದ ಏನಾದರೂ ಪ್ರಯೋಜನ ಪಡೆದುಕೊಳ್ಳುವುದು ಸಾಧ್ಯವಾದರೆ ಪಡೆದುಕೊಳ್ಳಬಹುದು. ಟೆನಿಸ್ ಆಡಿ ಅನೇಕರು ಕೆಳಗಿನಿಂದ ಮೇಲೇರಿದ್ದಾರೆ. ಅಂದರೆ ಮೇಲಿನವರನ್ನು ಸೋಲಿಸಿದ್ದಾರೆ ಅಂತ ಅರ್ಥವೆ ? ಇಲ್ಲ, ಅವರಿಗೆ ಆಡುವುದಕ್ಕೆ ಅವಕಾಶ ಮಾಡಿಕೊಟ್ಟು ಮೇಲೇರಿದ್ದಾರೆ. ಶ್ಯಾಮಬಾಬುವಿನ ನೀತಿ ತುಂಬ ಸ್ಪಷ್ಟವಾಗಿದೆ. ರಣಜಿತಬಾಬುವನ್ನು ನೋಡುತ್ತಾರೆ, ಒಳಗಿನಿಂದ ಆಟಗಾರನ ವ್ಯಕ್ತಿತ್ವ ತಲೆಯೆತ್ತುತ್ತದೆ. ಆದರೆ ತಕ್ಷಣ ಲಗಾಮು ಹಿಡಿಯಬೇಕು. ಸರಿ, ಆಡಲಿ ವರ್ಮಾ ಸಾಹೇಬರು, ಎಷ್ಟಾದರೂ ಸಾಹೇಬರಲ್ಲವೆ !

ಇನ್ನು ಸರೋಜಿನಿ. ಅವಳು ಮೈಕುಲುಕಿಸುತ್ತಾ ತೋಳೆತ್ತಿ ಸ್ಟ್ರೋಕ್ ಹೊಡೆದಾಗ ಶ್ಯಾಮಬಾಬು ಸುಮ್ಮನೆ ನೋಡುತ್ತಾ ನಿಂತುಬಿಡುತ್ತಾರೆ. ಕಕ್ಕಾಬಿಕ್ಕಿಯಾಗಿ ಹೋಗುತ್ತಾರೆ. ಆಟದ ಅಗತ್ಯಗಳಿಗಿಂತ ಮಿಗಿಲಾಗಿ ಮನಸ್ಸಿನ ಒಳಗಡೆಯ ಅದುಮಿಡಲಾಗದ ವೇಗದಿಂದ ಅವರು ಕುಣಿಯಲು ಶುರುಮಾಡುತ್ತಾರೆ. ಅವರು ಕುಣಿದಷ್ಟು ಸರೋಜಿನಿ ನಗತೊಡಗುತ್ತಾಳೆ. ಕುಣಿಯಬೇಕು ಅನ್ನುವ ಬಯಕೆ ಉಂಟಾಗುತ್ತದೆ. ನೆಟ್ಟಿನ ಆ ಕಡೆ ಟೆನ್ನಿಸ್ ರ್‍ಯಾಕೆಟ್ ಕೈಯಲ್ಲಿ ಹಿಡಿದು ನಗುನಗುತ್ತಾ ಇಮ್ಮಡಿ ಉತ್ಸಾಹದಿಂದ ಓಡಾಡುತ್ತಾಳೆ. ಈ ಕಡೆ ಶ್ಯಾಮಬಾಬುವಿನ ನರ್ತನ ನಡೆಯುತ್ತಿದೆ.

ತಮ್ಮದು ಎಂಥ ಸ್ಟ್ರೋಕುಗಳು ! ನೆನಪಿಗೆ ಬರುತ್ತವೆ, ಆದರೆ ಹೊಡೆಯುವುದಿಲ್ಲ. ಆದರ ಹೊಡೆತವೆಂದರೆ ಬಂದೂಕಿನ ಗುಂಡಿದ್ದಂತೆ, ರ್‍ಯಾಕೆಟ್ ಎಳೆಗಳು ಬಿಚ್ಚಿಕೊಳ್ಳುತ್ತವೆ ಅಂತ ಜನ ಹೇಳುತ್ತಿದ್ದರು. ಅಂಥವರ ಎದುರಿಗೆ ಈ ಸರೋಜಿನಿ. ಆದರೆ ಇದೇ ಸರಿ.

ಒಟ್ಟಿನಲ್ಲಿ ರಣಜಿತ ಬಾಬುವಿಗೆ ತಮ್ಮ ಪಕ್ಕದಲ್ಲಿ ಶ್ಯಾಮಬಾಬುವಿನ ಕರಡಿ ಕುಣಿತ ನೋಡುವ ಪರಿಸ್ಥಿತಿ ಎದುರಿನಲ್ಲಿ ವರ್ಮಾ ಸಾಹೇಬರು ಗೂಳಿಯಂತೆ ಎರಗುತ್ತಾರೆ. ಮತ್ತೆ ಅವಳು,-ಚಿಟ್ಟೆಯಂತೆ ಗಾಳಿಯಲ್ಲಿ ತೇಲಿಳಿಯುತ್ತಿದ್ದಾಳೆ, ಕೈಗೆ ಸಿಕ್ಕೂ ಸಿಗದಂತೆ, ಹಿಡಿಯುವ ಬಯಕೆ ಉಂಟಾಗುವುದರ ಜೊತೆಗೆ ಹಿಡಿಯಲಾಗದ ಸಂಕಟವೂ ಹೆಚ್ಚುತ್ತಾ ಹೋಗುತ್ತದೆ.

ಹೀಗೆ ಎಷ್ಟು ನಡೆಯುತ್ತವೆ ? ಈಗ ಈ ಆಟದಲ್ಲಿ ಮಜಾ ಇಲ್ಲ. ಬರೀ ನೋವಿದೆ. ಒಂದು ರೀತಿಯ ರೋಗದಂತೆ ಇದು. ಕದಡಿದ ಮನಸ್ಸಿನಿಂದ ರಣಜಿತಬಾಬು ತೀವ್ರವಾಗಿ ಯೋಚಿಸತೊಡಗುತ್ತಾರೆ. ಸಾಮಾಜಿಕ ಸೌಜನ್ಯದ ಬಂಧನ, ಅದರಿಂದಾಗುವ ಉಪದ್ರವ ಹೀಗೆಯೇ. ಮನಸ್ಸಿನ ಒಳಗಡೆ ಎಲ್ಲ ಸುಟ್ಟು ಬೂದಿಯಾಗುತ್ತಿದ್ದರೂ ಹೊರಗೆ ಸ್ವಲ್ಪವನ್ನೂ ತೋರಿಸದೆ ನಗುತ್ತಾ ನಗುತ್ತಾ ಆಡಬೇಕು. ಹೀಗೆ ಆಡುತ್ತಲೆ ಇರಬೇಕು. ಅವರು ಆಡುವ ಹೊಣೆಗಾರಿಕೆ ಹೊತ್ತಿದ್ದಾರೆ. ಇಷ್ಟರ ಮೇಲೆ ಕೆಲಸಕ್ಕೆಬಾರದ ಸಜ್ಜನಿಕೆಯ ಮುಲಾಜನ್ನೇ ಬಿಟ್ಟುಬಿಡೋಣವೆಂದರೆ ವರ್ಮಾ ಅವರು ಅವರ ಸಾಹೇಬರು, ದೊಡ್ಡ ಸಾಹೇಬರು.

ಏನೇ ಆಗಲಿ, -ಈ ಆಟಕ್ಕೂ ಒಂದು ಕೊನೆಯಿದೆ. ವರ್ಮಾ ಎದ್ದರು. ಆಮೇಲೆ

ಸೌಜನ್ಯಕ್ಕಾಗಿ ಸರೋಜಿನಿಗೆ ಕೋಟು ಹಾಕಿಕೊಳ್ಳಲು ಸಹಾಯಮಾಡಿದರು. ರಣಜಿತಬಾಬು ಅತ್ತಇತ್ತ ಅಡ್ಡಾಡಲು ಶುರು ಮಾಡಿದ ಮೇಲೆ ಶರ್ಮಾ ಮಕ್ಕಳಂತೆ ಸರೋಜಿನಿಯ ಕೋಟು ಹಿಡಿದು ಜಗ್ಗಿ ಹೇಳಿದರು, -"ನನಗೆ ಅನುಮತಿ ಕೊಡಿ-", ಸರೋಜಿನಿ ಕೋಟು ಸರಿಪಡಿಸಿಕೊಂಡಳು. ಶರ್ಮಾ ಹೇಳಿದರು,- "ಬನ್ನಿ, ನಿಮ್ಮನ್ನು ನಿಮ್ಮ ಮನೆಯವರೆಗೂ ಬಿಟ್ಟು ಹೋಗುತ್ತೇನೆ."

ಇಬ್ಬರೂ ಕಾರಿನಲ್ಲಿ ಕುಳಿತರು. ರಣಜಿತಬಾಬು ಸಾಹೇಬರಿಗೆ ನಮಸ್ಕಾರ ಮಾಡುತ್ತಾ ಅದೇ ಭಂಗಿಯಲ್ಲಿ ನಿಂತರು. ಕಾರು ಹೊರಟು ಹೋಯಿತು.

ಸಕಲತವಾಲಾ ಹೇಳಿದರು, -"ಬನ್ನಿ ಸಾರ್, ಬನ್ನಿ. ನಿಮಗೆ ತುಂಬಾ ಸುಸ್ತಾಗಿಲ್ಲ ಅಂದರ ಇನ್ನೂ ಒಂದೆರಡಾಟ ಆಡೋಣ-"

ಆಟ ಮುಗಿದಿದೆ. ಬೇರೆ ಯಾರೂ ಇಲ್ಲ. ರಣಜಿತಬಾಬು ಒಬ್ಬರೇ ಇದ್ದಾರೆ. ತಮ್ಮ ಮನೆಯಲ್ಲಿ ಆರಾಮ ಕುರ್ಚಿಯಲ್ಲಿ ಮೈಚೆಲ್ಲಿ ದೂರದಲ್ಲಿ ದೃಷ್ಟಿ ನೆಟ್ಟದ್ದಾರೆ. ಆದರೆ ನೋಡುವಂತಹದೇನೂ ಇಲ್ಲ, ಯಾರೂ ಇಲ್ಲ, ಸುಮ್ಮನೆ ಗೊತ್ತು ಗುರಿಯಿಲ್ಲದೆ ಮನಸ್ಸು ಅಲೆಯುತ್ತಿದೆ. ನಾಲ್ಕೂ ಕಡೆಗಳ ಅಹಮಿಕೆಯ ಜಂಭ ದೂರವಾಗಿ ಕೇವಲ ಆಧಾರ-ಅವಲಂಬನೆಯಿಲ್ಲದ ಶೂನ್ಯ ಮಾತ್ರ ಉಳಿದಿದೆಯಷ್ಟೆ. ಅದರಲ್ಲಿ ಶೂನ್ಯ ದಿಂದ ಹೊರತಾದ ಪ್ರದೇಶವನ್ನಾವರಿಸಿಕೊಂಡಿರುವ ತೇಜಸ್ಸುಳ್ಳ ವ್ಯಕ್ತಿತ್ವ ಹರಿದು ತುಂಡಾಗಿ ಮುದುರಿ ಮೂಲೆಗುಂಪಾಗುತ್ತಿದೆ. ಅದರ ಮರೆಯಿಂದ ಹೊರ ಬೀಳುತ್ತದೆ, ಈ ಭೂಮಿಯದಲ್ಲ, ಆಕಾಶದ್ದು; -ಖಾಲಿ ಆಕಾಶ.

ರಣಜಿತಬಾಬು ಕುಳಿತಿದ್ದಾರೆ, ಕೇವಲ ಇಂದಿನವರಾಗಿ ಅಲ್ಲ, ನೆನ್ನೆಯವರಾಗಿ ಕೂಡ, ಮನುಷ್ಯನಿಗೆ ತಿಳುವಳಿಕೆ ಬಂದಾಗಲೆ ಎಲ್ಲವೂ ಶೂನ್ಯ, ಪೊಳ್ಳು, ಎರಡು ದಿನದ್ದೂ ಅಲ್ಲ ಎರಡು ಕ್ಷಣದ್ದು ಅಂತ ತಿಳಿಯುತ್ತದೆ. ಪ್ರಪಂಚ ಅವನಿಗೆ ಸಪ್ಪೆಯಾಗಿ ಕಾಣುತ್ತದೆ, ಪಡೆದುಕೊಳ್ಳುವ ಕಳೆದುಕೊಳ್ಳುವ ವಿಚಾರದಲ್ಲಿ ನಿರ್ವಿಕಾರ ಮನೋಭಾವನೆ ಮೂಡುತ್ತದೆ, ಉದಾಸೀನವಾಗುತ್ತಾನೆ, ಸುಮ್ಮನೆ ಒಂದು ಪರದೆ ಕಳಚುತ್ತಿದ್ದಂತೆಯೆ ಇನ್ನೊಂದು ಪರದೆ ಕಾಣುತ್ತದೆ, -ರೂಪಾಂತರ. ಬಿಸಿಲು ನೆರಳಿನ ಆಟ ಸಾಗುತ್ತಲೆ ಇದೆ, ಕತ್ತಲೆ ಕುತ್ತಿಗೆ ಹಿಚುಕುತ್ತಾ ಬರುತ್ತಿದೆ. ಮನುಷ್ಯ ಬೆಳಕಿನ ಧಾರೆಯ ಕಣಕಣದಲ್ಲೂ ತೊಳೆದ ಕತ್ತಲನ್ನು ನೋಡುತ್ತಾನೆ, ಕತ್ತಲೆಯಲ್ಲಿ ಬೆಳಕನ್ನು ಕಾಣುತ್ತಾನೆ. ಕತ್ತಲು ಬೆಳಕುಗಳು ಮೇಳೈಸದೆ ರೂಪ ಸೃಷ್ಟಿಯಾಗುವ ಸಂಭವವಿಲ್ಲ, ಕತ್ತಲೆಯಿಲ್ಲದೆ ಮಮತೆಯ ಎಳೆ ಸಾಧ್ಯವಿಲ್ಲ ಅಂತ ಕಂಡುಕೊಳ್ಳುತ್ತಾನೆ. ಆಮೇಲೆ ತಲೆಯೆತ್ತಿ, ಮುಖ ತಿರುಗಿಸಿ ಶೂನ್ಯದತ್ತ ನೋಡುತ್ತಾನೆ,-ಅವನದೇನೂ ಇಲ್ಲ, ಎಲ್ಲ ಸೊನ್ನೆ, ಬಯಲು. ಅವನು ಬೇರೇನೂ ಅಲ್ಲದ ಕತ್ತಲು ಬೆಳಕುಗಳ ಆಟೋಪ ತುಂಬಿದ ಸಮುದ್ರದ ಮೇಲಿನ ಬರಿಯ ಪೊಳ್ಳು ನೆನಪು ಮಾತ್ರ ಅನಿಸುತ್ತದೆ, ಅಲ್ಲಿ ಸುಖವಿಲ್ಲ.

ಅನಾದಿ ಕಾಲದಿಂದಲೂ ಅದೆಷ್ಟು ಜನ ಹೀಗೆ ಕುಳಿತಿದ್ದಾರೆ, ಈ ಶೂನ್ಯವನ್ನೇ ಕುರಿತು ಧ್ಯಾನಮಾಡುತ್ತಾ ಯೋಗಿಗಳು ಕುಳಿತಿದ್ದಾರೆ, -ಬದುಕಿನುದ್ದಕ್ಕೂ.

ಭೋಗಿಗಳು ಸಹ ಹಾಗೆ ಕುಳಿತುಕೊಳ್ಳುವುದನ್ನು ರೂಢಿಮಾಡಿಕೊಂಡಿದ್ದಾರೆ, ಕೆಲವು ಕ್ಷಣಗಳ ಮಟ್ಟಿಗೆ ಮಾತ್ರ, ಆ ಗಳಿಗೆಯಲ್ಲಿ ಎಲ್ಲ ಒಂದೇ ರೀತಿಯಲ್ಲಿದೆ. ಪ್ರಪಂಚದ ಕಣ್ಣಿನಲ್ಲಿ ಅವರೆಲ್ಲ ತುಂಬ ಕರುಣೆಗೆ ಪಾತ್ರರಾದವರು, -ಏನೂ ಗತಿಯಿಲ್ಲದವರ ಗುಂಪು. ಅವರ ಕಣ್ಣಿಗೆ ಪ್ರಪಂಚ ಅಂದರೆ ಕೆಲಸಕ್ಕೆಬಾರದ್ದು.

ರಣಜಿತಬಾಬು ಕುಳಿತುಕೊಂಡು ಕಾಲಕಳೆಯುತ್ತಿದ್ದಾರೆ. ಸೂರ್ಯ ಮುಳುಗಿದ. ಕತ್ತಲೆ ಕವಿಯುತ್ತಾ ಬರುತ್ತಿದೆ. ಆಗಸದಲ್ಲಿ ನಕ್ಷತ್ರಗಳು ಮೂಡತೊಡಗಿವೆ. ಸಿಗಿಸಿಗಿ ಹೊಳೆಯುತ್ತಿರುವ ಲೆಕ್ಕವಿಲ್ಲದಷ್ಟು ನಕ್ಷತ್ರಗಳು, -ಇವೆಲ್ಲ ನಿತ್ಯ ಆದರೆ ನಾಲ್ಕೂ ಕಡೆ ಕತ್ತಲು ಮುಸುಕಿದ ಮನಸ್ಸಿನ ಸ್ಥಿತಿಯಲ್ಲಿ ಅವುಗಳನ್ನು ನೋಡುವುದು ಸಾಧ್ಯವಿಲ್ಲ. ಮನುಷ್ಯನ ಬೇರೆ ಬೇರೆ ರೀತಿಯ ವ್ಯಕ್ತಿತ್ವ ಪ್ರಕೃತಿಯ ಬೇರೆ ಬೇರೆ ವಿಧದ ಸಂಪತ್ತನ್ನು ಸೂಚಿಸುತ್ತದೆ. ರಣಜಿತ ಬಾಬು ಕತ್ತಲೆಯಲ್ಲೇ ದೃಷ್ಟಿ ನೆಟ್ಟಿದ್ದಾರೆ.

ಈ ರೀತಿ ಧ್ಯಾನಮಗ್ನರಾಗಿ ಕುಳಿತುಕೊಳ್ಳುವುದರಿಂದ ಎಂದಾದರೂ ಸಚ್ಚಿದಾನಂದ ಭಗವಂತನ ಸ್ವರೂಪದ ಪರಿಚಯವಾಗುವ ಸಾಧ್ಯತೆಯಿದೆ, ಗೆದ್ದಲು ಗೂಡು ಮೈ ಆವರಿಸಬಹುದು, ಆಧುನಿಕ ಸಮಾಜದ ಕಿರೀಟ ಹೊತ್ತವನು ಪ್ರಾಚೀನ ವಾಲ್ಮೀಕಿಯಾಗಬಹುದು. ಆದರೆ ಜೀವ ಮಣ್ಣು-ನೀರಿನಿಂದ ಕೂಡಿದೆ ಈ ಸ್ಥೂಲವಾದ ಭೂಮಿಯ ಮಧ್ಯಾಕರ್ಷಣಶಕ್ತಿಯನ್ನು ತಳ್ಳಿಹಾಕಲು ಸಾಧ್ಯವಿಲ್ಲ. ಒಂದು ವೇಳೆ ಪಟ್ಟಣದ ಕಡೆ ಗಮನ ಹರಿಯಿತೆಂದರೆ ಸಾಕು, ಇನ್ನೂ ತೀವ್ರವಾಗಿ ಥಟ್ಟನೆ ಆ ಭೂಮಿಯ ಜೊತೆ ಒಂದಾಗಿ ಸೇರಿಹೋಗಲು ಮನಸ್ಸು ಹಾತೊರೆಯುತ್ತದೆ, ನೀರಿನಲ್ಲಿರುವ ಮೀನು ದಡಕ್ಕೆ ಬಂದು ಶೂನ್ಯವನ್ನು ಕುರಿತು ಧ್ಯಾನಮಾಡುವ ಬದಲಾಗಿ ಮತ್ತೆ ಧುಡುಂ ಅಂತ ನೀರಿಗೆ ಇಳಿಯುತ್ತದೆ, ಇನ್ನೂ ಆಳವಾದ ನೀರಿಗೆ.

ಕತ್ತಲಲ್ಲಿ ರಣಜಿತ ಬಾಬುವಿನದು ಎಂಥ ವ್ಯಕ್ತಿತ್ವ!

ಅಬ್ಬಾ! ಎಷ್ಟು ಬಿರುಸಾಗಿ ಮನದಾಳದಲ್ಲಿ ಮತ್ತೆ ಮೂಡಿಬರುತ್ತಿದ್ದಾಳೆ. ಸರೋಜಿನಿ ತನ್ನ ಜೊತೆಯಲ್ಲಿ ಅಂಕೆಯಿಲ್ಲದ, ಸೊಂಯ್ ಅಂತ ಬೀಸುವ, ವಜ್ರಾಯುಧದಂತಿರುವ ಬಿರುಗಾಳಿ ಹೊತ್ತು ತರುತ್ತಿದ್ದಾಳೆ. ಅದರ ಬೀಸು ಕೊಲ್ಲುವಂತೆ ಧ್ವನಿಯೇರಿಸುತ್ತಿದೆ, ಧ್ವಂಸಮಾಡುವ ಉರಿಹೊತ್ತು ಮುಂದೆ ಸಾಗುತ್ತಿದೆ. ಕಿಚ್ಚೇಳಿಸುವ ವೇಗ, ಕಗ್ಗತ್ತಲೆ, ಸೊಂಯ್ ಸೊಂಯ್ ಅಂತ ಮಾಡುತ್ತಿರುವ ಪ್ರಳಯಾಂತರ ತಾಂಡವ ನೃತ್ಯದಿಂದ ಅದರ ಅರಿವಾಗುತ್ತಿದೆ, ಪರಿಚಯವಾಗುತ್ತಿದೆ. ಈ ಗುಂಡಾದ ಭೂಮಿ ರೂಪುಗೊಂಡ ದಿನ ಬಿರುಗಾಳಿಯ ಬೀಸು ಮನುಷ್ಯನ ಮನಸ್ಸಿನೊಳಗಡೆ ಬಂದು ಸೇರಿಹೋಯಿತೇನೂ, ರಕ್ತದಲ್ಲಿ ಅದು ಝೇಂಕಾರಗೊಂಡು ಒಳಸೇರಿವೇನೂ, ಅದೇ ಸಂಸ್ಕಾರ ತಲೆಮಾರಿನಿಂದ ತಲೆಮಾರಿಗೆ ಹರಿದುಬರುತ್ತಲೇ ಇದೆ. ಯಾವ ಸಂಸ್ಕಾರವೂ ಅದನ್ನು ಅಲ್ಲಾಡಿಸಲಾಗಿಲ್ಲ. ಸಭ್ಯವಾದ ವೇಷಭೂಷಣಗಳ ಹಿನ್ನೆಲೆಯಲ್ಲಿ ಅಡಗಿರುವ ಆ ಪ್ರಾಚೀನ ಮಾನವ ಹೊಸ ಮುಖ ತೊಟ್ಟು ಬರುತ್ತಾನೆ, ಅವನು ಬಿರುಗಾಳಿಯನ್ನು, ಧ್ವಂಸವನ್ನು ಬಯಸುತ್ತಾನೆ. ಮನಸ್ಸಿನಲ್ಲೇ ಆ ಭಯಂಕರ ರೂಪ, ಹೊಡೆದಾಟ-ಬಡಿದಾಟ, ಕೊಲೆ-ಸುಲಿಗೆ ಅಡ್ಡಾಡುತ್ತಿವೆ. ಯಾರ ಹಿಡಿತಕ್ಕೂ ಸಿಗದ ಆ ಆದಿಮಾನವ ನರಮುಂಡ ಮಾಲೆಯನ್ನು ತರುತ್ತಾನೆ. ಪಶುಯೋಗ್ಯವಾದ ಲೈಂಗಿಕ ತೃಷೆಯನ್ನು

ತೀರಿಸಿಕೊಳ್ಳಲು ಪ್ರಣಯದಾಟವಾಡುತ್ತಾನೆ, ಪ್ರಣಯದ ದೆಸೆಯಿಂದಾಗಿ ಶತ್ರುಗಳು ಹುಟ್ಟಿಕೊಳ್ಳುತ್ತಾರೆ. ಶತ್ರುವಿನ ಕತ್ತರಿಸಿದ ತಲೆಯನ್ನು ಅವನು ಕಾಣಿಕೆಯೆಂಬಂತೆ ಪ್ರೇಯಸಿಯ ಮುಂದಿಡುತ್ತಾನೆ. ಕಲ್ಲಿನ ಕತ್ತಿ ಹಿಡಿದು ಹೂಂಕರಿಸುತ್ತಾ ಅರಚಾಡುತ್ತಾ ಅದೇ ಬೆತ್ತಲು ಮನುಷ್ಯ ಬಿರುಗಾಳಿಯಂತೆ ಅಲೆದಾಡುತ್ತಿದ್ದಾನೆ. ಅವನ ಕೈಕಾಲುಗಳಲ್ಲಿ ಉದ್ದವಾದ ಚೂಪಾದ ಉಗುರುಗಳು, ಮೈಮೇಲೆ ಪ್ರಾಣಿಯಂತೆ ಕೂದಲರಾಶಿ. ಎದುರಾಳಿಯ ಕತ್ತರಿಸಿದ ತಲೆಯನ್ನು ಅವನು ಹುಡುಕಾಡುತ್ತಿದ್ದಾನೆ, ಎಲ್ಲಿ ಎಲ್ಲಿ.....

ಅಬ್ಬಾ! ಸರೋಜಿನಿ.

ನಿಟ್ಟುಸಿರೆಳೆದು ನೇರವಾಗಿ ನಿಂತು ರಣಜಿತಬಾಬು ಸಿಗರೇಟು ಹಚ್ಚುತ್ತಿದ್ದಾರೆ. ಬಹುಶಃ ಮನೆಯ ಒಳಗಡೆ ಯಾರೋ ರೇಡಿಯೊ ಹಾಕಿದ್ದಿರಬೇಕು.

"ನಾನೂ ನೋಡುತ್ತಲೇ ಇದ್ದೇನೆ. ಈಗ ಕಾರು ತೆಗೆದುಕೊಳ್ಳದೆ ಇದ್ದರೆ ನಡೆಯೊ ಹಾಗಿಲ್ಲ-ಗೊತ್ತಾಯ್ತಾ ಸರೋಜ" ಬಲಿದತ್ತ ಹೇಳುತ್ತಿದ್ದ. ಅದೇ ಹುರುಪಿನಿಂದ ಸರೋಜಿನಿಯ ಮುಖ ನೋಡಿದ. ಅಲ್ಲೇನಾದರೂ ಕಿಂಚಿತ್ತಾದರೂ ನಗುವಿನ ಲಹರಿಯಿತ್ತೊ, ಅದೇ ಅವನ ಪಾಲಿಗೆ ದೊಡ್ಡ ಭರವಸೆ.

"ಏನೋ, ದೇವರು ಕಣ್ಣು ಬಿಟ್ಟಿದ್ದಾನೆ. ಇನ್ನೊಂದು ಮೆಟ್ಟಿಲು ಮೇಲೇರಬಹುದು. ಹಣೇಲಿ ಬರೆದಿದ್ದರೆ ನಾನೂ ಒಂದು ದಿನ ಕಂಪನಿಯ ಯಾವುದಾದರೂ ಶಾಖೆಯಲ್ಲಿ ದೊಡ್ಡ ಸಾಹೇಬನಾಗಬಹುದು-"

"ಸರಿ, ದೇವರು ಕಣ್ಣುಬಿಟ್ಟಿದ್ದಾನೆ," ಸರೋಜಿನಿ ನಕ್ಕಳು, "ಈಗ ಕಾರು."

"ಇಲ್ಲ, ಅಂದರೇನು? ಈಗ ಕಾರಿದ್ದರೆ ನೆಂಟರಿಷ್ಟರಿಗೆ ಸ್ನೇಹಿತರಿಗೆ ಕಣ್ಣು ಕುಕ್ಕೋದಿಲ್ಲವೆ? ಯಾರಿಗೆ ಯಾವುದು ಲಾಯಕ್ಕೋ ಹಾಗಿರಬೇಕು. ಹಾಗಿರುವುದರಿಂದ ತಾನೆ ದೇವರು ಕೋಟ್ಯಾಂತರ ಪ್ರಾಣಿಗಳನ್ನು ಸೃಷ್ಟಿಸಿ ಬೇರೆಬೇರೆ ಮೆಟ್ಟಿಲುಗಳ ಮೇಲೆ ನಿಲ್ಲಿಸಿರೋದು. ಎಲ್ಲರೂ ತಮ್ಮ ತಮ್ಮ ಪಾಲಿಗೆ, ಕೈ ಅಳತೆಗೆ ದೊಡ್ಡವರೇ."

"ಹಾಗಾದರೆ ಕೈಕಾಲಿಲ್ಲದವರು?" ಸರೋಜಿನಿ ಪ್ರಶ್ನೆ ಹಾಕಿದಳು, "ಅವರು ಹೇಗೆ ಅಳೆಯೋದು?"

"ಛೆ ಛೆ ಸರೋಜ, ನಮಗಂತೂ ಮಕ್ಕಳುಮರಿ ಇಲ್ಲ. ಹಾಗಾಗಿ ಮಾತು ಮಾತಿಗೂ ತಮಾಷೆ ಮಾಡೋದು ನಿನಗೆ ಅಭ್ಯಾಸವಾಗಿ ಹೋಗಿದೆ. ಹಾಗೆಲ್ಲ ಮಾಡಿದರೆ ದೇವರನ್ನು ನಿಂದಿಸಿದ ಹಾಗಾಗತ್ತೆ. ಎಲ್ಲ ಆ ದೇವರ ದಯೆ, ಒಳ್ಳೆಯದನ್ನು ಮಾಡುವ ಆ ದೈವ ಸಂಕಲ್ಪದ ಬಗ್ಗೆ ನಮ್ಮಂಥವರು ಟೀಕೆಮಾಡಿದರೆ ದ್ರೋಹಮಾಡಿದ ಹಾಗಾಗತ್ತೆ."

"ನೀವು! ಇಷ್ಟು ದೊಡ್ಡ ಆಸ್ತಿಕರೆ! ನಿಜವಾಗಿಯೂ? ಎಲ್ಲಾದರೂ ವೈರಾಗ್ಯದ ದಾರಿ ಹಿಡಿದಿರೇನೊ ಅಂತ ಹೆದರಿಕೆ ಆಗುತ್ತೆ. ಅಯ್ಯಯ್ಯಾ, ಮಾತುಮಾತಿಗೂ ದೇವರು!"

"ಹೌದು ಸರೋಜ, ಈಚೆಗೆ ಮುಖತೊಳೆದು ಸ್ನಾನಮಾಡಿ ದೇವರ ಸ್ತೋತ್ರ ಓದಿದಾದಲೆಲ್ಲ ಮನಸ್ಸಿಗೆ ತುಂಬ ಶಾಂತಿ ಸಿಗುತ್ತೆ. ಯಾರು ಮಾಡಿದ್ದು? ಸ್ವಲ್ಪ ಯೋಚಿಸು. 'ನಾನೇ ಮಾಡಿಸುತ್ತೇನೆ, ನನ್ನನ್ನು ಬಿಟ್ಟಾರೆ ಬೇರೆ ಗತಿಯಿಲ್ಲ' ಅಂತ ನಮ್ಮ ಭಾಗವತದಲ್ಲಿ ಹೇಳಿಲ್ಲವೆ. ನಾವು ಮುಂದೆ ಬಂದ ರೀತಿಯನ್ನೇ ನೋಡು. ಎಷ್ಟು ಜನ ಇಲ್ಲಿ ಒಟ್ಟಿಗೆ ಕೆಲಸಕ್ಕೆ ಸೇರಿದ್ದು. ಯಾರಿಗೂ ನಂಬಿಕೆ ಬರೋದಿಲ್ಲ. ಎಲ್ಲ ನೆನ್ನೆ ಮೊನ್ನೆಯ ಹಾಗೆ ಕಾಣುತ್ತೆ. ಇಪತ್ತು? ದೋಣಿ ಮುಂದೆ ಸಾಗುತ್ತಿದೆ. ಇಷ್ಟು ದೂರ ಹಾದುಬಂದಾಗಿದೆ. ಹಾಗೆಯ ಮುಂದಿನ ಯೋಜನೆಯೂ ಬರುತ್ತೆ. ಕಾರು ತೊಗೋಬೇಕು, ಮನೆಮಠ ಆಸ್ತಿಪಾಸ್ತಿ ಅಂತ ಮಾಡಿಕೊಬೇಕು. ಸಾಕಷ್ಟು ದುಡ್ಡು ಕಾಸು ಕೂಡಿಡಬೇಕು. ನಿನಗೆ ಯಾವುದಕ್ಕೂ ಕೊರತೆಯಾಗಬಾರದು, ಪ್ರಪಂಚ ನನ್ನನ್ನು ಬೈಯುವಂತಾಗಬಾರದು. ನಾನು ನನ್ನ ಕರ್ತವ್ಯ ನಿಭಾಯಿಸುತ್ತಿದ್ದೇನೆ ಅಷ್ಟೆ. ಇಲ್ಲ, ಖಂಡಿತ ನಾನು ಕೃತಘ್ನನಲ್ಲ, ಹೆಜ್ಜೆ ಹೆಜ್ಜೆಗೂ ದೇವರದಯೆ ಏನು ಅಂತ ನನಗೆ ಗೊತ್ತಾಗುತ್ತಿದೆ. ಇಷ್ಟುದೂರ ಈಗಾಗಲೆ ಬಂದಿದ್ದೇನೆ. ಇನ್ನೂ ಸಾಕಷ್ಟು ವಯಸ್ಸಿದೆ, ಮೈಯಲ್ಲಿ ಉಸಿರಿದೆ, ಕೈಯಲ್ಲಿ ತಾಕತ್ತಿದೆ. ಮೊದಲು ದೇವರನ್ನು ನೆನೆಸಿಕೊಳ್ಳುತ್ತೇನೆ. ಆಮೇಲೆ ಬೇರೆ ವಿಚಾರ."

ಸರೋಜಿನಿ ನಕ್ಕು ಹೇಳಿದಳು,-"ನೀವು ಮುಂಚಿನ ವಿಚಾರ ಯೋಚಿಸದೆ ಆಮೇಲಿನ ವಿಚಾರ ಯೋಚಿಸುತ್ತಿರಿ. ಆಮೇಲಿನ ವಿಚಾರ ಯೋಚಿಸುವವರು ಸನ್ಯಾಸಿಗಳಾಗಿ ಹೋಗುತ್ತಾರಂತೆ."

ಬಲಿದತ್ತ ಹೇಳಿದ, -"ಮನುಷ್ಯನ ಬದುಕು ಕೊನೆಗೊಳ್ಳುವುದು ಸ್ಮಶಾನದಲ್ಲೇ, ಅದೂ ಈ ದೇಹ ಸುಟ್ಟು ಬೂದಿಯಾದಾಗ, ಆಗ ಏನೂ ಉಳಿಯುವುದಿಲ್ಲ. ಆತ್ಮ ಹಾರಿಹೋಗುತ್ತದೆ, ಜೊತೆಯಲ್ಲಿ ಏನನ್ನೂ ಕೊಂಡೊಯ್ಯುವುದಿಲ್ಲ."

"ಹಾಗಾದರೆ ಜಪಮಾಡಿ. ಮಣಿಹಿಡಿದು ಕುಳಿತುಕೊಳ್ಳಿ."

"ಒಂದು ಸಾರಿ ತಪಸ್ಸು ಕೆಟ್ಟು ಹೋಯಿತು ಅಂದರೆ ಮತ್ತೆ ಸರಿಹೋಗೋದಿಲ್ಲ ಅಂತ ನಿನಗೆ ಗೊತ್ತು. ಆ ದಾರಿ ಮುಚ್ಚಿದೆ. ಅಂದಮೇಲೆ ಇದೆಲ್ಲ ಯಾಕೆ?"

"ಕಾರು ಕೊಳ್ಳುತ್ತಿರಾ, ಕೊಂಡುಕೊಳ್ಳಿ, ದೊಡ್ಡ ಮನೆ ಮಾಡುತ್ತೀರಾ, ಮಾಡಿ. ಆದರೆ ಸನ್ಯಾಸಿ ಆಗಬೇಡಿ."

"ಇಲ್ಲಪ್ಪಾ ಇಲ್ಲ, ತಮಾಷೆ ಮಾತುಬೇಡ ನೋಡು, ಎಷ್ಟೊಂದು ಅವಸರ ಆಗತ್ತೆ ನೋಡು. ಇಲ್ಲಿಂದ ಆಫೀಸಿನವರೆಗೆ ನಡೆದುಕೊಂಡೇ ಹೋಗೋದು ಅಂದರೆ ಎಷ್ಟು ಕಷ್ಟ ಅಲ್ಲವಾ? ಸುಮ್ಮನೆ ಮೈಕೈ ನೋಯಿಸಿಕೊಳ್ಳಬೇಕು. ಎಲ್ಲಾದರೂ ಹೋಗೋಣ ಅಂದ್ರೆ-ನಮ್ಮದೇ ಸ್ವಂತ ಕಾರಿಲ್ಲದೆ ಎಷ್ಟು ತಾಪತ್ರಯ? ನಿನಗೇ ಎಲ್ಲ ಅರ್ಥವಾಗತ್ತೆ, ಯೋಚಿಸಿನೋಡು, -ಕಾರು ನಮಗೆ ಬೇಡವೆ?"

"ಖಂಡಿತ ಬೇಕು. ಅದನ್ನು ಬಾಯಿಬಿಟ್ಟು ಹೇಳಬೇಕೇನು? ಆದರೆ ಒಂದು ವೇಳೆ ಕೊಂಡುಕೊಳ್ಳೋದಾದರೆ ಮಿ. ಶರ್ಮಾ ಅವರಂತೆ ದೊಡ್ಡಕಾರು ತಗೊಳ್ಳಿ, ಅದಾದರೂ ಒಂದು ಪಕ್ಷ ಚೆನ್ನಾಗಿರುತ್ತೆ. ಅದೆಷ್ಟು ಹಾಯಾಗಿದೆ ಗೊತ್ತಾ ಆ ಕಾರು? ಸೀಟಿನ ಮೇಲೆ ಕುಳಿತರೆ ಸಾಕು, ಒಳ್ಳೆ ಹೂವಿನ ಹಾಸಿಗೆ ಮೇಲೆ ಕುಳಿತಿರೂ

ಹಾಗಿರುತ್ತೆ. ಹಾಗೇ ಕಣ್ಣು ಮುಚ್ಚಿಕೊಳ್ಳೋಣ ಅನಿಸುತ್ತೆ. ಅಂಥ ಕಾರು ತೂಗೋತೀರಾ ?"

ಬಲಿದತ್ತ ಥಟಕ್ಕನೆ ನೋಡಿದ. ಕಿವಿಯಲ್ಲಿ ಯಾರೋ ಬಿಸಿ ಲಾವಾರಸ ಹೊಯ್ಯುತ್ತಿದ್ದಾರೇನೊ ಅನಿಸಿತು. ಯಾರೋ ಎದೆಯ ಮೇಲೆ ಕುಳಿತು ಒತ್ತುತ್ತಿದ್ದ ಹಾಗಾಯಿತು. ಸರೋಜಿನಿ ಶೂನ್ಯದಲ್ಲಿ ಕುಸಿಯುತ್ತಿರುವಂತೆ. ಅದರ ಜೊತೆಯಲ್ಲಿ ಅವಳ ಅಂತರಾತ್ಮ ಪತನಗೊಳ್ಳುತ್ತಿರುವಂತೆ ಭಾಸವಾಯಿತು.

ಅದೂ ಅವನ ಹೆಂಡತಿ, ಅವಳು ಶರ್ಮಾ ಅವರ ಕಾರಿನಲ್ಲಿ ಕುಳಿತುಕೊಳ್ಳುವ ಸುಖಾನುಭವವನ್ನು ಅವನೆದುರಿಗೇ ವರ್ಣಿಸುವಷ್ಟು ತಯಾರಾಗಿದ್ದಾಳೆ.

ಬಲಿದತ್ತ ಸುಮ್ಮನಿದ್ದ.

ಸರೋಜಿನಿ ಅವನನ್ನು ನೋಡಿದಳು, ಅನಿಸಿತು, -ಏಟು ಗುರಿತಪ್ಪಿದೆ. ನಗುವನ್ನು ಅಡಗಿಸಿ ಹೇಳಿದಳು- "ಯಾಕೆ ಸುಮ್ಮನಾಗಿಬಿಟ್ಟಿರಿ ? ದುಡ್ಡಿನ ವಿಚಾರ ಯೋಚಿಸಿ ನೋಡ್ತಾ ಇದ್ದೀರಾ ? ನಿಜವೇ, ಕಂಡದ್ದೆಲ್ಲ ಕೊಂಡುಕೊಳ್ಳೋಕೆ ಆಗುತ್ತಾ ? ಮಿಸ್ಟರ್ ಶರ್ಮಾ ಅವರ ಕಾರು ನೋಡಿದ್ದೀರಲ್ಲ, ಆ ತರಹದ್ದು ಕೊಂಡುಕೊಳ್ಳಬಲ್ಲಿರಾ ?"

"ಗೊತ್ತಾಯಿತು", ಬಲಿದತ್ತ ಬಾಯಿಬಿಟ್ಟ. 'ಸರೋಜ' ಅಂತ ಅದರ ಜೊತೆಯಲ್ಲಿ ಸೇರಿಸುವುದಕ್ಕೆ ಸಾಧ್ಯವಾಗಲಿಲ್ಲ. ಏಕೆಂದರೆ ಸರೋಜ ಅನ್ನುವುದು ಅವನ ಪ್ರೀತಿಯ ಹೆಸರು, -ಹೇಳಿದ, "ಮತ್ತೆ ನಿಂಗೆ ಗೊತ್ತಾ, -ದುಡ್ಡಿಗೆ ಯಾವ ಬರವೂ ಇಲ್ಲ. ದೇವರು ಆ ವಿಚಾರದಲ್ಲಿ ಏನೂ ಕಡಮೆ ಮಾಡಿಲ್ಲ. ದುಡ್ಡು ಕೈಕಸದಂತೆ, ಏನೂ ಕಷ್ಟಪಡಬೇಕಾಗಿಲ್ಲ, ಜನ ತಾವೇ ಹುಡುಕಿಕೊಂಡು ಬಂದು ಮನೆಗೆ ಕೊಟ್ಟು ಹೋಗುತ್ತಾರೆ. ಆದರೆ ದುಡ್ಡು ಸಂಪಾದಿಸೋದು ಬೇರೆ ಮಾತು, ಜನಗಳ ಬಾಯಿಗೆ ಬೀಳೋದು ಬೇರೆ ಮಾತು."

"ಜನಗಳ ಬಾಯಿಗೆ," ಸರೋಜಿನಿ ಕೇಳಿದಳು. ಹುಬ್ಬುಗಳು ಬಿಲ್ಲಿನಂತೆ ಸೆಟೆದುನಿಂತವು. ಮುಖದಲ್ಲಿ ಕುತೂಹಲ ತೋರ್ಪಡಿಸುತ್ತಾ ಎಲ್ಲವನ್ನೂ ಗೆದ್ದವಳಂತೆ ಮುಖಮಾಡಿ ಹೇಳಿದಳು, "ಅಂದರೆ ದೊಡ್ಡ ಕಾರು ತೊಗೊಂಡರೆ ಜನಗಳ ಬಾಯಿಗೆ ಬೀಳೋದು ಅನ್ನಿ. ಅಂದಮೇಲೆ ಎಲ್ಲ ದೊಡ್ಡ ಮನುಷ್ಯರನ್ನೂ ಜನ ಲೇವಡಿಮಾಡುತ್ತಾರೆ ಅಂದ ಹಾಗಾಯಿತು. ಜನ ನಗ್ತಾರೆ ಅಂತ ನೀವು ಹಿಂದೆ ಬೀಳ್ತೀರಾ ?"

'ನೀವು' ಅನ್ನುವುದರ ಮೇಲೆ ಸ್ವಲ್ಪ ಒತ್ತು ಜಾಸ್ತಿಯಿತ್ತು.

ಎಷ್ಟು ಸರಳ ! ಎಷ್ಟು ಹತ್ತಿರ ! ಎಂಥ ಸೊಗಸು !

ಆದರೂ ಬಲಿದತ್ತನಿಗೆ ಆ ಕಡೆ ನೋಡುತ್ತಿದ್ದಾಗ ಅನಿಸಿತು, -ವಿಶ್ಲೇಷಣೆ ಮಾಡುತ್ತಿರುವಂತೆಯೆ ಕಂಡುಬಂತು, -ಸರಳತೆಯ ಒಂದೊಂದು ಪದರದಲ್ಲೂ ಜಟಿಲತೆ ತುಂಬಿದೆ.

ಒಳಗಿನಿಂದ ಹೊಟ್ಟೆ ಧಗ್ ಅಂತ ಉರಿಯಿತು. ಸಫಲತಾವಾದವನ್ನು ಆರಾಧಿಸುವ ಉದ್ಯೋಗಿಯ ಪೂರೆ ಜಾರತೊಡಗಿತು,-ಒಬ್ಬ ಸಾಧಾರಣ ಮನುಷ್ಯ ಮೇಲೇಳತೊಡಗಿದ. ಆಮೇಲೆ ಆ ಮುಖವನ್ನು ನೋಡುತ್ತಾ ನೋಡುತ್ತಾ

ಕರಗತೊಡಗಿದ. ಸರೋಜನಿ ನಗುತ್ತಿದ್ದಾಳೆ. ಆ ಮುಖನ್ನು ನೋಡಿ ಅವನು ಎಲ್ಲವನ್ನೂ ಮರೆಯಬಲ್ಲ.

ಸರೋಜನಿ ಚಪ್ಪಾಳೆ ಹೊಡೆಯುತ್ತಾ ಹೇಳಿದಳು, -"ಅಯ್ಯೋ, ಇಷ್ಟು ದಿನಗಳಾದ ಮೇಲೆ ಏನೋ ಅನ್ನಿಸ್ತು, ಕಾರು ತೊಗೊಳ್ಳಿ ಅಂತ ನಾನೇಕೆ ಅಷ್ಟು ಹಟ ಹಿಡಿದೆ, ಆದರೆ ನೀವು ನೋಡಿದ್ರೆ ಯಾವಾಗಲೂ ಫೈಲು, ಕೆಲಸ ಅಂತ. ಕಾರಿದ್ದರೂ ನಿಮ್ಮನ್ನು ಕಟ್ಟಿಕೊಂಡು ಎಷ್ಟು ದೂರ ಹೋಗೋಕೆ ತಾನೆ ಸಾಧ್ಯ? ಬರೀ ದುಡಿಯೋದೊಂದು ಗೊತ್ತಷ್ಟೆ. ಸುಖ ಏನು ಅಂತ ಇದುವರೆಗ ಅರ್ಥಮಾಡಿಕೊಳ್ಳಲಿಲ್ಲ. ಕೆಲಸ ಕೆಲಸ ಅಂತ ಈ ಜಂಜಾಟ ಬಿಟ್ಟು ಒಂದೆರಡು ಗಂಟೆ ಓಡಾಡಿಕೊಂಡು ಬಂದರೆ, ಸುಮ್ಮನೆ ಗಾಳಿಯಲ್ಲಿ ಹೋದರೂ ಸಾಕು, ಮನಸ್ಸಿಗೆ ಶಾಂತಿ ಆನಂದ ಸಿಗುತ್ತೆ."

ಬಲಿದತ್ತನಿಗೆ ಖುಷಿಯಾಯಿತು. ಎಂದಿನಂತೆ 'ತಾನು ಮಾಡಬಲ್ಲೆ' ಅನ್ನುವ ಬಡಾಯಿ ಕೊಚ್ಚಿಕೊಳ್ಳುವ ಧಾಟಿಯಲ್ಲಿ ಹೇಳತೊಡಗಿದ, "ನಿನಗ ಚೆನ್ನಾಗಿ ಗೊತ್ತಿರಬೇಕಲ್ಲ, ಈ ಕಾರು, -ಅದೇನು ಸುಮ್ಮನೆ ಸಿಕ್ಕಿಬಿಡುತ್ತಾ? ಹೇಳಿದೆ -'ಸೇಠ್‌ಜಿ, ಕಾರಿಲ್ಲದೆ ತುಂಬ ತೊಂದರೆ ಆಗುತ್ತೆ, ನಾನು ಏನು ಹೇಳ್ತಾ ಇದ್ದೇನೆ ಅಂತ ತಮಗೆ ಗೊತ್ತಲ್ಲ.' ಅಂದರು -'ಸರಿ, ಸಾಕಾಯಿತು, ಸರಿಹೋಯ್ತು'.

ಆ ರಾತ್ರಿ ಸಕಲತವಾಲಾ ಮನೆಯಲ್ಲಿ ಒಂದು ಭರ್ಜರಿ ಪಾರ್ಟಿಯಿತ್ತು. ನಿಜ ಹೇಳಬೇಕೆಂದರೆ ಅದು ಹೆಸರಿಗೆ 'ಸೋಷಿಯಲ್ ಪಾರ್ಟಿ'. ಅಂಥ ಕೂಟಕ್ಕೆ ಕಾರಣವೇನೆ ಇರಲಿ ಇಲ್ಲದಿರಲಿ, ವರ್ಷಕ್ಕೆ ಇಂಥ ಹಲವಾರು ಪಾರ್ಟಿಗಳು ನಡೆಯುತ್ತಲೆ ಇರುತ್ತವೆ, ಒಂದೊಂದು ಬಾರಿ ಒಬ್ಬೊಬ್ಬರ ಮನೆಯಲ್ಲಿ.

ಈ ಪಾರ್ಟಿಗಳ ವೈಶಿಷ್ಟ್ಯವೇನೆಂದರೆ ಸಾಧಾರಣ ಜನರ ಕಣ್ಣಲ್ಲಿ ಇವು ದೊಡ್ಡವರ ಸ್ಥಾನಮಾನಗಳನ್ನು ಕುರಿತು ಹೇಳುತ್ತವೆ,-ಸಾಧಾರಣ ಜನರಿಗಿಂತ ಇವರು ಬೇರೆ ರೀತಿ. ಹೊರಗೆ ಅದರ ಧ್ವನಿ ಹೀಗಿದೆ. -"ನಡೀರಿ, ನಡೀರಿ, ಇಲ್ಲಿ ನಿಲ್ಲಬೇಡಿ. ಹಾಳಾಗಿ ಹೋಗಿ." ದೊಡ್ಡ ರಸ್ತೆಯಲ್ಲಿ ದೊಡ್ಡ ಕಾಂಪೌಂಡು. ಒಳಗಡೆ ವಿಶಾಲವಾದ ತೆರೆದ ಬಯಲು, ದೊಡ್ಡ ತೋಟ. ದೊಡ್ಡ ಮನೆ, ರಸ್ತೆಗಂಟಿದಂತೆ ದೊಡ್ಡ ಗೇಟು, ಗೇಟಿನ ಬಳಿಯಲ್ಲಿ ದೊಣ್ಣೆ ಹಿಡಿದ ಗುರ್ಖಾ ಕಾವಲುಗಾರ. ಬಾಯೊಳಗಿಂದ ನಾಲಗೆ ಚಾಚಿ ಯಾರಾದರೂ ಬಂದರೇನೊ ಅಂತ ಕಾಯುತ್ತಿರುವ ನಾಯಿ. "ನಡೀರಿ, ನಡೀರಿ, ನಿಮಗೆ ಇಲ್ಲೇನು ಕೆಲಸ." ಸ್ವಲ್ಪ ದೂರದಲ್ಲಿ ಧೂಳು ತುಂಬಿದ ಕೊಳಕು ಕಾಲೋನಿ, ಒಂದಕ್ಕೊಂದು ಅಂಟಿಕೊಂಡಿರುವಂತೆ ಮನೆಗಳು. ನೂಕುನುಗ್ಗಲು, ಗಲೀಜು.

ಈ ತಾರತಮ್ಯದ, ಏರುಪೇರಿನ ಪ್ರಪಂಚದಲ್ಲಿ ಹಣವಂತರದೇ ಆದ ಜಾಗೀರುಗಳಿದ್ದವು, ಕೋಟೆಗಳಿದ್ದವು. ಇವರೂ ಹಾಗೆಯೆ ಇರಬಯಸುತ್ತಾರೆ. ಅವರ ಥೇಟ್ ಪಳೆಯುಳಿಕೆಗಳಂತೆ.

ಒಳಗಿನಿಂದ ಬಣ್ಣಬಣ್ಣದ ಬೆಳಕು. ಅಗಲವಾದ ರಸ್ತೆಯ ಬದಿಯಲ್ಲಿ ವಾಹನಗಳ

ದೊಡ್ಡಸಾಲು, ಬೆಳಕಿಗೆ ಹೊಳೆಯುತ್ತಿರುವ ಅವುಗಳ ಹಿಂಭಾಗಗಳು. ದಾರಿಹೋಕರ ಕಲ್ಪನೆಯಲ್ಲಿ ಇಂದ್ರನ ಅಮರಾವತಿಯಿದ್ದಂತೆ. ಏನಿಲ್ಲ ಅಂದರೂ ದೂರದಿಂದಲೇ ನೋಡಿ ಕಣ್ಣು ತಣಿಸಿಕೊಳ್ಳಬಹುದಷ್ಟೆ. ವಸ್ತುಸ್ಥಿತಿ ಬೆದರಿ ಹೇಳುತ್ತದೆ, ಐದು ಬೆರಳುಗಳು ಒಂದೇ ರೀತಿ ಇರುವುದಿಲ್ಲ, ಅಷ್ಟೇ ಅಲ್ಲ ಪೂರ್ವಜನ್ಮದ ಹಣೆಬರಹ, ಯುಗಧರ್ಮ, ಹೀಗೇ ಏನೇನೋ-

ಈ ಭಾಗ್ಯ ಸಹ ಪೂರ್ವಜನ್ಮದ ಫಲವೇ ಸರಿ, -ಎಲ್ಲೆಂದರಲ್ಲಿ ಭೂಕಂಪವಾಗುತ್ತದೆ. ಜನ ಮಣ್ಣಾಗುತ್ತಾರೆ, ಕ್ಷಾಮ ಬರುತ್ತದೆ. ಮನುಷ್ಯತ್ವದ ಲೋಲಕದ ಗುಂಡು ಮುರಿದು ಬೀಳುತ್ತದೆ, ಮಣ್ಣಲ್ಲಿ ಸೇರಿಹೋಗುತ್ತದೆ. ದಾರಿಯಲ್ಲಿ ಸಾಗುತ್ತಿರುವ ಪಯಣಿಗ ತನ್ನ ಐದೂ ಬೆರಳುಗಳನ್ನು ನೋಡಿಕೊಂಡು ವಿಧಿಯನ್ನು ಮೀರಲಾಗದೆ ತಲೆಬಗ್ಗಿಸಿ ಶರಣಾಗುತ್ತಾನೆ. ಎರಡೂ ಕಡೆಗಳಲ್ಲಿ ಇಂದ್ರನಗರಿಯ ಥಳಕುಬೆಳಕು, ಎದುರಿಗೆ ಉದ್ದವಾಗಿ ಹೈಚಾಚಿರುವ ಸುಖದುಃಖಗಳಿಂದ ಕೂಡಿದ ಶಾಶ್ವತವಾದ ದಾರಿ.

ಒಳಗಡೆ ಹಾಲಿನಲ್ಲಿ ಒಂದು ದೊಡ್ಡ ಮೇಜು. ಈ ತುದಿಯಿಂದ ಆ ತುದಿಯವರೆಗೆ ಸಮುದ್ರದ ನೊರೆಯಂತಿರುವ ಬಿಳಿಯ ಹಾಸುಬಟ್ಟೆ. ಅಲ್ಲಲ್ಲಿ ಹೂವಿನ ಕುಂಡಗಳು, ಗುಚ್ಛಗಳು. ಮೇಜಿನ ಮೇಲೆಯೇ ಒಂದು ತೋಟವನ್ನು ಬೆಳೆಸಿದ್ದಾರೇನೊ ಅನಿಸುತ್ತದೆ. ಬೀಳುತ್ತಿರುವ ಮಳೆಗೆ ಛತ್ರಿ ತೋರಿಸುವಂತೆ ಅಗತ್ಯಕ್ಕನುಗುಣವಾಗಿ ಅದು ತನ್ನನ್ನೇ ಅತಿಥಿಗಳ ಸೇವೆಗೆ ಅರ್ಪಿಸಿಕೊಂಡಂತೆ ಕಂಡುಬರುತ್ತದೆ. ಅವುಗಳ ನಡುವಿನಲ್ಲೇ ಬಗೆಬಗೆಯ ವಿನ್ಯಾಸಗಳುಳ್ಳ ತಟ್ಟೆಗಳಲ್ಲಿ ಬಣ್ಣಬಣ್ಣದ ತಿಂಡಿತಿನಿಸುಗಳು. ಬೆಲೆ ಬಾಳುವ ಸೀರೆಬಟ್ಟೆಗಳನ್ನು ತೊಟ್ಟವರು ಕುರ್ಚಿಗಳಲ್ಲಿ ಸಾಲುಸಾಲಾಗಿ ಕುಳಿತಿದ್ದಾರೆ. ಎಲ್ಲೆಡೆಯೂ ಮಾಯಾಲೋಕದಂತೆ ಸಜ್ಜಾಗಿದೆ. ರಸ, ಸುವಾಸನೆ ಮತ್ತು ರುಚಿಗಳು ಸೊಗಸಾಗಿ ಮೇಳೈಸಿವೆ. ಮಾಯಾವಿಗಳಂತಿರುವ ಅತಿಥಿಗಳ ಸಮೂಹ, ನಿಜಹೇಳಬೇಕೆಂದರೆ ಐಸಿರಿ ತುಂಬಿದ ಚಿನ್ನದ ಲಂಕೆಯ ಊಟದ ಮನೆಯಿದ್ದಂತಿದೆ, -ಮಾಯಾನಗರಿಯ ಐಶ್ವರ್ಯದ ಒಡೆಯರಾದ ದಾನವಸಮೂಹ. ಹಿಂದೂ ಇದ್ದರು, ಈಗಲೂ ಇದ್ದಾರೆ.

ಊಟಸಾಗುತ್ತಿದೆ, ಗುಸುಗುಸು ಮಾತುಕತೆಯೂ ನಡೆದಿದೆ.

ಒಂದು ಸಣ್ಣ ದ್ರಾಕ್ಷಿಗೊಂಚಲನ್ನು ಬಾಯಿಹತ್ತಿರ ತರುತ್ತಾ ಹಣವಂತನೆನಿಸಿದ್ದ ಕುಬೇರ ಸಕಲತವಾಲಾ ಹೇಳಿದರು-

"ಬ್ಲಾಕ್, -ಕಾಳಸಂತ, -ಇವೆಲ್ಲ ಏನು ? ಹೊಟ್ಟೆಕಿಚ್ಚಿನ ಮಂದಿ ಹೆಸರಿಡುತ್ತಾರೆ. ಬುದ್ಧಿಯಿಲ್ಲದವರು ಈ ಮಾತುಗಳನ್ನು ಕೇಳುತ್ತಾರೆ. ವ್ಯಾಪಾರದ ಗಂಧ ತಿಳಿಯದವರೇ ಇದಕ್ಕೆ ಹೂಂಗುಡುತ್ತಾರೆ. ನಾಲ್ಕೂ ಕಡೆ ಎಲ್ಲಿ ನೋಡಿದರೂ ಅಲ್ಲಿ ಬ್ಲಾಕ್, ಕಳ್ಳಸಂತೆ, ಲಂಚಗುಳಿತನದ ಹಾವಳಿ. ಒಂದು ಸುಳ್ಳುಭಯ. ಜನ ನಾಲಗೆಯ ತುದಿಯಲ್ಲಿ ಜಪ ಮಾಡುತ್ತಾ ಅರಚಾಡುತ್ತಾರೆ, ಪತ್ರಿಕೆಗಳು ಅಚ್ಚು ಹಾಕುತ್ತವೆ. ಈ ಹಾಹಾಕಾರ ನೋಡಿ ಸಾಧಾರಣ ಮನುಷ್ಯನ ಎದೆಯೊಡೆಯುತ್ತದೆ. ಜನಕ್ಕೆ ಅರ್ಥವಾಗೊಲ್ಲ. ವ್ಯಾಪಾರ ಅಂದರೆ ಯಾವಾಗಲೂ ವ್ಯಾಪಾರವೇ, ಏನಂತೀರಾ ?"

ಎದುರಿನಲ್ಲಿ ಪನ್ನಾಲಾಲ್. ಪ್ರಸಿದ್ಧವ್ಯಾಪಾರಿ. ಸ್ಥೂಲಕಾಯದ ಮನುಷ್ಯ

ಗಂಭೀರವಾಗಿ ತಿಂಡಿಗೆ ಕೈಹಾಕಿ ಜೋರಾಗಿ ಅಗಿಯುತ್ತಿದ್ದ, ಅವಸರದಲ್ಲಿ ನುಂಗುತ್ತಾ ಕುತ್ತಿಗೆ ಉಬ್ಬುತ್ತದೆ. ಪನ್ನಾಲಾಲ್ ಬಾಯಿಂದ ಬಂತು- "ಸರಿಯಾಗಿ ಹೇಳಿದಿರಿ. ವ್ಯಾಪಾರ ಅಂದ ಮೇಲೆ ಲಾಭ ಇರೋದರ ಜೊತೆಗೆ ನಷ್ಟವೂ ಇರುತ್ತೆ. ನಷ್ಟ ಅನುಭವಿಸುತ್ತಾ ಇರಬೇಕಾದರೆ ಅವನು ನೆಲ ನೆಕ್ಕುತ್ತಿರಬೇಕಷ್ಟೆ. ಅಂತಹವನಿಗೆ ದೆಸೆಕೂಡಿದಾಗ ಎರಡು ಕಾಸು ಲಾಭ ಪಡೆಯುವ ಹಕ್ಕಿಲ್ಲವೆ. ವ್ಯಾಪಾರಿಗಳು ಜನಕ್ಕೆ ತೊಂದರೆಯಾಗೋದನ್ನು ಇಷ್ಟಪಡೋದಿಲ್ಲ, ಎಲ್ಲರಿಗೂ ಲಾಭವಾಗಲಿ ಅಂತಾನೇ ಅವರು ಬಯಸೋದು. ಜನಕ್ಕೆ ಒಳ್ಳೆಯದಾಗಲೀ ಗೋವುಗಳಿಗೆ ಒಳ್ಳೆಯದಾಗಲಿ, ಎಲ್ಲರಿಗೂ ಲಾಭವಾಗಲಿ, ಶುಭವಾಗಲಿ, ಎಲ್ಲರಿಗೂ ಒಳ್ಳೆಯದನ್ನು ಮಾಡಪ್ಪ ದೇವರೇ! ಆದರೆ ಬಯ್ಯುವ ಜನ ಸಹ ಜೋರಾಗಿದ್ದಾರಲ್ಲ. ಪ್ರಪಂಚದ ಹಣೆಬರಹವೇ ಹೀಗಾಗಿದೆ."

ಸಕಲತವಾಲಾ ನಕ್ಕು ಹೇಳಿದರು, "ನಿಜ, ನಿಜ. ಹೆಚ್ಚು ಬೈಗಳನ್ನು ನೀನೇ ಕೇಳಬೇಕಾಗುತ್ತದಲ್ಲವೆ ?

"ಅದು ನನ್ನ ಹಣೆಬರಹ," ಪನ್ನಾಲಾಲ್ ಹೇಳಿದರು, "ಕೆಲವರಿಗೆಲ್ಲಾ ಚಂದಾ ಕೊಡಬೇಕು, ಗೋಸೇವೆಯಾದರೇನು ಮನುಷ್ಯಸೇವೆಯಾದರೇನು. ಚಂದಾಗಿಂದಾ ಅಂತ ಎಷ್ಟು ಹೋಗುತ್ತೋ ಅದು ನನಗೇ ಗೊತ್ತು. ಇದರ ಮೇಲೆ ಬಡವರಿಗೆ ಸಹಾಯ ಮಾಡೋದು, ಹೊಟ್ಟೆಗಿಲ್ಲದವರಿಗೆ ಅನ್ನ ಹಾಕೋದು-"

ಸಕಲತವಾಲಾ ಹೇಳಿದರು, -"ನೋಡಿ, ಅಂದಹಾಗೆ, ಆ ಗುಮಾಸ್ತ, ಅದೇ ನಿಮ್ಮ ಕೆಲಸ ಮಾಡಿ ಕೊಟ್ಟರಲ್ಲ, ಅವರಿಗೆ ಏನೂ ಕೊಡೋದಿಲ್ಲವಾ ? ನಿಮಗಾಗಿ ಅವರೇಕೆ ಹಗಲುರಾತ್ರಿ ಒದ್ದಾಡಬೇಕು ? ಎಲ್ಲರ ಕೆಲಸವನ್ನೂ ಪಕ್ಕಕ್ಕೆ ಹಾಕಿ ನಿಮ್ಮ ಕೆಲಸ ಯಾಕೆ ಮಾಡ್ತಾರೆ ? ಅವರಿಗೆ ಕೊಡೋದು ಪುಣ್ಯದ ಕೆಲಸ ಅಲ್ಲವೆ ? ಕೊಟ್ಟಮೇಲೆ ಸುಮ್ಮನೆ ಲಂಚತಿಂತಾರೆ ಅಂತೀರಿ, ಕೊಡದಿದ್ದಾಗ ಹಾಳಾದವರು ಸುಮ್ಮನೆ ಸತಾಯಿಸುತ್ತಾರೆ ಅಂತೀರಿ. ಈ ಪ್ರಪಂಚದಲ್ಲಿ ಸತ್ಯ, ಧರ್ಮ ಒಂದೂ ಇಲ್ಲ. ಸತ್ಯ ಅನ್ನುವ ಹೆಸರೇ ನೆಗೆದು ಬಿದ್ದುಹೋಗಿದೆ-"

"ಅಯ್ಯೋ, ಬಿಡ್ತು ಬಿಡ್ತು ಅನ್ನಿ," ಪನ್ನಾಲಾಲ್ ಮಧ್ಯದಲ್ಲೇ ಬಾಯಿ ಹಾಕಿದರು, "ಈ ತರಹ ಪ್ರಪಂಚ ಹೆಚ್ಚುದಿನ ಇರಲ್ಲ. ಚಂದಾ ಕೊಟ್ಟು, ಬಡವರಿಗೆ ಅನ್ನ ಹಾಕಿದ ಮೇಲೆ ಉಳಿಯೋದರಲ್ಲಿ ದೊಡ್ಡಭಾಗ ಇನ್‌ಕಂಟ್ಯಾಕ್ಸ್ ಅಂತ ಹೊರಟುಹೋಗುತ್ತೆ. ನಾವೇನು ಲಾಭ ಮಾಡಿಕೊಳ್ಳುತ್ತಿದ್ದೇವೆಯೆ ? ಜನ ಬರಲಿ, ಒಳಗೆ ನೋಡಲಿ, ಕಷ್ಟಪಡದಿದ್ದರೆ ಒಂದು ಕಾಸೂ ಹುಟ್ಟೋದಿಲ್ಲ. ಕೂಲಿಯವನು ಕಷ್ಟಪಟ್ಟು ದುಡಿದರೂ ತನ್ನದು ಅಂತ ಮನೆಗಿಷ್ಟು ತರ್ತಾನೆ, ನಾವಾದರೋ ಬೇರೆಯವರಿಗೋಸ್ಕರ ದುಡೀಬೇಕು. ಏನಾದರೂ ಉಳಿದರೆ ಎಲ್ಲವೂ ದೇಶದ್ದೇ ಅಲ್ಲವೆ. ಮತ್ತೆ ವ್ಯಾಪಾರಕ್ಕೇ ಹಾಕುತ್ತೇವಲ್ಲ, ಹತ್ತಾರು ಜನಕ್ಕೆ ಕೆಲಸ ಸಿಗುತ್ತೆ, ಸಾಯುವಾಗ ಏನೂ ಜೊತೆಯಲ್ಲಿ ಕಟ್ಟಿಕೊಂಡು ಹೋಗೋದಿಲ್ಲವಲ್ಲ."

"ಅದು ಸರಿ ನೀವು ಹೇಳೋದು."

ಬಲಿದತ್ತ ಶ್ಯಾಮಬಾಬುವಿಗೆ ಮೊಣಕೈಯಲ್ಲಿ ಗುದ್ದಿದ, "ಅಲ್ಲಿ ಕೇಳಿ ಶ್ಯಾಮಬಾಬು, ವ್ಯಾಪಾರದ ದೊಡ್ಡದೊಡ್ಡ ನೀತಿಗಳು ಏನಂತ. ಶ್ಯಾಮಬಾಬು,

ಹುಷಾರಾಗಿ ಕಿವಿಕೊಡಿ. ಕಂಪೆನಿಯೊಡನೆ ಈ ಜನಗಳ ಸಂಬಂಧ ಆಳವಾಗಿದೆ. ಅದು ಸರಿ, ಶರ್ಮಾ ಸಾಹೇಬರು ಬರಲಿಲ್ಲವಲ್ಲ, ರಣಜಿತಬಾಬು ಸಹ ಬರಲಿಲ್ಲ. ಇಬ್ಬರೂ ಬೇಟೆಗೆ ಹೋಗಿದ್ದರಲ್ಲ, ಏನಾಯ್ತು?"

"ಅವೆಲ್ಲ ದೊಡ್ಡ ದೊಡ್ಡ ಮಾತುಗಳು ಬಿಡಿ," -ಶ್ಯಾಮಬಾಬು ಉತ್ತರಿಸಿದರು. ಅವರ ಗಮನವೆಲ್ಲ ತಟ್ಟೆಯ ಕಡೆ ಹರಿದಿತ್ತು.

"ಸಾಯಂಕಾಲವೇ ವಾಪಸ್ಸು ಬರಬೇಕಾಗಿತ್ತು. ಕಡೇಪಕ್ಷ ಮಿಸ್ಟರ್ ಶರ್ಮಾ ಅವರಾದರೂ "ಹೂಂ", -ಶ್ಯಾಮಬಾಬುಗಳ ಕಣ್ಣು ಊಟದಲ್ಲಿ ನೆಟ್ಟಿದೆ.

ಹತ್ತಿರದಲ್ಲೇ ಇಬ್ಬರು ಹೆಂಗಸರು ಕುಳಿತಿದ್ದಾರೆ, ಕುಮಾರಿ ನಾಗ ಮತ್ತು ಶ್ರೀಮತಿ ಪಾಲ್. ರವೀಂದ್ರರ ಸಂಗೀತದ ಬಗ್ಗೆ ಚರ್ಚೆ ನಡೆಯುತ್ತಿದೆ. ಬಹುಶಃ ಊಟದ ನಡುವೆಯೆ ಹೊಸದಾಗಿ ಜೀವ ತಳೆದ ವಿಷಯಗಳ ರುಚಿಯನ್ನು ನೋಡುತ್ತಿರುವಂತಿದೆ.

"ರವೀಂದ್ರರ ಸಂಗೀತದ ಬಗ್ಗೆ ಏನಂತೀರಿ,-" ಕುಮಾರಿ ನಾಗ ಕೇಳಿದಳು. ಮಾತನ್ನು ಅರ್ಧದಲ್ಲೇ ನಿಲ್ಲಿಸಿ ತನ್ನ ಉಗುರಿನ ಮೇಲೆ ದೃಷ್ಟಿ ನೆಟ್ಟಳು. ಬಣ್ಣ ಬಳಿದ ಉಗುರುಗಳು. ಅಲ್ಲಿ ಉತ್ತರ ಇರಲಿಲ್ಲ.

"ಆ ಸಂಗೀತದಲ್ಲಿ ಅನಂತವಾದ ಪ್ರಕಾಶವಿದೆ, ಅಡೆತಡೆಯಿಲ್ಲದ ಹರಿವಿದೆ, ಅಗೋಚರವಾದ ವೇದನೆ ಇದೆ. ರವೀಂದ್ರರ ಸಂಗೀತ! ಅಬ್ಬಾ, ಅದಕ್ಕೆ ಸಮನಾದುದಿಲ್ಲ-" ಶ್ರೀಮತಿ ಪಾಲ್ ಮಾತು ಸೇರಿಸಿದಳು.

"ರವೀಂದ್ರರ ಸಂಗೀತ ಕೇಳಿದಾಗಲೆಲ್ಲ ನನ್ನ ಮನಸ್ಸಿನೊಳಗಡೆ ಹೀಗೆಯೆ ಆಗುತ್ತದೆ," ಕುಮಾರಿ ನಾಗ ಹೇಳಿದಳು, "ಮಾತಿನ ಮೂಲಕ ಅದನ್ನು ಹೊರಗೆಡವಲು ಸಾಧ್ಯವಾಗೋದಿಲ್ಲ. ಮಾತುಗಳಿಗೆ ಸಿಗದಂತಹದು ಅದು." ಬಹಳ ಹೇಳಿಬಿಟ್ಟಳೇನೊ ಅನ್ನುವಂತೆ ನಗುತ್ತಾ ನಗುತ್ತಾ ಗುಂಡುಮುಖವನ್ನು ಶ್ರೀಮತಿ ಪಾಲಳ ಕಡೆಗೆ ತಿರುಗಿಸಿದಳು. ಆಗ ಶ್ರೀಮತಿ ಪಾಲ್ ಕನಸಿನಲ್ಲಿ ತೇಲುತ್ತಿರುವಂತೆ ಮುಖಮಾಡಿಕೊಂಡು ಮೆಲ್ಲಗೆ ನುಡಿದಳು.-

"ಏನು ಆಗುತ್ತೆ? ನಾನು ಹೇಳಬಲ್ಲೆ, ಏನೋ ಒಂದು ರೀತಿಯ ಕೋಮಲವಾದ, ಕಠಿಣವಾದ, ಸ್ಥೂಲವಾದ ತೆಳುವಾದ ಹಾಗಿರುವುದು ನಾಲ್ಕೂ ಕಡೆಯಿಂದ ಆವರಿಸಿಕೊಂಡಂತಾಗುತ್ತದೆ. ಮನಸ್ಸಿಗೆ ಎಲ್ಲ ಕರಗಿ ಹೋಗಿದೆಯೇನೋ ಅನಿಸುತ್ತದೆ. ಸ್ಥೂಲ ಮತ್ತು ಸೂಕ್ಷ್ಮ ಎಲ್ಲವೂ ಒಂದಾಗಿ ಕೊನೆಗಾಣದ ಹಾದಿಯಲ್ಲಿ ಮಾತುಗಳಿಗೂ ಮೀರಿ ಓಡುತ್ತಿರುತ್ತವೆ. ಅದೇ ರವೀಂದ್ರರ ಸಂಗೀತ, ಎಡೆಬಿಡದ ಮಿಡಿತ."

ಶ್ರೀಮತಿ ಪಾಲ್ ಕುಮಾರಿ ನಾಗಳ ಕಡೆ ಓರೆನೋಟ ಬೀರಿ ಮುಖವನ್ನು ನೇರಮಾಡಿಕೊಂಡಳು. ಇದು ಆಕೆಯ ಒಂದು ಸಹಜವಾದ ಭಂಗಿ. ಮಾತಾಡಬೇಕಾದರೆ ಎದುರಿನಲ್ಲಿ ಕುಳಿತವರು ಅವಳ ಮುಕ್ಕಾಲು ಮುಖ ಮಾತ್ರ ನೋಡಬಹುದು. ಕನ್ನಡಿಯಲ್ಲಿ ನೋಡಿದಾಗ ಅಷ್ಟೇ ಸುಂದರ, ಆ ಸ್ಪಷ್ಟವಾದ ಗೆರೆಗಳು, ಮುಂದಿನಿಂದ ನೋಡಿದರೆ ಆಕೆಯ ನೋಟ ನೆರಳಿನಂತೆ ಕಾಣುತ್ತದೆ, ತುಂಬ ಉದ್ದವಲ್ಲದ ಕುತ್ತಿಗೆ, ಮೆಲ್ಲಗೆ ಬಗ್ಗಿ ಒಂದು ರೀತಿಯಲ್ಲಿ ತಿರುಗುವಂತೆ

ಕಾಣುತ್ತದೆ. ಮುಂದಿರುವವರಿಗೆ ಇದು ಯಾವುದೋ ಒಂದು ಪಕ್ಷಿ ಅಂತ ಅನಿಸುತ್ತದೆ.

ತಂತಿಯ ವಾದ್ಯದಂತೆ ಧ್ವನಿಯೆಬ್ಬಿಸುತ್ತಾ ನಲಿಯುತ್ತಾ ಆಕೆ ತನ್ನ ಮಾತೃಭಾಷೆಯನ್ನು ಇಂಗ್ಲಿಷ್ ಧಾಟಿಯಲ್ಲಿ ಉಚ್ಚರಿಸುತ್ತಾಳೆ. 'ರ' ಉಚ್ಚಾರಣೆಯನ್ನು 'ಅ' ರೀತಿಯಲ್ಲಿ ಮಾಡುತ್ತಾಳೆ. ಅಕಾರಾಂತ ಪದವನ್ನು ಸ್ವಲ್ಪ ತಡೆದು ಉಕಾರಾಂತವಾಗಿ ಮಾಡುತ್ತಾಳೆ. ಹಾಗಾಗಿ ಅದರಿಂದ ಒಂದು ರೀತಿಯ ವಿಶೇಷವಾದ ಶಬ್ದ ಸಮಾವೇಶ ಹುಟ್ಟಿಕೊಳ್ಳುತ್ತದೆ.

ಶ್ರೀಮತಿ ಪಾಲ್ ಕೇವಲ ಭಾಷಣ ಮಾಡುವಂತೆ ವಿಜ್ಞಾಪನೆ ಮಾಡುತ್ತಾಳೆ,-

"ನೋಡಿ ಇದೇ ರವೀಂದ್ರ ಸಂಗೀತ. ಅಸೀಮ ಸ್ಪಂದನ, ಅರ್ಥಮಾಡಿಕೊಳ್ಳ ಬಹುದು, ಆದರೆ ಬಾಯಲ್ಲಿ ಬಣ್ಣಿಸಲಾಗುವುದಿಲ್ಲ. ನೀವೇನಾದರೂ ಹೇಳ್ತೀರಾ ?"

ಕುಮಾರಿ ನಾಗ ಗಲಿಬಿಲಿಗೊಂಡು ಹೇಳಿದಳು, "ಚೆನ್ನಾಗಿ ಹೇಳಿದಿರಿ, ಇನ್ನೇನು ತಾನೆ ಹೇಳೋಕಾಗುತ್ತೆ ?"

ದೂರದಿಂದಲೇ ಇತ್ತ ಮುಖಮಾಡಿ ಕುಳಿತಿದ್ದಾರೆ ನವಕಿಶೋರಬಾಬು. ಕಣ್ಣಿಗೆ ಮುಚ್ಚುವುದರಲ್ಲಿ ತಡವಾಗುತ್ತದೆ. ನಸುಗಪ್ಪು ಮುಖದ ಮೇಲೆ ಪೌಡರ್ ಮತ್ತು ಕ್ರೀಂ ಎರಡೂ ಸೇರಿ ಒಂದು ಹೊಸ ಬಣ್ಣದ ಮುಖಭಾವ ಎದ್ದುಕಾಣುತ್ತಿದೆ. ತಲೆಗೆ ಎಣ್ಣೆಬಳಿದು ಮಧ್ಯದಲ್ಲಿ ತೆರೆದ ಬೈತಲೆ. ಹೆಗಲಿನ ಮೇಲೆ ಹೊದ್ದಿರುವ ಆಳ್ಳಕವಾದ ಹೂವಿನ ಡಿಸೈನಿನ ಪಂಜಾಬಿ ಶಾಲು. ಎದುರುಬದಿರಿನಲ್ಲಿ, ಹಿಂಬದಿಯಲ್ಲಿ ಮನಸ್ಸು ಮತ್ತೆ ಮತ್ತೆ ಸೆಳೆದಂತಾಗಿ ಒಮ್ಮೊಮ್ಮೆ ಶ್ರೀಮತಿ ಪಾಲ್ ಬೆಚ್ಚಿದರೆ, ಇನ್ನೊಮ್ಮೆ ಕುಮಾರಿನಾಗ, ಮತ್ತೊಮ್ಮೆ ಮೇಜಿನ ಆ ಬದಿಯಲ್ಲಿ ಕುಳಿತ ಮಂದಿ ಬೆಚ್ಚುತ್ತಾರೆ. ಮೈಮೇಲೆ ಡಿಸೈನ್ ಇರುವ ಸೀರೆಯ ಅಂಚು ನಡುಗುತ್ತದೆ. ತಳ್ಳನೆಯ ಮರಳಿನಂತೆ ನುಣುಪಾದ ಚರ್ಮ ನಡಗುತ್ತದೆ, ನದಿಯ ತೆಳು ಹರಿವಿನಂತೆ ತೆಳುವಾದ ಜಡೆ ಕಂಪಿಸುತ್ತದೆ, ಕಂಬದಂತೆ ಜಂಭದಿಂದ ತುಳುಕುತ್ತಿರುವ ಕುತ್ತಿಗೆಯ ಮೇಲೆ ಗುಂಡಾಗಿರುವ ತುರುಬು ನಡುಗುತ್ತದೆ. ನಿಜ ಹೇಳಬೇಕೆಂದರೆ ಈ ಹುಲ್ಲು ಭೂಮಿಯ ಮೇಲೆ ಮಲ್ಲಿಗೆ ಹೂವುಗಳು ಅರಳಿವೆ, ಕ್ರೀಮ್ ಮತ್ತು ಸೆಂಟುಗಳು ಸುವಾಸನೆ ನಡಗುತ್ತದೆ, ಮೈಯ ವಾಸನೆಯ ಜೊತೆ ಸೇರಿದ ತಿಂಡಿಗಳ ಗಮಗಮ ವಾಸನೆ ಕಂಪಿಸುತ್ತದೆ. ಸುಂದರವಾದ ವಿಗ್ರಹದ ಮೈಯನ್ನು ಅದುಮಿ ಹಿಡಿದು ಮತ್ತೆ ಮತ್ತೆ ಆಟವಾಡಿ ಮನಸ್ಸಿನಲ್ಲೇ ವಿಗ್ರಹದ ಹೊರಗನ್ನು ಕಳಚಿ, ಸುಲಿದುಹಾಕುತ್ತಲೆ ಥರಥರ ನಡುತ್ತಿರುವ ಎದೆಯಲ್ಲಿ ಒಂದು ವಿಧದ ಕಹಿರುಚಿಯ ಅನುಭವ ಕಂಪಿಸಿದಂತಾಗುತ್ತದೆ. ನವಕಿಶೋರಬಾಬು ಕಣ್ಣುಗಳ ಮೂಲಕವೇ ಊಟದ ರುಚಿಯನ್ನು ಸವಿಯುತ್ತಿದ್ದಾರೆ. ಗುಂಡುಮುಖದ ಮೇಲೆ ಅರ್ಧ ನಗುತ್ತಿರುವರೇನೊ ಎಂಬಂತೆ ಸ್ವಲ್ಪ ತೆರೆದ ಬಾಯಿ, ನಾಲಗೆ, ದೊಡ್ಡದೊಡ್ಡದಾಗಿರುವ ಹಲ್ಲುಗಳು ಹೊಳೆಯುತ್ತಿವೆ. ಅವರು ಸಮಾಜದಲ್ಲಿ ವಿಹರಿಸುವ ಒಬ್ಬ ಋಷಿ ಮನಸ್ಸಿನ ಮನುಷ್ಯ.

ಯಾವ ಅಡೆತಡೆಗಳೂ ಇಲ್ಲ. ಎಲ್ಲರೂ ಊಟದಲ್ಲಿ ತೊಡಗಿದ್ದಾರೆ.

ಎಳೆದುಕೊಂಡು ಕಿತ್ತುಕೊಂಡು ತಿನ್ನುವಂತಹ ಪರಿಸ್ಥಿತಿಯೇನಿಲ್ಲ. ಎಲ್ಲರೂ

ಒಬ್ಬರಿಗೊಬ್ಬರು ಉಪಚಾರ ಮಾಡುತ್ತಿದ್ದಾರೆ,-"ತೊಗೊಳ್ಳಿ, ಸಂಕೋಚ ಬೇಡ, ಇನ್ನೊಂದು ಸ್ವಲ್ಪ ಹಾಕಿಸಿಕೊಳ್ಳಿ."

ಮೇಜಿನ ಸುತ್ತಲೂ ಸೇರಿ ಕುಳಿತುಕೊಂಡಿರುವವರೆಲ್ಲ ಒಡನಾಡಿಗಳು, ಯಾರ ಅಡಚಣೆಯೂ ಇಲ್ಲ, ನಿಷೇಧವೂ ಇಲ್ಲ, ಎಲ್ಲ ತಮ್ಮ ತಮ್ಮ ರೀತಿಯಲ್ಲಿ ಬೇಡಿ ಕಟ್ಟಿಕೊಂಡ ಸಮಾಜ, ಅದು ವ್ಯಕ್ತಿಯ ವ್ಯಕ್ತಿತ್ವವನ್ನು ಎಗ್ಗಿಲ್ಲದೆ ನೋಡುತ್ತದೆ.

ದೀನಬಂಧುಬಾಬು ತಲೆತಗ್ಗಿಸಿ ತಟ್ಟೆ ಖಾಲಿಮಾಡುತ್ತಿದ್ದಾರೆ. ತಿನ್ನುತ್ತಿರುವ ಹಾಗೆಯೆ ತಿಂಡಿತಿನಿಸುಗಳ ಬೆಲೆಯನ್ನು ಲೆಕ್ಕ ಹಾಕಲು ತೊಡಗಿದ್ದಾರೆ. ದುಬಾರಿ ತಿಂಡಿಗಳ ಕಡೆ ಅವರಿಗೆ ವಿಶೇಷವಾದ ಕಾಳಜಿ. ಹರಿಬಾಬು ಊಟತಿಂಡಿಗಳ ಬಗೆಗೆ ಮಾತಿಗೆ ಶುರುಮಾಡಿದ್ದಾರೆ- "ಹೆ ಹೆ ಹೆ ಹೆ, ದೀನಬಂಧು ಬಾಬುಗಳು ತುಂಬ ಬುದ್ಧಿವಂತರು, ಹೆ ಹೆ ಹೆ-"

"ರಾಮ ಈ ಬಾರಿಯೂ ಬರಲಾಗಲಿಲ್ಲ," ದೀನಬಂಧುಬಾಬು ಹೇಳಿದರು, "ಚಿಕ್ಕಪ್ಪ, ವಿದೇಶಕ್ಕೆ ಹೋಗುವ ಪ್ರಯತ್ನದಲ್ಲಿ ತುಂಬ ಬಿಜಿಯಾಗಿದ್ದೇನೆ ಅಂತ ಬರೆದಿದ್ದಾರೆ. ಚಿಕ್ಕ ಸಾಹೇಬರು ತಮ್ಮ ಮಗಳನ್ನು ಕೊಡುವ ಬಗ್ಗೆ ಪ್ರಸ್ತಾಪಮಾಡುವ ಸನ್ನಾಹದಲ್ಲಿದ್ದಾರೆ. ನಾನೂ ಸಾಕಷ್ಟು ಪ್ರಯತ್ನಪಟ್ಟೆ. ಆದರೆ ಆ ಹುಡುಗಿ ಖಂಡಿತ ಸರಿಹೋಗ್ತಾಳೆಯೆ ? ಅವನಿಗೆ ವಿದೇಶಕ್ಕೆ ಹೋಗುವ ಹುಚ್ಚು ಹಿಡಿದಿದೆ."

"ಅವನು ಹುಡುಗೀನ ಒಂದು ಸಾರಿ ನೋಡೋದಕ್ಕೆ ಬಿಡಿ," ಘನೇಶ್ವರ ಬಾಬು ಹೇಳಿದರು. -"ಹಾಗೆ ನೋಡಲಿಲ್ಲ ಅಂದ್ರ ನನಗೆ ಹೇಳಿ. ಒಂದು ಒಳ್ಳೇ ಸಮಯದಲ್ಲಿ ಅವಳ ಡ್ಯಾನ್ಸ್ ತೋರಿಸಿ, ನೋಡುವವರೇ ಕುಣಿಯೋದಕ್ಕೆ ಶುರುಮಾಡ್ತಾರೆ. ಎಲ್ಲ ಆಮೇಲೆ ತಣ್ಣಗಾಗುತ್ತೆ. ಎಲ್ಲರ ಕಣ್ಣುಗಳನ್ನು ತಣಿಸೋದಕ್ಕೆ ಅವಳು ಕುಣಿಯಲು ಶುರುಮಾಡಿದಳು ಅಂದ್ರ ಸಾಕು, ಭಾವನೆಗಳ ಅಲೆ ಎದ್ದಂತಾಗುತ್ತದೆ. ಕರೀರಿ ನಿಮ್ಮ ರಾಮನ್ನ, ಮುಂದಿನ ತಿಂಗಳು ಹೇಗಿದ್ದರೂ ಒಂದು ಪ್ರೋಗ್ರಾಂ ಇದೆಯಲ್ಲ. ನೋಡ್ತಾ ಇರಿ, ಆ ಅಲೆಯಲ್ಲಿ ರಾಮ ಹೇಗೆ ಕೊಚ್ಚಿಕೊಂಡು ಹೋಗ್ತಾನೆ ಅಂತ. ಆವನನ್ನು ಮತ್ತೆ ಒಪ್ಪಿಸೋ ಅಗತ್ಯವೇ ಬರೋದಿಲ್ಲ."

"ಅಯ್ಯೋ ಬಿಡಿ, ರಾಮ ಬರ್ತಾನೇನು ? ಅವನೇನು ನಮ್ಮ ತರಹಾನೆ ? ವಿದೇಶದ ಹೆಸರು ಕೇಳಿಯೆ ಅವನಿಗೆ ಹುಚ್ಚು ಹಿಡಿದುಬಿಟ್ಟಿದೆ."

ಹರಿಬಾಬು ಹೇಳಿದರು- "ನೀವು ಹೀಗೆ ಹೇಳಬೇಡಿ. ಹೇಗಾದರೂ ಮಾಡಿ ಕೆಲಸ ನಡೆಸಿ. ಒಂದು ಮದುವೆ ಮಾಡಿಸಿದರೆ ದೇವಸ್ಥಾನ ಕಟ್ಟಿಸಿದಷ್ಟು ಪುಣ್ಯ ಬರುತ್ತೆ. ಇನ್ನು ವಿದೇಶಕ್ಕೆ ಹೋಗುವ ವಿಚಾರ. ಅದಕ್ಕೂ ಚಿಕ್ಕಸಾಹೇಬರ ಹತ್ತಿರ ಹೇಳಿದರಾಯಿತು. ಸರಿಯಾದ ಅಳಿಯ ಸಿಗೋದಾದರೆ ಮಾಡೋದೇನು ಕಷ್ಟ ? ಅವರ ಬಳಿ ಯಾವುದಕ್ಕೆ ಕಡಮೆ ? ಹಾಗೇ ಲೋಕಾಭಿರಾಮವಾಗಿ ಮಾತಾಡುತ್ತಾ ಹೇಳಿ ಈ ವಿಚಾರ. ಏನು, ನಾನೇ ಹೇಳಲೆ ?"

"ನನಗೆ ಆ ಧೈರ್ಯ ಬರೋದಿಲ್ಲ. ನನ್ನನ್ನೇನೋ 'ಚಿಕ್ಕಪ್ಪಾ' ಅಂತ ಕರೀತಾನೆ. ಆದರೆ ಅವನ ಭಾಗಕ್ಕೆ ನಾನು ಏನೂ ಇಲ್ಲ ಅನಿಸುತ್ತೆ."

ಆಮೇಲೆ ಕೆಲಸದ ವಿಚಾರ, ಅದಕ್ಕೆ ಒಳ್ಳೆಯ ಜಾಗ ಕೆಟ್ಟ ಜಾಗ ಎಂಬುದಿಲ್ಲ, ಸಮಯ ಅಸಮಯ ಅಂತಿಲ್ಲ. ಎಂದಿನ ಹೊಟ್ಟೆಪಾಡಿನ ಸಮಸ್ಯೆಯ ವಿಚಾರಗಳು,

ಆ ಚರ್ಚೆ ತನಗೆ ತಾನೇ ಬಿಚ್ಚಿಕೊಳ್ಳುತ್ತದೆ.

ಸರೋಜಿನಿ ಮೇಜಿನ ಮುಂದೆ ಕುಳಿತಿದ್ದಾಳೆ. ಅವಳ ಒಂದು ಕಡೆ ಶ್ಯಾಮಬಾಬು ಇದ್ದಾರೆ. ಅವರ ಹಸಿವು ತೋಳದ ಹಸಿವು. ಮೇಜಿನ ಕೆಳಗಡೆ ಮಧ್ಯ ಮಧ್ಯೆ ಅವರ ಬಲಿಷ್ಠವಾದ ವ್ಯಕ್ತಿತ್ವದ ಅನುಭವವಾಗುತ್ತದೆ. ಆದರೆ ಅವರು ಹೆಚ್ಚು ಮಾತಾಡುವವರಲ್ಲ, ಊಟದಲ್ಲಿ ಮಗ್ನರಾಗಿದ್ದಾರೆ. ಕೇವಲ ಒಮ್ಮೊಮ್ಮೆ ಮಾತ್ರ ಅವರ ದಪ್ಪ ಕಪ್ಪ ಕಣ್ಣುಗಳು ಓರೆನೋಟ ಬೀರುತ್ತವೆ, ತಣಿಯದ ಹಸಿವು ಮತ್ತೆ ಮೇಲೇರಿ ಹಟ ಹಿಡಿದು ಕಣ್ಣುಗಳು ಕೆಳಗಿಳಿಯುತ್ತವೆ, ಊಟ, ಊಟ ಮತ್ತು ಊಟ. ಹಸಿವನ್ನು ಇಂಗಿಸಿಕೊಳ್ಳುವ ಈ ಹಟ ಒಂದು ತಮಾಷೆಯೆಂಬಂತೆ ಮರೆಯಲ್ಲಿಯೆ ಬರುತ್ತದೆ, ಹಸಿವು ಹಸಿವು ಅಂತ ಕೂಗುತ್ತದೆ, ಸಾಕಷ್ಟು ಮರೆಯಲ್ಲಿಯೆ ಕೂಗುತ್ತದೆ, ಅಲ್ಲಿ ಕಳ್ಳತನದಿಂದ ಮುಚ್ಚಿಟ್ಟುಕೊಳ್ಳುವ ಏರ್ಪಾಡು. ಆದರೆ ಸರೋಜಿನಿಯ ಗಮನ ಆ ಕಡೆ ಹರಿದಿಲ್ಲ. ಅವಳ ಮನಸ್ಸಿನಲ್ಲಿ ಏನೋ ಕಳವಳ.

ಅವಳು ಚೆನ್ನಾಗಿ ಅಲಂಕಾರ ಮಾಡಿಕೊಂಡು ಬಂದಿದ್ದಳು. ಮೇಜಿನ ಮುಂದೆ ಕುಳಿತು ಆಡಬೇಕಾದ ಮಾತುಗಳೆಗೆಲ್ಲ ಅಣಿಮಾಡಿಕೊಂಡು ಬಂದಿದ್ದಳು-ಮೇಜಿನ ಊಟ ಎಲ್ಲೋ ಅಪರೂಪದ ಸಂದರ್ಭವೇನೊ ಎಂಬಂತೆ. ಇಷ್ಟೊಂದು ಅಲಂಕಾರ, ಏತಕ್ಕಾಗಿ ? ಕೇವಲ ಊಟಕ್ಕಾಗಿಯೆ ?

ಗುಂಪಿನಲ್ಲಿ ಏನೋ ಅವಳ ಮನಸ್ಸು ಇವತ್ತು ಅರಳಿದಂತಿಲ್ಲ. ಚಿತ್ರದ ಒಂದಂಶ ಮಾತ್ರವಷ್ಟೆ, ಚಿತ್ರದ ಕೇಂದ್ರಬಿಂದುವಲ್ಲ, ಚಿತ್ರದ ಸರ್ವಸ್ವವಲ್ಲ. ಎಲ್ಲ ಒಟ್ಟಾಗಿ ಸಂಗೀತದ ಯಾವುದೇ ಸಮನ್ವಯವಾದಂತಿಲ್ಲ, ಕೇವಲ ಗೊಂದಲದಂತಿದೆ. ಗೊಂದಲದಂತೆಯೂ ಅಲ್ಲ. ಅದು ಯಾವ ವಿಶೇಷ ಧ್ವನಿಯೂ ಅಲ್ಲ, ಅದರ ವೈಶಿಷ್ಟ್ಯಕ್ಕೆ ತೆರೆ ಬಿದ್ದಂತಿದೆ.

ಇಲ್ಲಿ ಅವಳು ಏನೂ ಇದ್ದಂತಿಲ್ಲ. ಏಕೆಂದರೆ ಎಲ್ಲರೂ ತಮ್ಮ ಮಟ್ಟಿಗೆ ತಾವು ಯಾರು ಬೇಕಾದರೂ ಆಗಬಹುದು. ಇಲ್ಲವೆಂದರೆ ಬೇರೆಯವರು, ಯಾರೋ ಒಬ್ಬರಿಗೆ ವಿಶೇಷದ ಪಟ್ಟಿ ಹಚ್ಚುವರು. ಅವರು ಎಳೆದಾಡುವುದರಲ್ಲೇ ಆ ವಿಶೇಷತೆ ಹೊರಬೀಳುತ್ತದೆ. ಇಲ್ಲಿ ಅಂತಹ ಎಳೆದಾಟವಿಲ್ಲ. ಎಲ್ಲ ಇಬ್ಬಿಬ್ಬರು, ನಾಲ್ಕು ನಾಲ್ಕು ಮಂದಿಯಂತೆ ಕೋಟೆ ಕಟ್ಟಿಕೊಂಡಿದ್ದಾರೆ. ಅವಳು ಏನೂ ಅಲ್ಲ. ಶರ್ಮಾ ಇಲ್ಲ, ರಣಜಿತ ಬಾಬುವೂ ಇಲ್ಲ. ಹೊರಗಡೆ ಮೋಡಗಳು ಕವಿದಿವೆ.

ಈ ನಕ್ಷತ್ರ ದೀಪಗಳು ಅದೆಷ್ಟು ಬೇಗ ಮಂಕಾಗುತ್ತವೆ.

ಕಗ್ಗತ್ತಲೆ. ಸೊಂಯ್ ಸೊಂಯ್ ಬೇಗ ಮಂಕಾಗುತ್ತದೆ.

ಕಗ್ಗತ್ತಲೆ. ಸೊಂಯ್ ಸೊಂಯ್ ಅಂತ ಗಾಳಿ ಬೀಸುತ್ತಿದೆ.

ಕಾರ್ಮುಗಿಲಿನ ನೆತ್ತಿಯಲ್ಲಿ ಆ ಸುರಿಮಳೆಯಲ್ಲಿ ಸಾವಿರ ಹೆಡೆಯ ಮಿಂಚಿನ ಹೊಳಪು ಕಣ್ಣು ಕೋರೈಸುತ್ತದೆ.

ಇವತ್ತು ಮಿಂಚಿನ ಹೊಳಪನ್ನು ತಡೆದುಕೊಳ್ಳಲಾಗುತ್ತಿಲ್ಲ.

ಒಂದು ಸಂಕೇತ. ಅದಾದ ಮೇಲೆ ಬಾನ ಆಳದ ಅದೆಷ್ಟು ಕತ್ತಲೆಮೂಲೆಗಳಿಂದ ಒಟ್ಟಾಗಿ ಗುಡುಗುಡು ಅಂತ ಗಂಭೀರವಾಗಿ ಮೋಡಗಳು ಢಮರುಗ ಬಾರಿಸುತ್ತವೆ.

ಅದೋ ಸಿಡಿಲು ಬಿತ್ತು. ನೋಡುತ್ತಿರುವಂತೆಯೆ ಎಲ್ಲೆಲ್ಲೂ ಬೆಳಕು ಕಣ್ಣು ಕೋರೈಸಿದಂತಾಗಿ ಮತ್ತೆ ಕತ್ತಲೆ ಮುಚ್ಚಿಕೊಳ್ಳುತ್ತದೆ. ಮತ್ತೆ ಬೆಳಕು, ಮತ್ತೆ ಕತ್ತಲೆ, ಗಾಳಿ ಸೊಂಯ್ ಸೊಂಯ್ ಅಂತ ಬೀಸುತ್ತಿದೆ. ಹೊರಗಡೆ ಪ್ರಕೃತಿ ಉನ್ಮತ್ತಳಾಗಿ ನರ್ತಿಸುತ್ತಿದ್ದಾಳೆ.

ರೂಪ ಆಕಾರ ಇಲ್ಲ, ಕೇವಲ ವೇಷ ಅಷ್ಟೆ.

ಎದೆ ಢಗ್ ಅನ್ನುತ್ತದೆ. ಯಾಕೆ ? ಅದೇನು ಭಯವೆ ? ಯಾವುದರ ಸಂಕೇತ ಅದು ? ಮತ್ತೆ ಗುರುತಿಸುವುದಕ್ಕೆ ಆಗುವುದಿಲ್ಲ. ಬರೀ ಕಗ್ಗತ್ತಲೆ. ತಲೆಯಾಡಿಸುತ್ತಾ ಅಬ್ಬರಿಸುತ್ತಿರುವ ಬಿರುಗಾಳಿ.

ಸರೋಜಿನಿಯು ಮೈ ಕೈಯಲ್ಲಿ ಚಮಚ ಹಿಡಿದು ಕುಳಿತಿದೆ. ಮನಸ್ಸು ಇಲ್ಲಿಲ್ಲ. ಮನಸ್ಸು ಹಾರಿಹೋಗಿದೆ. ಸಾವಿನ ಪ್ರಪಂಚದಲ್ಲಿ ಹಾರಾಡುತ್ತಾ ಅಲೆಯುತ್ತಿದೆ. ಹಾಗೆಯೆ ಕ್ಷೀಣವಾದ ಆಲೋಚನೆಗಳು ಮೂಡುತ್ತಿರುವಂತೆಯೆ ಅವಳು ಯೋಚಿಸುತ್ತಾಳೆ-ಸಾವು, ಸಾವು ಎಂದರೇನು ? ಮತ್ತೆ ಹಾರಿಹೋಗುತ್ತದೆ. ಈ ಸಂಕೇತ, ಆ ಸಾವಿನದೇ ಅಲ್ಲವೆ ? ಗುಡುಗುಡು, ಸಿಡಿಸಿಡಿ, ಈ ಬಿರುಗಾಳಿ, ಈ ಮಿಂಚು, ಎಲ್ಲವೂ ಸಾವಿನ ಕರೆಯೆ ಅಲ್ಲವೆ ? ಹಳ್ಳಿಯ ಸ್ಮಶಾನ, ನೆಲದ ಮೇಲೆ ಉರಿದ ಇದ್ದಲು, ಒಬ್ಬಂಟಿಯಾಗಿ ನಿಂತ ಆಲದ ಮರ ಹದ್ದುಗಳ ನೆಲೆ. ದಿಣ್ಣೆಯ ಮೇಲೆ ಪಾಪಾಸುಕಳ್ಳಿ ಮತ್ತು ಗೊಬ್ಬಳಿ ಪೊದೆಗಳು, ಬರೀ ಸಾವು, ಸಾವು. ಹತ್ತಿರದಲ್ಲೇ ಕಾಡು ಕಾಣಿಸುತ್ತದೆ. ಅಲ್ಲೂ ಇದೇ ಗಾಳಿ. ಇದೇ ಅಬ್ಬರ, ದೊಡ್ಡ ದೊಡ್ಡ ಮರಗಳೂ ಛಟೀಲ್ ಛಟೀಲ್ ಅಂತ ನೆಲಕ್ಕೆ ಉರುಳುತ್ತಿವೆ. ದೊಡ್ಡ ಮರಗಳಿಗೆ ಮಿಂಚು ತಗಲುತ್ತದೆ. ಕ್ಷಣಮಾತ್ರದಲ್ಲೇ ಕಾಡೆಲ್ಲ ನಿರ್ಜೀವವಾಗಿದೆ. ಹೊರಗಡೆ ಬೆಳಕು-ಕತ್ತಲೆ, ಕತ್ತಲೆ-ಬೆಳಕು, ಅದೆಷ್ಟು ಬೇಗ ಬೇಗ, ಅಬ್ಬಾ !

ಎದೆಯಲ್ಲಿ ಧಗ್ ಅಂದಿತು. ಸಾವನ್ನು ನೋಡಿ ಹಕ್ಕಿ ತನ್ನ ಗೂಡಿನ ಕಡೆ ಓಡಿಬರುತ್ತದೆ. ಏಕೆ, ಸಾವು ಏಕೆ ? ಈ ಜನರಂತೂ ಕುಳಿತಿದ್ದಾರೆ, ಹರಟೆ ಹೊಡೆಯುತ್ತಿದ್ದಾರೆ, ತಿನ್ನುವುದರಲ್ಲಿ ಮಗ್ನರಾಗಿದ್ದಾರೆ.

ಎದುರಿಗೆ ಬದುಕಿನ ಥಳುಕು ಕಾಣುತ್ತಿದೆ, ಸಾವು ಎಲ್ಲಿದೆ ? ಎಲ್ಲಿದೆ ?

ನೀಳವಾಗಿ ಉಸಿರಾಡಿದಳು. ಶರ್ಮಾ ಮತ್ತು ರಣಜಿತಬಾಬು ಇಬ್ಬರೂ ಬೇಟೆಗೆ ಹೋಗಿದ್ದಾರೆಂದು ನೆನಪಿಗೆ ಬಂತು. ಬಹುಶಃ ಅವಳ ಮನೋರಂಜನೆಗಂದೇ ಹಾಗೆ ಮಾಡಿರಬೇಕು,-ಹೆಣ್ಣನ್ನು ನೋಡಿ ಗಂಡು ಅದೆಷ್ಟು ಬೇಗ ಉಬ್ಬಿಹೋಗುತ್ತದೆ. ಅಬ್ಬಾ ! ಬೇಕಾದರೆ ನಿಜವಾಗಿ ಸ್ವರ್ಗ ಹತ್ತಿ ಚಂದ್ರನನ್ನು ಹಿಡಿದು ತಂದಾರು, -ನಾವು ಇಷ್ಟೆಲ್ಲ ಮಾಡಿಸಬಲ್ಲವೆ ? ಇಷ್ಟು ಪಳಗಿದ್ದೇವೆಯೆ ? ಕಡಮೆ ಕಡಮೆ !

ಇದು ಗಂಡು ಜಾತಿ, ಎಲ್ಲರೂ ಸರಿಸಮಾನರು. ಎಲ್ಲರೂ ಒಂದೇ ರೀತಿಯಲ್ಲಿ ಉಬ್ಬಿಹೋಗುವವರು. ಜಂಬ ಕೊಚ್ಚಬಲ್ಲವರು, ಎಲ್ಲರೂ ಸಮಾನರು. ನೋಡುತ್ತಿದ್ದ ಹಾಗೆಯೆ ಕಾಡು ಬೆಕ್ಕಿನಂತಹ ಚೂಪುಗಣ್ಣುಗಳು, ಕಾಲಿಗೆ ಅಡರಿಕೊಳ್ಳುವಂತಹ ಗೀಳು, ನುಂಗಿಬಿಡುವಂತಹ ನೋಟ, ಚಪ್ಪಾಳೆಗೆ ಕುಣಿಯುವಂತಹ ಮನಸ್ಸು -ಇವೆಲ್ಲ. ಎಲ್ಲರೂ ಒಂದೇ ರೀತಿಯ ಹೇಡಿಗಳು, ಬರೀ ಬಾಯಲ್ಲಿ ಮುಖದಲ್ಲಿ ಬಿಗುವು, ಕೇವಲ ಪ್ರಪಂಚದ ಕಣ್ಣೆದುರಿಗೆ ಸೋಗು

ಹಾಕುವುದಕ್ಕಾಗಿ, ನಿಜವಾದ ಗಡಸುತನವಲ್ಲ. ಆದರೆ ಕರಗುವ ತಾಪ ಎಲ್ಲರಲ್ಲೂ ಒಂದೇ ಇಲ್ಲದಿರಬಹುದು ಅಷ್ಟೆ. ಬೇರೆಬೇರೆ ರೀತಿಗಳಲ್ಲಿ ಬಾಯಿಂದ ಬರುವು ದಾದರೂ, ಕೈಯಿಂದ ಮಾಡಿ ತೋರಿಸುವುದಾದರೂ ಎಲ್ಲರಿಗೂ ಬೇಕಾಗಿರೋದು ಅದೊಂದೇ. ಹೆಣ್ಣನ್ನು ಕಂಡಾಗ ಒಬ್ಬ ತಿಳಿದವನಂತೆ ಜ್ಞಾನದ ಮೇಲೆ ಭಾಷಣ ಹೊಡೆಯುತ್ತಾನೆ, ಇನ್ನೊಬ್ಬ ವಿನಯದ ಅವತಾರವೇ ಆಗಿಬಿಡುತ್ತಾನೆ, ಮತ್ತೊಬ್ಬ ಮುಖಸ್ತುತಿ ಮಾಡಿಕೊಳ್ಳಲು ಆರಂಭಿಸುತ್ತಾನೆ. ಒಂದಲ್ಲ ಒಂದು ರೀತಿಯಲ್ಲಿ ಎಲ್ಲರೂ ಆ ದರಿದ್ರ ಭಿಕಾರಿ 'ನಾನು' ಎಂಬುದರ ಬಗ್ಗೆಯೆ ಮಾತಾಡುತ್ತಿರುತ್ತಾರೆ. ಹೆಣ್ಣನ್ನು ನೋಡಿದಾಗ 'ನಾನು' ಒಡಲು ತೋರಿಸಿ ಭಿಕ್ಷೆ ಬೇಡುತ್ತದೆ, ಹಸಿವು ಹೆಚ್ಚುತ್ತದೆ. ಎಳೆತನದಿಂದಲೇ ಅದೇ ತಾಯಿ ತಾಯಿ ಅನ್ನುವ ಭಾವನೆ, ಅಮ್ಮನನ್ನು ನೋಡಿದರೆ ಹಸಿವಾಗುತ್ತದೆ, ಹಟ ಮಾಡಬೇಕೆನಿಸುತ್ತದೆ, ಎಲ್ಲ ಮಾತಿನಲ್ಲೂ ಅಮ್ಮ, ಆಶ್ರಯ, -ಎಳೆತನದ ಅದೇ ತಾಯಿಯ ಸಂಸ್ಕಾರ ಮನಸ್ಸಿನಿಂದ ಅಳಿಯುವುದಿಲ್ಲ, ಹೆಣ್ಣನ್ನು ನೋಡಿದಾಗ ಪರೋಕ್ಷವಾಗಿ ನೆನಪಿಗೆ ಬರುತ್ತದೆ. ಗಂಡಿನ ಮಗು ಗಂಡಾಗಿರುವುದಿಲ್ಲ, ಅದು ಹೆಣ್ಣಿನ ಸೆರಗಿಗೆ ಕಟ್ಟಿದ ಆಟದ ಸಾಮಾನಿನಂತಿರುತ್ತದೆ. ತನ್ನ ಬಗ್ಗೆ ದೊಡ್ಡ ದೊಡ್ಡದಾಗಿ ಏನೇ ಕೊಚ್ಚಿಕೊಳ್ಳಲಿ, ಭೀಮನ ಶಕ್ತಿಯನ್ನು ಹಿಡಿಂಬಿ ಖಂಡಿತ ಗುರುತಿಸಬಲ್ಲಳು.

ಹಾಗೆಯೆ ಈ ಜನ ಸಹ. ಗುರುತಿಸದೆ ಇರುವವರೆಗೆ ಮನಸ್ಸಿನಲ್ಲಿ ಅದೆಷ್ಟು ಕುತೂಹಲ ಮೂಡಿರುತ್ತದೆ. ಅರ್ಧ ಮುಚ್ಚಿದ ಕಿಟಕಿಯ ಸಂದಿಯಿಂದ ಓರೆಗಣ್ಣಿನಿಂದ ನೋಡುತ್ತಾ ಇರುತ್ತಾರೆ. ನೋಡಿದಾಗ ಮಣ್ಣಿನ ಗಡಿಗೆಯಿಂದ ಆವಿಯಂತೆ ಮೇಲೆದ್ದು ಬರುತ್ತದೆ. ಎಂಥ ಕನಸು! ಇದೆಂಥ ಮೋಹ! ಸರಿಯಾಗಿ ರಕ್ತದಲ್ಲಿ ಒಳಸೇರಿ ಬಿಡುತ್ತದೆ, ಆಹಾ, ಅದೆಂಥ ಸುವಾಸನೆ. ಸರಿಯಾಗಿ ಗುರುತಿಸಿದಾಗ ಗೊತ್ತಾಗುತ್ತದೆ ಅವೇ ಮಣ್ಣಿನ ಗಡಿಗೆಗಳು, ಎಲ್ಲ ಒಂದೇ ರೀತಿ. ಸ್ವಂತಿಕೆಯೆ ಇಲ್ಲದಿರುವುದರಿಂದ ಉಸಿರು ಕಟ್ಟಿದ ಹಾಗಾಗುತ್ತದೆ. ಬೇರೆ ಸಮಯ, ಅವಕಾಶ ಎಂಬಂತಿಲ್ಲ-ಅವರ ತೀಟೆ ತೀರಿದರಾಯಿತು ಸರಿ. ಮನಸ್ಸಿನ ಮಂಡಿಗೆಗಳಿಂದ ಅವರನ್ನು ತಣಿಸಬಹುದು. ಅದರಲ್ಲಿ ಶೌರ್ಯ ಎಂದೇನಿಲ್ಲ. ತೋಳತ್ತಿ ಬೇಕಾದರೆ ಅವರ ಕಣ್ಣುಗಳನ್ನು ಸೆರೆಹಿಡಿಯಬಹುದು. ಅದರಲ್ಲಿ ಯಾವ ಹೆಚ್ಚುಗಾರಿಕೆಯೂ ಇಲ್ಲ, ಕೇವಲ ದಳ್ಳುರಿ ಇದೆಯಷ್ಟೆ.

ಮತ್ತೆ ಏಕೆ?

ಒಂದೊಂದೇ ಮೆಟ್ಟಿಲು ಹತ್ತುತ್ತಾ ಮತ್ತೆ ಸರೋಜಿನಿ ತನ್ನ ಪ್ರಶ್ನೆಯ ಹತ್ತಿರಕ್ಕೇ ಮರಳಿ ಬಂದಳು. ಮೊದಲಿಗೆ ಯಾವುದೋ ಮೂಲೆಯಲ್ಲಿ ಬಿದ್ದಿದ್ದ ವ್ಯಕ್ತಿತ್ವ, ಅದು ಅವಳದೇ ಇನ್ನೊಂದು ರೂಪ. ಸರಳವಾದ, ಕಳೆಕಳೆಯಾದ ಮುಖದ, ಹಳ್ಳಿಯ ಮುಗ್ಧ ಸರೋಜಿನಿ, ನೆನಪಿನಲ್ಲಿ ಅಡಗಿಹೋದ ಸರೋಜಿನಿ. ಕತ್ತಲೆಯಲ್ಲಿದ್ದರೂ ಬಿಸಿಲಿನ ಧಗೆಯಿಂದ ಚರ್ಮದ ಕಾಂತಿಯನ್ನು ಕಾಪಾಡಿಕೊಂಡಳು. ಪಾಲಿಗೆ ಬಂದದ್ದೇ ಪಂಚಾಮೃತ ಅಂದುಕೊಂಡು ಬಡತನದಲ್ಲೂ ನೆಮ್ಮದಿಯ ಬದುಕಿನ ಸೊಗಸುಂಡಿದ್ದಳು. ಅದಕ್ಕಾಗಿ ಅವಳು ಒದ್ದಾಡಿರಲಿಲ್ಲ, ಬಾಯಿ ಬಾಯಿ ಬಿಟ್ಟಿರಲಿಲ್ಲ. ತನಗೆ ಗೊತ್ತಿದ್ದ ದೇವರುಗಳನ್ನು ನೆನಸಿಕೊಂಡು ನೆಲದ ಮೇಲೆ ತಲೆಯೂಡುತ್ತಾ

ನಗುನಗುತ್ತಲೆ ಅವಳು ಸಂಸಾರ ನಡೆಸಿದ್ದಳು. ಕಳೆದ ದಿನಗಳಲ್ಲಿ ಅವಳು ಎಲ್ಲರಿಗೂ ಅಪರಿಚಿತಳಾದ ಸರೋಜಿನಿಯಾಗಿದ್ದಳು. ಮನೆಮಟ್ಟಿಗಿನ ಲಜ್ಜೆ ತುಂಬಿದ, ಬೆಳಕಿಗೆ ಬರದ ಹೆಣ್ಣಷ್ಟೆ ಆಗಿದ್ದಳು.

ಇಂದು ಅದೇ ಸರೋಜಿನಿ ಹಲವಾರು ಕಣ್ಣುಗಳ ಮೇಲೆ ಅಧಿಕಾರ ನಡೆಸುತ್ತಾಳೆ. ನಾಲ್ಕೂ ಕಡೆ ನೋಡಿ ಮತ್ತೆ ಮತ್ತೆ ಭರವಸೆ ತಳೆಯುತ್ತಿರುತ್ತಾಳೆ, -ಆದೇಕೆ ಇಲ್ಲಿ ಹೀಗೆ ? ಇಲ್ಲಿ ಎರಡೂ ಕಡೆಗಳಲ್ಲಿ ಮೇಜನ್ನು ಸುತ್ತುವರೆದಿರುವ ಜನಗಳ ಗುಂಪು, ಸ್ವಂತಿಕೆಯಿಲ್ಲ, ಪೂರ್ಣತೆಯಿಲ್ಲ, ಕೇವಲ ಬರಿದಾದ ಮಡಕೆಗಳ ಗುಂಪು. ನೋಡುತ್ತಲೆ ಗೊತ್ತಾಗಿಹೋಗುತ್ತದೆ. ಒಂದು ವೇಳೆ ಏನಾದರೂ ಸ್ವಲ್ಪ ಇದೆಯೆಂದರೂ ಕೆಟ್ಟ ಆಲೋಚನೆಗಳು, ಸ್ವಾರ್ಥಸಾಧನೆ, ಅದರ ಆಳ ಎಷ್ಟೆಂದು ಬೇಗ ಪತ್ತೆಯಾಗಿ ಹೋಗುತ್ತದೆ.

ಮತ್ತೆ ಸಾವಿರ ಹೆಡೆಯ ಮಿಂಚು ಮಿಂಚಿತು. ಸರೋಜಿನಿ ಅವಾಕ್ಕಾಗಿ ಕುಳಿತಿದ್ದಾಳೆ. ಎಂದಿನಂತಲ್ಲ, ಹೊಸ ರೀತಿಯಲ್ಲಿ. ಮುಖದ ಮೇಲೆ ಅನ್ಯಮನಸ್ಕತೆ, ನೆಮ್ಮದಿಯ ನೆರಳು, ಮನಸ್ಸು ಎಲ್ಲೆಲ್ಲೋ ಎಳೆದುಕೊಂಡು ಹೋಗುತ್ತಿದೆ, ಏನು ಬೇಕೆಂಬುದೇ ಗೊತ್ತಾಗುತ್ತಿಲ್ಲ. ಯಾಕೆ ಅನ್ನುವುದಕ್ಕೂ ಉತ್ತರವಿಲ್ಲ, ಹೇಗೋ ನಡೆದುಕೊಂಡು ಹೋಗುತ್ತಿದೆ. ಬೊಂಬೆಯಂತೆ ಕುಳಿತಿದ್ದಾಳೆ. ಸಾಮಾಜಿಕ ನಡವಳಿಕೆಗಾದರೂ ಅವಳು ಕುಳಿತಿರಲೇಬೇಕಲ್ಲ.

ಆದರೂ ಆ ಬೊಂಬೆಯ ಕಣ್ಣುಗಳು ಉರಿಯತೊಡಗಿವೆ, ಮನಸ್ಸು ಜಾಗ್ರತಗೊಳ್ಳುತ್ತಿದೆ, ನೆನಪಿಗೆ ಬರುತ್ತದೆ - ಶರ್ಮಾ ಇಲ್ಲ, ರಣಜಿತಬಾಬು ಸಹ ಇಲ್ಲ.

"ನೀವೇನೂ ತೊಗೊಂಡೆ ಇಲ್ಲವಲ್ಲ ಮಿಸೆಸ್ ದಾಸ್!"

"ಓಹೋ! ಸಾಕಪ್ಪಾ, ತುಂಬ ತಿಂದದ್ದಾಗಿದೆ." ಸರೋಜಿನಿ ನಗುತ್ತಾಳೆ. ಎಂದಿನ ಪರಿಚಯದ ನಗೆ, ಅದರಿಂದಲೇ ಮೇಜಿಗೆ ಕಳೆಬರುತ್ತದೆ.

ಅರ್ಧರಾತ್ರಿ, ಅಷ್ಟಮಿಯ ಚಂದ್ರ ಮೇಲೇರಿ ಬಂದಿದ್ದ. ಕಾರ್ಮೋಡಗಳ ಹಿಂಡು ತೇಲುತ್ತಿದ್ದವು. ಅವುಗಳ ಕೆಳಗೆ ಮಣ್ಣಿನ ಗುಡ್ಡಗಳು, ನೀರಿನ ಹಳ್ಳಗಳು, ಎತ್ತರವಾದ ಮರಗಳ ನೆರಳು, -ಮಂದವಾದ ಬೆಳಕಿನಲ್ಲಿ ಒಮ್ಮೆ ಕಾಣುತ್ತವೆ, ಒಮ್ಮೆ ಮರೆಯಾಗುತ್ತವೆ, ಮಸುಕು ಮಸುಕಾಗುತ್ತವೆ. ಅಷ್ಟಮಿಯ ಅರ್ಧಚಂದ್ರ, ಸಾಗುತ್ತಿರುವ ಮೋಡಗಳ ತೆರೆಯಲ್ಲಿ ಅಡಗಿಕೊಳ್ಳುತ್ತಾನೆ, ಹೊರಬರುತ್ತಾನೆ, ಒಮ್ಮೊಮ್ಮೆ ಮರೆಯಾಗಿದ್ದರೂ ಹೊರಬಂದಂತಿರುತ್ತಾನೆ. ಅದಕ್ಕೆ ಅನುಗುಣವಾಗಿ ಭೂಮಿಯ ಮೇಲೂ ನಡೆಯುತ್ತಿದೆ. ಇವಲ್ಲ ನಿಜವಾಗಿಯೂ ಸುಳ್ಳೆ ? ಆ ನಿಜ-ಸುಳ್ಳುಗಳಿಂದಲೇ ಹುಟ್ಟಿರುವುದು ಈ ಮಾಯೆ. ಒಂದೊಂದು ಸಾರಿ ತುಂಬ ಪರಿಚಯವಿರುವಂತೆ ಕಾಣುತ್ತದೆ, ಒಮ್ಮೊಮ್ಮೆ ಏನೂ ಗೊತ್ತಿಲ್ಲವೆನಿಸುತ್ತದೆ.

ಸದ್ದುಗದ್ದಲವಿಲ್ಲದ ರಸ್ತೆಯಲ್ಲಿ ಎರಡು ವಾಹನಗಳು ಒಂದರ ಹಿಂದೊಂದು ಓಡುತ್ತಿವೆ-ಮುಂದಿನ ವಾಹನದಲ್ಲಿ ಮಿಸ್ಟರ್ ಶರ್ಮಾ ಅವರ ರಕ್ತಸಿಕ್ತವಾದ ದೇಹ

ಬಿದ್ದಿದೆ. ಹತ್ತಿರದಲ್ಲೇ ಕುಳಿತು ನೋಡುತ್ತಿದ್ದಾರೆ ರಣಜಿತ ಬಾಬು. ಹೊರಗೆ ಅದೇ ಮಾಯಾವಿಯಂತಿರುವ ರಾತ್ರಿ, ತುಂಬ ಪರಿಚಯವಿದ್ದರೂ ಇದ್ದಕ್ಕಿದ್ದ ಹಾಗೆ ಅಪರಿಚಿತವೆನಿಸುವ ರಾತ್ರಿ. ಅದರಲ್ಲಿ ಭಾರಿಭಾರಿ ನೆರಳುಗಳು ನೋಟವನ್ನು ಹಿಂದಕ್ಕೆ ಸಾಗಿಸುತ್ತಿವೆ. ಕತ್ತಲಲ್ಲಿ ಕಣ್ಣಾಡಿಸಿದಾಗ ಎಲ್ಲೋ ಅಲ್ಪಸ್ವಲ್ಪ ಬೆಳಕು ಕಂಡುಬರುತ್ತದೆ. ಅನಂತರ ಮತ್ತೆ ಎಲ್ಲ ಕರಗಿ ನೀಲಿಯಾಗುತ್ತದೆ. ಮನಸ್ಸಿನಾಳದ ಕಳವಳ ಭೂತಾಕಾರವಾಗಿ ಬೆಳಕು ಕುತ್ತಿಗೆ ಹಿಚುಕಿದಂತಾಗುತ್ತದೆ.

ಇದು ಊರಿನ ಪರಿಚಯವಿರುವ ಹೊರವಲಯ. ಒತ್ತಾದ ಬೇಲಿಗಳ ಸಾಲು, ಪರಿಚಯವಿರುವ ಕೊಳ, ಹಳೆಯ ಇಟ್ಟಿಗೆ ಗೂಡುಗಳು. ಆಮೇಲೆ ಕಂಪನಿಯ ಕಾರ್ಖಾನೆಗಳು, ಮನುಷ್ಯರು ಕಟ್ಟಿದ ಚಿಕ್ಕಚಿಕ್ಕ ಪರ್ವತಗಳಂತಿರುವ ಮನೆಗಳು, ನೀಳವಾದ ರಸ್ತೆ, ಪರಿಚಯವಿರುವ ಮನೆಗಳು, ಪರಿಚಯವಿರುವ ಮೈದಾನಗಳು. ಹತ್ತಿರದಲ್ಲೇ ಮಿಸ್ಟರ್ ಶರ್ಮಾ ಅವರ ರಕ್ತ ಸುರಿಯುತ್ತಿರುವ ದೇಹ. ಅವರೇನು ಉಳಿಯುತ್ತಾರೆಯೆ ? ಗುಂಡಿಗೆಗೆ ಗುಂಡೇಟು ತಿಂದ ಮನುಷ್ಯ ಉಳಿಯುವು ದೆಂದರೇನು ? ಕೆಲವೇ ಗಂಟೆಗಳ ಮಾತು. ಆ ಮೇಲೆ ಸಾವು, ಹೆಣ. ಎಲ್ಲ ಸುಳ್ಳು, ಎಲ್ಲ ಕನಸು. ಈ ಭಯಾನಕವಾದ ಸುಳ್ಳು ಕನಸಿನೊಳಗಡೆ ಅವನು ಹೆಣ ತೆಗೆದು ಕೊಂಡು ಹಾರಿಹೋಗುತ್ತಿದ್ದಾನೆ-ರಣಜಿತ ಅಲ್ಲ-ಯಮದೂತ.

ಎಷ್ಟು ನಿಶ್ಶಬ್ದ, ಸ್ವಲ್ಪವೂ ಗದ್ದಲವಿಲ್ಲ, ಮಾತಿಲ್ಲ, ಹಳೆಯ ವಿಚಾರವೆಲ್ಲ ತಲೆಯಲ್ಲಿ ತುಂಬಿಕೊಳ್ಳುತ್ತವೆ. ಮಾತಿಲ್ಲ, ಕೋರೈಸುವ ಬೆಳಕು, ಬಣ್ಣಬಣ್ಣದ ನೋಟ, ಎದ್ದು ಕಾಣುವ ಆಕಾರಗಳು. ಎಲ್ಲಿ ಹೋದವು ಅವೆಲ್ಲ ? ಮತ್ತೆ ಕತ್ತಲಲ್ಲಿ ರಕ್ತ ಸಿಕ್ತವಾದ ಹೆಣದ ಮೆರವಣಿಗೆ. ವಾಹನ ಚಲಿಸುತ್ತಿದೆ.

ಮೈಯಲ್ಲಿ ಹರೆಯದ ಬಿಸಿ, ಸೊಬಗು, ಬಿಸಿಲಿನಲ್ಲಿ ವೇಗವಾಗಿ ಬಂಡೆಯಿಂದ ಹಾರುವ ತೊರೆಯಂತಹ ಬದುಕಿನ ಉಲ್ಲಾಸ. ಏನೂ ಇಲ್ಲ. ಕೇವಲ ಅಷ್ಟಮಿಯ ಚಂದ್ರ, ಕಾಳರಾತ್ರಿ.

ರಣಜಿತಬಾಬು ಹುಚ್ಚನಂತೆ ತೀಕ್ಷ್ಣವಾಗಿ ಹೊರಗಡೆ ನೋಟ ಬೀರುತ್ತಿದ್ದಾರೆ. ಅರಿವಿಲ್ಲದೆಯೆ ತಲೆಗೂದಲನ್ನು ಎಳೆದುಕೊಳ್ಳುತ್ತಿದ್ದಾರೆ. ಷರ್ಟಿನ ಗುಂಡಿಗಳು ಬಿಚ್ಚಿವೆ, ಆದರೂ ನೆಮ್ಮದಿಯಿಲ್ಲ, ಕುತ್ತಿಗೆ ಹಿಂಡಿದ ಹಾಗಾಗುತ್ತಿದೆ, ಮುಖ ಒಣಗುತ್ತಿದೆ. ಕಳವಳಕ್ಕೆ ಸಿಕ್ಕಿದ ಜೀವ ತಬ್ಬಿಬ್ಬಾಗಿ ತೆಪ್ಪಗೆ ಕುಳಿತುಬಿಟ್ಟಿದೆ, -ಅಬ್ಬಾ, ಯಾವಾಗ ಮುಗಿಯುತ್ತದೆ ? ಯಾವಾಗ ?

ನಿರ್ಜನವಾದ ರಸ್ತೆ-ವಾಹನಗಳ ಬೆಳಕಿನಲ್ಲಿ ಮನೆಗಳ ಕೈತೋಟ, ಬಾಗಿಲುಗಳು ಚೆನ್ನಾಗಿ ಹೊಳೆಯುತ್ತಿವೆ, ಹಿಂದೆ ಓಡುತ್ತಿವೆಯೇನೂ ಅನಿಸುತ್ತಿದೆ. ಮನೆಗಳ ಒಡೆಯರ ಹೆಸರಿನ ಫಲಕಗಳು ಹೊಳೆದು ಆರಿಹೋಗುತ್ತಿವೆ. ಪರಿಚಯವಿರುವ ನೋಟ ಕಣ್ಣಿಗೆ ಬೀಳುತ್ತಿರುವಂತೆಯೆ ಬಿರುಗಾಳಿಯಂತೆ ತನ್ನದೇ ಆದ ಪರಿಚಯವಿರುವ ಬದುಕು ಹಿಂದಿರುಗಿ ಬರುತ್ತದೆ, ವ್ಯಾಕುಲತೆ ಹೆಚ್ಚಾಗುತ್ತಿದೆ, ತನ್ನ ಮನೆಯ ಬಾಗಿಲಿನಲ್ಲಿ ತಾನೇ ನದಿಯಲ್ಲಿ ಕೊಚ್ಚಿಕೊಂಡು ಹೋದಂತೆ, ದೋಣಿ ಕೈಮೀರಿದಂತೆ ಕಾಣುತ್ತಿದೆ.

ಈ ಕಳವಳದ ಕ್ಷಣಗಳಲ್ಲಿಯ ಇದ್ದಕ್ಕಿದ್ದಂತೆ ಸರೋಜಿನಿ ನೆನಪಾದಳು. ನೆನಪಿಗೆ

ಬಂತು, -ಈಗ ಅವಳು ಶರ್ಮಾ ಅವರ ಜೊತೆ ಅಡ್ಡಾಡಲು ಹೋಗಲಾರಳು, ಶರ್ಮಾ ಜೊತೆ ಟೆನ್ನಿಸ್ ಆಡಲಾರಳು, ಇಲ್ಲೇ ಎಚ್ಚರ ತಪ್ಪಿದ ಹೆಣ ಬಿದ್ದಿದೆ, -ಇದೇ ಸರೋಜಿನಿಯನ್ನು ಆಕ್ರಮಿಸಿಕೊಂಡಿತ್ತು.

ಅವನು ಬೆಚ್ಚಿದ. ಮಿ. ಶರ್ಮಾ ಏನೋ ಬಡಬಡಿಸುತ್ತಿದ್ದಾರೆ.

ನಿಜ, ಅವರಿಗೆ ಮನಸ್ಸಿನಲ್ಲಿ ನಡೆಯುತ್ತಿರುವುದು ಅರ್ಥವಾಗಿ ಹೋಯಿತೆ? ರಣಜಿತ ಬಾಬು ಕಳ್ಳನಂತೆ ನಾಲ್ಕೂ ಕಡೆ ನೋಡಿದರು? ಇದೇನು? ಒಂದು ರೀತಿಯ ಆತ್ಮಗ್ಲಾನಿ, ಬೆವರೊಡೆಯುತ್ತದೆ, ಸರೋಜಿನಿ ದೂರದಲ್ಲಿ ಕರಗುತ್ತಿದ್ದಾಳೆ.

ಎಲ್ಲ ಸುಳ್ಳು, ಈಗಲೂ ಸುಳ್ಳು. ಹಿಂದಿನ ವಾಹನದಲ್ಲಿ ಬರುತ್ತಿರುವವರನ್ನು ರಣಜಿತಬಾಬು ನೋಡಿದ್ದಾರೆ. ಅವರಿಗೆ ಗೊತ್ತು. ಸುತ್ತುಬಳಸಿ ರಣಜಿತಬಾಬು ಮನಸ್ಸಿನಲ್ಲೇ ಸಿಡಿಮಿಡಿಗೊಂಡು ಹೇಳುತ್ತಿರುವಂತಿದೆ. "ನನ್ನದೇನೂ ತಪ್ಪಿಲ್ಲ, ನಾನು ಇದಕ್ಕೆ ಹೊಣೆಗಾರನಲ್ಲ." ಯಾರೋ ಆರೋಪ ಹೊರಿಸುತ್ತಿರುವಂತೆ, ತಮ್ಮೆಡೆಗೆ ನೇರವಾಗಿ ಬೆರಳು ತೋರಿಸುತ್ತಿರುವಂತೆ ಅನಿಸಿತು. ಮನಸ್ಸನ್ನೆಲ್ಲ ಒಟ್ಟುಗೂಡಿಸಿ ಧೈರ್ಯದಿಂದ ಉತ್ತರ ಹುಡುಕುತ್ತಿರುವಂತೆ ಅನಿಸಿತು-"ನಾನು ನಿರ್ದೋಷಿ, ನಾನು ಇದಕ್ಕೆ ಜವಾಬ್ದಾರನಲ್ಲ."

ದೋಷಿಯಲ್ಲ, ತನ್ನ ಮಾತೇ ತನಗೆ ಪೊಳ್ಳೆನಿಸುತ್ತದೆ. ಎದೆಯಾಳದಲ್ಲಿ ಎಷ್ಟೋ ತರಂಗಗಳು, ತರ್ಕಗಳು ಏಳುತ್ತಿವೆ, ಅವೆಲ್ಲ ಕುಸಿದುಬೀಳುತ್ತಿವೆ, -ಅದೇ ಹಿಂದಿನ ಕಾರಿನಲ್ಲಿರುವವರು ನೋಡುತ್ತಿದ್ದಾರೆ. ಶರ್ಮಾ ಸಾಹೇಬರು ನನ್ನ ಬಂದೂಕು ಎತ್ತಿಕೊಂಡು ನೋಡುತ್ತಿದ್ದರು. ಅದರ ಭಾರ, ಸಾಮರ್ಥ್ಯಗಳನ್ನು ಪರೀಕ್ಷಿಸುತ್ತಿದ್ದರು. ಬಂದೂಕಿನಲ್ಲಿ ಗುಂಡಿತ್ತು. ಅದು ಹೇಗೆ ಸೇಫ್ಟಿಕ್ಯಾಚ್ ಸಡಿಲವಾಯಿತೋ ಗೊತ್ತಿಲ್ಲ, ಕುದುರೆಯ ಮೇಲೆ ಕೈಬೆರಳು ಊರಿಯಾಗಿತ್ತು. 'ಬಂದೂಕು ಲೋಡಾಗಿದೆ ಸಾರ್' -ಕೂಗಿಕೊಳ್ಳುತ್ತಿರುವಂತೆಯೆ ಒಂದು ಭಯಂಕರ ಆಸ್ಫೋಟನೆ. ಕೈ ಮೀರಿದ ಒಂದು ಅಪಘಾತ, ಒಂದು ಆಕ್ಸಿಡೆಂಟ್ -ಅಬ್ಬಾ! ಅದಾದ ಮೇಲೆ, -ಅಯ್ಯೋ ದೇವರೇ! ತಪ್ಪು ಮಾಡದವರಿಗೆ ಶಿಕ್ಷೆ, ಹೀಗೆ ಮಾಡಿದೆಯಾ? ಅಕಾಲ ಮರಣ. ಶರ್ಮಾ ಸಾಹೇಬರು, ದೇವರಂಥ ಮನುಷ್ಯರು, ಅಯ್ಯೋ.

ಅದಿರಲಿ, ತನ್ನ ಒಳಮನಸ್ಸೇ ತನ್ನ ಮಾತಿಗೆ ಸಮರ್ಥನೆ ನೀಡುತ್ತಿಲ್ಲ. ಒಡೆದು ಹೋಗುತ್ತಿದೆ, ಪ್ರಾಣಭಯ. ಬಂದೂಕಿನಲ್ಲಿ ಗುಂಡೇಕಿತ್ತು? ಅಲ್ಲಿ ಅದನ್ನು ಯಾರು ಇಟ್ಟಿದ್ದರು? ಅದರ ಸೇಫ್ಟಿಕ್ಯಾಚ್ ಹೇಗೆ ತೆರೆದಿತ್ತು? ಮನಸ್ಸು ಕುತೂಹಲದಿಂದ ಏಕೆ ಕಾಯುತ್ತಿತ್ತು? ಬೆಳಗ್ಗೆ, ತನಗೆ ಸಾಯಂಕಾಲ ಹೀಗಾಗಬಹುದೆಂಬ ಸುಳಿವು ಸಿಕ್ಕಿರಲಿಲ್ಲವೆ? ಅದೋ ದೂರದಲ್ಲಿ ಸರೋಜಿನಿಯ ನೆರಳು ನೋಡು. ಶರ್ಮಾ ನಾಯಿ ನರಿಗಳ ಹದ್ದುಗಳ ಹೊಟ್ಟೆ ಸೇರುತ್ತಾನೆ. ಅಯ್ಯೋ! ಎಷ್ಟು ಭಯಂಕರ!

ಆಸ್ಪತ್ರೆ, ಮೋಟಾರು ನಿಂತಿತು. ಎಲ್ಲರೂ ಗಂಭೀರವಾಗಿ ಕೆಳಗಿಳಿದರು. ಇದ್ದಕ್ಕಿದ್ದ ಹಾಗೇ ಓಡಾಟ ಶುರು. ಶರ್ಮಾ ಅವರ ದೇಹವನ್ನು ಸ್ಟ್ರೆಚರ್ ಮೇಲೆ ಮಲಗಿಸಿದರು. ಬಿಳಿಯುಡುಪಿನಲ್ಲಿ ಅತ್ತ-ಇತ್ತ ಓಡಾಡುತ್ತಿದ್ದ ನರ್ಸುಗಳು, ಬಿಳಿಯ ನಿಗಿನಿಗಿ ಮುಖದ ಡಾಕ್ಟರುಗಳು, ಆಸ್ಪತ್ರೆಯ ದೀಪಗಳು. ಎಲ್ಲ ಸುಳ್ಳು, ಕನಸಿನಂತಿದೆ. ಆ ಕನಸಿನಲ್ಲೇ ಮಿ. ಶರ್ಮಾ ಬಡಬಡಿಸಿದರು. ವಿಕಾರವಾದ, ಅಸ್ಪಷ್ಟವಾದ ಮಾತಿನಲ್ಲಿ,-

"ಅಯ್ಯೋ, -ಬಲಿದತ್ತ ದಾಸ್‌ಗೆ ತಿಳಿಸಿಬಿಡಿ. ನಾನೇನೂ ಮರೆಯಲಿಲ್ಲ, ಅವರಿಗಾಗಿ ಬರೆದಿಟ್ಟಿದ್ದೇನೆ. ನಾನು ಬರೆದಿರೋದರಿಂದಲೇ ಅವರು ಕಂಪನಿಯ ದೊಡ್ಡ ಸಾಹೇಬರಾಗುವರು. ನನ್ನ ಬರವಣಿಗೆಯಿಂದ ಅವರಿಗೆ ಪ್ರಮೋಷನ್ ಸಿಗುತ್ತೆ. ಹೇಳ್ತೀರಾ ? ಆಮೇಲೆ ಬರ್ತೀರಿ ಅಲ್ಲವೆ. ಖಂಡಿತ."

ಮುಖ ಸೊಟ್ಟಗೆ ಮಾಡಿಕೊಂಡು ರಣಜಿತಬಾಬು ನಿಂತಿದ್ದರು. ಇವರೇ ಶರ್ಮಾ ಅಲ್ಲವೆ. ಕಣ್ಣುಗಳು ಮುಚ್ಚಿವೆ. ಒಂದೂ ಮಾತಿಲ್ಲ. ಜೀವಂತವಾಗಿದ್ದಾರೋ ಶವವಾಗಿದ್ದಾರೋ. ಡಾಕ್ಟರು ಅವರ ಎದೆಯ ಮೇಲೆ ಬಗ್ಗಿದ್ದಾರೆ. ಎಲ್ಲೆಡೆ ನಿಶ್ಶಬ್ದ. ಕೇವಲ ಆಸ್ಪತ್ರೆಯ ಫ್ಯಾನುಗಳ ಸದ್ದು. ಹೊರಗೆ ಅದೇ ರಾತ್ರಿ, ತುಂಬ ಕತ್ತಲು. ಎಲ್ಲ ಸುಳ್ಳು, ಎಲ್ಲ ಕನಸು. ಅದರಲ್ಲೇ ಧೈರ್ಯವಹಿಸಿ ಕಲ್ಲಿನಂತೆ ನಿಂತಿರಬೇಕು, ಆದರೆ ತನ್ನಿಂದ ಮುಕ್ತಿ ಸಿಗುವುದಿಲ್ಲ. ಒಳಗಡೆ ಗೋಡೆಗಳು ಬೀಳುತ್ತಿವೆ, ಗಾರೆ ಉದುರುತ್ತಿದೆ, ಎಲ್ಲ ಅಡಗಿಹೋಗುತ್ತಿದೆ, ಎಲ್ಲ ಚೂರುಚೂರಾಗುತ್ತಿದೆ. ಬದುಕು ಅಂದರೆ ಇದೇನಾ ? ಇದೇನು ಭಯವೆ ? ಇದೇನು ಯಾತನೆಯೆ ? ಕಣ್ಣೆತ್ತಿ ನೋಡಿದರೆ ಕಾಣುತ್ತದೆ - ಎಲ್ಲ ಸುಳ್ಳು - ಎಲ್ಲ ಕನಸು, ಹೊರಗಡೆ ಅದೆಷ್ಟು ಕತ್ತಲು ! ಕನಸು ಅಂದುಕೊಂಡರೆ - ಬದುಕನ್ನು ಎಷ್ಟು ಸೊಗಸಾಗಿ ನಡೆಸಬಹುದು. ತಾನಿದ್ದೂ ಇಲ್ಲದಂತೆ. ಸುಮ್ಮನೆ ಮರೆತುಬಿಡಬಹುದು, ಪರಿಣಾಮವೇನೇ ಆದರೂ ತಾನು ಅಲಕ್ ಅಂತ ಇದ್ದುಬಿಡುವುದು, ಕರ್ಮಫಲದ ಕಟ್ಟುಪಾಡನ್ನು ದೂರಮಾಡುವುದು. ಕತ್ತಲೆಯಲ್ಲಿ ಕಾಲಹಾಕುತ್ತಾ ಹೋಗುವುದು, - ಏಳಿಗೆಯೂ ಇಲ್ಲ, ಅವನತಿಯೂ ಇಲ್ಲ, ಹಿಂದೂ ಇಲ್ಲ ಮುಂದೂ ಇಲ್ಲ. ಮೈಯೆಲ್ಲ ಬೆಚ್ಚಿದಂತಾಗುತ್ತಿದೆ. ಮಾಂಸಖಂಡಗಳೆಲ್ಲ ಅದುರುತ್ತವೆ, - ಬರೀ ಮನಸ್ಸಿನಲ್ಲಿ ಒಳಮನಸ್ಸು,- ಗಾಳಿಯೂ ಮೈಗೆ ತಗುಲಿದಂತಾಗುತ್ತದೆ. ಖಾಯಿಲೆ ಮನುಷ್ಯನ ಮೇಲೆ ಗಾಳಿಯೂ ಕೈಮಾಡುತ್ತದಂತೆ. ನೆನಪಾಗುತ್ತಿದೆ, ತನ್ನೊಳಗಡೆಯ ಯಾತನೆಯ ಒಂದು ಹೊಸ ಸೆಲೆಯನ್ನು ಅಗೆದುಕೊಂಡಾಗಿದೆ. ಅದನ್ನು ಈಗ ಅಡಗಿಸಿಡಬೇಕು. ಮುಚ್ಚಿಡಬೇಕು - ಏಳು ಪದರುಗಳ ಕೆಳಗೆ.

ಆದರೂ ಬದುಕಿನಲ್ಲಿ ಕಳಂಕ ಅಂಟಿದೆ.

ಮನಸ್ಸು ಒಂದು ವೇಳೆ ಇದನ್ನೇ ಒಪ್ಪುವುದಾದರೆ ? ಆದರೆ ಒಪ್ಪುತ್ತಿಲ್ಲ. ಹಣೆಯ ಮೇಲೆ ಸುಟ್ಟಗಾಯದಂತೆ ಕಳಂಕದ ಗುರುತು. ಮುಂದೆ ಬರುವ ಯಾವ ನಾಳೆಯ ಬೆಳಗ್ಗೆಯೂ ಇಂದಿನ ಬೆಳಗ್ಗೆಯಷ್ಟು ಪ್ರಕಾಶಮಾನವಾಗಿರಲಾರದು. ಮನಸ್ಸು ರೋಗಮುಕ್ತವಾಗಲಾರದು. ಅಬ್ಬಾ! ಎಂಥ ಯಾತನೆ.

ಒಂದು ಘರ್ಜನೆ ಕೇಳಿಬರುತ್ತದೆ. ಇದೇ ರಕ್ತದ ಮಡುವಿನಲ್ಲಿರುವ ದೇಹ. ಡಾಕ್ಟರು ಕಳವಳದಿಂದ ನೋಡುತ್ತಿದ್ದಾರೆ. ಯಾರೋ ಅತ್ತ ಇತ್ತ ಓಡಾಡುತ್ತಿದ್ದಾರೆ. ಇವರು ಮಿ. ಶರ್ಮಾ ಕಡೆಯವರೆ ? ಗಂಟಲಿನಿಂದ ಗಡಗಡ ಅಂತ ಹಿಡಿದಂತಹ ಶಬ್ದ, -ನಲ್ಲಿಯಲ್ಲಿ ನೀರುನಿಂತಾಗ ಬರುವ ಸದ್ದು. ಆಮೇಲೆ ಎಲ್ಲವೂ ಸ್ತಬ್ಧ. ಇದೋ ನೋಡಿ ಶರ್ಮಾ ಮಲಗಿದ್ದಾರೆ. ಆದರೆ ಶರ್ಮಾ ಇನ್ನಿಲ್ಲ.

ರಾತ್ರಿಯೇ ಸುದ್ದಿ ಹರಡಿತು. ಅವರು ಬಂದರು, ಇವರು ಬಂದರು, ಅರ್ಧರಾತ್ರಿಯಿಂದ ಮಧ್ಯ ರಾತ್ರಿಯವರೆಗೆ ಜನ ಸಾಲುಗಟ್ಟಿನಿಂತರು. ಆಸ್ಪತ್ರೆಯ ಹೊರಾವರಣದಲ್ಲಿ ಜಾತ್ರೆ ಸೇರಿದೆ. ಒಂದು ಕೊಠಡಿ ಎದುರಿಗಿದೆ. ಮೊದಲು ಬಂದ ಜನ ಆಮೇಲೆ ಬಂದವರಿಗೆ ಬೆಟ್ಟುಮಾಡಿ ತೋರಿಸುತ್ತಿದ್ದಾರೆ. ಆಮೇಲೆ ಬಂದವರು ಒಂದುಕ್ಷಣ ಗಂಭೀರವಾಗಿ ಆ ಕಡೆ ನೋಡುತ್ತಾರೆ. ಕೇವಲ ಗೋಡೆ, ಅದರ ಮೇಲೆ ಅದೆಷ್ಟು ವರ್ಷಗಳ ಬಿಸಿಲು-ಮಳೆಗಳ ಚಿತ್ರ ಬರೆದಿದೆ. ಒಳಗಡೆ ಬೆಳಗೆ ಮಿನುಗುತ್ತಿದೆ. ಬಾಗಿಲು ಒಂದೇ. ಕಿಟಕಿಗಳು ಮುಚ್ಚಿವೆ. ಆಕಡೆ ನೋಡಿ ಮನಸ್ಸಿನಲ್ಲೇ ಭಯ ರಾಚಿದಂತಾಗಿ ಒಂದು ಚಿತ್ರವನ್ನು ಕಲ್ಪಿಸಿಕೊಳ್ಳುತ್ತಾರೆ. ಸಾವಿನ ಬಗ್ಗೆ ಬದುಕಿರುವವರು ಪ್ರತ್ಯುತ್ತರ ಕೊಡುವಂತೆ ಮೈ ನವಿರೇಳುತ್ತದೆ. ಒಂದು ರೀತಿಯಾಗಿ ನೋಡುತ್ತಾರೆ. ಒಂದು ವಿರಾಟ ಸತ್ಯದ ಮುಂದೆ ತಲೆಬಾಗಿ, ಆ ಒಂದೆರಡು ನಿಮಿಷಗಳಲ್ಲಿ ಗಂಭೀರವಾಗಿ, ಮೌನವಾಗಿ, ಏನೂ ಯೋಚಿಸಲು ಪ್ರಯತ್ನ ಮಾಡದಿರುವುದು. ಆಮೇಲೆ ಬಾಯಿಂದ ಉದ್ಗರಿಸುವುದು, ಸಾವಿನ ಎದುರಿಗೆ ಪ್ರಾಣದ ಮಹತ್ವ ಅಲೆಯಂತೆ ಮೇಲೇರುತ್ತದೆ. ನೋಡುವವರು ಹಿಂದಕ್ಕೆ ಸರಿದು ಗುಂಪಿನಲ್ಲಿ ಸೇರಿಹೋಗುತ್ತಾರೆ. ವೀಳೆಯದೆಲೆ ಜಗಿಯುತ್ತಾರೆ, ಇಲ್ಲವೆ ಸಿಗರೇಟು ಸೇದುತ್ತಾರೆ. ಬಾಯಿ ತೆರೆಯುತ್ತಾರೆ.

ಆ ಗುಂಪಿನಲ್ಲಿ ಈಗ ಅದೇ ಚರ್ಚೆ ಶುರುವಾಗಿದೆ. ಹೊಣೆಗಾರಿಕೆಯನ್ನು ಅಲ್ಲಗಳೆಯುವುದಿಲ್ಲ ಅದು. ಜನ ಮನ ಬಂದಂತೆ ಮಾತಾಡುತ್ತಿದ್ದಾರೆ. ಆ ಮಾತಿನಲ್ಲಿ ನಿಜವಿದೆ, ಸುಳ್ಳಿದೆ, ಮನಸ್ಸಿನ ಕಲ್ಪನೆ ಗರಿಗೆದರಿದೆ, ಅಲ್ಲಿ ಇಲ್ಲಿ ಕಿವಿ ಮೇಲೆ ಬಿದ್ದ ವಿಚಾರಗಳಿವೆ, ಅಂದಾಜಿದೆ -ಎಲ್ಲ ಒಟ್ಟು ಸೇರಿ ಗುಂಪಿನ ಅಂಬೋಣ ಅನ್ನಬಹುದಷ್ಟೆ. ನ್ಯಾಯಾಲಯದ ಅಭಿಪ್ರಾಯವಲ್ಲ. ಆ ನಂಬಿಕೆ, ನಿಲುವು ಒಳಗೊಂಡಿದ್ದ ಮಾತುಗಳಲ್ಲಿ ರಣಜಿತಬಾಬು, ಸರೋಜಿನಿ, ಬಲಿದತ್ತ ಇವರೆಲ್ಲರ ವಿಚಾರಗಳೂ ಬೆರೆದಿದ್ದವು. ಆ ನಂಬಿಕೆಯಿಂದ ಹುಟ್ಟಿದ ಮಾತುಗಳಿಂದ ಅನೇಕಮಂದಿ ತೀರ್ಮಾನ ಕೈಗೊಂಡು ತಲೆಯಲ್ಲಿ ತುಂಬಿಕೊಂಡುಹೋದರು. ಪರಿಚಯವಿದ್ದವರ ನಡುವೆ ಮಾತುಕತೆಗೆ ರೆಕ್ಕೆಪುಕ್ಕ ಬಲಿಯುತ್ತಿತ್ತು, ಪ್ರತಿಯೊಬ್ಬರೂ ಶರ್ಮಾ ಅವರ ಬಗ್ಗೆ ಬಲ್ಲವರು, ಶರ್ಮಾ ಅವರ ಬಗ್ಗೆ ಅವರಿಗೆ ಸಹಾನುಭೂತಿಯಿದೆ. ಬದುಕಿದ್ದಾಗ ಅಪರಿಚಿತವಾಗಿದ್ದು ಬಹಳ ದೂರದಲ್ಲಿದ್ದ ವ್ಯಕ್ತಿ ಸತ್ತಕೂಡಲೇ ತುಂಬ ಹತ್ತಿರದವನೂ ತಮ್ಮವನೂ ಆಗಿಹೋಗಿದ್ದ. ಎಲ್ಲರೂ ಅವರ ಬಗ್ಗೆ ಯೋಚಿಸುತ್ತಿದ್ದಾರೆ, ನಿಟ್ಟುಸಿರುಬಿಡುತ್ತಿದ್ದಾರೆ. ಅವರ ತೀರ ಹತ್ತಿರದ ಮನೆವಿಚಾರಗಳು, ಅದೂ ಜನಗಳ ಸೊತ್ತು, ಅವರ ಸುಖದುಃಖಗಳ ಬಗೆಗೆ ಎರಡು ಮಾತಾಡಲು ಅವರಿಗೆಲ್ಲ ಹಕ್ಕಿದೆ. ಹಾಗೆಯೆ ನೀತಿನಿಯಮಗಳ ಬಗ್ಗೆ ಅವರೇನು ತಾನೆ ಮಾಡಲಿಲ್ಲ, ಆದರೆ ಈಗ ಸತ್ತಿದ್ದಾರೆ. ಉಳಿದಿರುವುದು ಕೇವಲ ಅದೊಂದು ಹೆಸರು ಮಾತ್ರ, ಒಬ್ಬ ವ್ಯಕ್ತಿಯ ರೂಪಕ. ಆ ವ್ಯಕ್ತಿ ಮನುಷ್ಯ-ಮನುಷ್ಯರ ನಡುವೆ

ರಕ್ತಮಾಂಸಗಳ ವ್ಯತ್ಯಾಸವನ್ನು ತೋರಿಸುವ ಅಡ್ಡಗೋಡೆಯನ್ನು ಒಡೆದು ಎಲ್ಲರ ಸೊತ್ತಾಗಿಬಿಡುತ್ತಾನೆ.

ಕಾಲಕ್ಕೆ ಸರಿಯಾಗಿ ಯಂತ್ರಗಳು ಕೆಲಸ ಶುರುಮಾಡಿದವು. ಕಾರ್ಖಾನೆಯಲ್ಲಿ ಉತ್ಪಾದನೆ ಶುರುವಾಯಿತು. ಕಚೇರಿಯಲ್ಲಿ ಉಸಿರುಬಿಗಿಹಿಡಿದು ಕೆಲಸ ಶುರುವಾಯಿತು. ಬಲಿದತ್ತ ಕೆಲಸ ಮಾಡುತ್ತಿದ್ದಾನೆ. ಸರಿಯಾಗಿ ಒಂದು ಗಂಟೆಗೆ ಹೆಡ್ ಆಫೀಸಿನಿಂದ ಇವತ್ತು ರಜ ಅಂತ ಟೆಲಿಗ್ರಾಂ ಬಂತು, ಕಚೇರಿಯಲ್ಲಿ ಸಭೆ ಸೇರಿತು, ಸ್ವರ್ಗಸ್ಥರಾದ ಸಾಹೇಬರ ನೆನಪಿನಲ್ಲಿ ಮೂರು ನಿಮಿಷ ನಿಂತಿದ್ದು, ಹತ್ತು ನಿಮಿಷ ಭಾಷಣ ಕೇಳಿ ಅಕಸ್ಮಾತ್ತಾಗಿ ಸಿಕ್ಕ ರಜೆ ಅನುಭವಿಸಲು ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಬಲಿದತ್ತನೂ ಹಿಂದಿರುಗಿ ಬಂದ.

ಒಂಟಿಯಾಗಿದ್ದ ಮನೆಯಲ್ಲಿ ಚಾಪೆಯ ಮೇಲೆ- ಮುಖ ಮುಚ್ಚಿಕೊಂಡು ಸರೋಜಿನಿ ಅಳುತ್ತಿದ್ದಾಳೆ. ಬಿಕ್ಕಿ ಬಿಕ್ಕಿ ಅಳುತ್ತಿರುವುದರಿಂದ ಬೆನ್ನಿನ ಮೇಲೆ ಅಲೆಗಳು ಏಳುತ್ತಿವೆ. ಬಲಿದತ್ತ ಅವಳ ಬಳಿಗೆ ಹೋಗಲಿಲ್ಲ. ಅವನಿಗೆ ತಲೆಯೆಲ್ಲ ಬಿಸಿಯಾಯಿತು. ಹೊಟ್ಟೆಯಲ್ಲಿ ಭುಗಿಲೇಳುತ್ತಿತ್ತು. ಇದು ಅವನ ಮನೆ, ಇವಳು ಅವನ ಹೆಂಡತಿ.

ಒಬ್ಬಂಟಿಗನಾಗಿ ಹೊರಗಡೆ ಕೋಣೆಯಲ್ಲಿ ತಲೆಯ ಮೇಲೆ ಕೈ ಹೊತ್ತು ಕುಳಿತಿದ್ದ.

ಸರೋಜಿನಿ ಮನೆಯಲ್ಲಿದ್ದಳು. ಜನ ಪದೇ ಪದೇ ಮನೆಯ ಕಡೆ ನೋಡಿಕೊಂಡು ಹೋಗುತ್ತಿರುವುದು ಕಂಡುಬಂತು. ದೂರದಿಂದಲೇ ಅವರ ಕುತೂಹಲ, ಅವರು ಏನು ಮಾತಾಡುತ್ತಿರಬಹುದು ಅಂತ ಅಂದಾಜು ಮಾಡಿ ತಲೆತಗ್ಗಿಸುತ್ತಾಳೆ.

ಯಾರೂ ಬಾಯಿಬಿಟ್ಟು ಏನೂ ಹೇಳುವುದಿಲ್ಲ. ಆದರೂ ಮನಸ್ಸಿನಾಳಕ್ಕೆ ಇಳಿದುನೋಡಿದಾಗ, ಇಡೀ ಪ್ರಪಂಚ ಬಾಯಿಬಿಡದೆ ಆಡುತ್ತಿರುವ ಮಾತುಗಳು ಕಿವಿಗೆ ಅಡರುತ್ತವೆ. ಮಾತುಗಳಿಗೆ ಅದೇ ಮೆರುಗು, ಅದೇ ಅರ್ಥ, ಅದೇ ತೀವ್ರತೆಯಿದೆ. ಮನಸ್ಸಿಗೆ ಹುಚ್ಚುಹಿಡಿದ ಹಾಗಾಗುತ್ತದೆ, -ಇದೇನು ? ತಾನು ಯಾರಿಗೆ ಏನು ಅನ್ಯಾಯ ಮಾಡಿದ್ದೇನೆ ? ಪ್ರಪಂಚಕ್ಕೇಕೆ ತನ್ನ ಮೇಲೆ ಇಷ್ಟೊಂದು ಸೇಡಿನ ಭಾವನೆ ? ಯಾಕೆ ಈ ದೋಷಾರೋಪಣೆ ?

ದೋಷಾರೋಪಣೆ ಇದ್ದೇ ಇದೆ ! ಗುಸುಗುಸು ಅಂತ ನೂರಾರು ಮೈಲಿಗಳು ಹರಡುವ ಬಾಯಿ ನಗಾರಿಯಿದ್ದಂತೆ, -ಹಳ್ಳಿಯ ವಿಚಾರ ನೆನಪಾಗುತ್ತದೆ, ತನ್ನ ಬಗ್ಗೆಯಲ್ಲ, ಬೇರೆಯವರ ಬಗ್ಗೆ. ಅದೆಷ್ಟು ದೂರದಿಂದ ಸಮಾಚಾರಗಳು ಹರಿದುಬರುತ್ತಿದ್ದವು. ಈ ಸಣ್ಣಭೂಮಿಯ ಮೇಲೆ ಏನನ್ನೂ ಅಡಗಿಸಿಡಲಾಗುವುದಿಲ್ಲವಲ್ಲ. ಗಾಳಿಯೊಡನೆ ಸೇರಿ ಮಾತುಗಳು ಬೊಬ್ಬೆಯಿಡುತ್ತವೆ. ಕಿವಿಗೆ ಅಡರುತ್ತವೆ. ಹಳ್ಳಿಯಲ್ಲಿ ಕೊಳಕ್ಕೆ ಕಲ್ಲೆಸೆದಾಗ ಅಲೆಗಳು ಗುಂಡುಗುಂಡಾಗಿ ಏಳುತ್ತ ದಡಕ್ಕೆ ಬಂದು ಬಡಿಯುತ್ತವೆ. ಮಾತು ಹರಡುತ್ತದೆ, ಅಡಗುವುದಿಲ್ಲ, ಅಬ್ಬಾ !

ಸಂದೇಹ ತುಂಬಿದ ಮನಸ್ಸು ಪುರಾವೆಗಾಗಿ ತಡಕಾಡುತ್ತದೆ. ಆ ಕಡೆ ಪಶುವೈದ್ಯರ

ಮನೆಯ ಕಾಂಪೌಂಡಿನಲ್ಲಿ ನಿಂತು ಅವರ ಹೆಂಡತಿ ಈ ಕಡೆಗೇ ನೋಡುತ್ತಿದ್ದಾಳೆ. ಬರುತ್ತಿಲ್ಲ, ಏಕೆ ? ಬಹುಶಃ ಮನಸ್ಸಿನಲ್ಲೇ ನಗುತ್ತಿರಬಹುದು. ತಾನು ಆಕೆಯ ಹತ್ತಿರ ಸ್ವೆಟರ್ ಹಾಕುವುದನ್ನು ಹೇಳಿಸಿಕೊಳ್ಳಲು ಹೋಗುತ್ತಿದ್ದುದು, ಅನಂತರ ಆಕೆಯ ಮಟ್ಟಕ್ಕಿಂತ ಮೇಲೇರಿದ ಮೇಲೆ ಮತ್ತೆ ಆ ಕಡೆ ತಲೆಹಾಕಲಿಲ್ಲ, ಆಕೆಯೂ ಈ ಕಡೆ ಬರುವುದನ್ನು ಬಿಟ್ಟುಬಿಟ್ಟಳು ಅನ್ನುವುದನ್ನು ಸರೋಜಿನಿ ಮರೆತುಬಿಡುತ್ತಾಳೆ. ಯಾರೂ ಬರುತ್ತಿಲ್ಲ. ಮಿಲಿ, ನೀಲಿ ಅವರಂತೂ ಈ ಕಡೆಗೇ ತಲೆಹಾಕುತ್ತಿಲ್ಲ. ಎಷ್ಟು ಬೇಗ ಬೇರೆ ಮಾಡಿಬಿಟ್ಟರು. ತಾನೇ ಬೇರೆ 'ಸಮಾಜ'ದ ಕಡೆ ಹೆಜ್ಜೆ ಹಾಕಿದುದನ್ನು ಸರೋಜಿನಿ ಮರೆತುಬಿಡುತ್ತಾಳೆ. ಹಾಗೆಯೇ ತಾನೇ ಆ 'ಸಮಾಜ'ವನ್ನು ಕಡಿದುಕೊಳ್ಳುತ್ತಾ ಹೋದಳು ಅನ್ನುವುದೂ ಅವಳಿಗೆ ನೆನಪಾಗುವುದಿಲ್ಲ. ಮಿಲಿ ಕಾಗದ ಬರೆದಿದ್ದಳು- "ಮತ್ತೆ ರೋಜ ಅಂತ ನಿನ್ನನ್ನು ಕರೆಯೋದಿಲ್ಲ, ನೀನು ಮೂರ್ತಿವೆತ್ತ 'ಸರೋಜ'ಳೆ ಸರಿ. ನಿನ್ನ ನಿಷ್ಠೆಗಾಗಿ ವಂದನೆಗಳನ್ನು ಹೇಳಲೇಬೇಕು. ಅಂತೂ ನಿನಗೆ ವಿದಾಯ ಹೇಳಲೇಬೇಕಾಗಿದೆ." ಇದರ ಅರ್ಥ ? ಏನಲ್ಲ !

ನಿತಾಯಿ ಸ್ವಲ್ಪವೂ ವಿಚಲಿತನಾಗಿರಲಿಲ್ಲ-ಅವನ ಮೋರೆಯನ್ನು ನೋಡಿದಾಗ ಆ ಸೆಟೆದ ಮುಖಭಾವದ ಹಿನ್ನೆಲೆಯಲ್ಲಿ ಅದೇ ದೋಷಾರೋಪಣೆ ಹೊರಿಸುವ ಆಲೋಚನೆ ತಲೆಹಾಕುತ್ತದೆ. ನಿತಾಯಿಯೂ ಯೋಚಿಸುತ್ತಾ ಇರಬಹುದು. ಹೊರಗಡೆ ಸಂತೆ ಸೇರಿರಬಹುದು, ಬಾಯಿಂದ ಇಲ್ಲ ಅಂತ ಹೇಳುತ್ತಿಲ್ಲ. ಹೇಳುತ್ತಿರಬೇಕಾದರೆ ಅವನ ಮುಖ ಹೇಗಾಗಬಹುದು. ಎಂಥ ಬೀಭತ್ಸ ಉಲ್ಲಾಸ. ಎಂಥ ಅಶ್ಲೀಲ ಬೀರುತ್ತಿರುವ ಹುಬ್ಬುಗಳು. ಕಲ್ಪಿಸಿಕೊಳ್ಳಬಹುದು. ಸರೋಜಿನಿ ನಡುಗುತ್ತಾಳೆ. ಹಾಗೆಯೆ ಆ ಸಣ್ಣಹೃದ ಹರ್ಷ, ಸುಳ್ಳಂಪಳ್ಳು ಎಲ್ಲಾ ಬಾಯಿ ಬಿಡುತ್ತಾ ಹೊರಟಿರಬೇಕು. ಮನಸ್ಸಿನಲ್ಲೇ ಸರೋಜಿನಿ ಅವನನ್ನು ಶಪಿಸುತ್ತಾಳೆ, ಪದೇ ಪದೇ ಅವನ ಮೇಲೆ ಮನಸ್ಸಿನಲ್ಲೇ ಕೂಗಾಡುತ್ತಾಳೆ. ಅವನ ಬೆನ್ನ ಮೇಲೆ ಚೆನ್ನಾಗಿ ನಾಲ್ಕು ಬಾರಿಸಬೇಕು ಅನಿಸುತ್ತೆ, -ಆದರೆ ಬಲಿದತ್ತನ ಭಯ ಸುಮ್ಮನಾಗಿಸುತ್ತೆ.

ಅವನನ್ನು ಕಂಡರೆ ನಿಜವಾಗಿ ಹೆದರಿಕೆ ಆಗುತ್ತದೆ. ನಿಜಹೇಳಬೇಕೆಂದರೆ ಸಣ್ಣ ಆಕಾರದ ಮನುಷ್ಯ. ಅವಳು ಆ ಮನೆಯಲ್ಲಿ ಸೆರೆಯಾಳು, ಅಲ್ಲಿಗೆ ಕಾವಲುಗಾರ ಅವನೇ. ಅವಳೂ ಹಾಗೆಯೆ ಅವನನ್ನು ಸೆರೆಹಿಡಿದಿಟ್ಟಿದ್ದಾಳೆ. ಮುಖದ ಕಡೆ ನೋಡಿದರೆ ಮುಖ ಒಣಗುತ್ತದೆ. ಏನಾದರೂ ಕೆಟ್ಟದಾಗಿ ಮಾತಾಡುವನೇನೊ ಅನಿಸುತ್ತದೆ. ಎದೆ ಧಕ್ ಧಕ್ ಅಂತ ಬಡಿದುಕೊಳ್ಳುತ್ತದೆ. ಅವನನ್ನು ನೋಡಿದರೆ ಗಂಭೀರವಾಗಿರುತ್ತಾನೆ, ಕೆಲಸದಲ್ಲಿ ತುಂಬ ತೊಡಗಿರುವುದಾಗಿ ಕಾಣುತ್ತಾನೆ. ಮಾತಾಡಲೂ ಅವನಿಗೆ ಪುರುಸೊತ್ತಿಲ್ಲ. ರಾತ್ರಿ ಸಹ ಎಲ್ಲೋ ಹೋಗುತ್ತಾನೆ, ತಡವಾಗಿ ಹಿಂದಿರುಗುತ್ತಾನೆ. ಸರೋಜಿನಿ ಹಾಸಿಗೆಯಲ್ಲಿ ತಲೆ ಹುದುಗಿಸಿಕೊಂಡೇ ನೋಡುತ್ತಿರುತ್ತಾಳೆ. ಅವನು ಬಂದು ಮಗ್ಗುಲಿಗೆ ತಿರುಗಿಕೊಂಡು ಮಲಗಿಬಿಡುತ್ತಾನೆ. ನಿಂತುನಿಂತು ಹೊರಬರುವ ಆಳವಾದ ಉಸಿರು ಆಮೇಲೆ ಗೊರಕೆ. ಮೊದಲಿನಿಂದಲೂ ಹೀಗೆಯೆ, ಬಲಿದತ್ತ ಕೆಲಸಕ್ಕೆ ತಲೆಕೊಟ್ಟಿರುವ ಮನುಷ್ಯ. ತನ್ನ ಕೆಲಸದ ಗುಂಗಿನಲ್ಲೇ ಯಾವಾಗಲೂ ಇರುತ್ತಾನೆ, ಹೆಂಡತಿಯ

ಬೇಕು ಬೇಡಗಳ ಬಗ್ಗೆ ತಲೆ ಕೆಡಿಸಿಕೊಳ್ಳುವ ಅಗತ್ಯ ಇದೆಯೆಂದು ಅವನು ಎಂದೂ ಅರ್ಥಮಾಡಿಕೊಳ್ಳಲೇ ಇಲ್ಲ. ಆದರೆ ಸರೋಜಿನಿ ಈಗ ಯೋಚಿಸುತ್ತಾಳೆ, -ಈ ನನ್ನ ಗಂಡ ಎಂಥ ವಿಚಿತ್ರ ಮನುಷ್ಯ. ಅವಳಿಗೆ ಕಷ್ಟಕೊಡುವುದಕ್ಕಾಗಿ ಬೇಕಂತಲೆ ಅವನು ಗಂಭೀರವಾಗಿರುತ್ತಾನೆ. ಎಗರಿಬೀಳಲು ಅವಕಾಶ ಹುಡುಕುತ್ತಿರುತ್ತಾನೆ. ಅವನಿಗೆ ಎದುರಾಗಿ ತನ್ನನ್ನು ತಾನು ರಕ್ಷಿಸಿಕೊಳ್ಳಲು ಅವಳು ಅದೆಷ್ಟು ರೀತಿಯಲ್ಲಿ ಕಿರುಚಾಡಿಲ್ಲ, ಅವೆಂಥ ಕಟುನುಡಿಗಳನ್ನು ಆಡಿದ್ದಾಳೆ, ಹಲ್ಲು ಮಸೆಯುತ್ತಾ ಕೂದಲು ನಿಮಿರಿಸಿಕೊಂಡು ಉಗುರಿನಿಂದ ಪ್ರಹರಿಸಲೂ ಪ್ರಯತ್ನಿಸಿದ್ದಾಳೆ, ಬೆಕ್ಕು ನಾಯಿಯ ಮುಂದೆ ಆತ್ಮರಕ್ಷಣೆಗಾಗಿ ಸೆಣಸಾಡುವಂತೆ, -ಆದರೆ ಬಲಿದತ್ತನನ್ನು ಎದುರಿನಲ್ಲಿ ನೋಡಲು ಸರೋಜಿನಿಗೆ ಸಾಧ್ಯವಾಗುತ್ತಿಲ್ಲ. ಬಲಿದತ್ತ ಸೆಣಸಾಡಲು ಕೈಕೈ ಮಿಲಾಯಿಸುವವನಲ್ಲ. ಅವನ ಉಪೇಕ್ಷೆ ಅವಳಲ್ಲಿ ಭಯ ಹುಟ್ಟಿಸುತ್ತದೆ. ಸರೋಜಿನಿಗೆ ಮನಸ್ಸಿನಲ್ಲೇ ಅನುಭವವಾಗತೊಡಗುತ್ತದೆ, -ತನ್ನ ವ್ಯಕ್ತಿತ್ವ ಒಡೆದಿದೆ. ಕಡೆಗೆ ತನ್ನ ಒಡೆದ ವ್ಯಕ್ತಿತ್ವವೇ ತನಗೆ ಆಸರೆಯನ್ನಿತ್ತಿರುವುದು, ಕೋಣೆಯ ಮೂಲೆಯಲ್ಲಿ ಬಿದ್ದುಕೊಂಡು ತನ್ನ ಗಾಯವನ್ನು ತಾನೇ ನೆಕ್ಕಿಕೊಳ್ಳುವ ಅನುಭವ, ಅಲ್ಲಿ ನಡೆಯುವುದನ್ನೇ ಹೇಗೆ ಬೇಕಾದರೂ ಕಣ್ಣುತಿರುಗಿಸಿ ನೋಡಬಹುದು, ಕಿವಿ ನಿಮಿರಿಸಿ ಕೇಳಬಹುದು. ಆ ಕತ್ತಲೆಯಲ್ಲಿ ಮೈ ಮುಪ್ಪಾಗುತ್ತಿರುತ್ತದೆ, ಹಸಿವು ಇಳಿಯುತ್ತಿರುತ್ತದೆ, ಸುಮ್ಮಸುಮ್ಮನೆ ತಲೆನೋವು ಬರುತ್ತಿರುತ್ತದೆ, ಅಂಗಾಲು ಉರಿಯುತ್ತಿರುತ್ತದೆ, ದೇಹಾಲಸ್ಯ ಉಂಟಾಗುತ್ತದೆ, ಸುಸ್ತಾಗಿ ಹಾಸಿಗೆಯ ಮೇಲೆ ಉರುಳಿಕೊಳ್ಳುತ್ತಾಳೆ. ಹಿಡಿಯುತ್ತಿರುವ ಶಾರೀರಿಕ ದೌರ್ಬಲ್ಯದಿಂದಾಗಿ ನಿದ್ದೆ ಸ್ವಲ್ಪ ಸ್ವಲ್ಪ ಹತ್ತುತ್ತದೆ. ಬೆಳ್ಳಂಬೆಳಗಿನಲ್ಲೂ ಪ್ರಕೃತಿ ಕತ್ತಲೆಗೆ ಆಸರೆ ನೀಡುತ್ತಾಳೆ. ಆದರೆ ಬೆಚ್ಚಿದಂತೆ ನಿದ್ದೆಯಿಂದ ಎಚ್ಚರವಾಗುತ್ತದೆ. ಕೆಟ್ಟ ಕನಸಿನಿಂದ ಮೈಯೆಲ್ಲ ನಡುಗುತ್ತದೆ. ಎದೆ ಧಗ್‌ಧಗ್ ಅನ್ನುತ್ತದೆ, ಬೆವರು ಮೂಡುತ್ತದೆ. ಅಲ್ಲಿ ಮಲಗಲಾರದೆ ಸರೋಜಿನಿ ಎದ್ದು ಬೇರೆಡೆ ನಡೆಯುತ್ತಾಳೆ. ಬದುಕಿನಲ್ಲಿ ಎದುರಾದ ಈ ಹೊಸ ಸ್ಥಿತಿ ಅವಳಿಗೆ ಚೆನ್ನಾಗಿ ಮನದಟ್ಟುಮಾಡಿಕೊಡುತ್ತದೆ, -ಮಲಗುವುದು ಅಂದರೆ ಯಾತನೆಯಲ್ಲೇ ಅಂಡಲೆಯುತ್ತಿರುವುದು, ಏಳುವುದು ಅಂದರೆ ಯಾತನೆಯ ಉರಿಯುತ್ತಿರುವ ಬೆಂಕಿಯಲ್ಲಿ ಚಡಪಡಿಸುವುದು.

ಚಿಕ್ಕಂದಿನ ಮಾತುಗಳು ನೆನಪಿಗೆ ಬರುತ್ತವೆ. ಮಧ್ಯಾಹ್ನದ ಹೊತ್ತು ಅಜ್ಜಿಯ ಬಾಯಿಂದ ಕೇಳಿದ ಮಾತುಗಳು ಮತ್ತು ಅದರ ವಿವರಣೆ ನೆನಪಾಗುತ್ತದೆ. ಬದುಕಿನ ಈ ಅಲ್ಲೋಲಕಲ್ಲೋಲ, ಈ ಗೊಂದಲ, ಈ ವಿಷ ಕಾರುವ ನರಕ ಅಂದರೆ ಇದೇನಾ ?

ಭಾವನೆಗಳು ಮೆಲ್ಲಗೆ ಸಾಗುತ್ತವೆ.

ಕುಳಿತಿರುವಂತೆಯೆ, ಒಂದೇ ಭಂಗಿಯಲ್ಲಿ ಹೆಚ್ಚು ಹೊತ್ತು ಹಾಗೆಯೇ ಇರುವಾಗ ಒಮ್ಮೊಮ್ಮೆ ಅದೇ ಆತ್ಮಪ್ರತ್ಯಯ ಚಿಂತೆ ಕಾಡುವುದಾದರೂ ಕೈಮೇಲೇಳುವುದಿಲ್ಲ. ಮನಸ್ಸಿನ ರಭಸ ಹೃದಯದ ಭಾವನೆಗಳೊಂದಿಗೆ ತಾಳೆ ಬೀಳುವುದಿಲ್ಲ. ಪ್ರಕೃತಿಯನ್ನು ನಿರಾಕರಿಸುವ ಸಲುವಾಗಿ ಹೊಸ ಪಿಡುಗಿಗೆ ಹುಟ್ಟು ಹಾಕುತ್ತಾಳೆ, ಸರೋಜಿನಿ ಪ್ರತಿಯೊಂದನ್ನು ಮರೆಯುತ್ತಾಳೆ, ಕೆಟ್ಟ ಯೋಚನೆಗಳನ್ನು ಮರೆಯುತ್ತಾಳೆ,

ಅಭ್ಯಾಸಗಳನ್ನು ಮರೆಯುತ್ತಾಳೆ. ಆದರೂ ಅವಳ ಮೈಯಲ್ಲಿ ಅಡೆತಡೆಯಿಲ್ಲದೆ ಹೊಸ ರಸ ಪ್ರವಾಹವಾದಂತಾಗುತ್ತದೆ. ಹೊಸದಾಗಿ ಮೇಲೇಳುತ್ತಿದೆ, ಹೊಸ ವಿಪ್ಲವ, -ಕತ್ತಲೆಯಿಂದ ಬೆಳಕಿನ ಕಡೆಗೆ, ರೋಗದಿಂದ ಆರೋಗ್ಯದ ಕಡೆಗೆ.

ಇದೇ ರೀತಿಯಾಗಿ ಒಂದು ದಿನ, - ಹೊರಗೆ ನೋಡಿ ಅವಳು ತನ್ನೊಳಗೆ ಯಾವುದೋ ರೀತಿಯ ಕಲ್ಪಿತ ರಕ್ತಮಾಂಸಗಳ ಆಕಾರದ ಚಲನೆಯನ್ನು ಕಂಡು ಕೊಂಡಳು. ತುಂಡುತುಂಡಾದ ಕನಸುಗಳು ಒಟ್ಟುಗೂಡಿ ಒಂದಾಗಿ ವಾಸ್ತವವಾದ ಅನುಭವ. ಅದನ್ನು ಅನುಭವಿಸುವುದರಲ್ಲೇ ಏನೋ ಆನಂದ, ರೋಮಾಂಚನ. ಹೊಸ ಅನುಭವ ಮೊದಲು ತನ್ನೊಳಗೆ, ಆಮೇಲೆ ತನ್ನ ಹೊರಗೆ. ಅದರ ಕಲ್ಪನೆಯ ಆಧಾರವೇನೊ ಎಂಬಂತೆ ಅವಳಿಗೆ ಆನಂದ ತರುತ್ತದೆ, ಸುಖದ ಕ್ಷಣಗಳು ದುಃಖದ ಪೊರೆಯನ್ನು ಕತ್ತರಿಸಿ ಹೊರಬಂದಿವೆಯೇನೊ ಅಂತ ಅನಿಸುತ್ತದೆ. ತನ್ನ ಆ ರಕ್ತವೇ ಅವಳ ಪಾಲಿಗೆ ಒಂದು ಆಸರೆ, ಆ ಆಸರೆಯನ್ನು ಹಿಡಿದು ಅವಳು ತೇಲಾಡಿದಷ್ಟು ಅವಳಿಗೆ ಸುಖ, ಶಾಂತಿ ಮತ್ತು ಬದುಕಿನ ಅನುಭವವಾಗುತ್ತದೆ. ತಾನು ಸೃಜನಶೀಲ ಹೆಣ್ಣೆಂದು, ಸೃಜನಸಾಮರ್ಥ್ಯದಲ್ಲೇ ತನ್ನ ಹಿರಿಮೆ ಅಡಗಿದೆಯೆಂದು ಅಂದು ಕೊಳ್ಳುತ್ತಾಳೆ. ಕಣ್ಣಿಗೆ ಹೊಸ ಹೊಸ ಎಲೆಚಿಗುರುಗಳು, ತರಕಾರಿ ಗಿಡಗಳು, ಸೃಷ್ಟಿಯ ಬಗೆಬಗೆಯ ಬಣ್ಣಗಳು ಎಲ್ಲ ಕಾಣಿಸಿಕೊಳ್ಳುತ್ತವೆ. ತನ್ನೊಳಗೆ ಸುರಿಯುತ್ತಿರುವ ಮೋಡಗಳ ತೀವ್ರವಾದ ಬಯಕೆಯನ್ನು ಅನುಭವಿಸುತ್ತಾಳೆ. ಭೂಮಿಯನ್ನು ಎಂದೆಂದಿಗೂ ಹಸುರಾಗಿಡಲು ಒಂದು ಹನಿ ತಣ್ಣನೆಯ ಮಳೆನೀರಿನಲ್ಲಿ ತನ್ನ ಸಾರ್ಥಕ್ಯವನ್ನು ಅದು ಕಂಡುಕೊಳ್ಳುತ್ತದೆ ಅಂತ ಅವಳಿಗೆ ಅನಿಸುತ್ತದೆ. ಮತ್ತೆ ಒಮ್ಮೊಮ್ಮೆ ಅವಳಿಗೆ ಅನಿಸುತ್ತದೆ, ರಕ್ತಮಾಂಸಗಳ ದೇಹವುಳ್ಳ ತಾನೇ ಸ್ವತಃ ಆಸರೆ ಬಯಸುವವಳು, ತನ್ನೊಳಗಿರುವ ಆ ಸೃಷ್ಟಿಯೆ ತನಗೆ ಆಧಾರ. ತನ್ನದೇ ಆದ ಕಣ್ಣಿಗೆ ಕಾಣದ ಅಸ್ಪಷ್ಟವಾದ ಸೃಷ್ಟಿಯ ಮಡಿಲಿನಲ್ಲಿ ತನ್ನನ್ನೇ ಸಮರ್ಥಿಸಿಕೊಳ್ಳುತ್ತಾ ಅವಳು ಲಯಬದ್ಧವಾಗಿ ಮುನ್ನಡೆಯುವಳು. ಶೋಕ ಎಲ್ಲಿ? ದುಃಖ ಎಲ್ಲಿ? ಬರೀ ಬದುಕಿನ ಆಟ. ಕ್ಷಣಕ್ಷಣಕ್ಕೂ ಗೊತ್ತಿಲ್ಲದ ನಿರೀಕ್ಷೆಯ ಸುಖ ಉಬ್ಬರದಂತೆ ಮೇಲೇಳುತ್ತದೆ. ಸರೋಜನಿಗೆ ತನ್ನ ಬಗ್ಗೆಯೆ ಗೌರವ ಹುಟ್ಟಿ ಪರಿಪೂರ್ಣತೆಯ ಭಾವನೆಯುಂಟಾಗುತ್ತದೆ, -ಅವಳಿಗೆ ಇನ್ನೇನೂ ಬೇಡ. ಕೇವಲ ಅವಳು - ಮತ್ತು ಅವಳ ಒಳಗಿರುವ ಅಸ್ಪಷ್ಟವಾದ ಸೃಷ್ಟಿ, ಸೂಕ್ಷ್ಮಾತಿಸೂಕ್ಷ್ಮ ಜಡವಾದ ಮಾಂಸಖಂಡಗಳು, ಹಾಗೆಯೆ ಅತೀಂದ್ರಿಯವಾದ ಚೇತನಕ್ಕೆ ಮತ್ತೆ ಮತ್ತೆ ಸಂದೇಶ ಕಳಿಸುತ್ತಿದೆ, -ನಾನು ಬಂದಿದ್ದೇನೆ, ನಾನು ಇದ್ದೇನೆ.

ಅದು ಯಾರದು ?

ಚಿಂತೆಯ ಮೋಡ ತೇಲಿಬರುತ್ತದೆ. ಆಳವಾದ ನಿಟ್ಟುಸಿರಿನಿಂದಾಗಿ ಅದೂ ಹಾರಿಹೋಗುತ್ತದೆ. ಬದುಕಿನ ಆ ಅನುಭವ ಹಾರಿಹೋಗುತ್ತದೆ, ಸಮುದ್ರದಲ್ಲಿ ಅದೆಷ್ಟು ಬಗೆಯ ಅಲ್ಲೋಲಕಲ್ಲೋಲಗಳು. ಸ್ವಲ್ಪ ಕಾಲದಲ್ಲೇ ಅವಳು ಸಾಕಷ್ಟು ಪ್ರಪಂಚ ಕಂಡಿದ್ದಾಳೆ, ಬಹಳ ಮಂದಿ, ಬಹಳಷ್ಟು ಪರಿಸ್ಥಿತಿಗಳು ಎಲ್ಲವನ್ನು ನೋಡಿದ್ದಾಳೆ. ಇವತ್ತು ಚಿಪ್ಪಿನಲ್ಲಿ ಸ್ವಾತಿಮಳೆಯ ಹನಿ ಬಿದ್ದಿದೆ. ಚಿಪ್ಪು ಮುಚ್ಚಿಕೊಂಡಿದೆ.

ಅದೆಷ್ಟೊ ಮೋಡಗಳು ಕಟ್ಟುತ್ತವೆ, ಸುರಿಯುತ್ತವೆ, ಹೊರಟುಹೋಗುತ್ತವೆ, ಅವಳಿಗೇನಾಗಬೇಕು.

ಶರ್ಮಾ-ನೆನಸಿಕೊಂಡರೆ ಅದಷ್ಟು ನೋವಾಗುತ್ತದೆ. ಅದಲ್ಲಿ ಹೋದರೋ, ಅದು ದಡದ ಆಕಡೆಯ ಮಾತು, ಕನಸಿನ ಮಾತೆನಿಸುತ್ತದೆ.

ರಣಜಿತಬಾಬು, -ಅವರು ರಜೆಯ ಮೇಲೆ ಹೊರಟುಹೋಗಿದ್ದಾರೆ, ಆರೋಗ್ಯ ಸರಿಯಿಲ್ಲವಂತೆ ಅದಕ್ಕೆ ಅಂತ ಬಲಿದತ್ತ ಸುದ್ದಿ ಮುಟ್ಟಿಸಿದ್ದ. ಅವಳಿಗೆ ಅದು ನಂಬಲೇ ಆಗಲಿಲ್ಲ. ನಂಬದೆ ಆ ಮಾತನ್ನು ತಳ್ಳಿಹಾಕಿದ್ದಳು. ಅವಳ ಅಲ್ಲೋಲಕಲ್ಲೋಲ ಗೊಂಡ ಮನಸ್ಸಿನಲ್ಲಿ ಲೆಕ್ಕವಿಲ್ಲದಷ್ಟು ಹೊಳಪಿನ ಕಿಡಿಗಳ ರೂಪದಲ್ಲಿ ದಳ್ಳುರಿ ಎದ್ದಂತಾಗಿ ಅಡಗಿಹೋಗಿತ್ತು.

ಅದೆಷ್ಟು ದಂಡು ಕಂಪನಿ ನೌಕರರು, ಆಫೀಸರುಗಳು, ಸಮಾಜಸೇವಕರು - ಒಂದೊಂದಾಗಿ ಅವಳು ಎಲ್ಲವನ್ನೂ ಮರೆಯುತ್ತಾ ಹೊರಟಿದ್ದಾಳೆ. ಬೆಳಗ್ಗೆ ಎದ್ದು ರಾತ್ರಿಯಲ್ಲಿ ಕಾಟಕೊಟ್ಟ ಸೊಳ್ಳೆಗಳ ಗುಂಯ್ ಗುಂಯ್ ಸದ್ದನ್ನು ಮರೆತಂತಾಗಿದೆ,- ರಾತ್ರಿ ನೆನಪಿನಲ್ಲಿ ಉಳಿದಿಲ್ಲ, ಸೊಳ್ಳೆ ಕಡಿಯುವುದು ಕೂಡ ಮರೆತು ಹೋಗಿದೆ.

ಸೃಷ್ಟಿಯ ನೆರಳಿನ ರೂಪ, - ಅವರೆಲ್ಲ ಬಂದರು, ಹೊರಟು ಹೋದರು. ಅವರ ಅಂಶ ಉಳಿದುಕೊಂಡಿದೆ, ಪ್ರಕೃತಿಯ ಮಾಯೆಯಲ್ಲಿ ನಿಜವಾಗಿಯೂ ಚಿರಂತನವಾಗಿ ಉಳಿದಿರುವ ಎರಡು ಜೀವಿಗಳು ಗಂಡು ಮತ್ತು ಹೆಣ್ಣು. ಇಲ್ಲಿ ಅಥವಾ ಅಲ್ಲಿ, ಕೇವಲ ಘಟನೆಗಳ ಸರಣಿಯಷ್ಟೆ, ಇಲ್ಲಲ್ಲದಿದ್ದರೆ ಅಲ್ಲಿ ಆಗಿರಲಿಕ್ಕೂ ಸಾಧ್ಯ. ಮಳೆಬಿದ್ದ ನೆಲ ಬೀಜವನ್ನು ಪಡೆದುಕೊಂಡಿತ್ತು, ಮೊಳಕೆಯ ಬಿಸಿ ತಗುಲಿತ್ತು, ಸೃಷ್ಟಿಯ ನಿರೀಕ್ಷೆಯಲ್ಲಿ ಅದು ಮೊಳಕೆಯೊಡೆದು ಹೊರಬರುವುದನ್ನೇ ಕಾಯುತ್ತಿದೆ. ತಾಯ್ತನ ಪಡೆಯುವ ಆನಂದದಲ್ಲಿ ಹೆಣ್ಣು ಮಣ್ಣಿನ ಪರಿಚಯಕ್ಕಾಗಿ ಹುಡುಕಾಡ ಲಿಲ್ಲ. ಅವಳು ಪರಿಪೂರ್ಣಳು, -ಅಷ್ಟೇ ಸಾಕು. ಮಣ್ಣಿಗೆ ತಾನು ಏನೆಂಬುದರ ಅರಿವಾಗಿದೆ, - ಅದು ಸೃಷ್ಟಿಯ ಬಿರಿಯದ ಗಣೆ, ಅವಳೇ ವಸುಂಧರೆ, ಅವಳೇ ಮಣ್ಣಿನ ಮಾಯೆ ಮುಂದೊಡ್ಡುವ ಕನಸು, ಕ್ಷಣಕ್ಷಣಕ್ಕೆ ವಿಸ್ಮಯ, ಕ್ಷಣಕ್ಷಣದಲ್ಲೂ ಹರಡುತ್ತಿರುವ ಆನಂದ, -ಜನ ಹೋದರು, ಕುರುಹಾಗಿ ಉಳಿದುಕೊಂಡಿತು. ಉಳಿದಿರುವುದರಲ್ಲಿ ಯಾವುದೇ ಹಣೆಪಟ್ಟಿ ಹಾಕಿಲ್ಲ, ಜಾತಿ-ದೇಶಗಳ ಸಂಕೀರ್ಣತೆ ಕಂಡುಬರುತ್ತಿಲ್ಲ. ಸರೋಜಿನಿ ಹೊಸ ವ್ಯಕ್ತಿತ್ವ ಹೊತ್ತು ಮರಳಿದ್ದಾಳೆ.

ಬದುಕಿನ ಅರಿವಿಗೆ ಬಂದಿರದ ಆ ಮುಖ ತುಂಬ ಅಚ್ಚರಿಗಳಿಂದ ಕೂಡಿದೆ ಅನಿಸುತ್ತದೆ. ಪ್ರಪಂಚದ ಇಂದಿನ ಆಗುಹೋಗುಗಳಲ್ಲಿ ಲೆಕ್ಕವಿಲ್ಲದಷ್ಟು ಮಜಲುಗಳಿವೆ. ಬದುಕು ತನ್ನ ವೈಚಿತ್ರ್ಯಗಳನ್ನು ಕಂಡು ಅಚ್ಚರಿಪಡುತ್ತಲೆ ಜಾರುತ್ತದೆ, ಅದರ ಕನಸುಗಳು ಒಡೆಯುವುದಿಲ್ಲ.

ತನ್ನ ವಂಶದ ಕುಡಿ ಮಡದಿಯ ಹೊಟ್ಟೆಯಲ್ಲಿ ಬೆಳೆಯುತ್ತಿದೆಯೆಂದು ತಿಳಿದ ದಿನ ಬಲಿದತ್ತನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಅವನ ಮನಸ್ಸಿನಲ್ಲಿ ಮನೆ ಮಾಡಿದ್ದ ಚಿಂತೆ ಸಂಕೋಚಗಳೆಲ್ಲ ಇದ್ದಕ್ಕಿದ್ದಂತೆ ಒಂದೇ ಏಟಿಗೆ

ಹಾರಿಹೋದಂತಾಯಿತು. ಅವನ ಎಂದಿನ ವ್ಯಕ್ತಿತ್ವ ಮತ್ತು ನಿಲುವು ಮಡದಿಯ ಮುಂದೆ ರೆಕ್ಕೆ ಜಾಡಿಸಿ ಭಾಷಣ ಹೊಡೆಯಲು ಶುರುಮಾಡಿತು. "ಏನಂತೀಯ ಸರೋಜ, ಇಷ್ಟು ದಿನಗಳಾದ ಮೇಲೆ-"

ಕನ್ನಡಿಯ ಮುಂದೆ ಗಡ್ಡ ಕೆರೆಯುತ್ತ ಕುಳಿತಿದ್ದ. "ನೋಡಿ, ಇವರು ತುಂಬಾ ವೀಕಾಗಿದ್ದಾರೆ. ತುಂಬ ಕಿತ್ತಲೆ ಹಣ್ಣು ಕೊಡಿ. ಆಸ್ಕೊಕ್ಯಾಲ್ಸಿಯಂ ಮಾತ್ರೆಗಳು, ವಿಟಮಿನ್ ಬಿ ಕಾಂಪ್ಲೆಕ್ಸ್ ಎಲ್ಲ ಬರೆದುಕೊಡ್ತೀನಿ. ಕಡೇ ಪಕ್ಷ ತಿಂಗಳಿಗೆ ಒಂದು ಸಾರಿಯಾದರೂ ಮೂತ್ರಪರೀಕ್ಷೆ ಮಾಡಿಸಬೇಕು," ಅನ್ನುತ್ತಾ ನಗುತ್ತಲೆ ಲೇಡಿ ಡಾಕ್ಟರ್ ಆಗತಾನೆ ಮನೆಯಿಂದ ಹೊರಬಿದ್ದಿದ್ದರು.

ಸರೋಜಿನಿಯ ಆರೋಗ್ಯದ ಬಗ್ಗೆ ತುಂಬ ಕಳವಳಗೊಂಡು ಅವನು ತನ್ನ ಕರ್ತವ್ಯವೆಂಬಂತೆ ಡಾಕ್ಟರನ್ನು ಕರೆಸಿದ್ದ, ಆದರ ಈ ಸುದ್ದಿ.

ಅವನಿಗೆ ತನ್ನ ಉಬ್ಬಿದ ಗುಂಡು ಮುಖ ಎದುರಿಗೆ ಕಾಣಿಸುತ್ತದೆ. ಎದೆಯುಬ್ಬಿಸಿಕೊಂಡು ತನ್ನನ್ನು ತಾನೇ ನೋಡಿಕೊಳ್ಳುತ್ತಿದ್ದಾನೆ. ಇದ್ದಕ್ಕಿದ್ದಂತೆ ಮನಸ್ಸಾಗುತ್ತದೆ, ಮೀಸೆಬಿಡಬೇಕು. ಕಡೇಪಕ್ಷ ಇವತ್ತಾದರೂ ಬೋಳಿಸೋದು ಬೇಡ. ಬೇರೆಯವರನ್ನು ನೋಡಿದ್ದಾನೆ, ಮುಖದ ಮೇಲೆ ಮೀಸೆ ಒಂದು ರೀತಿಯ ಗಂಡುಕಳೆ ತರುತ್ತದೆ. ಅದರಿಂದಲೇ ಅಲ್ಲವೆ, ಎಲ್ಲದರಲ್ಲೂ ಗೆಲುವು.

"ಸರೋಜ, ನನಗೆ ಮನಸ್ಸಿಗೆ ತುಂಬ ಬೇಜಾರಾಗುತ್ತೆ. ಕೆಲಸ ಕಾರ್ಯಗಳ ಗಡಿಬಿಡಿಯಲ್ಲಿ ನಿನ್ನ ಕಡೆ ಸ್ವಲ್ಪವೂ ಮನಸ್ಸು ಕೊಡುವುದು ಸಾಧ್ಯವಾಗಲಿಲ್ಲವಲ್ಲ ಅಂತ. ಎಲ್ಲಿಗೂ ನಿನ್ನನ್ನು ವಾಕಿಂಗ್ ಸಹ ಕರೆದುಕೊಂಡು ಹೋಗಿಲ್ಲ. ನನಗ ಇದು ಗೊತ್ತಾಗಬೇಕಿತ್ತು. ಎಲ್ಲೋ ನನ್ನ ಜಾತಕದಲ್ಲಿ ಈ ಮೂವತ್ತೊಂಬತ್ತನೆಯ ವಯಸ್ಸಿನಲ್ಲಿ ಪುತ್ರಪ್ರಾಪ್ತಿ ಅಂತ ಬರೆದಿತ್ತು ಅಂತ ಕಾಣುತ್ತೆ. ವರ್ಗ, ಪ್ರಮೋಷನ್, ಮಡದಿಗೆ ಸ್ವಲ್ಪ ಅಸೌಖ್ಯ, ಅಂತೂ ಹಾಗೇ ಆಗಿದೆಯಲ್ಲ ನಿಂಗೆ. ನನ್ನ ಎಲ್ಲ ದುಡಿಮೆಯ ಫಲವಾಗಿ ಮಗ ಹುಟ್ತಾನೆ ಈಗ ಗೊತ್ತಾ ? ನಾನು ಈಗ ಬಹುಶಃ ದೊಡ್ಡ ಸಾಹೇಬನಾಗಬಹುದು, ಗೊತ್ತಾ ನಿಂಗೆ ಸರೋಜ !" ಅವಳು ಮಾತಾಡದೆ ಅರ್ಧ ಕಣ್ಣು ಮುಚ್ಚಿಕೊಂಡು ಕುಳಿತಿದ್ದಾಳೆ. ನಾಚುತ್ತಾ, ಮುಗುಳ್ನಗುತ್ತಾ ಕುಳಿತಿದ್ದಾಳೆ. ಹೀಗೆ ಆಗುವುದುಂಟು, ಹೀಗೆ ಆಗುವುದು ಸಹಜ. ಭಾಗ್ಯವಂತೆ, ಅವಳು ತಾನೆ ಅವನಿಗೆ ಎಲ್ಲ ಸೌಭಾಗ್ಯ ತಂದವಳು, ಅವಳಲ್ಲದೆ ಇನ್ನಾರು ? ಅವನಿಗೆ ತೀರ ಹತ್ತಿರವಾದ ಅವಳು. ಒಂದೇ ಮನಸ್ಸು, ಒಂದೇ ಆತ್ಮ ಮನೆಮಠ ಎಲ್ಲ ಅವಳಿಗಾಗಿಯ ತಾನೆ. ಅವನ ಹೆಂಡತಿ.

ಬಲಿದತ್ತ ಮುಗುಳ್ನಗುತ್ತಾ ನೋಡುತ್ತಿದ್ದಾನೆ. ಅದೇ ಸನಾತನ ಪತಿಯ ಕಳೆಯಿದೆ, ಆತ್ಮವಿಶ್ವಾಸವಿದೆ, ಕನಸನ್ನು ನನಸಾಗಿಸಿಕೊಳ್ಳುವ ನಂಬಿಕೆಯಿದೆ. ಬದುಕುವುದಕ್ಕಾಗಿ ಪರಿಸ್ಥಿತಿಗಳನ್ನು ಬಗ್ಗಿಸಿಕೊಳ್ಳುವ ಛಾತಿ ಇದೆ, ಅದೊಂದು ಪ್ರಕೃತಿಯ ಕೊಡುಗೆ. ಅವನ ಬಯಕೆಗಳು, ಪ್ರತಿನಿತ್ಯ ನೋಡುತ್ತಿರುವ ಅದೇ ಮೈಯ್ಯ ಮೇಲೆ ಮೋಹ. ಅವನು ಪತಿ, ಕಾಲಕಾಲಾಂತರದಿಂದ ಎಲ್ಲರೂ ತಮ್ಮ ತಮ್ಮ ಹೆಂಡತಿಯರನ್ನು ಬಯಸುತ್ತಾ ಬಂದಿರುವಂತೆ ತಾನೂ ತನ್ನ ಹೆಂಡತಿಯನ್ನು ಬಯಸುವುದೇ ಅವನ

ಮನಸ್ಸಿನ ಸಹಜ ಪ್ರವೃತ್ತಿ. ಅಪನಂಬಿಕೆ ಪಡಬಾರದು. ಕನ್ನಡಿಯಲ್ಲಿ ಅವನ ಗುಂಡು ಗುಂಡಾದ ಮುಖ ಕಾಣಿಸುತ್ತದೆ. ಕೈಯೆತ್ತಿ ತಿರುಚುತ್ತಾ ಮೇಲಿನ ಮಾಂಸಖಂಡವನ್ನು ನೋಡುತ್ತಾನೆ, ಗುಂಡಾಗಿಲ್ಲದಿದ್ದರೂ-ದಪ್ಪಗಂತೂ ಇದೆ.

"ಲೋ ಹರ್ಷ, ಸ್ವಲ್ಪ ಮೈಗೆ ಎಣ್ಣೆ ಹಚ್ಚಿ ಮಾಲಿಷ್ ಮಾಡೋ," ಬಲಿದತ್ತ ಗರ್ಜಿಸಿದ. ಅವನ ಅಪ್ಪಣೆ. ಆಮೇಲೆ ಸರೋಜಿನಿಯ ಕಡೆ ನೋಡತೊಡಗಿದ. ಅವಳ ಮೈಯಲ್ಲಿ ಹೇಗಾದರೂ, ಶಕ್ತಿ ಹುಟ್ಟಬೇಕು. ತಕ್ಷಣ ಔಷಧ ಟಾನಿಕ್ಕುಗಳನ್ನು ತರಲು ನಿತಾಯಿಯನ್ನು ಪೇಟೆಗೆ ಕಳಿಸಿದ, "ಹಾಗೆ ಒಳ್ಳೆ ಕಿತ್ತಲೆ ಹಣ್ಣುಗಳನ್ನು ತೊಗೊಂಡು ಬಾ, ಒಂದು ರೂಪಾಯಿಗೆ, ಗೊತ್ತಾಯ್ತಾ ?"

"ನಿನ್ನ ಆರೋಗ್ಯ ಸರಿಯಾಗಿ ನೋಡಿಕೊ ಸರೋಜ! ಸರಿಯಾಗಿ ಔಷಧ ಟಾನಿಕ್ಕು ತೊಗೋ. ಇಲ್ಲದಿದ್ದರೆ ಮಗು ಬೆಳೆಯೋದಾದರೂ ಹೇಗೆ? ಇದರಲ್ಲಿ ನಾಚಿಕೆ, ಸಂಕೋಚ, ಭಯ ಅನ್ನೋದೆ ಇಲ್ಲ, ಇವೆಲ್ಲ ಸಾಧಾರಣ ವಿಷಯಗಳಷ್ಟೆ. ಉದಾಸೀನ ಮಾಡಿದರೆ ಸರಿಹೋಗೋದಿಲ್ಲ, ಏನಾದರೂ ನನಗೆ ಹೇಳು. ಎಲ್ಲಾ ಏರ್ಪಾಟುಮಾಡೋಣ. ರೋಗಿಗಳು ಡಾಕ್ಟರಿಗೆ ಹೀಗೆ ಅಂತ ಹೇಳದಿದ್ರೆ ಆಗುತ್ತಾ? ಅಂದ ಹಾಗೆ, ಇದೇನು ರೋಗವಲ್ಲ, ಗೊತ್ತಾಯ್ತಾ? ಸುಮ್ಮನೆ ಗಾಬರಿಮಾಡಿಕೊಳ್ಳಬೇಡ, ಅಷ್ಟೆ-"

ಅವನು ಎಷ್ಟು ಬೇಗ ಅದೆಷ್ಟು ಮಾತುಗಳನ್ನು ಆಡಬಯಸುತ್ತಾನೆ, ಬಹಳಷ್ಟು ವಿಚಾರಗಳಿವೆ. ಮನಸ್ಸಿನ ಹೊಯ್ದಾಟದಿಂದ ಯಾವುದೂ ಸರಿಯಾಗಿ ಹೊರಬರುತ್ತಿಲ್ಲ. ಮತ್ತೆ ತಿದ್ದಿ ಬೇರೆ ಹೇಳಬೇಕೆನಿಸುತ್ತದೆ. ತಲೆಯಲ್ಲಿ ಅವನದೇ ಆದ ಸ್ವಂತ ಆಲೋಚನೆಗಳು ಮುತ್ತುತ್ತಿವೆ. ಅವನು ಚೆನ್ನಾಗಿ ದುಡ್ಡು ಸಂಪಾದಿಸುತ್ತಿದ್ದಾನೆ, ಹೊಟ್ಟೆ ಪಾಡಿಗೇನೂ ಭಯವಿಲ್ಲ. ಕೆಲಸದಲ್ಲಿ ಬೇಗ ಬೇಗನೆ ಬಡ್ತಿ ಪಡೆದು ದೊಡ್ಡ ಆಫೀಸರಾಗಲು ಹೊರಟಿದ್ದಾನೆ. ಆದರೆ ಮಕ್ಕಳುಮರಿ ಇರದಿದ್ದುದರಿಂದ ಹಣ ಯಾರಿಗಾಗಿ ಸಂಪಾದಿಸಬೇಕು ಅನಿಸುತ್ತಿತ್ತು. ಏನು ಮುಂದುವರಿದರೇನು ಪ್ರಯೋಜನ ಅಂತ ಮನಸ್ಸು ಮುದುಡಿಕೊಳ್ಳುತ್ತಿತ್ತು.

"ತುಂಬ ಆಯಾಸ ಮಾಡಿಕೊಳ್ಳಬೇಡ. ಸುಸ್ತಾಗುತ್ತಾ? ಹಾಗೇ ಮಲಗಿಕೊ ಸರೋಜ. ಬೆಳಗಾಗಿದ್ದರೇನಂತೆ? ನೀನು ಹಾಗೇ ಮಲಗಿರು. ಇವತ್ತೇನು ನನಗೆ ಅವಸರವಿಲ್ಲ. ನಿನಗೆ ಔಷಧ ಕೊಟ್ಟು ಹೋಗ್ತೇನೆ. ನೀನು ಮಲಗಿಕೊಂಡು ಬಿಡು."

ಸರೋಜಿನಿ ನಿಜವಾಗಿಯೂ ಮಲಗಿಕೊಂಡಳು. ಇವನು ಅವಳ ಗಂಡ. ಅವಳಿಗೆ ಇದ್ದಕ್ಕಿದ್ದ ಹಾಗೆ ಮನಸ್ಸು ತೆರೆದು ಅಳಬೇಕೆನಿಸಿತ್ತು. ದಿಂಬಿನಲ್ಲಿ ಮುಖ ಮುಚ್ಚಿಕೊಂಡಳು.

"ಬೇಡ, ಮುಖ ಮೇಲೆ ಮಾಡಿಕೊಂಡು ಮಲಗೋದು ಒಳ್ಳೇದು, ನೋಡು, ಮರೆತೇ ಬಿಟ್ಟಿದ್ದೆ. ಕಾರಿನ ವಿಚಾರವಾಗಿ ಇವತ್ತು ತೀರ್ಮಾನ ತೊಗೋಬೇಕು. ಇಲ್ಲದಿದ್ದರೆ ನೀನು ಸುತ್ತಾಡೋದಕ್ಕೆ ಹೇಗೆ ಹೋಗ್ತೀಯ? ಇರು, ಎಲ್ಲಾ ಸರಿಹೋಗುತ್ತೆ, ನೀನು ವಿಶ್ರಾಂತಿ ತಗೊ."

ಹಾರುತ್ತಾ ಇದೆ -

ಎಂದಿನ ಬದುಕು. ಹಳೆಯ ಹಳದಿ ಹಾಳೆಗಳಂತೆಯ ಬದುಕಿನ ಹೊತ್ತಗೆಯಲ್ಲಿ ಹೊಸ ಹಾಳೆಗಳೂ ತೆರೆಯುತ್ತಾ ಹೋಗುತ್ತಿವೆ. ಒಮ್ಮೊಮ್ಮೆ ಹೊಸ ಅನುಭವ ಹಳೆಯ ಅನುಭವದಂತೆಯೆ ಕಾಣುತ್ತದೆ, ಅದೇ ಸಮಯ, ಪರಿಚಯವಿರುವ ಅದೇ ದೃಶ್ಯಗಳು, ಮನಸ್ಸಿನ ಅದೇ ಭಾವನೆಗಳು, ಎಲ್ಲವೂ ನಿಜವಾಗಿಯೂ ಅದೇ ತರಹ, ಸ್ವಲ್ಪ ಹೊತ್ತು ಗತಕಾಲದಲ್ಲಿ ಕಳೆದು ಇದ್ದಕ್ಕಿದ್ದ ಹಾಗೆ ಮುದುಡಿದ ಎಲೆ ಮತ್ತೆ ಕಣ್ಣಮುಂದೆ ಪುಡಿಪುಡಿಯಾಗಿ ಅಳಿದುಹೋಗುತ್ತದೆ. ದುಗುಡ ತುಂಬಿದ ಪಶ್ಚಾತ್ತಾಪದ ನಿಟ್ಟುಸಿರು - ಅದರಲ್ಲಿ ಹುಟ್ಟಿಸುವ ಶಕ್ತಿಯಿಲ್ಲ, ಕೇವಲ ನೆನಪಿನ ತರ್ಪಣ ಅಷ್ಟೆ. ಮರೆತರೂ ಆ ನೆನಪು ಅಳಿಯುವುದಿಲ್ಲ, ಮಧ್ಯೆ ದಟ್ಟವಾದ ಕಾಲದ ಹರಿವಿದೆ.

ತನ್ನ ಕಾರಿನ ಹಿಂಬದಿಯ ಮೆದುವಾದ ಸೀಟಿನಲ್ಲಿ ಆರಾಮವಾಗಿ ಕುಳಿತು ಸರೋಜಿನಿ ಯೋಚಿಸುತ್ತಿದ್ದಾಳೆ. ಮುಂದೆ ಡ್ರೈವರ್ ಬಳಿ ಬಲಿದತ್ತ ಕುಳಿತಿದ್ದಾನೆ. ಕಾರು ನಡೆಸುವ ವಿಧಾನವನ್ನು ತಿಳಿಯಲು ಅವನಿಗೆ ತುಂಬ ಕುತೂಹಲ. ಮತ್ತೆ ಮತ್ತೆ ಡ್ರೈವರನನ್ನು ಪೀಡಿಸುತ್ತಿದ್ದಾನೆ. ತಾನೇ ಕಾರು ನಡೆಸುವುದನ್ನು ಕಲಿಯಲೇಬೇಕೆಂದು ಅವನಿಗೆ ಇಷ್ಟ.

ಇದು ಮಿಸ್ಟರ್ ಶರ್ಮಾ ಅವರ ಕಾರು. ಶರ್ಮಾ ಅವರು ಹೋದ ಮೇಲೆ ಅವರ ಊರಿನಿಂದ ಯಾರೋ ಬಂದಿದ್ದರು. ಅವರ ಎಲ್ಲ ಪದಾರ್ಥಗಳನ್ನು ಅಗ್ಗವಾಗಿ ಮಾರಿದ್ದರು. ಬಲಿದತ್ತ ಕಾರು ಕೊಂಡಿದ್ದ.

"ನೋಡಿದೆಯಾ ಸರೋಜ, ರಣಜಿತ ಬಾಬುಗಳ ಕಾರಿನಂಥ ಕಾರು ಕೊಳ್ಳಬೇಕು ಅಂತಿದ್ದಿಯಲ್ಲ, ನೋಡು ಈಗ ಅದಕ್ಕಿಂತಲೂ ಚೆನ್ನಾಗಿರೋ ಕಾರು, ಶರ್ಮಾ ಅವರ ಕಾರನ್ನೇ ಕೊಂಡಿದ್ದೇನೆ. ಅಹಾ, ಅವರಿಗೆ ಅದೆಷ್ಟು ಆಸಕ್ತಿಯಿತ್ತು, ಯಾರೋ ಕೊಳ್ಳೋದು, ಯಾರೋ ಅನುಭವಿಸೋದು- ? ಇದೇ ಪ್ರಪಂಚದ ರೀತಿ ನೋಡು. ಒಟ್ಟಿನಲ್ಲಿ ನನ್ನ ಕೈಸೇರಿತು. ಶರ್ಮಾ ಇದ್ದಿದ್ದರೂ ತುಂಬ ಸಂತೋಷಪಟ್ಟು ಕೊಳ್ಳುತ್ತಿದ್ದರು. ಇಲ್ಲದಿದ್ದರೆ ಬೇರೆ ಯಾರಾದರೂ ಕೊಂಡು ಕೊಂಡುಬಿಡುತ್ತಿದ್ದರು. ಕಾರಿನ ಜೊತೆಯಲ್ಲಿ ಯಾರೋ ವಿದೇಶಿ ಕಂಟ್ರಾಕ್ಟರ್ ಮಹಸೀಯರೊಬ್ಬರು ಬಂದಿದ್ದರು, "ಸರಿಸರಿ, ನಿಮಗೆ ಇಷ್ಟ ತಾನೆ, ಶ್ರೀಮತಿಯವರ ಮನಸ್ಸಿಗೆ ಸರಿ ಹೋದರೆ ಸಾಕು, ನಮ್ಮ ಶ್ರಮ ಸಾರ್ಥಕವಾದಂತೆ. ಒಟ್ಟು ಹನ್ನೊಂದು ಸಾವಿರ ರೂಪಾಯಿ. ಸ್ವಲ್ಪ ಕಡಮೆಯೆ ಅಲ್ಲವೆ ?"

ಇದು 'ಅವನ' ಕಾರು. ತನ್ನದು, ಯಾರದು ? ಶರ್ಮಾ ? ಅವರು ಹೋದರು, ಬಲಿದತ್ತ-ಅವನು ಹಣ ಕೊಟ್ಟಿರಲಿಲ್ಲ. ಹಣ ಕೊಟ್ಟವನು ಹೇಳುತ್ತಿದ್ದ, - "ಒಟ್ಟು ಕೇವಲ ಹನ್ನೊಂದು ಸಾವಿರ ಮಾತ್ರ-" ಅವನ ಜೊತೆ ಮತ್ತೆ ಭೇಟಿಯಾಗುತ್ತದೊ ಇಲ್ಲವೊ. ಏಕೆಂದರೆ ಬಲಿದತ್ತನಿಗೆ ವರ್ಗವಾಗುತ್ತಿದೆ. ಕಾರನ್ನು ಯಾರು ಬಳಸತೊಡಗುತ್ತಾರೋ, ಅದು ಅವರದಾಗುತ್ತದೆ. ಈ ಕಾರು ಅವನ ಸ್ವಂತದ್ದು.

ಎಲ್ಲ ಹಾಗೇ ಇದೆ. ಅದೇ ಕಾರು, ಇದೇ ನೇರವಾದ ರಸ್ತೆ, ಉದ್ದವಾದ ರಸ್ತೆ. ಎರಡೂ ಕಡೆ ಸಾಲುಗಟ್ಟಿ ನಿಂತಿರುವ ಹಳೆಯ ಮರಗಳು. ಇಂಥ ಸಾಯಂಕಾಲದಲ್ಲೇ ಎಲ್ಲರೂ ಮನೆಗೆ ಹೋಗಲು ಕಾತುರರಾಗುತ್ತಾರೆ, ಪಕ್ಷಿಯ ಮನಸ್ಸು ಗೂಡಿನ ಕಡೆಗೆ ಧಾವಿಸಲು ತುಡಿಯುತ್ತಿರುತ್ತದೆ. ಅನಂತರದ ದೃಶ್ಯವನ್ನು ನೋಡಿ ಅವನು ಮುಂದೇನಿದೆ ಅಂತ ಅಂದಾಜು ಮಾಡುತ್ತಾನೆ. ಸ್ವಲ್ಪ ದೂರದಲ್ಲಿ ಕಂಪೆನಿಯ ಸಾಮಿಲ್ಲಿನ ಸಣ್ಣ ಡಿಪೋ ಇದೆ, ಪಕ್ಕದಲ್ಲಿ ಕಾಡಿನ ಮಧ್ಯೆ ಕಂಪೆನಿಯ ಬಂಗಲೆ, ರಸ್ತೆಯಿಂದ ಸಾಕಷ್ಟು ದೂರದಲ್ಲಿ ಅದಕ್ಕೆ ಸೇರಿಕೊಂಡಂತಿರುವ ಕಾಂಪೌಂಡು. ಅದರೊಳಗೆ ಏನಿರಬಹುದೆಂದು ಅಂದಾಜು ಮಾಡಬಹುದು. ಎರಡೂ ಕಡೆ ಮಾವಿನ ಮರಗಳ ತೋಪು. ಅದಾದ ಮೇಲೆ ಗುಲಾಬಿ ಗಿಡಗಳು, -ಗಿಡಗಳು ಅಡ್ಡಾದಿಡ್ಡಿಯಾಗಿ ಬೆಳೆದುಕೊಂಡಿವೆ -ಲೆಕ್ಕವಿಲ್ಲದಷ್ಟು ಹೂವುಗಳು ಅರಳಿವೆ. ಯೋಚಿಸುತ್ತಿದ್ದಂತೆಯೆ ಆ ಬಂಗಲೆ ಹಿಂದಾಯಿತು. ಅದು ಹಿಂದಕ್ಕೆ ಹೋಗಿರ ಬಹುದು, ನಿಟ್ಟುಸಿರು ಬಿಟ್ಟು ನೋಡಲು ಆಗದಷ್ಟು ಹಿಂದುಳಿದಿರಬಹುದು. ಇದ್ದಕ್ಕಿದ್ದ ಹಾಗೆ ಎತ್ತರವಾದ ಸಾಗುವಾನಿ ಮರಗಳು ಸೆಟೆದು ತಲೆಯೆತ್ತಿ ನಿಂತಿರುವುದು ಕಾಣುತ್ತದೆ. ಎಡಗಡೆ ಅರ್ಧ ಒಡೆದ ಒಂದು ಸಣ್ಣ ಗುಡ್ಡ. ಯಾರೋ ಈ ಹೊತ್ತಿನಲ್ಲಿ ಅಲ್ಲಿ ಕರಡಿಗಳಿರುತ್ತವೆ ಅಂತ ಹೇಳಿದ್ದರು, ಇಲ್ಲೇ ಆ ಸಣ್ಣ ಮರಗಳ ನಡುವೆ ಒಂದು ಕಪ್ಪು ಕಲ್ಲನ್ನು ನೋಡಿ ಸರೋಜಿನಿ ಕೇಳುತ್ತಾಳೆ - "ಅಗೋ, ದೂರದಲ್ಲಿ ನೋಡಿ, -ಅದು ಕರಡಿಯೆ ?"

"ಎಲ್ಲಿ ?" ಕುತ್ತಿಗೆ ಬಗ್ಗುತ್ತಿದೆ, ಮೈಯಲ್ಲಿ ಬಿಸಿಯುಸಿರು, ಯಾರದು ? ಎಲ್ಲಿ ?

ಆಮೇಲೆ ಕಲ್ಲುಗಳ ಡಿಪೋ, ಕೂಲಿಗಳ ಕಾಲೋನಿಯಿಂದ ಸ್ವಲ್ಪ ದೂರದಲ್ಲಿ ಗುಡ್ಡದ ಕೆಳಗೆ ಸಣ್ಣ ಬಂಗಲೆ. ಹಿಂದುಗಡೆ ಒಂದು ಝರಿ ಹರಿಯುತ್ತಿದೆ. ಅಲ್ಲಿಯ ಮರದ ಮೇಲೊಂದು ವನದೇವತೆಯ ಪೀಠ ಇದೆ. ಮರಕ್ಕೆ ಒಂದು ಬೊಂಬನ್ನು ಕಟ್ಟಿ ಅದಕ್ಕೆ ಬಾವುಟ ಬಿಗಿದಿರುವುದು ರಸ್ತೆಯಿಂದಲೆ ಕಾಣುತ್ತದೆ. ಆ ಜಾಗದ ಗುರುತು. ಬಂಗಲೆಯ ಹಿಂದುಗಡೆ ಹರಿಯುತ್ತಿರುವ ತೊರೆಯ ಮೇಲುಗಡೆ ಎತ್ತರವಾದ ಕಲ್ಲುಬಂಡೆಯಿದೆ. ಪಗಡಮರದ ನೆರಳಿನಲ್ಲಿ ಬಂಡೆಯ ಮೇಲೆ ಕುಳಿತುನೋಡಿದರೆ ಝರಿಯಲ್ಲಿ ಸೂರ್ಯ ಮುಳುಗುವ ದೃಶ್ಯ ಸೊಗಸಾಗಿ ಕಂಡುಬರುತ್ತದೆ. ಮೀನುಗಳ ಆಟವನ್ನೂ ನೋಡಬಹುದು.

ಮಾತಿನಿಂದ ಮಾತು ನೆನಪಿಗೆ ಬರುತ್ತದೆ. ಹಳೆಯ ಮರೆತ ನೆನಪುಗಳು ಮತ್ತೆ ಹಸುರಾಗುತ್ತವೆ, ಹೂವಿನಂತೆ ಅರಳುತ್ತವೆ, ಆಮೇಲೆ ಏನೂ ಇಲ್ಲ. ಭಾನುಮತಿಯ ಆಟ. ಅದು ಮುಗಿದಿದೆ. ಶರ್ಮಾ ಇನ್ನಿಲ್ಲ, ರಣಜಿತ ಬಾಬುವೂ ಹೊರಟುಹೋದರು, ಬದುಕಿದ್ದೂ ಇಲ್ಲದಂತೆ. ಪ್ರಪಂಚದಲ್ಲಿ ಇಷ್ಟು ಜನರು, ಎಲ್ಲರೂ ಬೇರೆಯವರಿಗಾಗಿ ಬದುಕುವುದಿಲ್ಲ. ರಸ್ತೆಯಲ್ಲಿ ಹಾರುತ್ತಿದ್ದ ಧೂಳಿನೊಂದಿಗೆ ನೆನಪು ಸೇರಿಹೋಗುತ್ತದೆ. ಗಂಟೆ ಗಂಟೆಗಳಲ್ಲೇ ಉಂಟಾಗುವ ಪರಿಚಯ, ಗುರುತು ಪರಿಚಯವಿರುವ ಅದೆಷ್ಟು ಮಂದಿ. ರಸ್ತೆಯಲ್ಲಿರುವ ಲೆಕ್ಕಹಾಕಲಾಗದಷ್ಟು ಧೂಳಿನ ಕಣಗಳು, ಬೇರೆ ಮಾಡಲಾಗುವುದಿಲ್ಲ. ಹಾಗೆಯೆ ಬದುಕಿನಲ್ಲಿ ಎದುರಾಗುವ ಸ್ವಂತ ಅನುಭವಗಳಿಗೆ ಎಲ್ಲವೂ ಕನ್ನಡಿ ಹಿಡಿದಂತೆ

ಕಾಣಿಸುತ್ತದೆ. ಯಾವಾಗ ಯಾರ ಒಡನಾಟದಲ್ಲಿ, ಯಾವ ಭಾವನೆಯಲ್ಲಿ ಬೆಳಗಿನ ರಾತ್ರಿಯ ಬದುಕು, ಯಾವ ಬಣ್ಣ ತಳೆದಿತ್ತು, ರಸ್ತೆಯಂಚಿನಲ್ಲಿರುವ ಈ ಒಂದೊಂದು ಬಂಗಲೆಗಳಂತೆ ಅವೂ ಮರೆತುಹೋಗುತ್ತವೆ. ಬದುಕಿನ ಆಳ - ರಸ್ತೆಯ ಬದಿಯ ಛತ್ರ. ಅದೇ ಮನೆಯಾಗುತ್ತದೆ, ಹೊಸ ಯಾತ್ರಿಕರು ಬರುತ್ತಿರುತ್ತಾರೆ, ಹೋದವನು ಹೋದ.

ಮತ್ತೆ ಸಾಯಂಕಾಲ. ಪರಿಚಯವಿರುವ ಜಾಗಗಳ ಗುರುತುಗಳು ಬೆಳಕಿನಲ್ಲಿ ಮರೆಯಾಗಿ ಬೀಳ್ಕೊಟ್ಟು ಹೋಗುತ್ತವೆ, ಆಮೇಲೆ ಕಗ್ಗತ್ತಲೆ. ಮೋಟರು ಹೋಗುತ್ತಲೆ ಇದೆ. ಸರೋಜಿನಿಯ ದುಃಖದ ಕಡಲು ಕಡೆಯ ಕಟ್ಟೆಯನ್ನೂ ಒಡೆದು ಮುನ್ನುಗ್ಗಲು ಸಿದ್ಧವಾಗಿ ನಿಂತಿತು. ಬಲವಂತವಾಗಿ ಅದುಮಿಟ್ಟ ಪಶ್ಚಾತ್ತಾಪದ ಹಾಹಾಕಾರದ ಎದುರಿಗೆ ಇದು ಒಂದು ರೀತಿಯ ಜೀವಂತ ವ್ಯಕ್ತಿತ್ವದ ಪ್ರತಿಕ್ರಿಯೆ ಎಂಬಂತಿದೆ. ಎಲ್ಲ ಮುಗಿಯಿತೆಂದು ಯಾರು ಹೇಳಿದರು ? ಅವಳಿಗೆ ಒಳ್ಳೆಯ ಮೈಕಟ್ಟಿದೆ. ಆರೋಗ್ಯವಿದೆ, ಮೈಯಲ್ಲಿ ಬಲವಿದೆ, ಇವೆಲ್ಲಕ್ಕಿಂತ ಮಿಗಿಲಾಗಿ ಬದುಕಿನೊಡನೆ ಸಂಬಂಧವನ್ನು ಕಟ್ಟಿಕೊಂಡಿರುವ ಎಳೆಯೊಂದಿದೆ, -ಅದೇ ಅವಳ ಹೊಟ್ಟೆಯಲ್ಲಿರುವ ಮಗು. ಕಾಣದ ಆ ಮಗು ಅವಳ ಮನಸ್ಸನ್ನು ಚಂಚಲಗೊಳಿಸುತ್ತದೆ, ಆಲ್ಲೋಲ ಕಲ್ಲೋಲಗೊಳಿಸುತ್ತದೆ. ಆದರೂ ಉದಾಸೀನತೆಯನ್ನು ದೂರಮಾಡಿ ಮನಸ್ಸಿನೊಳಗಡೆ ನಾನಾ ರೀತಿಯ ಬಯಕೆಗಳನ್ನು ಅಲೆಅಲೆಯಾಗಿ ಹರಿಯಬಿಡುತ್ತಾಳೆ, ಕಲ್ಪನೆಯಲ್ಲೇ ತೃಪ್ತಿ ಪಡೆಯುತ್ತಾಳೆ.

ಕತ್ತಲೆಯ ಜೊತೆಯಲ್ಲೇ ಮನಸ್ಸಿನಲ್ಲಿ ಅದೇ ಬಯಕೆಯ ಉರಿ ಮೇಲೇಳುತ್ತದೆ. ಅವಳ ನೋಟ ಮಾಂಸಾಹಾರಿ ಪ್ರಾಣಿಯ ನೋಟದಂತೆ ಭುಗಿಲೇಳುತ್ತದೆ. ಶರ್ಮಾ ಹೊರಟು ಹೋದ, ಆದರೆ ಅವನ ಕಾರು ಅವಳ ಪಾಲಿಗಿದೆ. ಶರ್ಮಾ ಹೊರಟು ಹೋದ, ಆದರೆ ಅವಳು ತಾನೇ ಅವನಾಗಿಲ್ಲವೆ. ಈ ಇಡೀ ಪ್ರಪಂಚ ಇರೋದೇ ಭೋಗಪಡುವುದಕ್ಕಾಗಿ, ಆದರೆ ಭೋಗದ ಫಲ ಕೇವಲ ತನ್ನಲ್ಲೇ ಉಂಟಾಗುವುದು. ಶರ್ಮಾ ಹೋಗಲಿ ಬಿಡಿ, ರಣಜಿತ ಬಾಬು ಹೋಗಲಿ ಬಿಡಿ, ಎಲ್ಲ ಒಂದು ನೆನಪಷ್ಟೆ. ಆ ನಿಮಿತ್ತವನ್ನೇ ಉರುವಲಾಗಿ ಮಾಡಿಕೊಂಡು ಭೂಮಿ ಯಾವತ್ತೂ ಹಸುರಾಗಿರುತ್ತದೆ, ಹಾಗೆಯೆ ತಾನೇ ಬೆಂಕಿಯಂತಿರುತ್ತದೆ.

ಬಿಸಿನೆಲದಂತೆ ಅವಳು ಎಲ್ಲವನ್ನೂ ಕಲಿಯಬಯಸುತ್ತಾಳೆ. ಅನಂತರ ಮಾತೃ ಸ್ವರೂಪಳಾದ ಹೆಣ್ಣಿನ ತೃಷೆ, ಒಮ್ಮೆ ಮೇಲೆದ್ದ ಕೂಡಲೇ ಕಲಿಯಬಯಸುತ್ತಾಳೆ, ಆದರೆ ಯಾರಿಗಾಗಿ ? ಕತ್ತಲೆ ರಸ್ತೆಯಲ್ಲಿ ಕಾರು ಭರದಿಂದ ಸಾಗುತ್ತಿದೆ. ಬೆಳಕಿನಲ್ಲಿ ರಸ್ತೆ ತೆರೆಯುತ್ತಿದ್ದಂತೆಯೆ ಮರೆಯಾಗುತ್ತಾ ಹೋಗುತ್ತದೆ. ಮತ್ತೂ ಎದುರಾಗತ್ತಲೇ ಹೋಗುತ್ತದೆ. ಉದ್ದಕ್ಕೂ ಹರಡಿಕೊಂಡಿರುವ ರಸ್ತೆ.

ಬಿಸಿಮೈಯಿಂದ ಉಸಿರಾಡುತ್ತಾ ಭಾವನೆಗಳ ಮಹಾಪೂರದಲ್ಲಿ ಸರೋಜಿನಿ ಮತ್ತೆ ಅದೇ ಹಳೆಯ ಊರಿನತ್ತ ಹೊರಟಿದ್ದಾಳೆ. ತನ್ನ ಚಿಕ್ಕ ಹಳೆಯ ಮನೆ ಎದುರಿಗೆ ಕಾಣುತ್ತಿದೆ, ಆ ಕಾಲೇಜು ಹುಡುಗ, ವ್ಯಾಯಾಮ ಮಾಡುತ್ತಿದ್ದ, ಕೊಳಲು ಬಾರಿಸುತ್ತಿದ್ದ. ಒಮ್ಮೆ ಯಾರೋ ಒಬ್ಬರು ಕರೆದಂತಾದರೆ ಮನಸ್ಸಿನ ಪಟಲದಲ್ಲಿ

ಇನ್ನೊಬ್ಬರು ಕಾಣಿಸಿಕೊಳ್ಳುತ್ತಿದ್ದರು, - ಜೋಳಿಗೆ ಓಡಿದು ಹತ್ತು ಮನೆಗಳಿಗೆ ಅಲೆದಾಟ - ಮೇಲಧಿಕಾರಿ ಮಹಾಪಾತ್ರ. ಆಗ ಅವಳು ಕೇವಲ ನೋಡಿದ್ದಳು, ಮನಸ್ಸಿನ ಕಿಟಕಿ ಮುಚ್ಚಿತ್ತು. ತೆರೆದಿರಲಿಲ್ಲ, ಆದರೂ ಗಹನವಾದ ಮನಸ್ಸಿನ ಸೂಚನೆಯ ಅಂತರಾರ್ಥ ಇದ್ದಕ್ಕಿದ್ದಂತೆ ಗೋಚರವಾಯಿತು. ಇಲ್ಲ, ಹಿಂದಿನ ಘಟನೆಗಳನ್ನು ಸ್ಪರ್ಶಿಸಿದರೆ ಇವತ್ತಿನ ಹೊಸ ಕಣ್ಣುಗಳು ಹಳೆಯದಕ್ಕಾಗಿ ಚಡಪಡಿಸುತ್ತವೆ. ಅದರಲ್ಲಿ ಅವಳಿಗೆ ಸ್ವಾರ್ಥವೇ ಕಾಣುತ್ತದೆ, ಹಳೆಯ ವಿಚಾರಗಳೆಲ್ಲ ಮತ್ತೆ ಸುಳಿಯುತ್ತವೆ, ಮತ್ತೆ ಆ ಊರಿನ ಕಡೆ ಬರುತ್ತವೆ, ಆದರೆ ಬೇರೆ ಪರಿಸ್ಥಿತಿಯಲ್ಲಿ ಕಳೆದುಹೋದದ್ದೆಲ್ಲ ಹೋದಂತೆಯೆ ಸರಿ. ಆದರ ಪ್ರತ್ಯಕ್ಷದರ್ಶಿಯಾಗಿ ಅವಳೇ ಇದ್ದಾಳೆ. ಭವಿಷ್ಯದಲ್ಲಿ ಹೀಗೂ ಸಹ ಆಗಬಹುದು,-

ಸುಮಾರು ರಾತ್ರಿ ಒಂಬತ್ತು ಗಂಟೆ, ಊರಿನ ದೀಪಗಳು ಕಾರಿನ ಕಡೆಗೆ ಓಡಿಬರುತ್ತಿವೆ. ಕುತ್ತಿಗೆಗೆ ಬೆಳಕಿನ ಹಾರ ಹಾಕುವಂತೆ ಕಾಣುತ್ತವೆ. ಬಲಿದತ್ತ ಇದ್ದಕ್ಕಿದ್ದಂತೆಯೆ ಕೇಳಿದ, "ಮಲಗಿಬಿಟ್ಟೆಯಾ ಸರೋಜ ?"

"ಇಲ್ಲ-"

"ಹಾಗಾದರೆ ಎದ್ದಿದ್ದೀಯ ? ಇಡೀ ರಸ್ತೆಯುದ್ದಕ್ಕೂ ಸುಮ್ಮನೆ ಕುಳಿತಿದ್ದೀಯಲ್ಲ, ಚೆನ್ನಾಗಿ ವಿಶ್ರಾಂತಿ ಸಿಕ್ಕಿತಾ, ಹೇಗೆ ? ಡಾಕ್ಟರು ಹೇಳ್ತಾರೆ ಚೆನ್ನಾಗಿ ವಿಶ್ರಾಂತಿ ತೊಗೋಬೇಕು ಅಂತ. ನಿನ್ನ ದೇಹ ಸ್ಥಿತಿ ನೋಡಿದರೆ ಹೀಗೆ, ಈ ರಸ್ತೆಯೂ ಬಹಳ ದೂರ. ಏನಾದರೂ ಒಟ್ಟಿನಲ್ಲಿ, ಪ್ರಾರಂಭದಲ್ಲೇ ಹೊಸಕಾರು ಬಳಸುವ ಹಾಗಾಯಿತಲ್ಲಾ. ಈ ಕಾರಿನಲ್ಲಿ ಒಂದು ಲೋಟ ನೀರಿಡಿ, ಅದೂ ಅಲುಗಾಡೊಲ್ಲ ಅಂತಾರೆ ಜನ. ಹಾಗಿದೆ ಈ ಕಾರು. ನಿನಗೆ ಹೇಗನಿಸುತ್ತೆ ? ಮನೆ ಇನ್ನೇನು ಹತ್ತಿರ ಬಂತಲ್ಲ."

ಅಗೋ ಅಲ್ಲೇ ಪರಿಚಯವಿರುವ ಮನೆ ಕಣ್ಣಿಗೆ ಬೀಳುತ್ತದೆ. ಬಲಿದತ್ತನ ಕಚೇರಿ. ಅದಾದ ಮೇಲೆ ಊರಿಗೆ ಹತ್ತಿರವಿರುವ ಸಣ್ಣದಾರಿ. ಅದರ ಎರಡೂ ಕಡೆ ಮನೆಗಳು. ಅದರ ಕೊನೆಯಲ್ಲೇ ಬಲಿದತ್ತನ ಹಳೆಯ ಮನೆ. ಅದರ ಬಾಗಿಲಿನ ಬಳಿ ಕಿತ್ತಲೆಹಣ್ಣಿನ ಗಿಡಗಳು, ಪರಂಗಿ ಗಿಡಗಳು, ಪಕ್ಕದಲ್ಲೇ ಅಡುಗೆಮನೆ, ಮನೆಯಾಕೆಯಾದ ಸರೋಜಿನಿಯ ಕಾರ್ಯಕ್ಷೇತ್ರ. ಹಳೆಯ ಕೊಳದ ನೀರಿನಲ್ಲಿ ಅದ್ದಿದ ಹೂವಿನ ಕಳದ ಸುವಾಸನೆಯಂತೆ ಹಳೆಯ ಬದುಕಿನ ನೆಮ್ಮದಿ ಅವಳನ್ನು ಆವರಿಸಿದಂತಾಗುತ್ತದೆ.

ಕಣ್ಣೆವೆಗಳು ಮುಚ್ಚುತ್ತವೆ.

ಹಸುಗಳ ಜಾತಿಯಂಥ ಉದಾಸೀನವಾದ ಏರುಪೇರಿಲ್ಲದ ಬದುಕು, - ಕಣ್ಣುಗಳು ಮುಚ್ಚಿರುವುದೇನೊ ಸರಿ, ಆದರೆ ಅಲ್ಲಿ ಉತ್ತರಿಸಲಾಗದ ಪ್ರಶ್ನೆಗಳ ಬಿರುಗಾಳಿ ಯೆಬ್ಬಿಸಿ ಅದರೊಟ್ಟಿಗೆಯೆ ಪ್ರಪಂಚದ ಮುಂದೆ ಪ್ರದರ್ಶನ ಮಾಡುವುದಕ್ಕೋಸ್ಕರ ಗದ್ದಲತುಂಬಿದ ಗಡಿಬಿಡಿಯ ಓಡಾಟವಿಲ್ಲ, ಮೆಚ್ಚಿನದೇನೂ ಇಲ್ಲ, ಆದರೆ ಅವು ರುಚಿಕರವಾಗಿಯಂತೂ ಇವೆ. ಕಾರು ತಿರುಗುತ್ತಿದೆ. ಸರೋಜಿನಿ ನೋಡಿದಳು. ಎಡಗಡೆ ಅದೇ ಪರಿಚಯವಿರುವ ರಸ್ತೆ. ಹಿಂದುಗಡೆ ನೋಡಿ ಸರೋಜಿನಿ ಜೋರಾಗಿ ಕೂಗಿ ಹೇಳಿದಳು-

"ಆ ಕಡೆ ಎಲ್ಲಿಗೆ ? ರಸ್ತೆ ಮರೆತು ಹೋಯಿತಾ ? ಡ್ರೈವರ್, ಎಡಕ್ಕೆ ತಿರುಗಲಿ,

ಮನೆ ಹಿಂದೆಯೆ ಇದೆ."

ಕಾರು ಹಾಗೆಯೆ ಮುಂದುವರಿಯಿತು. ಜೋರಾಗಿ ನಗುತ್ತಾ ಬಲಿದತ್ತ ಉತ್ತರ ಕೊಟ್ಟ- "ಸರಿ, ಸರಿ, ಹೋ, ಹೋ-ಸರೋಜ, ಮತ್ತೆ ಅದೇ ಇಕ್ಕಟ್ಟಾದ ಓಣಿಗೇ ಹೋಗಬೇಕೆನ್ನುತ್ತೀಯಾ? ನೀನು ಯಾರು ಅಂತ ಮರೆತೇಬಿಟ್ಟೆಯಾ! ದೊಡ್ಡ ಸಾಹೇಬರ ಬಂಗಲೆ, ನಮ್ಮ ಬಂಗಲೆ ಇನ್ನೂ ಮುಂದಿದೆ. ನಾವು ಈಗ ಸೇರಬೇಕಾದ ಜಾಗಕ್ಕೇ ಬಂದು ಸೇರಿದ್ದೇವೆ. ನೋಡು, ಅದೇ ನಮ್ಮ ಮನೆ, ಮತ್ತೆಲ್ಲಿಗೆ ಹೋಗಬೇಕೆನ್ನುತ್ತಿ?

ಸರೋಜಿನಿಯ ಮೈಯಲ್ಲಿ ಮಿಂಚು ಹರಿದಂತಾಯಿತು. ನಿಜ, ಅವಳ ಸ್ಥಾನಮಾನ ಬದಲಾಗಿದೆ. ನೆಟ್ಟಗೆ ಕುಳಿತು ಅವಳು ಬಿಗುಮಾನದಿಂದ ಮುಂದಿನ ಕಾಂಪೌಂಡಿನ ದೊಡ್ಡ ಬಾಗಿಲಿನ ಕಡೆ ನೋಡತೊಡಗಿದಳು.

ಆಫೀಸು ಮನೆಯ ಹತ್ತಿರದಲ್ಲೇ ಇರುವ ಒಂದು ಸಣ್ಣ ತೋಟ. ಯಾರ ಪೋಷಣೆಯಲ್ಲೂ ಬೆಳೆದುದಲ್ಲ, ಆದರೆ ಕಂಪೆನಿಯ ದೊಡ್ಡ ಸಾಹೇಬರ ದೊಡ್ಡಸ್ತಿಕೆಯ ಗುರುತು. ಅಲ್ಲಿ ಕುಳಿತುಕೊಳ್ಳುವುದಕ್ಕೆ ಕಲ್ಲಿನ ಆಸನವಿದೆ, ಓಡಾಡುವುದಕ್ಕೆ ಮಣ್ಣಿನ ರಸ್ತೆಯೂ ಇದೆ, ಯಾರೂ ಬೇಕಾದರೂ ತೋಟದಲ್ಲಿ ಸುತ್ತಾಡುತ್ತಾ ಹಾಗೆಯೆ ಧೂಳು ಕುಡಿಯಬಹುದು. ಏಕೆಂದರೆ ತೋಟದ ನಡುವೆ ಎತ್ತರವಾದ ಕಟ್ಟಡದ ಆ ಕಡೆಯಿರುವ ಗ್ಯಾರೇಜಿಗೆ ಹೋಗುವ ದಾರಿ ಈ ಮೂಲಕವೇ ಹೋಗುತ್ತದೆ. ಎಲ್ಲ ವಾಹನಗಳೂ ಇದೇ ದಾರಿಯಲ್ಲಿ ಹೋಗುವುದು. ಸಾಕಷ್ಟು ಹೊತ್ತು ಇರುವವರು ಹಾಗೆಯೆ ಓಡಾಡುತ್ತಾ ತೋಟ ನೋಡಬಹುದು. ಸಣ್ಣಸಣ್ಣದಾಗಿ ಮಾಡಿರುವ ಕಾಲು ರಸ್ತೆಯ ನಡುನಡುವೆ ಮುದುಡಿ ಮಲಗಿರುವ ಹುಲ್ಲಿನನೆಲ, ಕೆಲವು ಕಡೆ ಗುಂಡಾಗಿದ್ದರೆ ಮತ್ತೆ ಕೆಲವು ಕಡೆ ತ್ರಿಕೋನಾಕಾರದಲ್ಲಿವೆ. ಕೆಲವೆಡೆಗಳಲ್ಲಿ ಹಕ್ಕಿಯಂತಿದ್ದರೆ ಇನ್ನು ಕೆಲವೆಡೆಗಳಲ್ಲಿ ವೀಳೆಯದೆಲೆಯಂತಿದೆ, ಗೊತ್ತಾಗದಿದ್ದ ಕಡೆ ತೋಟಗಾರನನ್ನು ಕೇಳಿದರೆ ಅದನ್ನು ನವಿಲಿನಂತೆ ಕತ್ತರಿಸಿದೆ, ಇದನ್ನು ಆನೆಯಂತೆ ಕತ್ತರಿಸಿದೆ ಎಂದೆಲ್ಲ ಹೇಳುತ್ತಾನೆ. ಅಲ್ಲಲ್ಲಿ ಕುಂಡಗಳಲ್ಲಿ ಜೀವವೇ ಇಲ್ಲದಿರುವಂತಹ ಗಿಡಗಳಿವೆ, ಅಲ್ಲಲ್ಲಿ ಆಯಾ ಋತುಗಳಲ್ಲಿ ಬಿಡುವಂತಹ ಹೂಗಿಡಗಳಿವೆ, ಅಂಥ ವಿಶೇಷವಾಗಿ ಅರಳಿಲ್ಲ. ಕೆಲವು ಪೊದರುಗಳಲ್ಲಿ ಹೂವುಗಳು ಇಣುಕುತ್ತಿವೆ. ಕೆಲವು ಕಡೆ ಕೆಂಪು ಕಣಗಿಲೆ ಹೂವುಗಳು. ಎಲೆಗಳಿಂದ ತುಂಬಿದ ಮಂದಾರ, ಕಾಲುದಾರಿಯ ಅಂಚಿನಲ್ಲಿ ಕ್ಯಾನಾ, -ಅರ್ಧಮರ್ಧ ಒಣಗಿದ ಎಲೆಗಳ ಮೇಲೆ ಗುಂಡಾಗಿರುವ ಹಣ್ಣುಗಳು ಅಲ್ಲಲ್ಲಿ ಬಿಟ್ಟಿವೆ. ಒಣಗಿದ ಮರಗಿಡಗಳ ಬುಡ ಅಲ್ಲಲ್ಲಿ ಕಣ್ಣಿಗೆ ಬೀಳುತ್ತವೆ. ತೋಟಗಾರ ಹೇಳುತ್ತಾನೆ, ಇಲ್ಲಿಗೆ ನೀರು ಒದಗಿಸುವುದು ತುಂಬ ಕಷ್ಟ. ಬಹಳ ದೂರದಿಂದ ಹೊತ್ತುಕೊಂಡು ಬರಬೇಕಾಗುತ್ತೆ. ಇಷ್ಟರ ಮೇಲೆ ಕಂಪೆನಿಯ ದುಡ್ಡು ಇಷ್ಟೊಂದು ಪೋಲಾಗುತ್ತದೆ. ಅಂಥ ನೌಕರರ ಗೊಣಗಾಟ ಬೇರೆ. ಇಷ್ಟೇ ಸಾಲದು ಎಂಬಂತೆ ಆಡುಗಳು ಬೇರೆ,

ಮಾಲಿ ಅದಕ್ಕೆ ಸಾಕ್ಷ್ಯ ಒದಗಿಸುವಂತೆ ಒಂದು ಕೊಟ್ರಿಗೆ ಬೇರೆ. ಅಲ್ಲಿ ಅನೇಕ ಕೋಲುಗಳನ್ನೇ ನೆಟ್ಟಿದ್ದಾರೆ. ಈ ಕೋಲುಗಳಿಗೂ ಉಳಿಗಾಲವಿಲ್ಲ, ಯಾರೂ ಬರದಿದ್ದರೂ ಚಕ್ಕೆ ಆರಿಸುವ ಹುಡುಗಿಯರಾದರೂ ಅವನ್ನು ಹಾರಿಸಿಕೊಂಡು ಹೋಗುತ್ತಾರೆ ಅಂತ ತೋಟಗಾರ ಹೇಳುತ್ತಾನೆ. ಇದೇ ತೋಟ, -ಇದಕ್ಕೆ ಒಂದು ದೊಡ್ಡ ಮರದ ಬಾಗಿಲಿದೆ, ಅದಕ್ಕೆ ಬೀಗ ಬಿದ್ದಿರುತ್ತದೆ.

ಕೆಲಸಮಾಡಿ ದಣಿದ ನೌಕರರು ತೋಟದಲ್ಲಿ ಓಡಾಡಿ ಕಣ್ಣು ಮನಸ್ಸುಗಳನ್ನು ತೃಪ್ತಿಪಡಿಸಿಕೊಂಡು ಹೊಸ ಉತ್ಸಾಹ ತುಂಬಿಕೊಂಡು ಕೆಲಸಮಾಡಲಿ ಅನ್ನುವ ಉದ್ದೇಶದಿಂದ ತೋಟವನ್ನು ಬೆಳೆಸಲಾಗಿತ್ತು. ಆದರೆ ಕುರ್ಚಿಗೆ ಅಂಟಿ ಕುಳಿತ ಕೆಲಸಗಾರರಿಗೆ ಮೇಲೇಳುವುದಕ್ಕಿರಲಿ, ತುರಿಸಿಕೊಳ್ಳಲೂ ಪುರುಸೊತ್ತಿರುತ್ತಿಲ್ಲ. ತೋಟ ಸಹ ಅವರನ್ನೇ ಪ್ರತಿನಿಧಿಸುವಂತಿದೆ - ಅರ್ಧ ಬದುಕಿದ ಹಾಗೆ, ಅರ್ಧ ಸತ್ತ ಹಾಗೆ, ಒಣಗಿದ ಹಾಗೆ, ಬೆಳವಣಿಗೆ ಇಲ್ಲದ ಹಾಗೆ.

ಹೊಸ ಸಾಹೇಬರಿಗೆ ಸ್ವಾಗತ ಸಮಾರಂಭ. ಅಭಿನಂದನೆ. ತೋಟದಲ್ಲಿ ಕುರ್ಚಿಮೇಜುಗಳನ್ನು ಅಣಿಮಾಡಿಡಲಾಗಿದೆ. ಎಲ್ಲರೂ ಗಡಿಬಿಡಿಯಲ್ಲಿದ್ದಾರೆ. ತೋಟದ ಹುಲ್ಲುಹಾಸಿನ ಮೇಲೆ ಕಂಪೆನಿಯ ಕೆಲಸಗಾರರು. ಇಲ್ಲೂ ಸಹ ಮುಖನೋಡಿ ಮಣೆ ಹಾಕುತ್ತಾರೆ. ದೊಡ್ಡ ಸಾಹೇಬರು, ಪಕ್ಕದಲ್ಲಿ ಅವರಿಗಿಂತ ಸಣ್ಣವರು, ಅದಕ್ಕಿಂತ ಸ್ವಲ್ಪ ದೂರದಲ್ಲಿ ಪರಂಗಿಯವರು, ಹೀಗೇ ಸಾಗುತ್ತದೆ. ಆಮೇಲೆ ಆಳುಗಳ ಸಾಲು.

ಚಹಾ ಪಾರ್ಟಿ. ಅನೇಕ ವಿಧವಾದ ಬೊಗಳೆ ಮಾತುಗಳು. ಆಮೇಲೆ ಅಭಿನಂದನ ಭಾಷಣ ಹಾಗೂ ಅದಾದ ಮೇಲೆ ಅಭಿನಂದನೆಗೆ ಉತ್ತರ.

ಇದೇ ಅವನ ಸೈನ್ಯ-ಬಲಿದತ್ತ ಕಣ್ಣಾಡಿಸಿದ-ಎಲ್ಲರೂ ಅವನ ಕೈಕೆಳಗಿನವರು. ಅದೆಷ್ಟು ಬೇಗ ಎಲ್ಲ ಬದಲಾಯಿಸುತ್ತದೆ. ಅನೇಕ ಮಂದಿ ಪರಿಚಿತರ ಹಾಗೆ ಕಾಣುತ್ತಾರೆ, ಕೆಲವರಂತೂ ತುಂಬ ಪರಿಚಿತರು, ಉಳಿದವರೆಲ್ಲ ಹೊಸಬರು. ಹಳಬರಾದರೂ ಎಲ್ಲ ಹೊಸಬರು, ಅವನು ಪರಿಚಯಕ್ಕಾಗಿ ಹಾತೊರೆಯುತ್ತಿಲ್ಲ, ಅದರಿಂದ ಶಿಸ್ತು ಸಡಿಲವಾಗಬಹುದು. ಬಲ್ಲವರನ್ನು ನೋಡಿಯೂ ಕೂಡ ಅವನು ಅವರೊಂದಿಗೆ ಯಾವ ಮಾತನ್ನೂ ಆಡಲಿಲ್ಲ. ಆದರೆ ಮನಸ್ಸಿನಲ್ಲಿ ಎರಡು ಆಲೋಚನೆಗಳು ಸುಳಿದಾಡುತ್ತಿವೆ - ಪತ್ತಿರದಲ್ಲೇ ಎಲ್ಲರ ಮೇಲೆ ಅಧಿಕಾರದ ಹೊಸ ನೋಟದ ಅನುಭವ, ಕಣ್ಣುಗಳು ಆ ಅನುಭವದಲ್ಲಿ ಅರಳುತ್ತವೆ. ನಾನೂ ಇಲ್ಲಿ ದೊಡ್ಡ ಮನುಷ್ಯ ಅಂತ ಸಾರಿ ಹೇಳುತ್ತವೆ, - ಹಾಗೆಯೇ ಹಳೆಯ ನೆನಪುಗಳು, ಆ ಗಿಜಿಬಿಜಿ ಗುಂಪಿನಿಂದ ಮೇಲೇರಿ ಮೆಟ್ಟಲಾದ ಮೇಲೆ ಮೆಟ್ಟಲು ಹತ್ತಿ ಈ ಸ್ಥಿತಿ ಮುಟ್ಟಿದ್ದು. ಅವರೇನು ಯೋಚಿಸುತ್ತಿರಬಹುದು ? ಹೊಟ್ಟೆಕಿಚ್ಚೆ ? ಹೊಗಳಿಕೆಯೆ ? ಕುತೂಹಲವೆ ? ಎಷ್ಟು ಅದುಮಿಟ್ಟರೂ ಅಡಗಿಸಲಾಗುವುದಿಲ್ಲ. ಇವನೇ ಅಲ್ಲವೆ,-

"ವೆಂಕಟರಾವ್ ?"

"ಯಸ್ ಸರ್". ಅವನ ನಾಲಗೆಯ ಮೇಲೆ 'ಸರ್' ಶಬ್ದ ಎಷ್ಟು

ಮಧುರವಾಗಿರುತ್ತದೆ, ವೆಂಕಟರಾವ್ ಅಧೀನತೆಯ ಅವತಾರವೇ ಸರಿ. ಅದು ಹೇಗೆ ಬಗ್ಗಿದೆ ಅವನ ಮೈ, ನೋಟ ಕೆಳಗೆ, ಆಮೇಲೆ ?

"ವೆಂಕಟರಾವ್".

"ಯಸ್ ಸರ್!"

"ಎಲ್ಲ ಸರಿಯಾಗಿದೆ ತಾನ ?"

"ತಮ್ಮ ದಯೆಯಿಂದ ಎಲ್ಲ ಸರಿಯಾಗಿದೆ ಸರ್!"

ಬನು ಎಲ್ಲಿದ್ದಾನೆ. ಬಲಿದತ್ತ ನಾಲ್ಕೂ ಕಡೆ ಕಣ್ಣಾಡಿಸುತ್ತಾ ಅವನಿಗಾಗಿ ಹುಡುಕಾಡುತ್ತಿದ್ದಾನೆ. ಅವನ ಹಳೆಯ ಸಹೋದ್ಯೋಗಿ. ಬನಬಿಹಾರಿ ಪಟ್ಟನಾಯಕ ಈ ಗುಂಪಿನಲ್ಲಿ ಕಾಣಿಸುತ್ತಿಲ್ಲ. ನಿಜ, ತುಂಬ ದಿನದಿಂದ ಅವನ ವಿಚಾರವೇ ಗೊತ್ತಾಗಲಿಲ್ಲ. ದೊಡ್ಡಸ್ತಿಕೆಯಿಂದ ಒಂದೆರಡು ತಿಳಿವಳಿಕೆ ಮಾತುಗಳನ್ನು ಹೇಳಬಹುದಿತ್ತು, - "ಬನೂ, ಈ ದಾರಿ ಬಿಟ್ಟುಬಿಡು, -ಸ್ವಲ್ಪ ಮೆತ್ತಗೆ ನಡೆದುಕೊ. ಹಟ ಹಿಡಿದರೆ ಏನೂ ಪ್ರಯೋಜನವಾಗೋದಿಲ್ಲ-"

ಉಪದೇಶ ಮಾಡುತ್ತಾನೆಯೆ ?

ಇಲ್ಲ, ಈಗ ಅವನು ಆ ಮಟ್ಟದಲ್ಲಿಲ್ಲ. ಅವನು ಗಂಭೀರವಾಗಿರುತ್ತಾನೆ. ಆಡಳಿತ ನಡೆಸುವ ಜವಾಬ್ದಾರಿಯಿರುವುದರಿಂದ ನಾಲ್ಕಾರು ಕಠಿಣವಾದ ಮಾತುಗಳನ್ನಾಡುವನು-"ಈ ರೀತಿ ನಡೆದುಕೊಂಡರೆ ನಾವು ಬಿಗಿಯಾದ ಕ್ರಮ ಕೈಗೊಳ್ಳಬೇಕಾಗುತ್ತೆ. ಏನಂತೀರಿ ? ಕಂಪೆನಿಯ ಕೆಲಸದಲ್ಲಿ ಶಿಸ್ತು ಇರಲೇಬೇಕಲ್ಲವೆ ? ನನ್ನ ಜಾಗದಲ್ಲಿ ಬೇರೆ ಯಾರಿದ್ದರೂ ಸರಿ, ಏನು ಮಾಡುತ್ತಿದ್ದರು ನೀವೇ ಹೇಳಿ ?"

ಮನಸ್ಸಿನಲ್ಲಿ ಈ ಮಾತುಗಳನ್ನಾಡಿಕೊಳ್ಳುತ್ತಿದ್ದಂತೆಯೆ ಅವನ ತುಟಿಗಳು ಅದುರುತ್ತವೆ, ಹುಬ್ಬುಗಳು ಕಿವಿಗಳ ಕಡೆ ಸಟೆದುಕೊಳ್ಳುತ್ತವೆ. ಗುಂಪಿನ ಕಡೆ ಉರಿಯುತ್ತಿರುವ ನೋಟ ಬೀರುತ್ತಾನೆ. ಇಲ್ಲ, ತಾನು ಇಷ್ಟು ಸಡಿಲವಾಗುವುದಿಲ್ಲ. ಪರಿಚಯದ ಲಾಭ ಗಿಟ್ಟಿಸಲು ಒಬ್ಬ ಬರುತ್ತಾನೆ, ಹೊಟ್ಟೆ ಪಾಡಿನ ಗೋಳು ಹೇಳಿಕೊಂಡು ಮನಸ್ಸು ಕರಗುವಂತೆ ಮಾತಾಡುತ್ತಾ ಇನ್ನು ಕೆಲವರು ಬರುತ್ತಾರೆ, ಸಂಬಳ ಸಾಕಾಗೋದಿಲ್ಲ, ಕೆಲಸ ಜಾಸ್ತಿ, ಮನೇಲಿ ಅಕ್ಕಿ ಇಲ್ಲ, ಹೆಂಡತಿಯದು ಬಸಿರ್ಗೈ, ಮಕ್ಕಳು ನಾಲಾಯಕ್ಕು - ಆ ಕಡೆಗೆಲ್ಲ ಗಮನ ಕೊಡೋದಕ್ಕೆ ವೇಳೆಯಿಲ್ಲ. ಅದೇ ಹಳೆಯ ತರ್ಕ, ಅದರಲ್ಲಿ ಹೆಚ್ಚು ನಿಜವಿದ್ದಿರಲೂಬಹುದು.

ಆದರೆ ತಾನು ಸ್ವಲ್ಪವೂ ಮೆತ್ತಗಾಗುವುದಿಲ್ಲ. ಎಷ್ಟು ಪರಿಚಯವಿದ್ದರೇನಂತೆ. ಅವನ ಆಡಳಿತದಲ್ಲಿ ಬನುವಿಗೂ ಯಾವ ವಿನಾಯಿತಿಯೂ ಇಲ್ಲ. ಇದೋ ನೋಡು, ಮೊದಲೇ ಅಸಡ್ಡೆ ಮಾಡಿದ, ಎಲ್ಲಿ, ಅವನು ಕಾಣುತ್ತಲೇ ಇಲ್ಲವಲ್ಲ. ಕಷ್ಟ ಸುಖ ಕೇಳೋದಿರಲಿ, ಅಭಿನಂದಿಸುವುದಿರಲಿ, ಅವನ ಸುಳಿವೇ ಇಲ್ಲವಲ್ಲ. ಬಹುಶಃ ಎಲ್ಲೋ ಬೀಡಿ ಎಳೆಯುತ್ತಾ ಬಂಡಾಯದ ಬಗ್ಗ ಭಾಷಣ ಹೊಡೆಯುತ್ತಿರಬಹುದು. ಟಿಸ್ ಅನ್ನುವ ಪಟಾಕಿಗಳು, ಅದೇ ಅವನಿಗೆ ಇಷ್ಟವೇನೊ. ಬಿರುಸಿನ ಪ್ರಚಾರದಿಂದ ಈ ಟಿಸ್ ಅನ್ನುವ ಪಟಾಕಿಗಳು ಒಂದಲ್ಲ ಒಂದುದಿನ ಸಿಡಿಯುವ ಪಟಾಕಿಗಳೂ ಆಗಬಹುದು-ಬಲಿದತ್ತ ಗಂಭೀರವಾಗಿ ಯೋಚಿಸ ತೊಡಗಿದ. ಎಲ್ಲೋ ಸ್ವಲ್ಪ ಬೆಂಕಿ ಅಂತ ಉದಾಸೀನ ಮಾಡೋ ಹಾಗಿಲ್ಲ. ಆಮೇಲೆ

ಹಬ್ಬುತ್ತದೆ, ಕಂಪನಿಗೆ ಕೋಟ್ಯಂತರ ರೂಪಾಯಿ ನಷ್ಟ. ಮೊದಲಿನಿಂದಲೇ ಎಚ್ಚರಿಕೆಯಿಂದಿರುವುದು ಬುದ್ಧಿವಂತಿಕೆಯ ಕೆಲಸ, - ಆದ್ದರಿಂದ.

ಕುತ್ತಿಗೆಗೆ ಹೂವಿನ ಹಾರಗಳು ಬೀಳುತ್ತವೆ. ಭಾಷಣ ಕೇಳುತ್ತಿದ್ದಾನೆ. ಸಂತೋಷದ ಮುಗುಳ್ನಗೆ ಬೀರಲೇಬೇಕು, ಸರೋಜಿನಿ ಬಂದಿದ್ದರೆ ಹೇಗಿರುತ್ತಿತ್ತು ಅಂತ ಯೋಚಿಸುತ್ತಾನೆ, ಬರಬಹುದಾಗಿತ್ತು. ಇಂಥ ಸಾಮಾಜಿಕ ಸಮಾರಂಭಗಳೆಂದರೆ ಅವಳಿಗೇ ಸರಿ. ಅವಳ ಮುಖದಲ್ಲಿ ಮೋಹಿನಿ ಶಕ್ತಿಯಿದೆ. ಯೋಚಿಸುತ್ತಿದ್ದಂತೆಯೆ ಮುಖದಲ್ಲಿ ಮುಗುಳ್ನಗೆ ತುಂಬುತ್ತದೆ. ಹಳಸಿ ಗೊಡ್ಡಾಗಿರುವ ಅಭಿನಂದನೆಯ ಅದೇ ಮಾತುಗಳಿಗೆ ಕಿವಿಕೊಡುತ್ತಿದ್ದಾನೆ-

"ತಮ್ಮ ಸಹೃದಯತೆ, ತಮ್ಮ ಮಾನವೀಯತೆ, ಕೆಳಗಿನ ನೌಕರರ ಬಗ್ಗೆ ತಮ್ಮಲ್ಲಿರುವ ಅಪಾರವಾದ ಸ್ನೇಹ, ಸಹಾನುಭೂತಿ ಯಾರಿಗೆ ತಾನೆ ಗೊತ್ತಿಲ್ಲ. ಅಲ್ಲದೆ ತಮ್ಮ ಕಾರ್ಯಕುಶಲತೆ, ತಮ್ಮ ಅಪಾರ ದಕ್ಷತೆ, ತೀಕ್ಷ್ಣಬುದ್ಧಿ, ಔದಾರ್ಯ, ದೂರಾಲೋಚನೆಯಿಂದ ಕೂಡಿದ ವಿವೇಚನೆ ಇವೆಲ್ಲ ತಮ್ಮಲ್ಲಿ ನೆಚ್ಚಿಗೆಯುಡುವಂತೆ ವಾಸ್ತವವಾಗಿ ಕಂಪನಿಗೆ ಒತ್ತಾಸೆ ನೀಡಿದೆ-ತಮ್ಮಂಥ ತುಂಬ ಯೋಗ್ಯರಾದ ಸಹೃದಯರಾದ ಅಧಿಕಾರಿಗಳು ಪೂರ್ವಜನ್ಮದ ಪುಣ್ಯಫಲದಿಂದಲೇ ನಮಗೆ ದೊರೆತಂತಾಗಿದೆ. ಹಾಗಾಗಿ-"

ಇಷ್ಟೊಂದು ಗುಣಗಳಿವೆ ಅವನಲ್ಲಿ.

ತನ್ನೊಳಗೆ ಯೋಚಿಸಿಕೊಂಡು ಚಕಿತನಾಗುತ್ತಾನೆ.

ಇನ್ನೂ ನೆನ್ನೆ ಮೊನ್ನೆಯ ಮಾತು. ಅವನು ಇಲ್ಲೇ ಕೆಲಸಮಾಡುತ್ತಿದ್ದ. ಕೇಳುವವರೇ ಇರಲಿಲ್ಲ.

ಆದರೆ ಆತ್ಮವಿಶ್ವಾಸ ಮೂಡುತ್ತದೆ. ಹಾಗಾಗಿಯೆ ತಾನೆ ಅವನು ಸರೋಜಿನಿಗೆ ಹೇಳಿದ್ದ-

"ನೋಡ್ತಾ ಇರು, ಅವರು ಖಂಡಿತ ಗುರುತು ಹಿಡೀತಾರೆ. ಗುಣ ಅನ್ನೋದು ಅಡಗಿ ಕುಳಿತಿರೋದಿಲ್ಲ. ಸಾಧನೆ ಯಾವಾಗಲೂ ವ್ಯರ್ಥವಾಗೋದಿಲ್ಲ."

ಇವತ್ತು ಅವರೆಲ್ಲ ಅವನನ್ನು ಗುರುತಿಸಿದ್ದಾರೆ. ಅವನ ಹೊಟ್ಟೆಪಾಡಿನ ಜಾಗ ಭದ್ರವಾಗಿ ನೆಲೆಯೂರಿದೆ. ಕೇವಲ ತನ್ನ ಮಟ್ಟಿಗೆ ಮಾತ್ರವಲ್ಲ, ಬರುತ್ತಿರುವ ವಂಶೋದ್ಧಾರಕನ ಪಾಲಿಗೆ ಹಾಗೂ ಮುಂಬರುವ ತಲೆಮಾರಿನ ಪಾಲಿಗೆ. ಅವನು ತನ್ನ ಮನೆತನದ ಕೀರ್ತಿ ಬೆಳಗಿದ್ದಾನೆ.

ಬಲಿದತ್ತ ಭಾಷಣ ಮಾಡುವುದಕ್ಕಾಗಿ ಎದ್ದುನಿಂತ. ಎಲ್ಲರೂ ಕುತೂಹಲದಿಂದ ಕಿವಿಗೊಡುತ್ತಿದ್ದಾರೆ. ಅವನಿಗೇ ಅನುಭವವಾಗುತ್ತದೆ-ತಾನು ದೊಡ್ಡವನು. ಮನಸ್ಸು ಉಬ್ಬಿಹೋಗಿದೆ. ತನ್ನನ್ನು ತಾನೇ ದೊಡ್ಡವನೆಂದುಕೊಂಡರೆ ಮಾತು ತಾನಾಗಿಯೇ ನಾಲಿಗೆಯ ತುದಿಯಿಂದ ನುಸುಳಿಬರುತ್ತದೆ. ಅವನು ಆ ಮಾತುಗಳನ್ನಾಡುವುದಿಲ್ಲ, ಅವನ ಒಳಗೆ ಇನ್ನಾರೋ ಮಾತಾಡುತ್ತಿದ್ದಾರೆ. ಎಲ್ಲರೂ ಕೇಳುತ್ತಿದ್ದಾರೆ. ಅನೇಕರು ಬರೆದುಕೊಳ್ಳುತ್ತಿದ್ದಾರೆ.

"ಕಡೆಯಲ್ಲಿ ನಾನು ನಿಮಗೆಲ್ಲ ನಾಲ್ಕಾರು ಮಾತುಗಳನ್ನು ಹೇಳಬಯಸುತ್ತೇನೆ, ಧರ್ಮ ಅಂದರೇನು? ಅದು ಕೇವಲ ದೇವರ ಪೂಜೆಯಲ್ಲ-ಕರ್ತವ್ಯವನ್ನು

ಸಾಧಿಸುವುದೇ ನಿಜವಾದ ಧರ್ಮ, ಹಾಗಾದರೆ ಕರ್ತವ್ಯ ಅಂದರೇನು ? ಕರ್ತವ್ಯ ಅನ್ನುವುದರಲ್ಲಿ ಎಷ್ಟೊಂದು ಹೊಣೆಗಾರಿಕೆಗಳು ಸೇರಿರುತ್ತವೆ. ತನ್ನ ಬಗ್ಗೆ ದೇವರ ಬಗ್ಗೆ, ಎಲ್ಲಕ್ಕಿಂತ ಮಿಗಿಲಾಗಿ ದೊಡ್ಡದು ಅಂದರೆ ಜನ್ಮ ಕೊಟ್ಟವರ ಬಗ್ಗೆ, ತನ್ನ ಕೆಲಸ ಕಾರ್ಯಗಳ ಬಗ್ಗೆ;

"ಒಂದೊಂದು ವೇಳೆ ಎರಡು ಮೂರು ಕರ್ತವ್ಯಗಳ ನಡುವೆ ಆಯ್ಕೆ ಮಾಡಬೇಕಾದ ಸಂದರ್ಭ ಬಂದರೆ ವಿವಾದವೇಳುತ್ತದೆ. ದೊಡ್ಡ ಕರ್ತವ್ಯಕ್ಕೆ ನೀವು ಮೊದಲ ಸ್ಥಾನ ಕೊಟ್ಟರೆ ಆಗ ಮನಸ್ಸಿನಲ್ಲಿ ಯಾವ ಸಂದೇಹವೂ ಉಳಿಯುವುದಿಲ್ಲ. ದೌರ್ಬಲ್ಯ ಹತ್ತಿರ ಸುಳಿಯುವುದಿಲ್ಲ. ಪೂಜೆಗಾಗಿ ಬಲಿ ಕೊಡುವಂತೆ ಕರ್ತವ್ಯಕ್ಕಾಗಿ ತ್ಯಾಗ ಮಾಡಬೇಕು. ಆ ತ್ಯಾಗದಲ್ಲೇ ಆನಂದವಿರುವುದು. ಕೆಲಸವೇ ವಿಶ್ರಾಂತಿ. ಸೋಮಾರಿತನ ರೋಗವಿದ್ದಂತೆ, ವಿಶ್ರಾಂತಿಯಲ್ಲ."

"ನನ್ನ ಅನುಭವವನ್ನೇ ಹೇಳುವುದಾದರೆ, ಫೈಲುಗಳಲ್ಲಿ ಮುಳುಗಿದಾಗಲೇ ನನಗೆ ತುಂಬ ಆನಂದವಾಗುತ್ತದೆ. ಏಕೆಂದರೆ ನಿಮಗೆಲ್ಲ ಗೊತ್ತಿರುವಂತೆ ಕೆಲಸವೇ ಬದುಕಿನ ಅನುಭವವನ್ನು ತಂದುಕೊಡುತ್ತದೆ. ನಿದ್ದೆಯಲ್ಲಿ ಬದುಕಿನ ಅನುಭವವಾಗಲಾರದು. ಎಲ್ಲರ ಮನಸ್ಸು ಒಂದೇ ರೀತಿಯಲ್ಲಿ ಇರುವುದಿಲ್ಲ. ನಿಜ. ಆದರೂ ನಾನು ನನ್ನ ಅಭಿಪ್ರಾಯ ಹೇಳಿದ್ದೇನೆ ಅಷ್ಟೆ. ನೀವೇ ದಯವಿಟ್ಟು ವಿಚಾರಮಾಡಿ ನೋಡಿ-"

ಜೋರಾದ ಚಪ್ಪಾಳೆಗಳ ನಡುವೆ ಭಾಷಣ ಮುಗಿದಾಗ ಎಲ್ಲರೂ ಬಂದು ಮುತ್ತಿದರು. ತಲೆಬಾಗಿ ನಮಸ್ಕರಿಸಿ ಎಲ್ಲರೂ ಹೊರಟರು. ವೆಂಕಟರಾವ್ ನೆರಳಿನಂತೆ ಸುತ್ತಾಡುತ್ತಿದ್ದಾನೆ. ಬಲಿದತ್ತ ಕರೆದ-

"ವೆಂಕಟರಾವ್-"

"ಯಸ್ ಸರ್-"

"ಸ್ವಲ್ಪ ಈ ಕಡೆ,-" 'ಬಾ' ಇಲ್ಲವೆ 'ಬನ್ನಿ' ಏನು ಹೇಳುವುದೆಂದು ತೊಳಲಾಡಿದ,ನಿಶ್ಚಯಿಸಲಾಗಲಿಲ್ಲ- "ಸ್ವಲ್ಪ ಈ ಕಡೆ, ಒಂದು ಕೆಲಸ ಇದೆ."

"ಯಸ್ ಸರ್!"

"ಈಗ ಯಾವ ಕೆಲಸದಲ್ಲಿದ್ದಿ ?"

"ನೆಲಮನೆ, ಸೇತುವೆ, ರಸ್ತೆ ನಿರ್ಮಿಸುವ ಗೋಡೌನಿನ ಚಾರ್ಜಿನಲ್ಲಿದ್ದೇನೆ".

"ಎಲ್ಲ ಸರಿಯಾಗಿದೆಯಾ ?"

"ಯಸ್ ಸರ್."

"ಮತ್ತೆ ಕೈ ನೋಡೋದು, ಜಾತಕ ನೋಡೋದು ಎಲ್ಲಾ ನಡೆಯುತ್ತಿದೆಯಾ ಹೇಗೆ ?"

ವೆಂಕಟರಾವ್ ನಕ್ಕ. "ಯಸ್ ಸರ್! ತಾವು ಹೂಂ ಅಂದರೆ ನಾಳೆ ಬೆಳಗ್ಗೆಯೆ ಬರ್ತೀನಿ."

"ಬನಬಿಹಾರಿ ನೆನಪಿದೆಯಲ್ಲವೆ, ಎಷ್ಟು ಚೆನ್ನಾಗಿದ್ದ. ಉಳಿದಿದ್ದೆಲ್ಲ ಸರಿಯಾಗಿದೆಯಾ ?"

"ಯಸ್ ಸರ್!"

"ಈಗ ಎಲ್ಲಿದ್ದಾನೆ ? ಯಾವ ಕೆಲಸದ ಚಾರ್ಜಿನಲ್ಲಿದ್ದಾನೆ ? ಇಲ್ಲಿ ಕಾಣಿಸುತ್ತಲೇ ಇಲ್ಲವಲ್ಲ ?"

"ಅವನು ಎಂದೋ ಕೆಲಸ ಬಿಟ್ಟು ಹೊರಟು ಹೋದ ಸಾರ್-"

"ಅಯ್ಯೋ ಬಡಪಾಯಿ, ಹೊರಟೇ ಹೋಗಿಬಿಟ್ಟನೆ? ಈಗ ಏನು ಮಾಡ್ತಾ ಇದ್ದಾನೆ? ಏನು ತಿಂತಾನಂತೆ?"

"ಅವನ ಬಗ್ಗೆ ಯೋಚನೆ ಮಾಡಬೇಡಿ ಸಾರ್, ಅವನು ಖುಷಿಯಾಗಿದ್ದಾನೆ. ಒಂದು ರೀತಿಯಲ್ಲಿ ದೊಡ್ಡ ಮನುಷ್ಯನಾಗಿದ್ದಾನೆ ಅನ್ನಬಹುದು-"

"ಕೆಲಸ ಬಿಟ್ಟ ಮೇಲೂ ಅವನನ್ನು ದೊಡ್ಡ ಮನುಷ್ಯ ಅನ್ನುವುದಕ್ಕಾಗುತ್ತದೆಯೆ? ಅವನೇನು ಸನ್ಯಾಸಿಯಾಗಿ ಹೋದನೆ, ಅಥವಾ ರಾಜಕೀಯಕ್ಕೇನಾದರೂ-?

"ಇಲ್ಲ ಸಾರ್, ವ್ಯಾಪಾರ ಮಾಡುತ್ತಿದ್ದಾನೆ, ಒಂದು ದೊಡ್ಡ ಎಲೆಕ್ಟ್ರಿಕ್ ಅಂಗಡಿ ಇಟ್ಟುಕೊಂಡಿದ್ದಾನೆ. ಅಲ್ಲದೆ ರೇಡಿಯೊ ವ್ಯಾಪಾರ ಬೇರೆ ಮಾಡ್ತಾನೆ. ಅವನೀಗ ಊರಲ್ಲೆಲ್ಲಾ ಹೆಸರುವಾಸಿಯಾದ ಮನುಷ್ಯ-"

"ಆಶ್ಚರ್ಯ."

"ಹಾಗೇನಿಲ್ಲ ಸಾರ್, ಇದು ವ್ಯಾಪಾರ ವಹಿವಾಟಿನ ಕಾಲ. ಅದೂ ಅಲ್ಲದೆ ಎಲೆಕ್ಟ್ರಿಕ್ ಅಂಗಡಿಗಳಲ್ಲಿ ವ್ಯಾಪಾರ ಚೆನ್ನಾಗಿ ನಡೆಯುತ್ತೆ. ಮೊದಲಿಗೆ ಆಫೀಸಿನಿಂದ ಜಗಳ ಆಡಿಕೊಂಡು ಹೊರಟಾಗ ಎಲ್ಲರೂ ಸುಮ್ಮನೆ ಹಾಳಾಗುತ್ತಾನಲ್ಲಾ ಅದುಕೊಂಡರು. ಕೈಯಲ್ಲಿ ಒಂದು ಕಿಲುಬು ಕಾಸೂ ಇರಲಿಲ್ಲ. ತಲೆಮೇಲೆ ಸಾಲ ಬೇರೆ ಇತ್ತು. ಸಂಸಾರವೇನೂ ಸಣ್ಣದಾಗಿರಲಿಲ್ಲ. ಆದರೆ ನಾನು ಅವನ ಕೈಯಿನ ಗೆರೆ ನೋಡಿದ್ದೆ, ಅದಾದ ಮೇಲೆ-"

ವೆಂಕಟರಾವ್‌ನನ್ನು ಮಧ್ಯದಲ್ಲೇ ತಡೆದು ಬಲಿದತ್ತ ಹೇಳಿದ-"ಸರಿ, ಆಮೇಲೆ ನೋಡೋಣ, ಒಳ್ಳೇದು, ನಮಸ್ಕಾರ."

ವೆಂಕಟರಾವ್ ನಮಸ್ಕಾರ ಮಾಡಿ ತಕ್ಷಣ ಆ ಕಡೆ ಹೊರಟು ಹೋದ. ಬಲಿದತ್ತ ಕಾರಿನ ಕಡೆ ನೋಡತೊಡಗಿದ. ವೆಂಕಟರಾವ್ ಬಗ್ಗೆ ಕೋಪ ಉಕ್ಕೇರುತ್ತಿತ್ತು. ಈ ಹಾಳು ಜನ ಹೀಗೇನೆ. ಸ್ವಲ್ಪ ಮಾತಿಗೆ ಅವಕಾಶ ಕೊಟ್ಟರೆ ಸಾಕು, ಹರಟೆ ಹೊಡೆಯುವುದಕ್ಕೆ ಶುರು ಮಾಡುತ್ತಾರೆ. ಅವನ ಮಾತಿಗೆ ಮಧ್ಯದಲ್ಲೆ ತಡೆಹಾಕಿದ್ದು ಸರಿಯೇ ಆಯ್ತು. ಕಾಲ ಬದಲಾಯಿಸಿದೆ ಅಂತ ವೆಂಕಟರಾವ್ ತಿಳಿದುಕೊಳ್ಳಲೇ ಬೇಕು.

ಕಾರು ಸದ್ದುಮಾಡುತ್ತಾ ನೇರವಾಗಿ ಬಂಗಲೆ ಕಡೆ ಓಡಿತು. ದುಗುಡದಿಂದ ತುಂಬಿದ ಮನಸ್ಸು. ಬನು ದೊಡ್ಡ ಮನುಷ್ಯನಾಗಿದ್ದಾನೆ. ಹೇಗೆ? ಅವನೇನು ತ್ಯಾಗ ಮಾಡಿದ್ದಾನೆ? ಏನು ಪ್ರಯತ್ನ ನಡೆಸಿದ್ದಾನೆ? ಬೊಗಳೆ ಹೊಡೆಯುತ್ತಿದ್ದವರೆಲ್ಲಾ ಮುಂದೆ ಬರುತ್ತಿದ್ದಾರಲ್ಲ! ಅವನಿಗೆ ಪ್ರಪಂಚದ ಮೇಲೇ ಸಿಟ್ಟು ಬಂತು. ತನ್ನ ದೊಡ್ಡಸ್ತಿಕೆಯ ಮೇಲೆ, ಮನಸ್ಸಿನ ಮೇಲೆ ಕೋಪ ಉಕ್ಕೇರಿತು. ಪ್ರಪಂಚದಲ್ಲಿರುವ ಅಸಮಾನತೆಯನ್ನು ಧಿಕ್ಕರಿಸುತ್ತಾನೆ, ತಾನು ಅತ್ಯಾಚಾರಕ್ಕೊಳಗಾಗಿದ್ದೇನೆ, ದುಃಖಕ್ಕೆ ಗುರಿಯಾಗುತ್ತಿದ್ದೇನೆ ಅನ್ನುವ ಅನುಭವವಾಗುತ್ತದೆ.

ಬಂಗಲೆಗೆ ಬಂದ.

ಸರೋಜಿನಿ ಇಲ್ಲ. ಮನೆ ಭಣಭಣ ಅನ್ನುತ್ತಿದೆ.

ಆಳುಗಳು ಓಡಾಡುತ್ತಿದ್ದಾರೆ. ಹರ್ಷ ಕುರ್ಚಿಯ ಮೇಲೆ ಕುಳಿತಿದ್ದಾನೆ. ಕಾಲುಗಳನ್ನು ಆಡಿಸುತ್ತಾ ಸೀಬೆಹಣ್ಣು ತಿನ್ನುತ್ತಿದ್ದಾನೆ. ಆಳುಗಳು ಸಲಾಮು ಹೊಡೆದರು. ಹರ್ಷ ಸೀಬೆಹಣ್ಣು ಬಚ್ಚಿಟ್ಟುಕೊಂಡು ಬೂಟಿನ ಲೇಸು ಬಿಚ್ಚಲು ಬಗ್ಗಿದ. ಅಡುಗೆಮನೆಯಲ್ಲೂ ಚಟುವಟಿಕೆ ಬಿರುಸಿನಿಂದ ಶುರುವಾಯಿತು. ಅಡುಗೆಯವರ ಮತ್ತು ನೀರು ಹೊರುವ ಆಳುಗಳ ಸಂಭಾಷಣೆ ಕಿವಿಗೆ ಅಡರಿತು. ದೀಪ ಉರಿಯುತ್ತಿದೆ. ಮನೆಯನ್ನು ಅಣಿಯಾಗಿಸಿಟ್ಟಿದೆ, ದೊಡ್ಡ ಸಾಹೇಬರ ಮನೆಯಲ್ಲವೆ. ಅಗಲವಾದ ವರಾಂಡದಿಂದ ಆಕಡೆ ಹೂವಿನ ಕುಂಡದ ಸಾಲುಗಳಿರುವ ವಿಶಾಲವಾದ ತೋಟವಿದೆ.

"ಏನೋ, ಅಮ್ಮಾವ್ರು ಎಲ್ಲೋ ?" ಬಲಿದತ್ತ ಕೇಳಿದ.

"ಅವರೇ ಬುದ್ಧಿ," ಹರ್ಷ ಹೇಳಿದ, "ಅದೇ ಕಾರಲ್ಲಿ ಕೂತುಕೊಂಡು ಅಲ್ಲಿದ್ದಾಗ ಸಾಯಂಕಾಲದ ಹೊತ್ತು ಸುತ್ತಾಡೋದಕ್ಕೆ ಬರ್ತಾ ಇದ್ರಲ್ಲ, ಅವರು ಬಂದಿದ್ದರು. ಅಮ್ಮಾವ್ರು ಮತ್ತು ಅವರು ಚಹಾ ಕುಡಿದರು. ಅಮ್ಮಾವ್ರು ಅವರ ಜೊತೆ ಸುತ್ತಾಡೋದಕ್ಕೆ ಹೋಗಿದ್ದಾರೆ. ಆ ಬುದ್ಧ್ಯೋರು ಬರ್ತಾರಂತೆ, ಇವತ್ತು ರಾತ್ರಿ ಇಲ್ಲೇ ಇರ್ತಾರಂತೆ."

"ಯಾವ ಬುದ್ಧ್ಯೋರು ?"

"ಅವರೇ ಬುದ್ಧಿ, ಅಲ್ಲಿದ್ದಾಗ ಕಾರಲ್ಲಿ ಕೂತುಕೊಂಡು ಬರ್ತಾ ಇದ್ರಲ್ಲ-ಅದೇ ಅವರು-" ಹರ್ಷ ಮತ್ತೆ ತನ್ನ ಗ್ರಾಮೋಫೋನು ಪ್ಲೇಟನ್ನು ಹಾಕಲು ಶುರುಮಾಡಿದ, ಅವನು ಸುಮ್ಮನೆ ಸುದ್ದಿ ಕೊಡುತ್ತಿದ್ದಾನೆ. ಅದರಲ್ಲಿ ಅವನದೇನೂ ಇಲ್ಲ."

ಅಲ್ಲಾ, ಯಾರವರು ಬಂದಿದ್ದೋರು ?

ತುಂಬ ಜನ ಬರುತ್ತಿದ್ದರು. ಯಾರು ರಣಜಿತ ಬಾಬುವೆ ? ಅಥವಾ ಇನ್ನಾರಾದರೂ ?

ಇದ್ದಕ್ಕಿದ್ದಂತೆ ತಲೆ ಬಿಸಿಯಾಯಿತು. ಒಂದು ಹೊಸ ಮಾದರಿಯ ಓಸಸ್ಸಿತಿ. ಕೆಳತುಟಿಯನ್ನು ಹಲ್ಲಿನಿಂದ ಕಚ್ಚಿ ಕುಳಿತ. ಎದುರಿಗೆ ಎಲ್ಲ ಶೂನ್ಯವಾಗಿ ತೋರುತ್ತಿದೆ. ಸುಮ್ಮನೆ ಕುರುಡುಕುರುಡಾಗಿ ನೋಡುತ್ತಿದ್ದಾನ ಅಷ್ಟೆ, ಏನೋ ಭಯ, ಆತಂಕ. ತನ್ನ ಮನಸ್ಸಿನೊಳಗಡೆಯ ಭೂತಗಳು, ಅವು ಇಲ್ಲಿ ನಾಲ್ಕೂಕಡೆ ಸುತ್ತುಹಾಕುತ್ತಿವೆ. ಕುಣಿಯುತ್ತಾ ಕೇಕೆಹಾಕಿ ನಗುತ್ತಿವೆ, ಮೈಗೆಲ್ಲ ಚಿಂಕಿ ಇಡುತ್ತಿವೆ. ಅಬ್ಬಾ ! ಎಂಥ ಯಾತನೆ ! ಎಲ್ಲಿಯ ದೊಡ್ಡಸ್ತಿಕೆ ? ಎಂಥ ಯಶಸ್ಸು ? ಯಾರಿಗಾಗಿ ? ತನಗೇನು ಸಿಕ್ಕಿತು ? ಎರಡೂ ಕೈಗಳನ್ನು ತಲೆಮೇಲೆ ಹೊತ್ತುಕುಳಿತು ಹಾಗೆಯೆ ನೋಡುತ್ತಿದ್ದಾನ. ಇದೇ ಅವನ ದಾರಿ, ಇದಕ್ಕೆ ಯಾವ ಕೊನೆಯೂ ಇಲ್ಲ. ಇದೇ ಅವನ ಬದುಕಿನ ಮುಗಿಯದ ಕಥೆ. ಹೊಟ್ಟೆಪಾಡಿನ ಸಮಸ್ಯೆಯನ್ನು ಬೆಟ್ಟವನ್ನಾಗಿ ಮಾಡಿಕೊಂಡು ಅಳಿದೂ ಸುರಿದೂ ಯಶಸ್ಸನ್ನು ಅರಸುತ್ತಾ ಲೆಕ್ಕವಿಲ್ಲದಷ್ಟು ಹಗಲು

ರಾತ್ರಿಗಳನ್ನು ಸವೆಸಿದ್ದಾನೆ, ಆದರೇನು ? ಮೈಯಲ್ಲಿ ಭುಗಿಲೆದ್ದಿದೆ.

ಸರೋಜಿನಿ ಮತ್ತೆ ಅಲೆದಾಡಲು ಹೊರಟಿದ್ದಾಳೆ.

"ಅಯ್ಯೋ!"

ಬಲಿದತ್ತ ಶಟ್ಟನೆ ಎದ್ದುನಿಂತ. ನೇರವಾಗಿ ಆಫೀಸು ರೂಮಿನ ಕಡೆ ನಡೆದ. ಕುಳಿತು ಫೈಲಿನ ರಾಶಿಯಿಂದ ಫೈಲೊಂದನ್ನು ಎತ್ತಿಕೊಂಡು ಅರಚಿದ-

"ಏಯ್, ಯಾರು ಹೊರಗಡೆ-"

"ಬುದ್ಧಿ."

"ಬೇಗ ಸ್ಟೆನೋನ ಕರಿ."

ಅಲ್ಲಿಗೆ ಮುಗಿಯಿತು. ಸರಿ, ಇದೇ ಸರಿ. ಇಲ್ಲಿ ಅವನೇ ಎಲ್ಲ, ಇದು ಕಾರ್ಖಾನೆ. ಬದುಕು ಇಲ್ಲಿಂದ ಹಿಂದುಳಿಯುತ್ತದೆ.

Printed at Shivam Offset Press, A-12/1 Naraina Indl. Area, Phase-I, New Delhi-110 028